# ಆಯ್ದ ಮುನ್ನುಡಿಗಳು: ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ)

ಸಂಶೋಧಕರು

**ದೌಲಸಾಬ**



ಮಾರ್ಗದರ್ಶಕರು

**ಡಾ. ಎಂ. ಮಲ್ಲಿಕಾರ್ಜುನ ಗೌಡ**

ಸಹಾಯಕ ಪ್ರಾಧ್ಯಾಪಕರು






ಭಾಷಾನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬

[illegible]

# ಆಯ್ದ ಮುನ್ನುಡಿಗಳು: ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ)

ಸಂಶೋಧಕರು

**ದೌಲಸಾಬ**



ಮಾರ್ಗದರ್ಶಕರು

**ಡಾ. ಎಂ. ಮಲ್ಲಿಕಾರ್ಜುನ ಗೌಡ**

ಸಹಾಯಕ ಪ್ರಾಧ್ಯಾಪಕರು



**ಭಾಷಾನಿಕಾಯ**

**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಆಯ್ದ ಮುನ್ನುಡಿಗಳು: ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ದೌಲಸಾಬ** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು ಹಾಗೂ ಮುಖ್ಯಸ್ಥರು

ದಿನಾಂಕ: ೦೬-೦೬-೨೦೧೮
ಸ್ಥಳ: ವಿದ್ಯಾರಣ್ಯ

**(ಡಾ. ಎಂ. ಮಲ್ಲಿಕಾರ್ಜುನ ಗೌಡ)**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**ಆಯ್ದ ಮುನ್ನುಡಿಗಳು: ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಎಂ. ಮಲ್ಲಿಕಾರ್ಜುನ ಗೌಡ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾನಿಕಾಯದ **ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೦೮-೦೬-೨೦೧೬

ಸ್ಥಳ: ವಿದ್ಯಾರಣ್ಯ

(ದೌಲಸಾಬ)
ಸಂಶೋಧನ ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪಾಶ್ಚಾತ್ಯ ಮತ್ತು ಭಾರತೀಯ ತತ್ವಗಳು ಒಳಗೊಂಡಿವೆ. ಆದರೆ ಕನ್ನಡ ಸಾಹಿತ್ಯ ಪಲ್ಲಟಗೊಂಡಿದ್ದು ವಸಾಹತುಶಾಹಿ ನೀಡಿದ ಇಂಗ್ಲಿಷ್ ಶಿಕ್ಷಣದಿಂದ. ಆಧುನಿಕ ಅಕ್ಷರಸ್ಥ ವರ್ಗ ಮತ್ತು ವಿದ್ಯಾವಂತ ವರ್ಗ ತಮ್ಮ ಚಿಂತನೆಯ ನೆಲೆಯಲ್ಲಿ ಹೊಸತನವನ್ನು ಸೃಷ್ಟಿಸಿಕೊಂಡಿದೆ. ಈ ಅಕ್ಷರಸ್ಥ ವರ್ಗದ ಆಲೋಚನೆ ಮತ್ತು ಅಭಿರುಚಿಗಳಲ್ಲಾದ ಬದಲಾವಣೆಗಳ ಪರಿಣಾಮಗಳು ನಮ್ಮ ಭಾಷೆ, ಸಾಹಿತ್ಯ, ಜನಜೀವನ ಮಟ್ಟದ ಮೇಲೂ ಆಗಿದೆ. ಇದರ ಫಲವಾಗಿ ಕಾವ್ಯಕೇಂದ್ರಿತವಾಗಿದ್ದ ಸಾಹಿತ್ಯ ರಚನೆಯು ಗದ್ಯದತ್ತ ಹೊರಳಿತು. ಆಗ ಗದ್ಯ ಪ್ರಕಾರದಲ್ಲಿ ಹಲವು ಬರವಣಿಗೆಗಳ ಪ್ರಕಾರಗಳು ಹುಟ್ಟಿಕೊಂಡಿವೆ. ಈ ಪ್ರಕಾರಗಳ ಹುಟ್ಟಿನ ಹಿಂದೆ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯ ಓದಿನ ಪ್ರೇರಣೆಯೂ ಇದೆ. ಪಾಶ್ಚಾತ್ಯ ಸಾಹಿತ್ಯ ಪ್ರೇರಣೆ ಪ್ರಭಾವದಿಂದ ನಮ್ಮಲ್ಲಿ ಭಾವಗೀತೆ, ಕತೆ, ಕಾದಂಬರಿ, ಪ್ರಬಂಧ, ನಾಟಕ, ಆತ್ಮಕಥನದಂತಹ ಹಲವು ಪ್ರಕಾರಗಳು ರಚನೆಗೊಂಡಿವೆ. ಇದರ ಜೊತೆಗೆ ಈ ಪ್ರಕಾರಗಳ ಕೃತಿ ರಚನೆಯಲ್ಲಿಯ ಮೊದಲ ಪ್ರತಿಕ್ರಿಯೆಯಾಗಿ 'ಮುನ್ನುಡಿ'(Foreword) ಪ್ರಕಾರ ಅಥವಾ ರೂಪವಾಗಿ ರಚನೆಗೊಂಡಿದೆ. ಹೀಗಾಗಿ ಈ ಪ್ರಕಾರಗಳ ರಚನೆಯಲ್ಲಿ ಹಲವರು ಸಾಹಿತ್ಯ ರಚನೆಕಾರರು ತೊಡಗಿಕೊಂಡಿದ್ದಾರೆ. ಈ ಕಾಲಘಟ್ಟದ ಈ ಪ್ರಕಾರಗಳಲ್ಲಿ ಸಾಹಿತ್ಯದ ರಚನೆ ಗಮನಾರ್ಹವಾಗಿ ಬೆಳೆಯಿತು. ಈ ರೀತಿಯ ಬೆಳವಣಿಗೆಯಲ್ಲಿ ಮುನ್ನುಡಿ ಸಾಹಿತ್ಯವು ಕೂಡ ಹಲವಾರು ಕೃತಿ ರಚನೆಯ ಜೊತೆಗೆ ಮುನ್ನುಡಿ ಸಾಹಿತ್ಯವು ಬೆಳೆಯಿತು. ಮುಖ್ಯವಾಗಿ ಮುನ್ನುಡಿಗಳು ಪ್ರಬಂಧರೂಪವಾಗಿ ಕಂಡುಬಂದಿವೆ. ಕೃತಿಯ ಮೊದಲ ನೋಟವಾಗಿ, ಶತಮಾನವನ್ನು ಪೂರೈಸಿದ ಕೆಲವು ಕೃತಿಗಳನ್ನು ಸಂಪಾದನೆ ಮಾಡುವಾಗ ಆ ಸಂಪಾದನಾ ಕೃತಿಯ ವಿಶ್ಲೇಷಣೆಯಾಗಿ ಮುನ್ನುಡಿ ಪ್ರವೇಶಗೊಂಡಿದೆ. ಹಾಗಾಗಿ ಸಾಹಿತ್ಯ ಪ್ರಕಾರಗಳಲ್ಲಿ ಹಲವು ರೀತಿಯ ಬದಲಾವಣೆಗಳು ನಡೆದಿವೆ. ಹಾಗಾಗಿ ಮುನ್ನುಡಿಗಳು ಕೂಡ ಬದಲಾವಣೆಗಳಾಗಿವೆ. ಇದರಲ್ಲಿ ಸಾಧನೆ, ವೈಫಲ್ಯಗಳ ಬೆಳವಣಿಗೆ ಕುರಿತು ಅಧ್ಯಯನಗಳು ನಡೆದಿವೆ. ಈ ರೀತಿಯ ಅಧ್ಯಯನಗಳಿಂದ ಅಲಕ್ಷಿತವಾಗಿ ಅಧ್ಯಯನಕ್ಕೊಳಗಾಗದೇ ಇರುವುದು ಮುನ್ನುಡಿ ಕ್ಷೇತ್ರವಾಗಿದೆ.

ಸಾಹಿತ್ಯವು ಇಂದು ಹಲವು ನೆಲೆಗಳಲ್ಲಿ ವೈವಿಧ್ಯಮಯವಾಗಿ ಬೆಳೆಯುತ್ತಿದೆ. ಈ ಹೊತ್ತಿನ ದಿನಪತ್ರಿಕೆಗಳಲ್ಲಿ ಹೊಸ ವಿಚಾರಗಳೊಂದಿಗೆ ಭಾಷೆ ಚಿಂತನೆಯಲ್ಲಿ ಬರವಣಿಗೆಯನ್ನು ಗಮನಿಸಿದರೆ

ಹಲವು ಹೊಸ ಸಾಹಿತ್ಯಕ ಪ್ರಕಾರಗಳಲ್ಲಿ ಕೂಡ ರಚನೆಯಾಗುತ್ತಿವೆ. ಹಾಗೆಯೇ ಸಾಹಿತ್ಯ ಕುರಿತ, ವಿಮರ್ಶೆ ಕುರಿತ ಅಧ್ಯಯನಗಳು ನಡೆಯುತ್ತಲಿವೆ. ಹಾಗಾಗಿ ಪ್ರಸ್ತುತ ಈ ಅಧ್ಯಯನವು ಆಯ್ದ ಮುನ್ನುಡಿಗಳನ್ನು ಕುರಿತದ್ದಾಗಿದೆ. ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಕಾಣಿಸಿಕೊಂಡ, ಮುಖ್ಯವಾಗಿ ಸಂಪಾದನೆಯ ಮೂಲಕ ಹಳಗನ್ನಡ ಕೃತಿಗಳನ್ನು ಮರುಪರಿಶೀಲನೆಗೆ ಒಳಪಡಿಸಲು ಮುನ್ನುಡಿಗಳ ಮೂಲಕವಾಗಿ ಹಲವರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ನವೋದಯ ಪೂರ್ವದ ಸಾಹಿತಿಗಳು ಹಳಗನ್ನಡ ಕೃತಿಗಳನ್ನು ಸಂಪಾದನೆ ಮಾಡಿದ್ದಾರೆ. ಇವರ ಜೊತೆಗೆ ಪಾಶ್ಚಾತ್ಯ ವಿದ್ವಾಂಸರೂ ಪ್ರಮುಖರಾಗಿ ಕಂಡುಬರುತ್ತಾರೆ. ಮುನ್ನುಡಿ ಸಾಹಿತ್ಯದ ಮೂಲವನ್ನು ಹುಡುಕಿದರೆ ಈ ಪ್ರಕಾರ ಪಾಶ್ಚಿಮಾತ್ಯರಿಂದ ಆರಂಭವಾಗಿರುವುದು ಕಂಡುಬರುತ್ತದೆ. ಕನ್ನಡದಲ್ಲಿ ಎಫ್.ಕಿಟೆಲ್ ಅವರು ನಾಗವರ್ಮನ 'ಛಂಧೋಂಬುದಿ' ಕೃತಿಯನ್ನು ಸಂಪಾದನೆ ಮಾಡಿದರು. ಇದಕ್ಕೆ ಧೀರ್ಘವಾದ ಮುನ್ನುಡಿಯನ್ನು ಬರೆಯುವುದರ ಮೂಲಕ ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಒಂದು ರೂಪವಾಗಿ ಕಂಡುಬಂದಿದೆ. ಇದೇ ಮುಂದುವರಿದು ಹಳಗನ್ನಡ ಕೃತಿಗಳನ್ನು ಸಂಪಾದಿಸಿ ಕೃತಿಯ ಸಾರವನ್ನು ಮುನ್ನುಡಿಯಲ್ಲಿಯೇ ವಿಶ್ಲೇಷಣೆ ಮಾಡಿದ್ದಾರೆ. ಹಳಗನ್ನಡ, ನಡುಗನ್ನಡ, ಸಂಸ್ಕೃತಮಿಶ್ರಿತ ಕನ್ನಡ ಯಾವುದೇ ವರ್ಗಗಳಿಗೆ ಸೇರಿದ ಹಳೆಯ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದು, ಪಾಶ್ಚಾತ್ಯರು ಮತ್ತು ಕನ್ನಡ ವಿದ್ವಾಂಸರು ಮುನ್ನುಡಿ ಸಾಹಿತ್ಯವೆಂಬ ಚೌಕಟ್ಟಿನಲ್ಲಿ ರಚನೆ ಮಾಡಿದ್ದಾರೆ. ಹಳಗನ್ನಡ ಸಾಹಿತ್ಯದ ಕೃತಿಗಳನ್ನು ಸಂಪಾದಿಸಿ ಆ ಕೃತಿಗಳ ಮುಖ್ಯವಾದ ಸಂಗತಿಗಳನ್ನು ಸಾರಾಂಶಪ್ರಧಾನವಾಗಿ ವಿಮರ್ಶಾತ್ಮಕ ಚಿಂತನೆಯಿಂದ ಮುನ್ನುಡಿಯಲ್ಲಿ ಪ್ರತಿಪಾದಿಸಿದ್ದಾರೆ. ಇದೇ ಮುಂದುವರಿದು ಹಳಗನ್ನಡ ಕೃತಿಗಳು ಸೇರಿದಂತೆ ಇತರ ನವೋದಯ ಸಾಹಿತ್ಯ ಸೇರಿದಂತೆ ಕನ್ನಡದ ಹೊಸ ಪ್ರಕಾರದ ಕೃತಿಗಳಿಗೆ ಬರೆದ ಮುನ್ನುಡಿ ಒಂದು ಪರಂಪರೆಯಾಗಿ ಮರುಬರವಣಿಗೆಯಾಗಿ ಆಯಾ ಕೃತಿಗಳು ಮುನ್ನೆಲೆಗೆ ಬಂದಿವೆ. ಯಾವುದೇ ಪ್ರಕಾರದ ಸಾಹಿತ್ಯ ಕುರಿತ ಅಧ್ಯಯನಗಳಿಗೆ ಸಂಬಂಧಿಸಿದಂತೆ ಸಾಹಿತ್ಯದ ಇತರೆ ಪ್ರಕಾರಗಳಿಗೆ ಸಿಕ್ಕ ಮಾನ್ಯತೆಗಳು ಮುನ್ನುಡಿ ಸಾಹಿತ್ಯಕ್ಕೆ ಸಿಗಲಿಲ್ಲ.

ಮುನ್ನುಡಿಗಳೆಂದರೆ ತಾತ್ಸಾರ ಭಾವನೆಯಿಂದ ಕಂಡವರು ಕೆಲವರು ಕನ್ನಡ ಸಾಹಿತ್ಯದಲ್ಲಿದ್ದಾರೆ. ಹಾಗೆಯೇ ಮುನ್ನುಡಿ ಸಾಹಿತ್ಯದ ಮೂಲಕ ಇಡೀ ಕನ್ನಡ ಸಾಹಿತ್ಯ ಪರಂಪರೆಯನ್ನು ಪಲ್ಲಟಗೊಳಿಸಿದವರು ಇದ್ದಾರೆ. ಏನೇ ಆಗಲಿ, ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದು ಅತ್ಯಂತ ಕಡಿಮೆ. ಕತೆ, ಕಾದಂಬರಿ, ನಾಟಕ, ವಿಮರ್ಶೆ, ಲಲಿತ ಪ್ರಬಂಧ ಇನ್ನಿತರ ಪ್ರಕಾರಗಳು ಅಧ್ಯಯನಕ್ಕೆ ಒಳಗೊಂಡಿವೆ. ಆದರೆ ಮುನ್ನುಡಿಗಳನ್ನು ಅಧ್ಯಯನಕ್ಕೆ ಯೋಗ್ಯವೆಂದು ನೋಡಿಲ್ಲ. ಮುನ್ನುಡಿಯ ಮೂಲಕ ಮುಖ್ಯವಾದ ಸಂಗತಿಗಳನ್ನು ಚರ್ಚೆ ಮಾಡಿದವರೂ ಬಹುತೇಕವಾಗಿ ಕಂಡುಬರುತ್ತಾರೆ. ಬಿ.ಎಂ.ಶ್ರೀ., ಕುವೆಂಪು, ತೀ.ನಂ.ಶ್ರೀ., ಡಿ.ವಿ.ಜಿ., ಮಾಸ್ತಿ, ದ.ರಾ.ಬೇಂದ್ರೆ, ಅ.ನ.ಕೃ., ಜಿ.ಎಸ್.ಶಿವರುದ್ರಪ್ಪ, ತೇಜಸ್ವಿ, ಪಿ.ಲಂಕೇಶ್, ಅಡಿಗರು, ಯು.ಆರ್.ಅನಂತಮೂರ್ತಿ, ಕೆ.ವಿ.ನಾರಾಯಣ, ಎಚ್.ಎಸ್.ರಾಘವೇಂದ್ರರಾವ್, ಡಿ.ಆರ್.ನಾಗರಾಜ,

ಎಚ್.ಎಸ್.ಶ್ರೀಮತಿ, ಬಿ.ಎನ್.ಸುಮಿತ್ರಾಬಾಯಿ ಇನ್ನೂ ಅನೇಕ ವಿಮರ್ಶಕರು ಮುನ್ನುಡಿಗಳ ರಚನೆಯಲ್ಲಿ ಸಾಮಾಜಿಕ ಸಂವೇದನೆಯನ್ನುಳ್ಳ ಸಂವಾದವಾಗಿ ಚರ್ಚೆ ಮಾಡಿದವರಾಗಿದ್ದಾರೆ. ಮುನ್ನುಡಿಗಳನ್ನು ಕುರಿತು ಬಿಡಿ ಬಿಡಿ ಲೇಖನಗಳಲ್ಲಿ ಚರ್ಚೆ ಮಾಡಿದ್ದಾರೆ. ಆದರೆ ಈ ಮುನ್ನುಡಿಗಳನ್ನು ಕುರಿತು ಪ್ರತ್ಯೇಕವಾದ ಮತ್ತು ಇಡಿಯಾದ ಅಧ್ಯಯನಗಳು ನಡೆದಿಲ್ಲ. ಈ ಅಧ್ಯಯನವು ಮುನ್ನುಡಿ ಸಾಹಿತ್ಯ ಕುರಿತ ಇಡಿಯಾದ ಮತ್ತು ಮಾಹಿತಿ ಪ್ರಧಾನವಾದ ಅಂಶಗಳನ್ನೊಳಗೊಂಡ ಅಧ್ಯಯನವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಯ ವಿಭಿನ್ನ ನೆಲೆಗಳನ್ನು ಇಡಿಯಾಗಿ ಅಧ್ಯಯನ ಮಾಡುವ ಮೂಲಕ ಅದರ ಸ್ವರೂಪವನ್ನು ಅರಿಯಬಹುದು. ಮುನ್ನುಡಿ ಸಾಹಿತ್ಯದ ಉದ್ದೇಶ ಕೇವಲ ಕೃತಿಯನ್ನು ಮತ್ತು ಲೇಖಕರನ್ನು ಹೊಗಳಿ ಬರೆಯುವುದಲ್ಲ. ಲೇಖಕರನ್ನು ಉತ್ತಮ ಸಾಹಿತ್ಯ ರಚನಾಕಾರರನ್ನಾಗಿ ಹಾಗೂ ಕೃತಿಯ ಮೊದಲ ವಿಮರ್ಶಾತ್ಮಕವಾದ ಚಿಂತನೆಯಿಂದ ಸೋಸಿ ನೋಡುವುದು. ಆಗ ಅದು ಒಳಗೊಳ್ಳುವ ಜಗತ್ತು ವಿಶಾಲವಾದುದು ಎಂದು ಈ ಮುನ್ನುಡಿ ಸಾಹಿತ್ಯ ಅಧ್ಯಯನವನ್ನು ಸೂಕ್ಷ್ಮವಾಗಿ ಗಮನಿಸಿದರೆ ತಿಳಿಯುತ್ತದೆ. ಆದ್ದರಿಂದ ಮುನ್ನುಡಿಗಳನ್ನು ಬೇರೆ ಬೇರೆ ನೆಲೆಗಳಿಂದ ಅಧ್ಯಯನ ಮಾಡಬೇಕಿದೆ. ನವೋದಯ ಸಂದರ್ಭದಲ್ಲಿ ಮುನ್ನುಡಿ ರೂಪಕವಾಗಿ ಹುಟ್ಟಿ ಶತ ಶತಮಾನಗಳಿಂದ ಮುನ್ನುಡಿ ಸಾಹಿತ್ಯದ ವಿವಿಧ ನೆಲೆಗಳನ್ನು ಅರಿಯುವ ದೃಷ್ಟಿಯಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಸಂದರ್ಭದಲ್ಲಿ ಸಾಹಿತ್ಯ ಪ್ರಕಾರದ ನಡುವಿನ ಗಡಿರೇಖೆಯನ್ನು ಗುರುತಿಸಿಕೊಳ್ಳಲಾಗಿದೆ. ಅವುಗಳಲ್ಲಿ ಆಗಿರುವ ಪಲ್ಲಟಗಳನ್ನು ಬಹುಮುಖ ಚಿಂತನೆಯ ನೆಲೆಗಳನ್ನು ಗಮನಿಸಲಾಗಿದೆ. ಇಂತಹ ಸಂದರ್ಭಗಳಲ್ಲಿ ಮುನ್ನುಡಿಗಳನ್ನು ಪ್ರಕಾರನಿಷ್ಠವಾದ ಅಧ್ಯಯನ ಮಾಡಬೇಕೆ? ಅಥವಾ ಸಾಹಿತ್ಯ ಕಾಲಘಟ್ಟಗಳ ಮೂಲಕ ಅಧ್ಯಯನ ಮಾಡಬೇಕೆ? ಎಂಬ ಪ್ರಶ್ನೆಗಳು ಹುಟ್ಟುತ್ತವೆ. ಕನ್ನಡದ ಪ್ರಮುಖ ಸಾಹಿತ್ಯ ಕೃತಿಗಳ ಆಯ್ದ ಮುನ್ನುಡಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಗಳನ್ನು ಕುರಿತು ಅಧ್ಯಯನ ನಡೆದಿರುವುದು ಬಹಳ ಕಡಿಮೆ. ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳ ಕುರಿತು ಗಂಭೀರವಾದ ಅಧ್ಯಯನಗಳು ನಡೆದಿವೆ. ಪ್ರಸ್ತುತ ಸಂದರ್ಭದಲ್ಲಿ ಮುನ್ನುಡಿಗಳನ್ನು ಕುರಿತು ಅಧ್ಯಯನ ಮಾಡುವುದು ಪ್ರಮುಖ ತುಡಿತವಾಗಿದೆ. ಈ ತುಡಿತದ ಹಿಂದೆ ಕೆಲವು ಉದ್ದೇಶಗಳು ಇವೆ. ಅವುಗಳೆಂದರೆ:

* ಹೊಸಗನ್ನಡ ಸಾಹಿತ್ಯದ ಪ್ರಕಾರಗಳಾದ ಕಾವ್ಯ, ಕತೆ, ಕಾದಂಬರಿ, ನಾಟಕ, ಲಲಿತಪ್ರಬಂಧ, ವಿಮರ್ಶೆ ಇವುಗಳನ್ನು ಕುರಿತು ಇಡಿಯಾದ ಅಧ್ಯಯನಗಳಾಗಿವೆ. ಇದೇ ರೀತಿಯಾಗಿ ಮುನ್ನುಡಿಗಳ ಕುರಿತು ಇಡಿಯಾದ ಅಧ್ಯಯನ ಮಾಡುವುದು ಮತ್ತು ಮುನ್ನುಡಿ ಪರಂಪರೆ, ಚಾರಿತ್ರಿಕತೆಯನ್ನು ಗುರುತಿಸುವುದು ಮುಖ್ಯ ಉದ್ದೇಶವಾಗಿದೆ. ಆರಂಭದ ಕನ್ನಡ

ಸಾಹಿತ್ಯ ಕೃತಿಗಳ ಸಂಪಾದನೆಯಲ್ಲಿ ಮೂಡಿಬಂದ ಮುನ್ನುಡಿಗಳು, ಬಿ.ಎಂ.ಶ್ರೀ. ಅವರ ಇಂಗ್ಲಿಷ್ ಗೀತಗಳು ಕೃತಿಯ ಮುನ್ನುಡಿ, ಗರಿ, ನಾದಲೀಲೆ, ಭಾರತಿಯ ಕಾವ್ಯಮೀಮಾಂಸೆ, ಅಬಚೂರಿನ ಪೋಸ್ಟಾಫೀಸು, ಅಕ್ಷರ ಹೊಸಕಾವ್ಯ, ಭೂಮಿಗೀತ ಇತ್ಯಾದಿ ಪ್ರಮುಖ ಕೃತಿಯ ಮುನ್ನುಡಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

* ಕತೆ, ಕಾದಂಬರಿ, ವಿಮರ್ಶೆ, ಕಾವ್ಯ, ನಾಟಕ ಹೀಗೆ ಸಾಹಿತ್ಯ ಪ್ರಕಾರಗಳ ಸಾಂಸ್ಕೃತಿಕ ಆಯಾಮಗಳ ತಾತ್ವಿಕತೆಯ ಕುರಿತು ಈಗಾಗಲೇ ಅಧ್ಯಯನಗಳು ನಡೆದಿವೆ. ಇದೇ ರೀತಿ ಮುನ್ನುಡಿಗಳ ಕುರಿತು ಕನ್ನಡ ಸಾಹಿತ್ಯದಲ್ಲಿ ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವುದು ಅವಶ್ಯವಿದೆ. ಹಾಗೆಯೇ ಕೆಲವು ಮುನ್ನುಡಿಗಳು ವಾಗ್ವಾದಗಳನ್ನು ಸೃಷ್ಟಿಸಿವೆ. ಅಂತವುಗಳು ಸೂಕ್ಷ್ಮ, ಸಾಮಾಜಿಕ ಸಂಘರ್ಷಗಳನ್ನು ಒಳಗೊಂಡಿದ್ದರೆ ಆ ಮುನ್ನುಡಿಗಳಲ್ಲಿ ಹೇಗೆ ಅಭಿವ್ಯಕ್ತವಾಗಿವೆ ಎಂಬುದನ್ನು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

* ಯಾವುದೇ ಸಾಹಿತ್ಯ ಪ್ರಕಾರವು ತನ್ನಿಂದ ತಾನೇ ಹುಟ್ಟುವುದಿಲ್ಲ. ಅದು ತನ್ನ ಕಾಲದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಒತ್ತಡಗಳ ಫಲವಾಗಿ ರೂಪುಗೊಳ್ಳುತ್ತದೆ. ಆದ್ದರಿಂದ ಕೃತಿಯೊಂದು ತಾನು ರಚನೆಗೊಂಡ ಕಾಲದ ಸೂಕ್ಷ್ಮ ಸಂಘರ್ಷಗಳಿಗೆ ಮುಖಾಮುಖಿಯಾಗಿರುತ್ತದೆ. ಹಾಗಾಗಿ ಮುನ್ನುಡಿ ಕೂಡ ಅಷ್ಟೇ ಮುಖಾಮುಖಿಯಾಗಿವೆ. ಉದಾಹರಣೆಗೆ ಅಬಚೂರಿನ ಪೋಸ್ಟಾಫೀಸು ಕೃತಿಯ 'ಹೊಸದಿಂಗತದಡೆಗೆ' ಮುನ್ನುಡಿಯನ್ನು ಗಮನಿಸಬಹುದು. ಇದರಿಂದ ಮುನ್ನುಡಿಗಳು ಕೂಡ ಆಯಾ ಕಾಲಕ್ಕೆ ಪ್ರತಿಕ್ರಿಯೆ ನೀಡಿವೆ. ಇಂತಹ ಸಂಗತಿಗಳು ಮುನ್ನುಡಿಗಳಲ್ಲಿ ಹೇಗೆ ವ್ಯಕ್ತಗೊಂಡಿವೆ ಎಂಬುವುದನ್ನು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

* ಪ್ರತಿಯೊಂದು ಸಾಹಿತ್ಯ ಪ್ರಕಾರವು ಸ್ವತಂತ್ರವಾಗಿ ರಚನೆಗೊಂಡಂತಹವುಗಳಲ್ಲ. ಆದರೆ ಸಾಹಿತ್ಯದ ಎಲ್ಲಾ ಪ್ರಕಾರಗಳು ಒಂದರಿಂದ ಮತ್ತೊಂದಕ್ಕೆ ಸಂಬಂಧ ಹೊಂದಿ ಪ್ರಭಾವಿತವಾಗಿವೆ. ಮುನ್ನುಡಿಗಳು ಕೂಡ ವಿಮರ್ಶಾ ಲೇಖನಗಳಾಗಿ ಹಲವಾರು ಸಾಹಿತ್ಯ ಪ್ರಕಾರಗಳ ರೀತಿಯಲ್ಲಿ ಚರ್ಚೆಗಳಾಗಿವೆ. ಹಾಗೆಯೇ ಇದೊಂದು ಬಹುಮುಖಿಯಾದ ವಿಮರ್ಶೆಯ ಉಪಪ್ರಕಾರವಾಗಿದೆ. ಹಾಗಾಗಿ ಮುನ್ನುಡಿ ಸಾಹಿತ್ಯ ತನ್ನ ಜೊತೆಗಿನ ಇತರ ಪ್ರಕಾರಗಳೊಂದಿಗೆ ಯಾವ ರೀತಿ ಸಂಬಂಧವನ್ನು ಹೊಂದಿದೆ ಎಂದು ಅರಿಯುವುದು ಮುಖ್ಯ ಉದ್ದೇಶವಾಗಿದೆ.

* ಸಾಹಿತ್ಯ ಅಧ್ಯಯನದೊಳಗಿನ ಶ್ರೇಣೀಕರಣದಿಂದ ಕೆಲವೇ ಪ್ರಕಾರಗಳು ಮುಖ್ಯ ವಾಹಿನಿಯಲ್ಲಿ ಚರ್ಚೆಗೆ ಗುರಿಯಾಗಿವೆ. ಉಳಿದ ಪ್ರಕಾರದ ಕುರಿತು ದೀರ್ಘವಾಗಿಯೂ, ಕೆಲವೊಮ್ಮೆ ನಿರ್ಲಕ್ಷ್ಯತೆಗೆ ಒಳಗಾಗಿವೆ. ಹಾಗಾಗಿ ಮುನ್ನುಡಿ ಕೂಡ ಸಾಹಿತ್ಯದಲ್ಲಿ ಶ್ರೇಣೀಕರಣದ ಕೆಳಗೆ ಇದೆ. ಮುನ್ನುಡಿಯನ್ನು ಸಾಹಿತ್ಯದ ಮುನ್ನೆಲೆಯಾಗಿ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಮಾನವೀಯ ನೆಲೆಗಳಾಗಿ ಒಳಗೊಳ್ಳುವುದನ್ನು ಈ ಅಧ್ಯಯನದಿಂದ ಗುರುತಿಸುವ ಉದ್ದೇಶ ಹೊಂದಿದೆ.

* ಮುನ್ನುಡಿಗಳು ನವೋದಯ ಕಾಲದ ಸಂದರ್ಭದಲ್ಲಿ ರಚನೆಗೊಂಡು, ನವ್ಯ ಕಾಲದಲ್ಲಿ ಅತ್ಯಂತ ಗಂಭಿರ ಸಾಹಿತ್ಯ ರಚನೆಯಾಗಿ ಹಾಗೂ ವ್ಯಕ್ತಿಗತ ಕೇಂದ್ರಿತ ನೆಲೆಗಳಾಗಿ ಚರ್ಚೆಗಳಾಗಿವೆ. ನವೋದಯ ಕಾಲದಲ್ಲಿ ಮುನ್ನುಡಿಗಳು ಮುನ್ನೆಲೆಗೆ, ಚರ್ಚೆಗೆ ಗ್ರಾಸವಾಗಿದ್ದು, ಇದೇ ಮುಂದುವರಿದು ನವ್ಯ ಕಾಲಕ್ಕೆ ಪ್ರಮುಖವಾಗಿ ಪ್ರಚುರಪಡಿಸಿಕೊಂಡಿವೆ. ದಲಿತ, ಬಂಡಾಯ ಕಾಲದಲ್ಲಿ ಮತ್ತು ಸಮಕಾಲೀನ ಸಂದರ್ಭದಲ್ಲಿ ಮುನ್ನುಡಿಗಳು ಕನ್ನಡ ಸಾಹಿತ್ಯದಲ್ಲಿ ಪರಂಪರೆಯಾಗಿ ಗುರುತಿಸಿಕೊಂಡಿವೆ. ಹಾಗಾಗಿ ಮುನ್ನುಡಿಗಳನ್ನು ಆಯಾ ಕಾಲದ ಸಂದರ್ಭಗಳನ್ನು ಅನುಲಕ್ಷಿಸಿ ಅವುಗಳ ಭಿನ್ನತೆಗಳನ್ನು ಚರ್ಚಿಸಲಾಗಿದೆ.

* ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಉಪಪ್ರಕಾರವಾಗಿ ಹುಟ್ಟಿಕೊಳ್ಳಲು ಕಾರಣವಾದ ಸಾಂಸ್ಕೃತಿಕ ಒತ್ತಡಗಳನ್ನು ತಿಳಿಯುವ ಉದ್ದೇಶವು ಅಧ್ಯಯನಕ್ಕಿದೆ. ಹೀಗೆ ಅಧ್ಯಯನಕ್ಕೆ ಸಂಬಂಧಿಸಿದ ಹಲವು ಉದ್ದೇಶಗಳಾಗಿ ಆಯ್ದ ಮುನ್ನುಡಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಸಾಹಿತ್ಯ ಉಪಪ್ರಕಾರವು ಹೇಗೆ ಭಿನ್ನತೆಗಳನ್ನು ಪಡೆದಿದೆ ಎಂದು ನಿರ್ವಚಿಸಿಕೊಳ್ಳುವ ಹುಡುಕಾಟವು ಈ ಅಧ್ಯಯನದ ಉದ್ದೇಶವಾಗಿದೆ. ವಸಾಹತುಶಾಹಿ ರಾಷ್ಟ್ರೀಯತೆಯ ಸಂಘರ್ಷದ ಜೊತೆಗೆ ನವೋದಯದ ಸಂದರ್ಭವನ್ನು ಪ್ರಭಾವಿಸಿರುವ ಭಾರತದೊಳಗಿನ ಆಂತರಿಕ ಸಂಘರ್ಷದಿಂದಲೂ ಮುನ್ನುಡಿಗಳು ಹೇಗೆ ಪ್ರಭಾವಿತಗೊಂಡಿವೆ ಎಂಬುವುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಶತಮಾನದಿಂದ ಪರಂಪರೆ ಹೊಂದಿರುವ ಮುನ್ನುಡಿ ಸಾಹಿತ್ಯ ಕುರಿತು ಅಧ್ಯಯನಗಳ ಚರ್ಚೆಗಳನ್ನು ಹಲವಾರು ಆಯಾಮಗಳ ಮೂಲಕ ನಡೆಸಲಾಗಿದೆ. ಮುನ್ನುಡಿಗಳ ಅಭಿವ್ಯಕ್ತಿ ವಿಧಾನವನ್ನು ಗುರುತಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಅಧ್ಯಯನದ ವ್ಯಾಪ್ತಿಯು ಒಳಗೊಂಡಿದೆ. ಈ ಅಧ್ಯಯನವು ಮುನ್ನುಡಿ ಸಾಹಿತ್ಯದ ಮಹತ್ವವನ್ನು ಕಾಣುವ ಆಶಯವನ್ನು ಹೊಂದಿದೆ.

### ೧.೨. ಅಧ್ಯಯನ ವ್ಯಾಪ್ತಿ

ಯಾವುದೇ ಅಧ್ಯಯನಕ್ಕೆ ಕೆಲವು ಚೌಕಟ್ಟುಗಳು ಅವಶ್ಯಕವಾಗಿವೆ. ಚೌಕಟ್ಟುಗಳಿಲ್ಲದ ಅಧ್ಯಯನವು ಏನನ್ನೂ ಹೇಳಲು ಸಾಧ್ಯವಾಗದಿರಬಹುದು. ಕನ್ನಡ ಸಾಹಿತ್ಯದಲ್ಲಿ ಒಂದು ಶತಮಾನದಷ್ಟು ದೀರ್ಘ ಕಾಲದಲ್ಲಿ ಮುನ್ನುಡಿಗಳು ಸಮೃದ್ಧವಾಗಿ ಬೆಳೆದಿವೆ. ಕೆಲವರು ಮುನ್ನುಡಿಯನ್ನು ಬರೆಯಲು ಒಪ್ಪದಿರಬಹುದು. ಆದರೆ ಅನೇಕರು ಮುನ್ನುಡಿಯನ್ನು ಬರೆದಿದ್ದಾರೆ. ಹಾಗಾಗಿ ಮುನ್ನುಡಿ ಕನ್ನಡ ಸಾಹಿತ್ಯದ ಅಸ್ತಿತ್ವವಾಗಿ ಉಳಿದಿದೆ. ಕೆಲವು ಮುನ್ನುಡಿಕಾರ/ಕಾರ್ತಿಯರು ತಮ್ಮ ಸಂವೇದನೆಗಳನ್ನು ಮುನ್ನುಡಿಗಳಲ್ಲಿ ನೇರವಾಗಿ ಹೇಳಿದ್ದಾರೆ. ಕನ್ನಡದಲ್ಲಿ ವರ್ಷಪೂರ್ತಿ ಕೃತಿಗಳು ರಚನೆಗೊಳ್ಳುತ್ತಿವೆ. ಅದರ ಜೊತೆಗೆ ಮುನ್ನುಡಿಗಳು ರಚನೆಗೊಳ್ಳುತ್ತಿವೆ. ಇಷ್ಟೊಂದು ವೈವಿಧ್ಯಮಯವಾಗಿ ಬೆಳೆದ ಮುನ್ನುಡಿ ಸಾಹಿತ್ಯವನ್ನು ಅಧ್ಯಯನ ಮಾಡಲು ಒಂದು ವ್ಯಾಪ್ತಿಯನ್ನು ನಿರ್ಧರಿಸಿಕೊಳ್ಳುವುದು

ಅನಿವಾರ್ಯ ಹಾಗೂ ಅಗತ್ಯವೂ ಕೂಡ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನವನ್ನು ಮುಖ್ಯವಾಗಿ ನವೋದಯ ಸಂದರ್ಭದ ಸಂಪಾದಿತ ಕೃತಿಗಳ ಕೆಲವು ಮುನ್ನುಡಿಗಳು, ನವೋದಯ ಸಾಹಿತ್ಯದ ಕಾಲಘಟ್ಟದ ಪ್ರಮುಖ ಚಿಂತನೆಗೊಳಗಾಗಿರುವ ಮುನ್ನುಡಿಗಳು, ಪ್ರಗತಿಶೀಲ ಸಾಹಿತ್ಯದ ಮುನ್ನುಡಿಗಳು, ನವ್ಯ ಸಾಹಿತ್ಯದ ಮುನ್ನುಡಿಗಳು, ದಲಿತ–ಬಂಡಾಯ ಸಾಹಿತ್ಯದ ಮುನ್ನುಡಿಗಳು, ಮಹಿಳಾ ಸಾಹಿತ್ಯದ ಮುನ್ನುಡಿಗಳು, ಸಮಕಾಲಿನ ಸಾಹಿತ್ಯದ ಈ ಎಲ್ಲಾ ಕಾಲಘಟ್ಟದ ಪ್ರಮುಖ ಕೃತಿಯ ಮುನ್ನುಡಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ಅಧ್ಯಯನದ ಶೀರ್ಷಿಕೆ "ಆಯ್ದ ಮುನ್ನುಡಿಗಳು" ಆಗಿರುವುದರಿಂದ ಆಯಾ ಕಾಲಘಟ್ಟದ ಪ್ರಮುಖ ಮುನ್ನುಡಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೊದಲಿಗೆ ಎಫ್.ಕಿಟೆಲ್‌ರ ನಾಗವರ್ಮನ 'ಛಂಧೋಂಬುಧಿ'ಗೆ ಬರೆದ ಮುನ್ನುಡಿಯಿಂದ ಆರ್.ನರಸಿಂಹಾಚಾರ್, ಬಿ.ಎಂ.ಶ್ರೀ., ತಿ.ನಂ.ಶ್ರೀ., ಕುವೆಂಪು, ಡಿ.ವಿ.ಜಿ., ಮಾಸ್ತಿ, ಬೇಂದ್ರೆ, ಪು.ತಿ.ನ., ಅ.ನ.ಕೃ., ನಿರಂಜನ, ಬಸವರಾಜ ಕಟ್ಟೀಮನಿ, ಜಿ.ಎಸ್.ಶಿವರುದ್ರಪ್ಪ, ವಿ.ಕೃ.ಗೋಕಾಕ್, ಅಡಿಗರು, ತೇಜಸ್ವಿ, ಲಂಕೇಶ್, ಅನಂತಮೂರ್ತಿ, ಡಿ.ಆರ್.ನಾಗರಾಜ, ಕೆ.ವಿ.ನಾರಾಯಣ, ಎಚ್.ಎಸ್.ರಾಘವೇಂದ್ರರಾವ್, ಸಿದ್ಧಲಿಂಗಯ್ಯ, ಎಚ್.ಎಸ್.ಶಿವಪ್ರಕಾಶ್, ಬಿ.ಎನ್.ಸುಮಿತ್ರಾಬಾಯಿ, ಎಚ್.ಎಸ್.ಶ್ರೀಮತಿ, ಜಿ.ಎಚ್.ನಾಯಕ್, ಜಿ.ಎಸ್.ಆಮೂರ ಇತ್ಯಾದಿ ಬರಹಗಾರರ ಅಧ್ಯಯನಕ್ಕೆ ಚರ್ಚೆ ಆಗುವಂತಹ ಮುನ್ನುಡಿಗಳನ್ನು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬಳಸಿಕೊಳ್ಳಲಾಗಿದೆ. ಇದನ್ನು ಕಾಲದ ಗಡಿರೇಖೆಯಾಗಿ ಗುರುತಿಸುವುದು ಕಷ್ಟ. ಸ್ವಾತಂತ್ರ್ಯಪೂರ್ವದಲ್ಲಿ ಮುನ್ನುಡಿಗಳ ರಚನೆಯಲ್ಲಿ ತೊಡಗಿ ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ತಮ್ಮ ಬರವಣಿಗೆಯನ್ನು ಮುಂದುವರಿಸಿದ ಮುನ್ನುಡಿಕಾರರು ಮತ್ತು ಮುನ್ನುಡಿಗಳು ಈ ವ್ಯಾಪ್ತಿಯೊಳಗೆ ಬಂದಿವೆ. ಇವುಗಳನ್ನು ಆಕರವಾಗಿಟ್ಟುಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ.

**೧.೩. ಅಧ್ಯಯನದ ವಿಧಾನ**

ಪ್ರತಿಯೊಂದು ಅಧ್ಯಯನವು ತನ್ನದೇ ಆದ ವಿಧಾನವೊಂದನ್ನು ರೂಪಿಸಿಕೊಂಡಿರುತ್ತದೆ. ಹಾಗೆಯೇ ಅಧ್ಯಯನ ವಿಧಾನಗಳು ಸಿದ್ಧರೂಪದಲ್ಲಿ ಕಂಡುಬರುವುದಿಲ್ಲ. ಪ್ರತಿ ಅಧ್ಯಯನಕ್ಕೂ ಬೇರೆಯದೇ ಆದ ವಿಧಾನವನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಕೆಲವೊಮ್ಮೆ ಅಧ್ಯಯನಕ್ಕೆ ಆಯ್ದುಕೊಂಡ ಪಠ್ಯಗಳೇ ಮುಖ್ಯವಾಗಿರುತ್ತವೆ. ಜೊತೆಗೆ ಅಧ್ಯಯನಕ್ಕೆ ಆಯ್ದುಕೊಂಡ ಪಠ್ಯ ಮಾತ್ರ ಮುಖ್ಯವಲ್ಲ, ಪಠ್ಯೇತರಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಮುಖ್ಯವಾಗಿರುತ್ತದೆ. ಈಗಾಗಲೇ ವಿಮರ್ಶಾ ಪರಿಕರಗಳನ್ನು ಅಧ್ಯಯನ ಮಾಡುವುದು ಜನಪ್ರಿಯವಾಗಿದೆ. ಆದರೆ ಅಧ್ಯಯನಕ್ಕೆ ಮೂಲಭೂತ ಪಠ್ಯ, ಪರಿಕರಗಳನ್ನು ಅಧ್ಯಯನ ಮಾಡುವುದು ಮುಖ್ಯ ವಿಧಾನವಾಗಿದೆ. ಆದರೆ ಕೆಲವು ರೀತಿಯ ಅಧ್ಯಯನಕ್ಕೆ ಮಿತಿಗಳಿವೆ. ಈ ಮಿತಿ ಅಧ್ಯಯನಕ್ಕೆ ಬೌದ್ಧಿಕ ಶಿಸ್ತು ಮತ್ತು ಚೌಕಟ್ಟನ್ನು ಒದಗಿಸುತ್ತದೆ. ಅಧ್ಯಯನ ಕೊನೆಗೆ ಸಿದ್ಧಗೊಳ್ಳುವ ಈ ವಿಶ್ಲೇಷಣಾತ್ಮಕ ಸಮರ್ಥನೆಯು ದಿಕ್ಸೂಚಿಯಂತೆ ಕೆಲಸ ಮಾಡುತ್ತದೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಈ ವಿಧಾನಗಳನ್ನು ಬಳಸಲಾಗಿದೆ.

ಮುನ್ನುಡಿಗಳಲ್ಲಿ ವ್ಯಕ್ತಗೊಂಡಿರುವ ವಸ್ತುವಿಷಯದ ವಿಶ್ಲೇಷಣೆಗಳನ್ನು ಅಧ್ಯಯನ ವಿಧಾನವಾಗಿ ರೂಪಿಸಿಕೊಳ್ಳಲಾಗಿದೆ. ಆಯಾ ಕಾಲದ ಕನ್ನಡ ಸಾಹಿತ್ಯದ ಮುನ್ನುಡಿಗಳನ್ನು ಸಮಗ್ರವಾಗಿ ಅಥವಾ ಆಯ್ದ ಮುನ್ನುಡಿಗಳನ್ನು ನಿರ್ವಚಿಸಿಕೊಳ್ಳುವುದರ ಭಿನ್ನ ನೆಲೆಗಳನ್ನು ಹೇಗೆ ಗುರುತಿಸಲಾಗಿದೆ. ಮುನ್ನುಡಿಗಳು ಇತರ ಸಾಹಿತ್ಯ ಪ್ರಕಾರದ ಜೊತೆಗಿನ ಸಂಬಂಧದ ಆಯಾ ಕಾಲದ ಸಂದರ್ಭಕ್ಕೆ ವಸಾಹತುಶಾಹಿಗೆ ಹೇಗೆ ಮುಖಾಮುಖಿಯಾಗಿ ವ್ಯಕ್ತಗೊಂಡಿವೆ. ಮನುಷ್ಯ ಸಂಬಂಧಗಳನ್ನು ತನ್ನ ಪರಿಸರದ ಜೊತೆಗೆ ವ್ಯಕ್ತಿ ಹೇಗೆ ನಿರ್ವಚಿಸಿಕೊಂಡಿದ್ದಾನೆ. ಜಾತಿ, ಮತ, ಲಿಂಗಸಂಬಂಧಿ, ನಗರ, ಗ್ರಾಮ, ಧಾರ್ಮಿಕವಾಗಿ ಒಂದು ಭಾಷಿಕ ರಚನೆಯಲ್ಲಿ ಹೇಗೆ ಒಳಗೊಂಡಿದ್ದಾನೆ. ಅಲ್ಲಿಯ ವೈರುಧ್ಯಗಳ ಜೊತೆಯಲ್ಲಿ ಇವು ಕಾಣುತ್ತವೆ. ಇಂತಹ ಸಂದರ್ಭಗಳನ್ನು ಈ ಬಗೆಯ ಅಧ್ಯಯನ ವಿಧಾನದಲ್ಲಿ ಮುನ್ನುಡಿಗಳ ಮೂಲಕ ಗುರುತಿಸಿಕೊಳ್ಳಲಾಗಿದೆ.

ಮುನ್ನುಡಿಗಳು ಕನ್ನಡ ಸಾಹಿತ್ಯದಲ್ಲಿ ಹೇಗೆ ಬೆಳವಣಿಗೆಯಾದವು ಮತ್ತು ಮುನ್ನುಡಿಗಳ ಪರಂಪರೆಯನ್ನು ಚಾರಿತ್ರಿಕ ನೆಲೆಯಲ್ಲಿ ಪರಿಶೀಲಿಸಿ ಹಂತ ಹಂತವಾಗಿ ಗುರುತಿಸಿಕೊಳ್ಳಲಾಗಿದೆ ಮತ್ತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮುನ್ನುಡಿ ಸಾಹಿತ್ಯವನ್ನು ತಾತ್ಸಾರ ಭಾವನೆಯಿಂದ ಕಂಡವರೂ ಹಾಗೆಯೇ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದವರು ಸಾಹಿತ್ಯ ವಲಯದಲ್ಲಿ ಕಂಡುಬರುತ್ತಾರೆ. ಇವರಲ್ಲಿ ಮುನ್ನುಡಿಯನ್ನು ಕುರಿತಂತೆ ಇರುವ ಭಿನ್ನಾಭಿಪ್ರಾಯಗಳೇನು ಎಂಬುದನ್ನು ಕಂಡುಕೊಳ್ಳಲಾಗಿದೆ. ಜೊತೆಗೆ ಮುನ್ನುಡಿಗಳು ಹಳಗನ್ನಡದ ಸಂಪಾದಿತ ಕೃತಿಗಳಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಹಳಗನ್ನಡ ಕೃತಿಗಳ ಸಾರಾಂಶವನ್ನು ಮುನ್ನುಡಿಗಳಲ್ಲಿ ಕೊಡಲಾಗಿದೆ. ಕನ್ನಡ ಸಾಹಿತ್ಯದ ವಸಾಹತುಶಾಹಿಯ ಹಿನ್ನೆಲೆಯಿಂದ ಅನೇಕ ಪ್ರಕಾರಗಳು ಹುಟ್ಟಿ ಕತೆ, ಕಾದಂಬರಿ, ವಿಮರ್ಶೆ, ನಾಟಕ ಈ ಪ್ರಕಾರಗಳ ಮುನ್ನುಡಿಗಳನ್ನು ತೌಲನಿಕ ಅಧ್ಯಯನ ಮಾಡುವ ವಿಧಾನವನ್ನು ಗುರುತಿಸಲಾಗಿದೆ.

ಮುನ್ನುಡಿಗಳು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ವಾಗ್ವಾದಗಳನ್ನು ಸೃಷ್ಟಿ ಮಾಡಿವೆ. ಹಾಗೆಯೇ ಮುನ್ನುಡಿಗಳ ಮೂಲಕ ಸಾಹಿತ್ಯದ ಬದಲಾವಣೆಗಾಗಿ ಕರೆಯನ್ನು ಕೊಟ್ಟಿವೆ. ಈ ತರವಾದ ಸಂಗತಿಗಳ ವಿಧಾನವನ್ನು, ಸಾಹಿತ್ಯದ ಪ್ರಮುಖ ಮುನ್ನುಡಿಕಾರ/ಕಾರ್ತಿಯರ ಮುನ್ನುಡಿಗಳನ್ನು ಪ್ರತ್ಯೇಕ ಅಧ್ಯಯನ ಮಾಡಿ ಅವರ ತಾತ್ವಿಕತೆಯನ್ನು ಸಾಂಸ್ಕೃತಿಕ ವಿಧಾನವಾಗಿ ಗುರುತಿಸಿಕೊಳ್ಳಲಾಗಿದೆ. ಹಳೆ ತಲೆಮಾರಿನವರಿಗೆ ಬರೆದ ಮುನ್ನುಡಿಗಳು ಮತ್ತು ಹೊಸ ತಲೆಮಾರಿನನವರಿಗೆ ಬರೆದ ಮುನ್ನುಡಿಗಳ ಭಿನ್ನತೆಗಳನ್ನು ವಿಶ್ಲೇಷಣಾತ್ಮಕ ವಿಧಾನಗಳಾಗಿ ಗುರುತಿಸಲಾಗಿದೆ. ಮುನ್ನುಡಿಗಳ ಮೇಲೆ ಬಂದ ಲೇಖನಗಳ ವೈಧಾನಿಕತೆಯನ್ನು ಪ್ರಸ್ತುತ ಅಧ್ಯಯನಕ್ಕೆ 'ಸಾಂಸ್ಕೃತಿಕ"ವಾದದ ನೆಲೆಯಲ್ಲಿ ಬಳಸಿಕೊಳ್ಳಲಾಗಿದೆ. ಮೂಲಪಠ್ಯದ ಮುನ್ನುಡಿಗಳ ತೌಲನಿಕ ಚರ್ಚೆಯನ್ನು ಕೃತಿಯೊಳಗಿನ ಕೆಲವು ಕೃತಿಗಳಿಗೆ ತಾವೇ ಬರೆದುಕೊಳ್ಳುವ ಮುನ್ನುಡಿಗಳ ವೈಧಾನಿಕತೆಯನ್ನು ಹಾಗೂ ಒಂದೇ

ಕೃತಿಗೆ ಲೇಖಕ ಮತ್ತು ಮುನ್ನುಡಿಕಾರ ಇಬ್ಬರ ಮುನ್ನುಡಿಗಳು ಕಂಡುಬಂದಿರುವುದನ್ನು ಗಮನಿಸಲಾಗಿದೆ. ಇವುಗಳ ವಿಧಾನವನ್ನು ಅಧ್ಯಯನದಲ್ಲಿ ಗುರುತಿಸಿಕೊಂಡಿದೆ. ಹಾಗೆಯೇ ಮುನ್ನುಡಿ ಬರೆಯುವುದಕ್ಕೆ ಕೆಲವರು ಕತೆಗಳನ್ನು ಕಟ್ಟುತ್ತಾರೆ ಹಾಗೂ ಕಥನಗಳಿವೆ. ಮುನ್ನುಡಿ ಸಾಹಿತ್ಯದ ಕತೆಗಳನ್ನು ನಿರ್ವಚಿಸಿಕೊಂಡಿರುವ ಬಗೆಯನ್ನು ತಿಳಿಸಲಾಗಿದೆ. ಈ ಮೇಲಿನ ಅಂಶಗಳ ಮೂಲಕ ಸಮಗ್ರ ರೀತಿಯಲ್ಲಿ ಈ ವಿಧಾನಗಳನ್ನು ಅಳವಡಿಸಿಕೊಂಡು 'ಆಯ್ದ ಮುನ್ನುಡಿಗಳು: ಸಾಂಸ್ಕೃತಿಕ ಅಧ್ಯಯನ'ವನ್ನು ಮಾಡಲಾಗಿದೆ.

ಅಧ್ಯಾಯ ಎರಡು

# ಮುನ್ನುಡಿಗಳು ಒಳಗೊಂಡ ವಿಮರ್ಶಾತ್ಮಕ ಸಮೀಕ್ಷೆ

ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಸಾಹಿತ್ಯ ಕುರಿತು ಅಧ್ಯಯನಗಳು ನಡೆದಿರುವುದು ಕಡಿಮೆ. ಕನ್ನಡ ಸಾಹಿತ್ಯ ಕೃತಿ ರಚನೆಯ ಜೊತೆ ಜೊತೆಗೆ ಮುನ್ನುಡಿ ರಚನೆಗೊಳ್ಳುತ್ತಿದೆ. ಆದರೆ ಇದುವರೆಗಿನ ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಗಳನ್ನು ಅಧ್ಯಯನಕ್ಕೆ ಒಳಪಡಿಸದೇ ಇರುವುದು ಶೋಚನೀಯವಾದುದು. ಮುನ್ನುಡಿಗಳ ಕುರಿತು ಅನೇಕರು ಕೆಲವು ಸಂದರ್ಭದಲ್ಲಿ ಚರ್ಚಿಸಿದ್ದಾರೆ. ಅದೇ ಬಹು ದೊಡ್ಡ ಕೆಲಸವೆಂದು ಹೇಳಬಹುದು.

ಪ್ರಸ್ತುತ ಈ ಸಂಶೋಧನೆಯು "ಆಯ್ದ ಮುನ್ನುಡಿಗಳು: ಸಾಂಸ್ಕೃತಿಕ ಅಧ್ಯಯನ" ಎಂದಿದೆ. ಹಾಗಾಗಿ ನಿರ್ದಿಷ್ಟವಾಗಿ ಈ ಅಧ್ಯಯನದ ಆಯಾಮದಲ್ಲಿ ನಡೆದಿರುವ ಅಧ್ಯಯನಗಳ ತಾತ್ವಿಕತೆಯನ್ನು ಪರಿಶೀಲಿಸುವುದು ಇಲ್ಲಿಯ ಸಾಮಾನ್ಯ ಉದ್ದೇಶವಾಗಿದೆ. ಈ ಅಧ್ಯಯನದಲ್ಲಿ ಆಯ್ದ ಮುನ್ನುಡಿಗಳನ್ನು ತೆಗೆದುಕೊಳ್ಳಲಾಗಿದೆ. ಜೊತೆಗೆ ಕನ್ನಡ ಸಾಹಿತ್ಯ ವಲಯದಲ್ಲಿ ಚರ್ಚೆಗೊಳಗಾಗಿರುವಂತಹ ಮುನ್ನುಡಿಯನ್ನು ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ.

ಮುನ್ನುಡಿ ಸಾಹಿತ್ಯ ಕುರಿತ ಅಧ್ಯಯನಗಳನ್ನು ಗಮನಿಸಿದಾಗ ಈ ಪ್ರಕಾರದ ಕುರಿತು ನಡೆದ ಅಧ್ಯಯನಗಳು ನಡೆದಿಲ್ಲವೆಂಬುದು ತಿಳಿಯುತ್ತದೆ. ನಡೆದ ಅಧ್ಯಯನಗಳ ಪ್ರಮಾಣ ತುಂಬಾ ತುಂಬಾನೇ ಕಡಿಮೆ. ಏಕೆಂದರೆ ಮುನ್ನುಡಿ ಎನ್ನುವಂತದ್ದು ಸಂಕ್ಷಿಪ್ತ ಬರವಣಿಗೆಯಾಗಿದೆ. ಮುನ್ನುಡಿಗಳಿಗೆ ಸಾಹಿತ್ಯ 'ಪ್ರಕಾರ' ಎಂದು ಹೇಳುವಷ್ಟು ಸಾಧ್ಯತೆ ಕಡಿಮೆ. ಆದರೆ ಸಾಹಿತ್ಯದಲ್ಲಿ 'ರೂಪ'ವಾಗಿ ಮುನ್ನುಡಿ ಒಡಮೂಡುತ್ತದೆ. ಆದರೆ ಪಿಎಚ್.ಡಿ.ಯಂತಹ ಅಧ್ಯಯನಕ್ಕೆ ಒಳಪಡಿಸಿಕೊಂಡಿಲ್ಲ. ಕೃತಿ ರಚನೆಗೊಂಡಿಂತೆಂದರೆ ಅದರ ಜೊತೆ "ಮುನ್ನುಡಿ" ರಚನೆಗೊಂಡಂತೆ. ಮುನ್ನುಡಿ ಯಾರು ಬರೆದಿದ್ದಾರೆ? ಮುನ್ನುಡಿಯ ಮೌಲ್ಯ, ಚಿಂತನೆ, ಅದರ ಪ್ರಮಾಣ ಬೇರೆಯಾಗಿ ಕನ್ನಡ ಸಾಹಿತ್ಯದಲ್ಲಿ ಒಳಗೊಂಡಿದೆ. ಆದರೆ ಕೃತಿಯ ಮೊದಲು ಮುನ್ನುಡಿ ಬರವಣಿಗೆ ಹುಟ್ಟಿದೆ. ಹಾಗಾಗಿ ಸಮೀಕ್ಷೆ ಸಂದರ್ಭದಲ್ಲಿ ಮುನ್ನುಡಿಗಳನ್ನು ಕುರಿತು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಿಕೊಂಡಿದ್ದಾರೆ. ಉದಾಹರಣೆಗೆ ಈ ಕೃತಿಯ ಮುನ್ನುಡಿ ಭಾಗದಲ್ಲಿ ಉಲ್ಲೇಖಗಳು ಕಾಣಬರುತ್ತವೆ. ಹಾಗೆಯೇ ಕೃತಿಯ ಮುನ್ನುಡಿಯಲ್ಲಿಯೂ ಚರ್ಚಿಸಲಾಗಿದೆ ಎಂದು ಕೆಲವು ಲೇಖನಗಳಲ್ಲಿ ಅಥವಾ ವಿಮರ್ಶಾ ಕೃತಿಗಳಲ್ಲಿ ಮುನ್ನುಡಿಗಳನ್ನು ಕುರಿತು ಚರ್ಚೆ ಮಾಡಿದ್ದಾರೆ. ಈ ಮುನ್ನುಡಿಗಳಲ್ಲಿನ

ಸಾಧನೆ, ವೈಫಲ್ಯಗಳನ್ನು ಕುರಿತು ಪರಿಶೀಲನೆಗಳು, ಚರ್ಚೆಗಳು, ಮೌಲ್ಯಮಾಪನಗಳು ನಡೆದಿವೆ. ಆದರೆ ಅಲ್ಲಿ ಮುನ್ನುಡಿಗಳ ಬಗೆಗಿನ ಅಧ್ಯಯನ ಕಂಡುಬರುವುದಿಲ್ಲ. ಇದಕ್ಕೆ ಅನೇಕ ಕಾರಣಗಳಿರಬಹುದು. ಅದನ್ನು ಮುಂದೆ ಚರ್ಚೆಗೆ ತೆಗೆದುಕೊಳ್ಳಲಾಗುವುದು. ಪ್ರಸ್ತುತ ಇಲ್ಲಿ ಮುನ್ನುಡಿ ಸಾಹಿತ್ಯ ಕುರಿತು ನಡೆದ ಅಧ್ಯಯನ ಲೇಖನಗಳ ಸ್ವರೂಪವನ್ನು ಚರ್ಚಿಸಲಾಗುವುದು.

ಮುನ್ನುಡಿ ಸಾಹಿತ್ಯವನ್ನು ಕುರಿತು ಅಧ್ಯಯನಗಳನ್ನು ಗಮನಿಸಿದಾಗ ಇಡಿಯಾದ ಅಧ್ಯಯನಗಳು ತುಂಬಾ ಕಡಿಮೆಯಿರುವುದು ಕಂಡುಬಂದಿದೆ. ಆದರೆ ಇಡಿಯಾದ ರೂಪದಲ್ಲಿ ಮುನ್ನುಡಿ ಸಂಕಲನಗಳು, ಮುನ್ನುಡಿ ಲೇಖನಗಳು ಕಂಡುಬರುತ್ತವೆ. ಯು.ಆರ್.ಅನಂತಮೂರ್ತಿಯವರ 'ನವ್ಯಲೋಕ', ಮಾಸ್ತಿಯವರ 'ಪೂಜನ', ದೇ.ಜ.ಗೌ. ಅವರ 'ಮುನ್ನುಡಿ ಕನ್ನಡಿ', 'ಮುನ್ನುಡಿ ರಂಗೋಲಿ', ಎಚ್.ಎಸ್.ರಾಘವೇಂದ್ರರಾವ್ ಅವರ 'ಸಂಗಡ', ಜಿ.ಎಸ್.ಶಿವರುದ್ರಪ್ಪನವರ 'ಕಾವ್ಯ ಸಂವಾದ' ಇತ್ಯಾದಿ. ಇವು ಬಿಟ್ಟರೆ ಸಮಗ್ರ ಗದ್ಯ ಸಂಕಲನಗಳಲ್ಲಿ ತಮ್ಮ ಮುನ್ನುಡಿಗಳನ್ನು ಒಟ್ಟುಗೂಡಿಸಿದ್ದನ್ನು ಕಾಣುತ್ತೇವೆ. ಇನ್ನುಳಿದವುಗಳಲ್ಲಿ ಬಿಡಿ ಬಿಡಿ ಬರಹಗಳ ಮುನ್ನುಡಿ ಲೇಖನಗಳು ಕಂಡುಬರುತ್ತವೆ.

ಮುನ್ನುಡಿಗಳು ಪ್ರತಿಯೊಂದು ಕೃತಿಗೂ ಸಾಮಾನ್ಯವಾಗಿವೆ. ಕೃತಿಯ ಮತ್ತು ಓದುಗನ ಮಧ್ಯೆ ಸಂಬಂಧವನ್ನು ಸೃಷ್ಟಿಸುತ್ತವೆ. ಕನ್ನಡ ಸಾಹಿತ್ಯ ಪರಂಪರೆಯೊಳಗೆ ಮುನ್ನುಡಿಗಳಿಗೆ ಮಹತ್ವದ ಸ್ಥಾನವಿದೆ. ಮುನ್ನುಡಿಗಳನ್ನು ಸಮೀಕ್ಷೆಗೊಳಪಡಿಸಿದಾಗ ಇಂದು ಅದನ್ನು ಪ್ರತ್ಯೇಕ ಅಧ್ಯಯನ ಮಾಡುವಷ್ಟು ತನ್ನ ವ್ಯಾಪ್ತಿಯನ್ನು ಸೃಷ್ಟಿಸಿಕೊಂಡಿದೆ. ಇದರಿಂದ ಕನ್ನಡದ ಸಾಹಿತ್ಯ ಚರಿತ್ರೆಯನ್ನು ಹುಡುಕುವ ಅಥವಾ ಮತ್ತೆ ಕಟ್ಟುವ ನೆಲೆಯಾಗಿ ರೂಪಗೊಳ್ಳುತ್ತದೆ. ಇದರಿಂದ ಕೃತಿ ಹುಟ್ಟಿದರೆ ಈ ಕೃತಿಯ ಬಗ್ಗೆ ಮೊದಲು ಮುನ್ನುಡಿ ಮೂಲಕ ಚಿಂತನೆಗೆ, ಮೊದಲ ವಿಮರ್ಶೆಗೆ ದಾರಿ ಮಾಡಿಕೊಡುತ್ತದೆ. ಇದರಿಂದ ಒಂದು ಸಾಹಿತ್ಯ ವಿಮರ್ಶೆಯ ಚರಿತ್ರೆಯನ್ನು ಕಟ್ಟುವಲ್ಲಿ ಮುನ್ನುಡಿಗಳು ಪ್ರಮುಖ ಪಾತ್ರ ವಹಿಸುತ್ತವೆ. ಕೃತಿಯ ಮೌಲ್ಯವನ್ನು ಮುನ್ನುಡಿಯಲ್ಲಿ ಕಟ್ಟಲಾಗಿರುತ್ತದೆ.

ಈ ಅಧ್ಯಯನ ಸಮೀಕ್ಷೆಯಲ್ಲಿ ಮೊದಲಿಗೆ ಮುನ್ನುಡಿಗಳಲ್ಲಿ ಕೆಲವು ಶೀರ್ಷಿಕೆಗಳನ್ನು ಗಮನಿಸುವುದಾದರೆ ಮುನ್ನುಡಿ, ಮೊದಲ ಮಾತು, ಮುಮ್ಮಾತು, ಪ್ರಸ್ತಾವನೆ, ನುಡಿಬೆಳಗು ಹಾಗೂ ಇಂಗ್ಲಿಷ್‌ನಲ್ಲಿ 'Foreword', 'Proleuge' ಇತ್ಯಾದಿಯಾಗಿ ಬರೆಯುವುದನ್ನು ಕಾಣುತ್ತೇವೆ. ಕೆಲವು ಸಂದರ್ಭಗಳಲ್ಲಿ ಕೃತಿಯ ವಸ್ತುವಿಷಯಕ್ಕೆ ಸಂಬಂಧಿಸಿದಂತಹ ಮುನ್ನುಡಿಗಳು, ಶೀರ್ಷಿಕೆಗಳು ಕಂಡುಬರುತ್ತವೆ. ತೇಜಸ್ವಿಯವರ ಅಬಚೂರಿನ ಪೋಸ್ಟಾಫೀಸು ಕೃತಿಯ "ಹೊಸದಿಗಂತದೆಡೆಗೆ"[೧] ಮುನ್ನುಡಿ, ಕೆ.ವಿ.ನಾರಾಯಣ ಅವರ ಬೇರು ಕಾಂಡ ಚಿಗುರು ಕೃತಿಯ "ಹೊಸ ಬೇರು ಹೊಸ ಚಿಗುರು"[೨] ಕೃತಿಯ ವಸ್ತು ಅಂಶಗಳನ್ನು ಒಳಗೊಂಡ ಮುನ್ನುಡಿಗಳ ಶೀರ್ಷಿಕೆಗಳಾಗಿವೆ. ಹಾಗೆಯೇ ಕೃತಿಗಳು ಸಮಾಜಕ್ಕೆ ಏನು ಹೇಳಲು ಹೊರಟಿವೆ ಎನ್ನುವುದನ್ನು ಮುನ್ನುಡಿಯಲ್ಲಿಯೇ ವ್ಯಕ್ತಗೊಂಡಿರುತ್ತದೆ.

ಮುನ್ನುಡಿಗಳ ಚರಿತ್ರೆಯೇ ಒಂದು ಕುತೂಹಲಕಾರಿ ವಿಷಯವಾಗಿದೆ. ಸಾಹಿತ್ಯ ವಲಯದಲ್ಲಿ ಮುನ್ನುಡಿ ಹೇಗೆ ರೂಪಗೊಂಡಿದೆ, ಅದರ ಅಗತ್ಯತೆ ಇದೆಯೇ? ಇದ್ದರೆ ಅದರ ಸ್ವರೂಪ

ಹೇಗಿರಬೇಕು? ಎಂಬ ಪ್ರಶ್ನೆಯಿಟ್ಟುಕೊಂಡು ನೋಡಿದರೆ ಮುನ್ನುಡಿ ಸಾಹಿತ್ಯ ಒಂದು ಸಾಂಸ್ಕೃತಿಕ ಒತ್ತಾಯದ ನೆಲೆಯಲ್ಲಿ ರೂಪಗೊಂಡಿದೆ ಎನಿಸುತ್ತದೆ. ಮುದ್ರಣ ತಂತ್ರಜ್ಞಾನದ ಆವಿಷ್ಕಾರ, ಆಧುನಿಕತೆಯ ಪ್ರಭಾವ, ಸಾಮಾಜಿಕ ಬದುಕಿನಲ್ಲಿ ಉಂಟಾದ ಬದಲಾವಣೆಗಳು ಮುನ್ನುಡಿಗಳನ್ನು ಪ್ರಭಾವಿಸುತ್ತವೆ. ಆದರೆ ಒಂದು ಸಾಮಾನ್ಯ ಮನೋಭಾವದ ಹಿನ್ನೆಲೆಯಲ್ಲಿ ಮುನ್ನುಡಿಗಳನ್ನು ನೋಡುವುದು ಸರಿಯಲ್ಲ ಎಂದು ಎನಿಸಬಹುದು. ಏಕೆಂದರೆ ಕೆಲವರಲ್ಲಿ ಮುನ್ನುಡಿಗಳ ಬಗ್ಗೆ ತಾತ್ಸಾರ ಭಾವನೆ ಕಂಡುಬರುತ್ತದೆ. ಹಾಗಾಗಿ ಈ ಮಾತನ್ನು ವ್ಯಕ್ತಪಡಿಸಲಾಗಿದೆ. ಒಟ್ಟಾರೆಯಾಗಿ ಮುನ್ನುಡಿ ಸಾಹಿತ್ಯವನ್ನು ಕೇವಲ ಆ ಕೃತಿಯನ್ನು ಕುರಿತವು ಎಂಬ ಆರೋಪ ಅಥವಾ ಮಿತಿ ಇದ್ದರೂ ಕೆಲವು ಮುನ್ನುಡಿಗಳು ವಿಮರ್ಶೆಯನ್ನು ಕಟ್ಟುವಲ್ಲಿ ಮಹತ್ವದ ಕೆಲಸ ಮಾಡಿವೆ. ಎಫ್.ಕಿಟಲ್ ಅವರು ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ತೊಡಗಿದಾಗ ಅವರು ಮುನ್ನುಡಿಗಳ ತತ್ವದ ಚಿಂತನೆಯ ಮೂಲಕ ಕನ್ನಡ ಸಾಹಿತ್ಯಕ್ಕೆ ವಿಮರ್ಶಾ ದೃಷ್ಟಿಕೋನವಾಗಿ ಸಂಪಾದನೆಯನ್ನು ತೋರಿಸಿಕೊಟ್ಟವರು. ಹಾಗಾಗಿ ಮುನ್ನುಡಿಯಲ್ಲಿ ವಿಮರ್ಶಾತ್ಮಕವಾಗಿ ಚಿಂತನೆ ಬೆಳೆಯಿತು. ಮುನ್ನುಡಿಗಳನ್ನು ಎರಡು ರೀತಿಯಲ್ಲಿ ಗುರುತಿಸಿಕೊಳ್ಳಬಹುದು. ಅವುಗಳೆಂದರೆ:

೧. ಲೇಖಕರೇ ಬರೆದುಕೊಳ್ಳುವ ಮುನ್ನುಡಿಗಳು

೨. ಅನ್ಯಲೇಖಕರು ಬರೆಯುವ ಮುನ್ನುಡಿಗಳು

**೧. ಲೇಖಕರೇ ಬರೆದುಕೊಳ್ಳುವ ಮುನ್ನುಡಿಗಳು**

ಮುನ್ನುಡಿಯನ್ನು ತಾವೇ ಬರೆದುಕೊಳ್ಳುವ ಉದ್ದೇಶ ತಮ್ಮ ಕೃತಿಯ ಪ್ರಶಂಸೆಯಾಗಲಿ, ಪರಿಚಯಾತ್ಮಕವಾಗಲಿ ಅಲ್ಲದಿರುವುದು. ಅಲ್ಲಿಯ ಮುನ್ನುಡಿ ಕೃತಿಯ ವಸ್ತುವಿಗಿಂತ ಭಿನ್ನವಾಗಿರುತ್ತದೆ. 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನದ 'ಹೊಸದಿಗಂತದೆಡೆಗೆ' ಎಂಬ ಮುನ್ನುಡಿ ಆ ಕೃತಿ ಪ್ರಕಟಿಸುವ ಕಾಲದ ಒತ್ತಡ, ಅನಿವಾರ್ಯತೆ ಮತ್ತು ಹೊಸ ಸಂವೇದನೆಗೆ, ವಿಚಾರಧಾರೆಗೆ ಅಂಟಿಕೊಳ್ಳಬೇಕಾದ ಅನಿವಾರ್ಯತೆಯನ್ನು ಸ್ಪಷ್ಟಪಡಿಸುತ್ತದೆ.

ಇದರಲ್ಲಿ ಆ ಕಾಲದ ಸಾಂಸ್ಕೃತಿಕ ಹಿನ್ನೆಲೆ ಮತ್ತು ಪರಿಣಾಮದಿಂದ ಸಾಹಿತ್ಯ ಬದಲಾದುದರ ಚಾರಿತ್ರಿಕ ವಿಶ್ಲೇಷಣೆಯನ್ನು ಈ ಮುನ್ನುಡಿಯಲ್ಲಿ ಗುರುತಿಸಬಹುದು. ಅಕ್ಷರ ಹೊಸ ಕಾವ್ಯದ ಪಿ.ಲಂಕೇಶ್ ಅವರ ಮುನ್ನುಡಿಯಲ್ಲಿ ನವ್ಯದ ಪ್ರಮುಖ ತಾತ್ವಿಕ ಚಿಂತನೆಗೆ ಒಳಗಾಗುವಂತಹ ಪ್ರಮುಖ ಕವನಗಳನ್ನು ಸಂಪಾದಿಸಿರುವುದರಿಂದ ನವ್ಯಕಾವ್ಯದ ಮಹತ್ವ ಕಾಣುತ್ತದೆ. ರಹಮತ್ ತರೀಕೆರೆಯವರು 'ಹೊಸ ತಲೆಮಾರಿನ ತಲ್ಲಣ' ಕೃತಿಯ ಮುನ್ನುಡಿಯಲ್ಲಿ ಹೊಸ ತಲೆಮಾರಿನ ಕವಿಗಳಾದ ಆರಿಫ್‌ರಾಜ, ವಿಕ್ರಮವಿಸಾಜಿ, ಮಮತಾ ಜಿ. ಸಾಗರ, ರಾಮಲಿಂಗಪ್ಪ ಟಿ. ಬೇಗೂರು ಇತ್ಯಾದಿಯಾಗಿ, ಇವರು ಪ್ರಸ್ತುತ ಸಂದರ್ಭದ ಸಮಕಾಲೀನ ಚಿಂತನೆ, ತುಡಿತ, ತಲ್ಲಣಗಳ ಬಗ್ಗೆ ತಮ್ಮ ಕಾವ್ಯದ ಭಾಷೆಯ ಮೂಲಕ ಬರವಣಿಗೆಯಲ್ಲಿ ಜಾಗೃತಗೊಂಡವರು ಹಾಗೆಯೇ ಎಲ್ಲೋ ನಡೆದ ಸಾಮಾಜಿಕ ಘಟನೆಗಳನ್ನು ತಮ್ಮ ಪಕ್ವತೆಯಿಂದ ಸಾಹಿತ್ಯ ರಚನೆಯಲ್ಲಿ ಹದಗೊಳಿಸಿದ್ದಾರೆ

ಎಂಬುದು ಈ ಕೃತಿಯ ಮುನ್ನುಡಿಯ ಅಂಶಗಳಾಗಿವೆ. ಸಮಕಾಲೀನ ಸ್ಥಿತಿಗತಿಗಳು, ಚಾರಿತ್ರಿಕ ಒತ್ತಡಗಳು, ಬೇರೆ ಬೇರೆ ಸಮುದಾಯದ ಕೂಡುಕೊಳ್ಳುವಿಕೆಯನ್ನು, ಹೊಸ ತಲೆಮಾರಿನ ಕವಿಗಳು ಸಾಹಿತ್ಯ ಚಿಂತನೆಯಲ್ಲಿ, ಕಷ್ಟ-ಸುಖಗಳನ್ನು ಮತ್ತು ಸುತ್ತಮುತ್ತಲಿನ ಪರಿಸರವನ್ನು ಕುರಿತು ತಮ್ಮ ಅನಿಸಿಕೆಗಳನ್ನು, ಭಾಷೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಹಾಗಾಗಿ ಅವರೆಲ್ಲ ಖಚಿತತೆ, ಕನಸು, ವಿಷಾದ, ಸೂಕ್ಷ್ಮತೆ, ಗೊಂದಲ, ಸಂಭ್ರಮ, ಜಿಜ್ಞಾಸೆ ಇವೆಲ್ಲ ಹೊಸ ತಲೆಮಾರಿನ ಕವಿಗಳ ಸಂವೇದನೆಗಳಾಗಿವೆ. ರಹಮತ್ ತರೀಕೆರೆ ಅವರು ಸಮಕಾಲೀನ ಕವಿಗಳ ಸಾಹಿತ್ಯ ರಚನೆಯ ಲೇಖನಗಳನ್ನು ಸಂಪಾದನೆ ಮಾಡಿದ್ದಾರೆ. ಹಾಗಾಗಿ ಹೊಸ ತಲೆಮಾರಿನ ಸಾಹಿತ್ಯ ರಚನೆ, ಸಾಹಿತ್ಯ ಓದು ಕುರಿತು ತಮ್ಮ ಸೂಕ್ಷ್ಮತೆಯನ್ನು ಮುನ್ನುಡಿಯಲ್ಲಿ ಚರ್ಚಿಸಿದ್ದಾರೆ.

ಕನ್ನಡದ ಕೆಲವರು ಸಾಹಿತಿಗಳು ತಮ್ಮ ಕೃತಿಗೆ ತಾವೇ ಮುನ್ನುಡಿ ಬರೆದುಕೊಳ್ಳುವುದರಿಂದ ಆ ಕೃತಿ ವಸ್ತು ವಿಷಯ ಕುರಿತು ತಮ್ಮ ಸಮಕಾಲೀನ ತುಡಿತ ಹೇಗಿದೆ ಎಂಬುದನ್ನು ತಿಳಿಸುತ್ತಾರೆ. ಅಬಚೂರಿನ ಪೋಸ್ಟಾಫೀಸು ಕೃತಿಯ ಮುನ್ನುಡಿ ಕೃತಿ ವಸ್ತುವಿಗಿಂತ ದೇಶದಲ್ಲಿ ನಡೆಯುವ ರಾಜಕೀಯ, ತಂತ್ರ, ಪುಢಾರಿತನವನ್ನು, ನಾಜೂಕಿನ ಭಾಷಣಗಳಿಂದ ಜನರನ್ನು ಯಾಮಾರಿಸುವುದನ್ನು, ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ನಡೆಯುವ ಭಾಷಣಗಳ ಸೋಗಲಾಡಿತನವನ್ನು ಪರೋಕ್ಷವಾಗಿ ಬಿಂಬಿಸಿ ಹೊಸ ಸಾಹಿತ್ಯ ರಚನೆಗೆ ಅಡಿಗಾಲು ಹಾಕುತ್ತದೆ. ಹಾಗಾಗಿ ತಾವೇ ಬರೆದುಕೊಳ್ಳುವ ಮುನ್ನುಡಿ ಅಭಿವ್ಯಕ್ತಿಯ ನೆಲೆಯಾಗಿ ಕೃತಿಯ ಉದ್ದೇಶದಲ್ಲಿ ವ್ಯಕ್ತಗೊಂಡಿರುತ್ತದೆ.

**೨. ಅನ್ಯ ಲೇಖಕರಿಗೆ ಬರೆಯುವ ಮುನ್ನುಡಿಗಳು**

ಕನ್ನಡ ಸಾಹಿತ್ಯ ಕೃತಿಗಳಿಗೆ ಮುನ್ನುಡಿ ಬರೆಯುವುದು ಸಾಮಾನ್ಯವಾಗಿದೆ. ಆದರೆ ವಿಶೇಷವಾಗಿ ಅನ್ಯ ಕೃತಿಗಳಿಗೆ ಮುನ್ನುಡಿ ಬರೆಯುವುದು ಇನ್ನೊಂದು ತೆರನಾದ ವಿಶೇಷವಾಗಿದೆ. ಏಕೆಂದರೆ ಕೃತಿಗಳಿಗೆ ಅನ್ಯ ಲೇಖಕರು ಬರೆಯುವ ಮುನ್ನುಡಿಗಳು ಬಹುತೇಕವಾಗಿ ಬೆನ್ನು ಚಪ್ಪರಿಸುವ 'ಶಹಬಾಷ್‌ಗಿರಿ' ಹೇಳುವ ಪ್ರಶಂಸೆ, ಒಗಳುವಿಕೆಯ ಹಾಗೂ ಅಷ್ಟೇ ಗಂಭೀರವಾದ ಮುನ್ನುಡಿಗಳು ಅನ್ಯ ಲೇಖಕರ ಮುನ್ನುಡಿಗಳ ವಸ್ತುವಾಗಿದೆ. ಮೊದಲ ಹೊತ್ತಿನ ಸಂದರ್ಭದಲ್ಲಿ ಬಂದಂತಹ ಮುನ್ನುಡಿಗಳು ಹೆಚ್ಚಾಗಿ ಕೃತಿ ಅಥವಾ ಲೇಖಕರ ಸುತ್ತಲೇ ಸುತ್ತುತ್ತಿದ್ದವು. ಆ ನಂತರದ ದಶಕದಲ್ಲಿ ಮುನ್ನುಡಿಯನ್ನು ಪರಂಪರೆಯ ಸಂದರ್ಭದಲ್ಲಿ ಇಟ್ಟು ಚರ್ಚಿಸುವ, ಪರಂಪರೆಯ ಜೊತೆಯಲ್ಲಿ ಲೇಖಕರನ್ನು ನೋಡುವ ದೃಷ್ಟಿ ಬೆಳೆಯುತ್ತಾ ಹೋಯಿತು. ಉದಾಹರಣೆಗೆ ನಾದಲೀಲೆಗೆ ಮಾಸ್ತಿಯವರು ಬರೆದಿರುವ ಮುನ್ನುಡಿ, 'ಗರತಿಯ ಹಾಡು' ಕೃತಿಗೆ ಬೇಂದ್ರೆ, ಬಿ.ಎಂ.ಶ್ರೀ. ಅವರ ಮುನ್ನುಡಿ, ಹಾಗೆಯೇ ಬಿ.ಎಂ.ಶ್ರೀ. ಅವರ 'ಇಬ್ಬನಿ', 'ಕನ್ನಡ ತೇರು', 'ಜೀವ ಕನ್ನಡ' ಕೃತಿಗಳಿಗೆ ಬರೆದಿರುವ ಮುನ್ನುಡಿಗಳು ತಾಂತ್ರಿಕವಾಗಿ ಮಹತ್ವದವು. (ಬಿ.ಎಂ.ಶ್ರೀ.ಯವರ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಕೃತಿಯಲ್ಲಿ ಇಂತ ಮುನ್ನುಡಿಗಳನ್ನು ಗಮನಿಸಬಹುದು). ಇವುಗಳಲ್ಲದೆ ಗರಿ, ಮಾಂದಳಿರು, ಇಂಗ್ಲಿಷ್ ಗೀತಗಳು, ಭಾವತರಂಗ, ಚಂಡಮದ್ದಳೆ, ಭೂಮಿಗೀತ, 'ಬೇರು

ಕಾಂಡ ಚಿಗುರು' ಕೃತಿಯ 'ಹೊಸ ಬೇರು ಹೊಸ ಚಿಗುರು, ಮುನ್ನುಡಿಗಳು ಮಹತ್ವದ್ದಾಗಿವೆ. ಹಾಗೆಯೇ ತಾವು ಬರೆದುಕೊಂಡ ಕೆಲವು ಕೃತಿಗಳ ಮುನ್ನುಡಿಗಳು ಕನ್ನಡ ಸಾಹಿತ್ಯಕ ಪರಂಪರೆಯನ್ನು ಮುಂದುವರಿಸಿದವುಗಳಾಗಿವೆ.

ಮುನ್ನುಡಿಯ ಸ್ವರೂಪದ ಚಿಂತನೆ ಪಾಶ್ಚಾತ್ಯರಿಂದ ಮೊದಲುಗೊಂಡು ಪ್ರಸ್ತುತದವರೆಗೂ ಹಲವಾರು ರೀತಿಯಲ್ಲಿ ಸಾಂಸ್ಕೃತಿಕ ಒತ್ತಾಯದ ನೆಲೆಯಲ್ಲಿ ರೂಪಗೊಂಡರೂ ಅದರ ಅನನ್ಯತೆಯನ್ನು ಹುಡುಕುವುದು ಪ್ರಮುಖ ಸಂಗತಿಯಾಗಿದೆ. ಮುನ್ನುಡಿ ಕಡಿಮೆ ಪುಟಗಳ ಸಾಹಿತ್ಯವನ್ನು ಹೊಂದಿದೆ. ಮುನ್ನುಡಿ ಸೂಕ್ಷ್ಮ ಮತ್ತು ಕೃತಿಯ ಒಳಸುಳಿಯನ್ನು ಬಿಟ್ಟುಕೊಡುತ್ತದೆ. ಮುನ್ನುಡಿ ಹಲವಾರು ನೆಲೆಯ ಅರ್ಥಗಳನ್ನು ಒಳಗೊಂಡಿರದಿದ್ದರೂ ಸಹ ಅದು ಕೃತಿಯ ಮೊದಲ ವಿಮರ್ಶೆಯಾಗಿದೆ. ಇದರಲ್ಲಿ ಅನ್ಯ ಲೇಖಕರ ಕೃತಿಯ ಪರಿಚಯ, ಲೇಖಕರ ಪರಿಚಯ, ಪ್ರಶಂಸೆ, ಟೀಕೆ ಇರಬಹುದು. ಆದರೆ ಕೆಲವರು ಮುನ್ನುಡಿ ಎಂದರೆ ಅಸಡ್ಡೆತನ ಹೊಂದಿದವರಾಗಿದ್ದಾರೆ. ಹಾಗೆಯೇ 'ಮುನ್ನುಡಿಯನ್ನು ಯಾರೂ ಓದುವುದಿಲ್ಲ. ಹಾಗೆ ಓದುವುದು ಅಪವಾದವೆಂಬಂತೆ ಹೇಳುವವರು ಇದ್ದಾರೆ. ಏಕೆಂದರೆ ಕೆಲವರು ಮುನ್ನುಡಿ ಪಾಶ್ಚಾತ್ಯರ ಪರಿಕಲ್ಪನೆ ಎಂದು ತಿಳಿದವರಾಗಿದ್ದಾರೆ.

ಮುನ್ನುಡಿಯು ಕೃತಿಯನ್ನು ಮತ್ತು ಲೇಖಕರನ್ನು ಹೊಗಳುವ ವೇದಿಕೆಯಾಗಿರುವುದನ್ನು ವಿಶೇಷವಾಗಿ ಕೆಲವರಲ್ಲಿ ಕಾಣಬಹುದು. ಆದರೆ ಮುನ್ನುಡಿ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಅನಿವಾರ್ಯದ ಬರವಣಿಗೆಯಾಗಿದೆ. ಹಾಗಾಗಿ ಕನ್ನಡ ಸಾಹಿತ್ಯಕ್ಕೆ ಹೊಸ ಚರಿತ್ರೆಯನ್ನು ರೂಪಿಸುವುದಕ್ಕೆ ಮತ್ತು ಕಟ್ಟುವುದಕ್ಕೆ ಸಾಧ್ಯತೆಯಿದೆ ಎಂದು ಹೇಳಬಹುದು. ಭಾರತೀಯ ಕಾವ್ಯಮೀಮಾಂಸೆ ಕೃತಿಯ ಮುನ್ನುಡಿ ಯಾವುದೇ ಸಾಂಸ್ಕೃತಿಕ ಒತ್ತಾಯದ ನೆಲೆಯಿಂದ ಬಂದದ್ದಲ್ಲ. ಅಲ್ಲಿ ಚಿಂತನೆಗೆ ತಾತ್ವಿಕ ಕಾವ್ಯಮೀಮಾಂಸೆಯ ಸಮೀಕ್ಷೆ ರೂಪಿಸಿಕೊಂಡಿದೆ.

## ಮುನ್ನುಡಿ ಸಾಹಿತ್ಯ ಕುರಿತ ಅಪವಾದಗಳು

ಮುನ್ನುಡಿ ಸಾಹಿತ್ಯವನ್ನು ಕನ್ನಡ ಸಾಹಿತ್ಯದಲ್ಲಿ ಅಲ್ಲಗಳೆಯುವವರು ಇದ್ದಾರೆ. 'ಮೈಸೂರು ಮಲ್ಲಿಗೆ' ಕವನ ಸಂಕಲನಕ್ಕೆ ಡಿ.ವಿ.ಜಿ.ಯವರು ಮುನ್ನುಡಿ ಬರೆಯುತ್ತ "ಮುನ್ನುಡಿ ಬರೆಯುವುದು ಫ್ಯಾಶನ್ ಆಗಿದೆ. ಇದರ ಅಗತ್ಯತೆ ಇಲ್ಲ"[೩] ಎಂದು ಹೇಳುತ್ತಾರೆ. ಹಾಗೆಯೇ ನಾಡಿಗೇರ ಕೃಷ್ಣರಾಯರು ಮುನ್ನುಡಿ ಕ್ಷೇತ್ರದ ಕುರಿತು "ಮುನ್ನುಡಿ ವ್ಯಾಧಿಯು ಇತ್ತೀಚೆಗೆ ಬಹಳವಾಗಿ ಹಬ್ಬಿ, ಅದೊಂದು ಸಾಂಕ್ರಾಮಿಕ ರೋಗವೋ ಎಂಬ ದಿಗಿಲು ನನಗುಂಟಾಗಿದೆ."[೪] ಎಂದು ಹೇಳುತ್ತಾರೆ. ನಾಡಿಗೇರ ಕೃಷ್ಣರಾಯರ ಅಭಿಪ್ರಾಯದಂತೆ ಮುನ್ನುಡಿ ಸಾಹಿತ್ಯ ಒಂದು ರಾಜಕಾರಣವಿದ್ದಂತೆ. ಮುನ್ನುಡಿ ಬರೆಸುವುದು ಒಂದು ತೆರನಾಗಿ ಪರಿಣಿಮಿಸಿದೆ. ಉನ್ನತ ಕವಿಯ ಮೂಲಕ ಮುನ್ನುಡಿ ಬರೆಸಿದರೆ ಕೃತಿಗಳಿಗೆ ಶೋಭೆಯಿದ್ದಂತೆ. ಹಾಗೇ ಬೇಗ ಬೇಗ ಮಾರಾಟವಾಗಬಹುದು. ತಮ್ಮ ಮುನ್ನುಡಿ ಬರೆಸುವಾಗ ಲೇಖಕರನ್ನು ನೋಡಿ ಮಣೆ ಹಾಕುವ ಮುನ್ನುಡಿಕಾರರು ಇದ್ದಾರೆ. ಆಗ ಇವರ ಕೃತಿಯ ಕುರಿತು ಮುನ್ನುಡಿಕಾರರು ಬೇಕಾಬಿಟ್ಟಿಯಾಗಿ ಬರೆದಿರಬಹುದೇನು, ಹಾಗಾಗಿಯೇ

ಮುನ್ನುಡಿಯನ್ನು ಸಾಂಕ್ರಾಮಿಕ ರೋಗ, ಮೋಡಿ ಎಂದು ಬಣ್ಣಿಸಿರಬಹುದು. ಕೆಲವು ಮುನ್ನುಡಿಕಾರರು ತಮಗೆ ಇಷ್ಟವಿಲ್ಲದಿದ್ದರೂ ವಿಷಯವನ್ನು ಅಸ್ಪಷ್ಟವಾಗಿ ಇತರರಿಗೆ ತಿಳಿಯದಂತೆ ಬರೆದಿರಬಹುದು. ಇಲ್ಲದಿದ್ದರೆ ಕೃತಿಯ ಉದ್ದೇಶ ಸರಿಯಲ್ಲ ಎಂದು ಹೇಳಿರಬಹುದು.

ಸಿ.ಎನ್.ರಾಮಚಂದ್ರನ್ ಅವರು ಮುನ್ನುಡಿ ಬರೆಯುವವರಿಗೆ "ಮುನ್ನುಡಿ ಪ್ರಶಸ್ತಿ ಕೊಡಬಹುದು"[೫] ಎಂದು ಹೇಳುತ್ತಾರೆ. ಏಕೆಂದರೆ ಗಿರಡ್ಡಿಯವರ 'ಹಿಡಿಯದ ಹಾದಿ' ಕೃತಿಯ ಮುನ್ನುಡಿಯಲ್ಲಿ ಗಿರಡ್ಡಿಯವರು ಮುನ್ನುಡಿ ಬರೆಯುವುದಿಲ್ಲ ಎಂದು ಘಂಟಾಘೋಷವಾಗಿ ಹೇಳಿದ್ದರು. ಆದರೆ ಗಿರಡ್ಡಿಯವರು ಒಂದು ಕೃತಿಗೆ ಮುನ್ನುಡಿ ಬರೆಯಲೊಪ್ಪುತ್ತಾರೆ. ಹಾಗಾಗಿ ಸಿ.ಎನ್.ಆರ್. ಅವರು ಮುನ್ನುಡಿ ಪ್ರಶಸ್ತಿ ಕೊಡಬೇಕೆಂದು ಪರೋಕ್ಷವಾಗಿ ಘೋಷಣೆಯ ಷರಾ ಬರೆಯುತ್ತಾರೆ. ಗಿರಡ್ಡಿಯವರು ಮುನ್ನುಡಿ ಎನ್ನುವುದು "ಅಲರ್ಜಿ"[೬] ಎಂದು ಹೇಳುತ್ತಾರೆ. ಆದರೆ ಮುನ್ನುಡಿಯ ಅಲರ್ಜಿಯ ಹಿಂದೆ ವ್ಯಕ್ತಿಯ ಅಲರ್ಜಿ ಇರಬಹುದೇನು, ಆದರೆ ಇದಕ್ಕೆ ಪ್ರತ್ಯುತ್ತರವಾಗಿ ರಾಮಲಿಂಗಪ್ಪ. ಟಿ. ಬೇಗೂರು ಅವರು ಗಿರಡ್ಡಿಯವರಿಗೆ ಪರೋಕ್ಷವಾಗಿ ಮಾರ್ಗಾಂತರ ಕೃತಿಯ ಲೇಖನದಲ್ಲಿ "ಮುನ್ನುಡಿ ಬರೆಯುವುದು ಬಿಡಬಹುದು. ಆದರೆ ಮುನ್ನುಡಿ ಬರೆಯಿರಿ ಎಂದು ಯಾರು ಹೇಳಿದವರು"[೭] ಎಂದು ಗಿರಡ್ಡಿಯವರಿಗೆ ಟಾಂಗ್ ನೀಡಿದ್ದಾರೆ. ಹೀಗೆಯೆ ಚಂಪಾ ಅವರು ಕೂಡ "ಮುನ್ನುಡಿ ಬರೆಯುವುದು ಕನ್ನಡ ಸಾಹಿತ್ಯಕ್ಕೆ ಅನಿವಾರ್ಯವೆ?"[೮] ಎಂದು ಪ್ರಶ್ನೆ ಮಾಡಿದ್ದಾರೆ. ಆದರೆ ಮುನ್ನುಡಿ ಕನ್ನಡ ಸಾಹಿತ್ಯಕ್ಕೆ ಅನಿವಾರ್ಯವಿದೆ. ಏಕೆಂದರೆ ಮುನ್ನುಡಿ ಬರೆಯುವವರ ಮೇಲೆ ನಿಂತಿದೆ. ಲೇಖಕರನ್ನು ಪ್ರೋತ್ಸಾಹಿಸಲು ಕೃತಿಯನ್ನು ಅಪ್ರಾಮಾಣಿಕವಾಗಿ ನೋಡಬಾರದು. ಕೃತಿಯ ಮೊದಲ ವಿಮರ್ಶೆ ಮುನ್ನುಡಿಕಾರನಲ್ಲಿದೆ. ಹಾಗಾಗಿ ಮುನ್ನುಡಿಗೆ ಒಂದು ಸಾಂಸ್ಕೃತಿಕ ಜವಾಬ್ದಾರಿಯೂ ಇದೆ.

ಕೆ.ಸತ್ಯನಾರಾಯಣ ಅವರು ಮೇ ೨೦೧೫ರ ಕಸ್ತೂರಿ ಪತ್ರಿಕೆಯಲ್ಲಿ 'ಮುನ್ನುಡಿ ಮಹಿಮೆ' ಲೇಖನ ಬರೆಯುತ್ತಾ "ಮುನ್ನುಡಿಯಿಂದ ಮುನ್ನುಡಿಕಾರರಿಂದ ನಾವು ಏನನ್ನು ನಿರೀಕ್ಷಿಸಬಹುದು, ನಿರೀಕ್ಷಿಸುತ್ತೇವೆ? ತುಂಬಾ ನಿರೀಕ್ಷೆಯೇನಿಲ್ಲ ನನ್ನದು, ಸಮಕಾಲೀನರಲ್ಲಿ ಮೊದಲನೆಯ ಸ್ಥಾನವೆಂದು ಹೇಳಬೇಕು. ಪರಂಪರೆಯ ಹಾದಿಯಲ್ಲಿ ನನ್ನ ಸ್ಥಾನ ಭದ್ರವಾಗಿದೆ ಎಂಬುದನ್ನು ಸ್ಪಷ್ಟವಾಗಿ ಹೇಳಬೇಕು. ಹೋಲಿಸುವಾಗ ಟಾಲ್‌ಸ್ಟಾಯ್, ವ್ಯಾಸ, ಕಮೂ ಇಂತವರೊಡನೆ ಮಾತ್ರ ಹೋಲಿಸಬೇಕು"[೯] ಎಂದು ಹೇಳುತ್ತಾರೆ. ಅಂದರೆ ಮುನ್ನುಡಿ ಬರೆಸಿಕೊಳ್ಳುವವರು ತಮ್ಮ ಸಾಹಿತ್ಯ ರಚನೆ, ತಮ್ಮ ಚಿಂತನೆ, ಸಾಹಿತ್ಯದ ಉನ್ನತ ಚಿಂತಕರ ಜೊತೆ ಹೋಲಿಸಿಕೊಳ್ಳಬೇಕು ಎಂದು ಅಪೇಕ್ಷೆ ಮಾಡುತ್ತಾರೆ. ಹಾಗೆಯೇ ನಾನು ಪ್ರಗತಿಪರ ಚಿಂತಕ, ಜಾತ್ಯತೀತ ಮನೋಧರ್ಮದವನೆಂದು ಮುನ್ನುಡಿಕಾರರು ಬರೆಯಬೇಕು. ಆಮೇಲೆ ಕೃತಿಯ ಕುರಿತು ಬರೆಯಬೇಕು ಎಂದು ಹೇಳುವವರು ಇದ್ದಾರೆ. ಹಾಗಾಗಿ ಮುನ್ನುಡಿ ಬರೆಯುವುದು ಲಾಬಿಯಾಗಿ ಬೆಳೆದಿದೆ ಎಂದು ಆರೋಪದ ರೀತಿಯಲ್ಲಿ ವ್ಯಕ್ತಪಡಿಸುತ್ತಾರೆ.

ನಮ್ಮ ಸಮಕಾಲೀನ ಪ್ರಗತಿಪರ ಬರವಣಿಗೆಯಲ್ಲಿ ಪ್ರತಿಭೆಗಳಿಗೆ ಬರಗಾಲವೇ ಇಲ್ಲ. ಮುನ್ನುಡಿ ಎಂಬ ಉಪಪ್ರಕಾರ ಕೈಗಾರಿಕೋದ್ಯಮವಾಗಿ ಚೆನ್ನಾಗಿ ಬೆಳೆದಿದೆಯೋ ಇಲ್ಲವೋ ಆದರೆ ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಕ್ಷೇತ್ರ ಮಾತ್ರ ಬೃಹತ್ ಕೈಗಾರಿಕಾ ಮಾಧ್ಯಮವಾಗಿ ಬೆಳೆದಿದೆ. ಹಾಗೆಯೇ ಮುನ್ನುಡಿ ಸಂಸ್ಕೃತಿ ಎಷ್ಟೊಂದು ವಿಶಾಲವಾಗಿ ಬೆಳೆದಿದೆ ಎಂದರೆ ಬೇರೆ ಬೇರೆ ಹಿನ್ನೆಲೆಯ ಸಂಸ್ಕೃತಿ ಚಿಂತಕರನ್ನು ಸಂದರ್ಶಿಸಿದಾಗ ಕೆಲವು ಒಳನೋಟಗಳು ದೊರೆತಿವೆ. ಅವುಗಳ ಬರಹಗಾರರ ಸಂಖ್ಯೆ ಹೆಚ್ಚಿದೆ. ಅಕ್ಷರ ಜ್ಞಾನ ವಿಸ್ತಾರವಾದಂತೆ ಓದುಗರ ಸಂಖ್ಯೆ ಹೆಚ್ಚಾದರೂ ಬರಹಗಾರರಿಗೆ ಬೇಕಾದಷ್ಟು ಪ್ರಮಾಣದಲ್ಲಿ ಬೆಳೆದಿಲ್ಲ ಆದರೆ ಕೊನೆಯ ಪಕ್ಷ ಮುನ್ನುಡಿ ಬರೆಯುವವರಾದರೂ ಓದುತ್ತಾರೆ. ಹಾಗೆಯೇ ಇವರು ಬರೆದ ಮುನ್ನುಡಿಯಿಂದಾಗಿ ಓದುಗರಿಗೆ ಕೃತಿ ಓದದೆಯೂ ಕೃತಿಯ ಬಗ್ಗೆ ಒಂದು ಅಭಿಪ್ರಾಯ ಮೂಡಲು ಸಾಧ್ಯವಾಗುತ್ತದೆ. ಹಾಗಾಗಿ ಕೃತಿ ಬರವಣಿಗೆಗಿಂತಲೂ ಮುನ್ನುಡಿ ಬರವಣಿಗೆ ಹೆಚ್ಚು ಮಹತ್ವ ಹೊಂದಿರುತ್ತದೆ. ಹಾಗೆಯೇ ಮುನ್ನುಡಿಯೂ ಹಲವು ಚಿಂತನೆಯ ತತ್ವದ ಒಳನೋಟವನ್ನು ಬಿಟ್ಟುಕೊಡುತ್ತದೆ.

**ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿ ಒಳಗೊಳ್ಳುವಿಕೆ**

ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಒಳಗೊಳ್ಳುವುದಕ್ಕೆ ಮುಖ್ಯ ಕಾರಣ ಪಾಶ್ಚಾತ್ಯರ ಚಿಂತನ ಸ್ವರೂಪದಿಂದಾಗಿದೆ. ಏಕೆಂದರೆ ಅವರ ಸಂಪಾದನೆಯಿಂದ ಮುನ್ನುಡಿಗಳ ಮೂಲಕವೇ ಕನ್ನಡ ಸಾಹಿತ್ಯಕ್ಕೆ ಪರಂಪರೆ ಸೃಷ್ಟಿಯಾಯಿತು. ಅದಕ್ಕೆ ಸಂಪಾದನೆಯಲ್ಲಿ ಒಡಮೂಡಿದ ಮುನ್ನುಡಿ ಸ್ವರೂಪ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬೇಗ ಒಳಗೊಂಡಿದೆ. ಹೀಗಾಗಿ ಕನ್ನಡ ಸಾಹಿತ್ಯಕ್ಕೆ ಮುನ್ನುಡಿ ಅನಿವಾರ್ಯವಾಗಿದೆ. ಅದರ ಮೂಲಕ ಚಿಂತನೆ, ವಾಗ್ವಾದ, ಮಾರ್ಗೋಪಾಯಗಳು ದೊರೆತಿವೆ. ಉದಾಹರಣೆಗೆ ಭಾರತೀಯ ಕಾವ್ಯಮೀಮಾಂಸೆಯ ತೀ.ನಂ.ಶ್ರೀ. ಮುನ್ನುಡಿ 'ಅಬಚೂರಿನ ಪೋಸ್ಟಾಫೀಸು', 'ಹೊಸದಿಗಂತದೆಡೆಗೆ' ಮುನ್ನುಡಿ ಈ ತೆರನಾದ ಪರಂಪರೆಯನ್ನು ಸೃಷ್ಟಿಸಿಕೊಂಡಿದೆ. ಆದರೆ ಮುನ್ನುಡಿ ಅಪವಾದ ಎಂದು ಚಕಾರವೆತ್ತಿದವರು ಮುನ್ನುಡಿ ಚರಿತ್ರೆ ಓದಬೇಕಾಗಿದೆ ಏನು? ಆದರೆ ಯಾರೇ ಮುನ್ನುಡಿ ಬರೆಯುವುದಕ್ಕೆ ಲಾಬಿ ಮಾಡಿದ್ದಾರೊ ಏನು? ಮುನ್ನುಡಿ ಸರಿಯಾಗಿ ಬರೆದಿಲ್ಲ. ಮುನ್ನುಡಿ ಬೆನ್ನು ತಟ್ಟುವ ಕೆಲಸ, ಪ್ರಶಂಸೆಯ ಮಾತುಗಳಿರುತ್ತವೆ. ಆದರೆ ಮುನ್ನುಡಿಗಳು ಸರಿಯಾಗಿಲ್ಲವೆಂದು ತೀರ್ಮಾನ ಮಾಡುವುದು ಸರಿಯಲ್ಲ. ಆದರೆ ನವೋದಯ, ಪ್ರಗತಿಶೀಲ, ನವ್ಯ, ೮೦ರ ದಶಕದ ಮುನ್ನುಡಿಗಳು ಅವುಗಳದೇ ಸ್ಥಾನವನ್ನು ಹೊಂದಿವೆ. ಆದರೆ ವಾಸ್ತವವಾಗಿ ಮುನ್ನುಡಿಗಳು ಪ್ರಶಂಸಾತ್ಮಕವಾಗಿ ಹೆಚ್ಚಾಗಿ ಕಂಡುಬಂದಿವೆ. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಒಳಗೊಳ್ಳುವಿಕೆಯನ್ನು ಪರಂಪರೆಯಲ್ಲಿ ನೋಡಲಾಗುವುದು.

ಎಂ.ಗೋವಿಂದ ಪೈ ಅವರು ಮುನ್ನುಡಿ ಸಾಹಿತ್ಯ ಕುರಿತು "ತಾನು ಮುನ್ನುಡಿ ಬರೆವ ಗ್ರಂಥದಲ್ಲಿ ಇರುವ ಕೊರತೆಗಳನ್ನು ಎತ್ತಿ ತೋರಿಸುವುದು ಮುನ್ನುಡಿಕಾರನ ಕೆಲಸವಲ್ಲ. ಸರ್ವಥಾ ಅಲ್ಲ. ಅದಕ್ಕೆ ಸಹಸ್ರಾಕ್ಷನಾದ ವಿಮರ್ಶಕನಿದ್ದಾನೆ. ಭಾಪು! ಭಾಪು! ಎಂದು ತನ್ನ ಲೇಖಕನ ಬೆನ್ನು

ಚಪ್ಪರಿಸುವುದೂ, ಜಾಗು ಜಾಗು! ಎಂದು ಆತನನ್ನು ಹುರಿದುಂಬಿಸುವುದು ಇದಷ್ಟೇ ಮುನ್ನುಡಿಕಾರನು ಪುರೋಹಿತನಂತೆ ತನ್ನ ಬಳಿಗೆ ಬರುವವರ ಪೌರೋಹಿತ್ಯವನ್ನು ನೀಡಿದೆ. ಆತನಿಗೆ ಶ್ರೇಯಸ್ಸನ್ನು ಕೋರಿ ಆಶೀರ್ವದಿಸಬೇಕು. ಆತನ ಕಡೆಗೆ ನೋಡಬಾರದು. ವಿಮರ್ಶಕನಾದರೂ ವೈದ್ಯನಂತೆ ತನ್ನ ಬಳಿಗೆ ಬರುವವನಿಗೆ ಚಿಕಿತ್ಸೆಯನ್ನು ನಡೆಸಿ ನಿರೋಗಿಯಾದವನ ಆರೋಗ್ಯವನ್ನು ಕೊಂಡಾಡಬೇಕು. ಸಿಗುಳಬೇಕಾದಲ್ಲಿ ಸಿಗುಳಲೂಬೇಕು. ಆತನನ್ನು ನೋಯಿಸುವಷ್ಟು ನಿರ್ದಯೆಯಿಂದಲ್ಲ. ಆತನು ಮುಂದೆ ಆರೋಗ್ಯಶಾಲಿಯಾಗಬೇಕೆಂಬ ಮಮತೆಯಿಂದ. ಹೀಗೆ ಮುನ್ನುಡಿಕಾರನ ಹಾಗೂ ವಿಮರ್ಶಕನ ಕೆಲಸಗಳಲ್ಲಿ ಇರುವ ಧ್ರುವಗಳಷ್ಟರ ವ್ಯತ್ಯಾಸವನ್ನು ನಮ್ಮಲ್ಲಿ ಹಲವರು ಅರಿತಲ್ಲಿ ಇನ್ನು ಮುನ್ನುಡಿಕಾರ ಹಾಗೂ ವಿಮರ್ಶಕನ ಕೆಲಸಗಳು ಒಂದೇ ಎಂದು ಭ್ರಮಿಸಿ ಅವನ್ನು ಕಲಬೆರೆಸುವವರು ಬೆರೆಸುತ್ತಿರಲಿ. ಊದುವ ಶಂಖವನ್ನು ಊದಿದ್ದೇನೆ. ಕೇಳಲಿ, ಕೇಳದಿರಲಿ"[೧೦] ಎಂದು ಹೇಳುತ್ತಾರೆ. ಗೋವಿಂದ ಪೈ ಅವರು ಮುನ್ನುಡಿಕಾರ ವಿಮರ್ಶಕನಾಗಬೇಕು, ಮುನ್ನುಡಿ ಬರೆಸಿಕೊಳ್ಳುವವ ಏನೇ ಪ್ರಯತ್ನ ಮಾಡಿದರೂ ತನ್ನನ್ನು ಪ್ರಶಂಸೆ ಮಾಡಬೇಕು ಎನ್ನುವುದಾದರೆ ಮುನ್ನುಡಿಗೆ ಶೋಭೆ ತರುವಂತದ್ದಲ್ಲ. ಮುನ್ನುಡಿಕಾರ ವಿಮರ್ಶಕರು ಮಾಡಬೇಕಾದ ಕರ್ತವ್ಯವನ್ನು ಮಾಡಬೇಕಾಗಿದೆ ಎಂದು ಗೋವಿಂದ ಪೈ ಅವರು ಚೆನ್ನಾಗಿ ಹೇಳಿದ್ದಾರೆ.

ಸಂಸ್ಕೃತಿ ಚಿಂತನೆಯಲ್ಲಿ ಪ್ರಜ್ಞಾವಂತನಾದ ಮುನ್ನುಡಿಕಾರ ತನ್ನ ಮಾತುಗಳು ಇಂಗಿತವಾಗಿಯೋ, ಪರೋಕ್ಷವಾಗಿಯೋ ಕೃತಿಯ ಅವಗುಣಗಳನ್ನು, ದೋಷಗಳನ್ನು ನಯವಾಗಿ ತೋರಿಸುತ್ತಾನೆ. ಲೇಖಕನ ಶ್ರೇಯಸ್ಸಿನ ಹಾಗೂ ಭವಿಷ್ಯದ ದೃಷ್ಟಿಯಿಂದ ಇಂಥ ಸೂಚನೆ ಅವಶ್ಯವಾಗುತ್ತದೆ. ಆದರೆ ಅವಗುಣಗಳ ನಿರ್ದೇಶನ ಕೃತಿಕಾರರಿಗೆ ರುಚಿಸದಿರಬಹುದು. ಆದರೆ ಕೆಲವು ಲೇಖಕರು ಗೊಣಗುತ್ತಾರೆ. ಅದನ್ನು ತಿದ್ದುವಂತೆ ಕೆಲವರು ಒತ್ತಾಯಿಸುತ್ತಾರೆ. ಮತ್ತೆ ಕೆಲವರಂತು ಮುದ್ರಣ ಸಂದರ್ಭದಲ್ಲಿ ಮುನ್ನುಡಿಕಾರನ ಮಾತುಗಳನ್ನು ಬದಲಾಯಿಸುತ್ತಾರೆ. ಈ ಸನ್ನಿವೇಶಗಳು ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಸಿಗುತ್ತವೆ. ಉದಾಹರಣೆಗೆ: ಯಶವಂತ ಚಿತ್ತಾಲರ 'ಮೂರು ದಾರಿಗಳು' ಕೃತಿಗೆ, ಮುನ್ನುಡಿ ಶಾಂತಿನಾಥ ದೇಸಾಯಿಯವರು ಬರೆದಿದ್ದರು. ಆದರೆ ಆ ಮುನ್ನುಡಿ ಹೊಸ ಚಿಂತನೆ ನಿಷ್ಠುರವಾಗಿರದೇ ಕಾದಂಬರಿಯ ಮಿತಿಗಳನ್ನು ಎತ್ತಿ ತೋರಿಸಿದೆ. ಹಾಗಾಗಿ ಯಶವಂತ ಚಿತ್ತಾಲರು ತಮ್ಮ ಇರಿಸುಮುರಿಸಿನಿಂದ ಮುನ್ನುಡಿಯನ್ನು ಮುದ್ರಣ ಸಮಯದಲ್ಲಿ ತೆಗೆದುಹಾಕಿದ್ದರು. ಈ ಹಿನ್ನೆಲೆಯ ಸನ್ನಿವೇಶಗಳು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸಾಕಷ್ಟಿವೆ. ಮುನ್ನುಡಿಕಾರ ಲೇಖಕರನ್ನು, ಕೃತಿಯನ್ನು ತಿದ್ದುವಂತೆ ಮುನ್ನುಡಿಗಳು ಒಳಗೊಂಡಿವೆ. ಅದೇನೆ ಇರಲಿ, ಮುನ್ನುಡಿ ಬರಹವು ಅಸಾರ್ಥಕವಾದ ಸಾಹಿತ್ಯವಲ್ಲ. ಶ್ರದ್ಧೆಯಿಂದ ಓದಿ ಚಿಂತನ ಮಂಥನ ನಡೆಸಿದ ನಂತರ ಸಿದ್ಧವಾದ ಮುನ್ನುಡಿ ಸಂಬಂಧಪಟ್ಟ ಗ್ರಂಥಕ್ಕೆ ಕನ್ನಡಿಯಾಗುತ್ತದೆ. ಅದನ್ನು ಓದಿದರೆ ಇಡೀ ಕೃತಿ ಕಣ್ಣಿಗೆ ಕಟ್ಟಿದಂತಾಗುತ್ತದೆ. ಸಮಯದ ಅವಕಾಶ ಇರುವವರಿಗೆ ಇದೊಂದು ವರವಾಗುತ್ತದೆ. ಹಾಗೆಯೇ ಒಟ್ಟು ಮುನ್ನುಡಿ ಓದಿದ ನಂತರ ಅಗತ್ಯವೆಂದು ಕಂಡುಬಂದ ಕೃತಿಯನ್ನು ನಿಧಾನವಾಗಿ ಓದಬಹುದು.

ದೇ.ಜ.ಗೌ. ಅವರು ಮುನ್ನುಡಿ ಸಾಹಿತ್ಯವನ್ನು ಕುರಿತು "ಮುನ್ನುಡಿ ಮೂಲದ ನಕಲಲ್ಲ, ಗಿಣಿಪಾಠವಲ್ಲ, ಅನುಕರಣವೂ ಅಲ್ಲ. ಮೂಲಗ್ರಂಥದ ಮಿತಿಯಲ್ಲಿಯೇ ತನ್ನ ಮನೋಧರ್ಮದ ಅಭಿವ್ಯಕ್ತಿಗೆ ಚಿಂತನ ಮಂಥನಕ್ಕೆ, ಕಲ್ಪನೆಗೆ ಪ್ರತಿಭಾ ವ್ಯಾಪಾರದ ಸಿದ್ಧಿಗೆ ಅದರಲ್ಲಿ ಅವಕಾಶವಿರುವುದರಿಂದ ಅದೊಂದು ಸ್ವತಂತ್ರ ಮೌಲಿಕ ಕೃತಿಯಾಗುವುದಾದರೂ ಆಶ್ಚರ್ಯಪಡಬೇಕಾಗಿಲ್ಲ. ಗ್ರಂಥಕರ್ತನ ಅಭಿಪ್ರಾಯದ ಜೊತೆಗೆ ತನ್ನ ಅಭಿಪ್ರಾಯವನ್ನು ಮುನ್ನುಡಿಕಾರ ಕೂಡಿಸಬಹುದು. ಮೂಲಾಭಿಪ್ರಾಯಕ್ಕೆ ಸಾಣೆ ಹಿಡಿಯಬಹುದು. ಪ್ರತಿಕ್ರಿಯೆಯ ರೂಪದಲ್ಲಿ ಹೊಸ ಚಿಂತನೆ ಅಭಿಪ್ರಾಯ ಸಿಡಿಯಬಹುದು. ಅಷ್ಟೇ ಅಲ್ಲ, ಮುನ್ನುಡಿಕಾರನ ವೈಯಕ್ತಿಕ ಶೈಲಿಗೂ ಅದು ಕೈಮರವಾಗಬಹುದು. ಆದ್ದರಿಂದ ಸಾಹಿತ್ಯಕ್ಷೇತ್ರದಲ್ಲಿ ಮುನ್ನುಡಿ ಪ್ರಕಾರಕ್ಕೆ ಸ್ವತಂತ್ರ ಸ್ಥಾನಮಾನ ಲಭಿಸಬೇಕಾಗುತ್ತದೆ"[೧೧] ಎಂದು ಹೇಳುತ್ತಾರೆ. ದೇ.ಜ.ಗೌ. ಅವರ ಮಾತಿನಿಂದ ಮುನ್ನುಡಿ ಸಾಹಿತ್ಯ ಕ್ಷೇತ್ರದಲ್ಲಿ ಎಷ್ಟೊಂದು ಪ್ರಮುಖ ಎಂಬುದನ್ನು ಓದುಗರು ಮನಗಾಣಬೇಕಾಗಿದೆ. ಕೃತಿಯ ಮೊದಲ ವಿಮರ್ಶೆ ಮುನ್ನುಡಿ ಲೇಖನವಾಗಿದೆ. ಹಾಗಾಗಿ ಮುನ್ನುಡಿಯನ್ನು ಸಾಹಿತ್ಯ ಪ್ರಕಾರವೆಂದು ಯಾಕೆ ಹೇಳಬಾರದು? ಇಲ್ಲವೇ ಮುನ್ನುಡಿಗೆ ಅರ್ಹತೆ ಇದೆ ಎಂದು ಹೇಳಬಹುದು.

ರಂ.ಶ್ರೀ.ಮುಗಳಿಯವರು ಮುನ್ನುಡಿ ಸಾಹಿತ್ಯವನ್ನು ಕುರಿತಂತೆ "ಮುನ್ನುಡಿ ಸಾಹಿತ್ಯಕ್ಕೆ ಅದರದೇ ಆದ ಸ್ವರೂಪವಿದೆ. ಹಾಗೆಯೇ ಮುನ್ನುಡಿಕಾರರು ಕೃತಿಯ ಕುರಿತು ಪ್ರಾಮಾಣಿಕ ವಿಮರ್ಶೆ, ಗುಣದೋಷಗಳ ಪರೀಕ್ಷಣ ಮುಖ್ಯ"[೧೨] ಎಂದು ಹೇಳುತ್ತಾರೆ. ಹಾಗೆಯೇ ರಾಮಲಿಂಗಪ್ಪ ಟಿ.ಬೇಗೂರು ಅವರು "ಮುನ್ನುಡಿ ಸಾಹಿತ್ಯ ವ್ಯವಸ್ಥೆಯೊಳಕ್ಕೆ ಅಧಿಕೃತ ಪ್ರವೇಶ ಸಿಗುವ ಆಕೃತಿಗೆ ವಿಮರ್ಶೆಯಾಗಿ ಅದರ ಮಹತ್ವವನ್ನು ಮೊದಲಿಗೆ ಮುನ್ನುಡಿ ದೊರಕಿಸುತ್ತದೆ"[೧೩] ಎಂಬ ಮಾತನ್ನು ಹೇಳುತ್ತಾರೆ. ವಿನಯಾ ಒಕ್ಕುಂದ ಅವರು ಮುನ್ನುಡಿಗಳು ಸಾಂಸ್ಕೃತಿಕ ಪಲ್ಲಟಗಳ ಸ್ವರೂಪವನ್ನು ನಿರೂಪಿಸುತ್ತಿವೆ. ಇತ್ತೀಚೆಗೆ ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಣೆಗೊಂಡ 'ಮುನ್ನುಡಿ ಮೆರಗು' ಲೇಖನದಲ್ಲಿ ಕಥಾಗೋಷ್ಠಿ, ಕವಿಗೋಷ್ಠಿ, ವಿಚಾರಸಂಕಿರಣ ಹೇಗೆ ನಡೆಯುತ್ತವೋ, ಅಂತೆಯೇ ಮುನ್ನುಡಿ ಕುರಿತು ಮುನ್ನುಡಿಗೋಷ್ಠಿ, ಮುನ್ನುಡಿ ವಿಚಾರ ಸಂಕಿರಣ ಯಾಕೆ? ಆಲೋಚಿಸಬಾರದು ಎಂದು ಯುವ ಲೇಖಕ ಅರುಣ್ ಜೋಳದಕೂಡ್ಲಿಗಿ ಅವರು ಪ್ರಶ್ನಿಸಿದ್ದರು.

ಈ ಮೇಲಿನ ವಿಚಾರಗಳನ್ನು ಗಮನಿಸುತ್ತಾ ಹೋದರೆ ಪ್ರಾಚೀನ ಕಾಲದ ಕೃತಿಗಳ ಸಂಪಾದನೆ ಹಾಗೂ ಮರುಮೌಲ್ಯಮಾಪನವೆಂದು ಸಂಪಾದನೆಗೆ ತೊಡಗಿದ್ದು, ಈ ಮೂಲಕ ಪ್ರಸ್ತುತದವರೆಗೆ ಮುನ್ನುಡಿಗಳಲ್ಲಿ ಸಾಂಸ್ಕೃತಿಕ ವಾಗ್ವಾದಗಳು ನಡೆದಿವೆ. ಎಫ್.ಕಿಟೆಲ್‌ರಿಂದ ಮೊದಲುಗೊಂಡು ಆರ್.ನರಸಿಂಹಾಚಾರ್, ಬಿಂ.ಎಂ.ಶ್ರೀ., ಎಲ್.ಬಸವರಾಜ, ಕುವೆಂಪು, ಗೋವಿಂದ ಪೈ, ದೇ.ಜ.ಗೌ. ಇವರ ಮುನ್ನುಡಿಗಳು ಬಹುತೇಕವಾಗಿ ಕನ್ನಡ ಸಾಹಿತ್ಯದ ತಮ್ಮ ಸಮಕಾಲೀನ ವಸ್ತು ವಿಷಯವನ್ನು ಕುರಿತು ಚರ್ಚಿಸಿವೆ. ಹಾಗಾಗಿ ಮುನ್ನುಡಿ ಸಾಹಿತ್ಯ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತನ್ನ ಅಸ್ತಿತ್ವವನ್ನು ಮೂಡಿಸಿಕೊಂಡಿದೆ.

## ಮುನ್ನುಡಿ ಸಾಹಿತ್ಯವನ್ನು ಕುರಿತು ಮಾಹಿತಿಪ್ರಧಾನ ಚರ್ಚೆಗಳು

ಕನ್ನಡ ಸಾಹಿತ್ಯ ಪರಂಪರೆಯನ್ನು ನೋಡಿದರೆ ಮುನ್ನುಡಿಗಳು ಮಾಹಿತಿಪ್ರಧಾನವಾದ ಅಂಶಗಳನ್ನು ಒದಗಿಸಿರುವುದು ಕಂಡುಬರುತ್ತದೆ. ಪ್ರಾಚೀನ ಕೃತಿಗಳ ಸಂಪಾದನೆಯಲ್ಲಿ ಅವುಗಳ ಮಹತ್ವವನ್ನು ಬಹುತೇಕವಾಗಿ ಮುನ್ನುಡಿಗಳಲ್ಲಿಯೇ ಚರ್ಚೆ ಮಾಡಲಾಗಿದೆ. ದೇ.ಜ.ಗೌ. ಅವರ 'ಮುನ್ನುಡಿ ಕನ್ನಡಿ' ಕೃತಿಯಲ್ಲಿ ಉಲ್ಲೇಖಿತಗೊಂಡಂತೆ "ಸಾಹಿತ್ಯ ಕ್ಷೇತ್ರದಲ್ಲಿ ಹಿಂದಿನ ಹತ್ತೊಂಬತ್ತು ಶತಮಾನಗಳಲ್ಲಿ ಕಾಣದ ಹುಲುಸು ಬೆಳೆಯನ್ನು ಪ್ರಾಚೀನರು ಕನಸಿನಲ್ಲಿಯೂ ಕಾಣದ ರೂಪ, ವಸ್ತು, ಪ್ರಕಾರ, ಪ್ರಸ್ಥಾನತತ್ವ, ಸತ್ವ, ವೈವಿಧ್ಯ, ವೈಭವವನ್ನು ಇಪ್ಪತ್ತನೆಯ ಶತಮಾನದಲ್ಲಿ ಕಾಣುತ್ತಿರುವುದು ಅಭಿಮಾನದ, ಆನಂದದ, ಪುಣ್ಯದ ಸಂಗತಿಯಾಗಿದೆ"[೧೮] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಪ್ರಾಚೀನ ಕಾಲದಲ್ಲಿ ಸಾಹಿತ್ಯ ರಚನೆ ಓದು, ಗ್ರಹಿಕೆ, ಪಂಡಿತ ಪಾಮರರಿಗೆ ಮತ್ತು ರಾಜವಂಶಗಳಿಗೆ ಮಾತ್ರ ದೊರಕುತ್ತಿತ್ತು. ಆದರೆ ದಲಿತ, ಹಿಂದುಳಿದ ಶೂದ್ರರಿಗೆ ಯಾವುದೇ ರೀತಿಯಲ್ಲಿ ಬೌದ್ಧಿಕ ಚಿಂತನೆ, ಓದು ಅವರಿಗೆ ಮುಟ್ಟಿರಲಿಲ್ಲ. ಹಾಗೆಯೇ ಮೂಢನಂಬಿಕೆಗೆ ಒಳಗು ಮಾಡುತ್ತ ಒಂದು ರೀತಿಯಲ್ಲಿ ಸಾಮಾಜಿಕ ಅಸಮಾನತೆ ಹಾಗೂ ಆರ್ಥಿಕ ಅಸಮಾನತೆಯ ಸಂಸ್ಕೃತಿಯನ್ನು ಅಂದಿನ ದಿನಗಳಲ್ಲಿ ಹೇರಲ್ಪಟ್ಟಿತ್ತು. ಕಾಯಕಕ್ಕೆ ಮಾತ್ರ ದಲಿತರು ಬೇಕು. ವೈಚಾರಿಕ ಓದು, ಬರಹ, ಅಕ್ಷರಜ್ಞಾನಕ್ಕೆ ಮಾತ್ರ ದಲಿತರು ಇಲ್ಲ. ಇಂಥ ಸಂದರ್ಭಗಳು ಅಂದು ನಡೆದಿವೆ. ಹಾಗಾಗಿ ದೇಜಗೌ ಅವರ ಮಾತು ಪ್ರಸ್ತಾಪಿಸುವುದು ಒಳಿತಾಗಿದೆ. ಈ ಅಸಮಾನತೆಯನ್ನು ಪಾಶ್ಚಾತ್ಯರಿಂದ ಹೋಗಲಾಡಿಸಲು ಪ್ರಯತ್ನಿಸಲಾಯಿತು ಎಂದು ಹೇಳಬಹುದು. ಒಂದು ಕಡೆಯಲ್ಲಿ ಅದೇ ಪಾಶ್ಚಿಮಾತ್ಯರು ತಮ್ಮ ಆಡಳಿತ ವೈಖರಿಗಾಗಿ ಮಾಡಿಕೊಂಡಿರುವ ಮುದ್ರಣ ಓರಿಯಂಟಲ್ ಅಧ್ಯಯನಗಳಿಂದ ಕನ್ನಡ ಸಾಹಿತ್ಯ ಬಹುಬೇಗನೆ ಕಣ್ಣು ತೆರೆಯಿತು. ಏಕೆಂದರೆ ಪಾಶ್ಚಿಮಾತ್ಯರಾದ ಕಿಟೆಲ್, ಮೆಕಂಜಿ, ಲೂಯಿ ರೈಸ್, ಫ್ಲೀಟ್, ಜಿ.ಗ್ಯಾರೆಟ್ ಇಂತಹ ಹೃದಯಶೀಲ ಅಧಿಕಾರಿಗಳಿಂದ, ಅವರಲ್ಲಿ ಮೂಡಿದ ಕನ್ನಡ ಅಭಿಮಾನದಿಂದ ಕನ್ನಡ ಸಾಹಿತ್ಯಕ್ಕೆ ಅಪಾರವಾದ ಮಾಹಿತಿಗಳು ಒದಗಿದವು. ಅವರು ಹಸ್ತಪ್ರತಿಗಳು, ಶಾಸನ ಹಾಗೂ ಸ್ಥಳೀಯ ಮಾಹಿತಿಯನ್ನು ಒದಗಿಸಿದ್ದಲ್ಲದೆ ಹಸ್ತಪ್ರತಿಗಳನ್ನು ಮುದ್ರಣ ರೂಪಕ್ಕೆ ತಂದುಕೊಟ್ಟವರು. ಆ ಮುದ್ರಣ ಸಂದರ್ಭದಲ್ಲಿ ಮುನ್ನುಡಿಗಳಲ್ಲಿ ಅನೇಕ ಮಾಹಿತಿಗಳನ್ನು ಚರ್ಚಿಸಿದ್ದಾರೆ. ಕಿಟೆಲ್ ಅವರು ನಾಗವರ್ಮನ ಛಂದೋಬುಧಿಗೆ ಮುನ್ನುಡಿ ಬರೆಯುತ್ತ "ನಾಗವರ್ಮ ಛಂದಸ್ಸು" ಎಂದು ವಿಶ್ಲೇಷಣೆ ಮಾಡಿದ್ದಾರೆ. ಛಂದಸ್ಸು, ಪಾಠ ಪರಿಷ್ಕರಣೆ ಇತ್ಯಾದಿ ವಿಷಯಗಳನ್ನು ಚರ್ಚಿಸಲಾಗಿದೆ. ಅವರ ದೀರ್ಘ ಮುನ್ನುಡಿಯಲ್ಲಿ ಕನ್ನಡ ಸಾಹಿತ್ಯವನ್ನು ಚರ್ಚಿಸಿದ್ದಾರೆ. ಈ ರೀತಿಯಾದ ಸಂಪಾದನೆಗಳಲ್ಲಿ ತೊಡಗಿರುವ ದೇಸಿ ಮತ್ತು ಪಾಶ್ಚಾತ್ಯ ವಿದ್ವಾಂಸರು ತಮ್ಮ ನಿಲುವು ಮತ್ತು ಚಿಂತನೆಯನ್ನು ಆ ಕೃತಿಯ ಸಂಪಾದನೆಯ ಒಡಲೊಳಗೆ ಮುನ್ನುಡಿಗಳ ಮೂಲಕ ಅನಾವರಣಗೊಳಿಸಿದ್ದಾರೆ.

ಹಸ್ತಪ್ರತಿಗಳ ಮೂಲಕ ನೇರವಾಗಿ ಸಂಪಾದನೆಯಾದ ಕೃತಿಗಳನ್ನು ಮರುಸಂಪಾದನೆ, ಮರು ಮೌಲ್ಯಮಾಪನಕ್ಕೆ ಒಳಪಡಿಸಿದಾಗ ಅನೇಕ ಮಾಹಿತಿಗಳು ದೊರಕುತ್ತವೆ. ಕೃತಿಯ ಕಾಲ, ಸ್ಥಳ,

ದೇಶ, ಭಾಷೆ, ಶೈಲಿ, ಪ್ರಭಾವ ಅನೇಕ ವಿಷಯಗಳ ಮಾಹಿತಿಗಳನ್ನು ಮುನ್ನುಡಿಯಲ್ಲಿ(ಪ್ರಸ್ತಾವನೆ) ಚರ್ಚೆ ಮಾಡಿದ್ದಾರೆ. ಕುವೆಂಪು ಅವರು ಪ್ರಾಚೀನ ಸಾಹಿತ್ಯವನ್ನು ಕುರಿತ ನಿಲುವು ಹೇಗೆ ಎನ್ನುವುದಕ್ಕೆ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಮುನ್ನುಡಿಯಲ್ಲಿ "ಪ್ರಾಚೀನ ಮತ್ತು ಆರ್ಷೇಯ ಮತಧರ್ಮಗಳ ಮತ್ತು ಸಾಮಾಜಿಕ ಕಟ್ಟುಕಟ್ಟಳೆಗಳ ಹೀನ ಬುದ್ಧಿಯನ್ನು ನಿಷ್ಠುರತೆಯನ್ನು ಕಿತ್ತೊಗೆದು ಸಮಗ್ರ ಭಾರತದ ರಾಜಕೀಯ ಐಕ್ಯಮತ್ಯವನ್ನು, ಭಾವೈಕ್ಯತೆಯನ್ನು ಸಾಧಿಸಲೆಂದು ಹೃದಯವನ್ನು, ಮನಸ್ಸನ್ನು ಸುವಿಶಾಲಗೊಳಿಸುತ್ತಿದ್ದ ಕಾಲ"[೧೫] ಎಂದು ಹೇಳುತ್ತಾರೆ. ಕುವೆಂಪು ಅವರು ಪ್ರಾಚೀನ ಸಾಹಿತ್ಯದ ಮತಿವಾದಿಗಳಿಂದ ಕಟ್ಟುಪಾಡುಗಳನ್ನು ಸಂಸ್ಕೃತಿ ನೆಪದಲ್ಲಿ ಹೇರಲಾಗಿತ್ತು. ಅದನ್ನು ಕಿತ್ತು ಹಾಕಿ ಹೊಸ ಸಂವೇದನೆಯ ಹಂತ ತಲುಪಬೇಕಾಗಿದೆ ಎಂದು ಹೇಳುತ್ತಾರೆ. ದೇಜಗೌ, ಕುವೆಂಪು ಅವರ ಮಾತುಗಳು ಒಂದೇ ನೆಲೆಯಲ್ಲಿದೆ. ಇಂತಹ ಅಂಶಗಳನ್ನು ಮುನ್ನುಡಿಗಳು ಮಾಹಿತಿ ಪ್ರಧಾನವಾಗಿ ಸಂಪಾದನೆಯಲ್ಲಿ ನೀಡಿವೆ.

ಹಾಗೆಯೇ ಕೆಲವು ಮುನ್ನುಡಿಗಳು ಮಾಹಿತಿಪ್ರಧಾನವಾದ ಅಂಶಗಳನ್ನು ಒಳಗೊಂಡಿವೆ. ಲೇಖಕರ ಪರಿಚಯ ಮಾಡಿಕೊಡುವುದು, ಸರಕಾರದಿಂದ ಪ್ರಕಟಣೆಗೊಂಡಿದ್ದರೆ ಆ ಕೃತಿಯ ಮುನ್ನುಡಿಯಲ್ಲಿ ಬಹುತೇಕವಾಗಿ ಸರಕಾರದ ಯೋಜನೆಯಲ್ಲಿ ಕೆಲವು ಸಾಹಿತ್ಯ ಕೃತಿಯ ಮುನ್ನುಡಿಗಳನ್ನು ರಾಜಕಾರಣಿಗಳು ಮತ್ತು ಅಧ್ಯಕ್ಷರು, ಸಂಪಾದಕರು, ಇತ್ಯಾದಿಯವರು ಬರೆದಿದ್ದಾರೆ. ಆದರೆ ಹೆಚ್.ಡಿ.ಕುಮಾರಸ್ವಾಮಿ ಅವರು ತಮ್ಮ ಸರಕಾರದಲ್ಲಿ ತಾವೇ ಮುಖ್ಯಮಂತ್ರಿಯಾಗಿ ಮುನ್ನುಡಿ ಬರೆದಿದ್ದಾರೆ. ಇವರು ಹೇಳುವಂತೆ "ಕನ್ನಡ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ಒಂದು ಮನನವಾಗಿದೆ"[೧೬] ಎಂದು ಹೇಳುತ್ತಾರೆ. 'ಸುವರ್ಣ ಸಾಹಿತ್ಯ ಗ್ರಂಥ ಪ್ರಕಟಣಾ ಮಾಲೆ'ಯಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟಗಳಲ್ಲಿ ಪ್ರಕಟವಾದ ಮಹತ್ವದ ಕೃತಿಗಳನ್ನು ನೋಡಬಹುದು. ಕನ್ನಡ ಜ್ಞಾನಪೀಠ ಪುರಸ್ಕೃತರ ಕೃತಿಗಳಿಂದ ಹಿಡಿದು ಉತ್ತಮ ಕಾದಂಬರಿಗಳು, ನಾಟಕಗಳು, ಪ್ರವಾಸಕಥನಗಳು, ಜೀವನಚರಿತ್ರೆಗಳು, ವಿಮರ್ಶಾತ್ಮಕ ಲೇಖನಗಳು, ವೈಚಾರಿಕ ಲೇಖನಗಳು, ವೈಜ್ಞಾನಿಕ ಲೇಖನಗಳು, ಪ್ರಾತಿನಿಧಿಕ ಬರಹಗಳ ಕಾವ್ಯ ಸಂಪುಟ ಹಾಗೂ ನಾಟಕ ಸಂಪುಟಗಳೂ ಸೇರಿವೆ. ಜೊತೆಗೆ ಕನ್ನಡೇತರ ಭಾಷಿಕರಿಗೆ ಕನ್ನಡ ಕಲಾ ಪ್ರಕಾರಗಳನ್ನು ಪರಿಚಯಿಸುವ ಇಂಗ್ಲಿಷ್ ಕೃತಿಗಳು ಇವೆ. ಈ ಸುವರ್ಣ ಸಾಹಿತ್ಯ ಗ್ರಂಥಮಾಲೆಯಡಿ ಸುಲಭ ಬೆಲೆಯಲ್ಲಿ ಸಾಹಿತ್ಯಾಭಿಮಾನಿಗಳಿಗೆ ಅಕ್ಷರದಾಸೋಹವನ್ನು ಉಣಬಡಿಸುವ ಹೆಮ್ಮೆಯಿಂದ ಎಚ್.ಡಿ.ಕೆ. ಅವರು ತಮ್ಮ ಸರ್ಕಾರದಿಂದ ಸಾಹಿತ್ಯವಲಯಕ್ಕೆ ಸಾಹಿತ್ಯಕೃತಿಗಳ ಕೊಡುಗೆ ನೀಡಿದ್ದಾರೆ. ಇದೇ ರೀತಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳು, ಸರಕಾರಿ ಸಂಸ್ಥೆಗಳು ಮುದ್ರಿಸಿ, ಕೃತಿ ಮುದ್ರಣ ರೂಪದಲ್ಲಿ ಹೊರಗಡೆ ತಂದರೆ ಅಲ್ಲಿ ಸಾಹಿತ್ಯಕ ಚರ್ಚೆ ಇರುವುದಿಲ್ಲ. ಅಕಾಡೆಮಿ ಚರ್ಚೆ, ಪುಸ್ತಕಗಳ ಪ್ರಕಟಣೆ, ಸಾಧನೆಯನ್ನು ಮುನ್ನುಡಿಯಲ್ಲಿ ವ್ಯಕ್ತಪಡಿಸುತ್ತದೆ. ಕೆಲವು ಕೃತಿಗಳಿಗೆ ಸಂಪಾದನೆ ಹೆಸರಿನ ಮುನ್ನುಡಿಯಲ್ಲಿ ಆ ಕೃತಿಯ ಸಾಹಿತ್ಯಕ ಅಂಶಗಳನ್ನು ಚರ್ಚೆ ಮಾಡಿರುತ್ತಾರೆ.

ಬರಗೂರು ರಾಮಚಂದ್ರಪ್ಪ ಅವರು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ "ಸಾಹಿತ್ಯ ಪಾರಿಭಾಷಿಕ ಮಾಲೆ" ಮತ್ತು "ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣ ಯೋಜನೆ"ಯ ಮೂಲಕ ಹಲವಾರು ಸಮುದಾಯದ 'ಸಂಸ್ಕೃತಿ' ಹೆಸರಲ್ಲಿ ಕೃತಿಯನ್ನು ಹೊರತಂದಿದ್ದಾರೆ. ಹಾಗೆಯೇ ದೀರ್ಘವಾದ ಪ್ರಸ್ತಾವನೆ(ಮುನ್ನುಡಿ)ಯ ಮೂಲಕ ವಿಶ್ಲೇಷಣೆ ಮತ್ತು ಸಾಹಿತ್ಯಕವಾಗಿ ಸಾಮಾಜಿಕ ವಸ್ತುವನ್ನು ಆಯ್ಕೆ ಮಾಡಿಕೊಂಡು ಅಂದರೆ "ಪ್ರಧಾನ ಮತ್ತು ಅಧೀನ ಸಂಸ್ಕೃತಿ, ಅಸ್ಪೃಶ್ಯತೆಯ ಪರಿಕಲ್ಪನೆ, ಸ್ತ್ರೀ ಸಂವೇದನೆಯ ಸ್ವರೂಪ, ಹಿಂಸೆಯ ಸ್ವರೂಪ, ಯುದ್ಧ ಮತ್ತು ಶಾಂತಿ, ನೋವಿನ ನೆಲೆಗಳು, ಪ್ರಭುತ್ವ, ಚರಿತ್ರೆ ಮತ್ತು ಪುರಾಣ, ನಿಸರ್ಗಮುಕ್ತ, ಸಾಮಾಜಿಕ ಸ್ಥಿತ್ಯಂತರ, ಗ್ರಾಮೀಣ ಬದುಕಿನ ಅಭಿವ್ಯಕ್ತಿ, ಮನುಷ್ಯನ ಪರಿಕಲ್ಪನೆ, ಶಿಷ್ಟ ಸಾಹಿತ್ಯದಲ್ಲಿ ಜಾನಪದ"[೧೭] ಎಂಬ ಸಾಮಾಜಿಕ ವಸ್ತುವನ್ನು ಸಾಹಿತ್ಯ ನೆಲೆಯಲ್ಲಿ ಗ್ರಹಿಸಿ ಕೃತಿಯ ಮೂಲಕ ಸಮಾಜಕ್ಕೆ ತೋರ್ಪಡಿಸಿದ್ದಾರೆ. ಈ ರೀತಿಯ ಸಾಹಿತ್ಯ ವಸ್ತುವನ್ನು ಪುನರ್ ಮೌಲ್ಯೀಕರಣದ ಮೂಲಕ ಚರ್ಚೆ ಮಾಡಿದ್ದಾರೆ. ಟಿ.ಎಸ್.ಎಲಿಯೆಟ್ ಅವರ ಪ್ರಕಾರ ಕಾಲದಿಂದ ಕಾಲಕ್ಕೆ ಅಂದರೆ ಶತಮಾನಕ್ಕೊಮ್ಮೆಯಾದರೂ ಹಿಂದಿನ ಸಾಹಿತ್ಯವನ್ನು ಪರಿಶೀಲಿಸಿ ಕವಿ ಕೃತಿಗಳನ್ನು ಹೊಸ ಕ್ರಮದಲ್ಲಿ ನೆಲೆಗೊಳಿಸುವ ವಿಮರ್ಶಕನೊಬ್ಬ ಕಾಣಿಸಿಕೊಳ್ಳುತ್ತಾನೆ. ಪರಂಪರೆಯನ್ನು ಮರುವಿಮರ್ಶೆ ಮತ್ತು ಮರು ಮೌಲ್ಯೀಕರಣಗೊಳಿಸಬೇಕು, ಆಗ ಅದು ಅರ್ಥವಾಗುತ್ತದೆ ಎಂದಿದ್ದಾರೆ. ಈ ರೀತಿಯಾದ ಹಲವಾರು ಸಂಗತಿಗಳು ಸಾಹಿತ್ಯಕವಾಗಿ ಮಾಹಿತಿಗಳು ಎದುರುಗೊಳ್ಳುತ್ತವೆ.

**ಮುನ್ನುಡಿ ಸಾಹಿತ್ಯವನ್ನು ವಿವಿಧ ಲೇಖಕರು ಚರ್ಚೆಯಲ್ಲಿ ಒಳಗೊಂಡ ಪ್ರಾಸಂಗಿಕ ಬರಹಗಳು**

ಮುನ್ನುಡಿ ಸಾಹಿತ್ಯ ಕುರಿತು ನಡೆದ ಅಧ್ಯಯನದಲ್ಲಿ ಕೆಲವು ಸಾಹಿತ್ಯದ ವಿವಿಧ ಪ್ರಕಾರಗಳ ಚರ್ಚೆಯಲ್ಲಿ ಮುನ್ನುಡಿಗಳನ್ನು ಚರ್ಚಿಸುವ ಔಪಚಾರಿಕ ಲೇಖನಗಳಿವೆ. ಮುನ್ನುಡಿ ಸಾಹಿತ್ಯ ಕೃತಿಯ ಒಳಸುಳಿಯನ್ನು ಹಿಡಿಯುವ ಕೆಲಸ ಮುನ್ನುಡಿ ವಿಮರ್ಶಕರಿಗಿದೆ. ಅಂಥವರಲ್ಲಿ ಮುನ್ನುಡಿಯ ಕುರಿತು ಮುನ್ನುಡಿ ಸಾಹಿತ್ಯವನ್ನು ಚರ್ಚಿಸಿದ್ದಾರೆ. 'ಭಾರತೀಯ ಕಾವ್ಯಮೀಮಾಂಸೆ' ಕೃತಿಗೆ ಕುವೆಂಪು ಅವರು ಮುನ್ನುಡಿ ಬರೆಯುತ್ತಾರೆ. ಈ ಮುನ್ನುಡಿಯ ಉಲ್ಲೇಖವನ್ನು ರಹಮತ್ ತರೀಕೆರೆಯವರು 'ಇಲ್ಲಿ ಯಾರೂ ಮುಖ್ಯರಲ್ಲ' ಎಂಬ ತಮ್ಮ ಕೃತಿಯಲ್ಲಿ ಮೀಮಾಂಸೆ ಚಿಂತನೆಗೆ ಸಂಬಂಧಿಸಿದಂತೆ ಚರ್ಚೆ ಮಾಡಿದ್ದಾರೆ. ಕುವೆಂಪು ಅವರ ಮಾತು ಉಲ್ಲೇಖಗೊಂಡಂತೆ "ಇದುವರೆಗೆ ಕನ್ನಡ ಸಾಹಿತ್ಯದಲ್ಲಿ ಮೂಡಿರುವ ಕಾವ್ಯಮೀಮಾಂಸೆ ಏನಿದ್ದರೂ ಅದೆಲ್ಲಾ ಸಂಸ್ಕೃತದ ಪಡಿನೆಳಲಂತಿದೆ. ಮುಂದೆ ಬರುವ ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆ ಪಾಶ್ಚಾತ್ಯದ ಪಡಿನೆಳಲಂತಾದರೆ ಅದಕ್ಕಿಂತಲೂ ಅಪಾಯಕರವಾಗುತ್ತದೆ."[೧೮] ಇನ್ನೂ ಕೆಲವು ಅಂಶಗಳು ಈ ಮುನ್ನುಡಿಯಲ್ಲಿ ವ್ಯಕ್ತವಾಗಿವೆ.

ಇದಕ್ಕೆ ರಹಮತ್ ತರೀಕೆರೆಯವರು ಕುವೆಂಪು ಅವರ ಮಾತನ್ನು ಅನುಲಕ್ಷಿಸಿ "ಈ ಕೃತಿಯನ್ನು ಭಾರತೀಯ ಕಾವ್ಯಮೀಮಾಂಸೆಯನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಇರುವ 'ಆಚಾರ್ಯ

ಕೃತಿ' ಎಂದು ಅವರು ಕರೆದರು. ವಿದ್ವತ್ತಿನ ಕಾರಣದಿಂದ ಈ ಹೇಳಿಕೆಯನ್ನು ಒಪ್ಪಬಹುದು. ದೃಷ್ಟಿಕೋನದ ಕಾರಣದಿಂದ ಒಪ್ಪುವುದು ಕಷ್ಟ. ಏಕೆಂದರೆ ಇಲ್ಲಿಯ ಭಾರತೀಯರ ಪರಿಕಲ್ಪನೆಯಲ್ಲಿ ಇರುವುದು ಸಂಸ್ಕೃತ ಕಾವ್ಯಮೀಮಾಂಸೆಯೇ ಹೊರತು, ಕನ್ನಡ ಮೀಮಾಂಸೆಯಲ್ಲ"[೧೯] ಎಂದು ಹೇಳುತ್ತಾರೆ. ರಹಮತ್ ತರೀಕರೆಯವರು ಕುವೆಂಪು ನಿಲುವನ್ನು ಒಪ್ಪುವುದಿಲ್ಲ. ಏಕೆಂದರೆ ೫೦ ವರ್ಷಗಳಾದ ನಂತರ ಕಾವ್ಯಮೀಮಾಂಸೆಯ ಬಗ್ಗೆ ಮರುಚರ್ಚೆ ಮಾಡುತ್ತಾರೆ. ಆದರೆ ಕುವೆಂಪು ಅವರು ಭಾರತೀಯ ಕಾವ್ಯಮೀಮಾಂಸೆ ಮುದ್ರಣಗೊಳ್ಳುವಾಗ ಹೇಳುತ್ತಾರೆ. ಅದಕ್ಕೀಗ ೫೦ ವರ್ಷಗಳಾಗಿದೆ. ಆದರೆ ಹಿಂದಿನ ದಿನಗಳಲ್ಲಿ ಕುವೆಂಪು ಅವರ ಸಾಹಿತ್ಯ ವಿಮರ್ಶೆಯ ಚಿಂತನೆಯಲ್ಲಿ ಆತಂಕವಿದೆತ್ತೆನಿಸುತ್ತದೆ. ಏಕೆಂದರೆ ನಮ್ಮ ಕನ್ನಡ ಸಾಹಿತ್ಯ ಮೀಮಾಂಸೆಯ ಚಿಂತನೆ ಪ್ರಾಚೀನ ಸಾಹಿತ್ಯ ಸಂದರ್ಭಗಳಲ್ಲಿ ಸಂಸ್ಕೃತ ಪಡಿನೆಳಲಾಗಿತ್ತು. ನಮ್ಮ ದೇಶಕ್ಕೆ ಪಾಶ್ಚಿಮಾತ್ಯರ ಆಗಮನದಿಂದ ಸಂಸ್ಕೃತದ ಪ್ರಭಾವ ಕಡಿಮೆಯಾಯಿತು. ಆದರೆ ಪಾಶ್ಚಿಮಾತ್ಯರ ಪ್ರಭಾವ ಕನ್ನಡ ಸಾಹಿತ್ಯಕ್ಕೆ ದಟ್ಟವಾದ ಪ್ರಭಾವವಾಗುತ್ತದೆ ಎಂಬ ಅಂಶಗಳನ್ನು ಒಳಗೊಂಡಿವೆ. ತರೀಕೆರೆಯವರು ಕನ್ನಡ ಸಾಹಿತ್ಯ ಮೀಮಾಂಸೆಯ ನೆಲೆಯಿಂದ ಕುವೆಂಪು ಅವರು ಹೇಳಬೇಕಾಗಿತ್ತು ಎಂದು ಹೇಳಿರಬಹುದು. ಆದರೆ ಕನ್ನಡ ಸಾಹಿತ್ಯಕ್ಕೆ ಪಾಶ್ಚಾತ್ಯರ ಪ್ರಭಾವ ಸಾಕಷ್ಟಾದರೂ ನಮ್ಮ ಕನ್ನಡ ಸಾಹಿತ್ಯ ಚಿಂತನೆ ಪಾಶ್ಚಿಮಾತ್ಯ ಚಿಂತನೆಯ ಮೂಲಕ ಕನ್ನಡದ ಅನನ್ಯತೆಯನ್ನು ಹುಡುಕುವಂತಿದೆ. ಪ್ರಾಚೀನ ಕಾಲ ಮತ್ತು ಪಾಶ್ಚಿಮಾತ್ಯ ಪ್ರಭಾವಗಳಿಂದ ತನ್ನತನವನ್ನು ಕಳೆದುಕೊಳ್ಳುವ ಸಂಭವ ಇತ್ತು. ಆದರೆ ಧೀರವಾಗಿ, ಸ್ವತಂತ್ರವಾಗಿ ಮುನ್ನಡೆಯಾಗಿ ಹೊಸ ಹಾದಿಯನ್ನು ಹುಡುಕಿಕೊಂಡಿತು. ತರೀಕೆರೆಯವರ 'ಇಲ್ಲಿ ಯಾರೂ ಮುಖ್ಯರಲ್ಲ' ಕೃತಿಯಲ್ಲಿ ಹಾಗೂ ಬೇರೆ ಕೃತಿಗಳಲ್ಲಿ ಕನ್ನಡ ಮೀಮಾಂಸೆಯ ಚರ್ಚೆಗಳು ನಡೆದಿವೆ. ಇದೇ ಕೃತಿಯಲ್ಲಿ ಕರ್ತೃ ಮೀಮಾಂಸೆ, ಸೃಷ್ಟಿ ಮೀಮಾಂಸೆ, ವಸ್ತು ಮೀಮಾಂಸೆ, ಪ್ರಕಾರ, ಪ್ರೇರಣ, ಪ್ರಭಾವ, ಭಾಷೆ, ಕೃತಿ, ಪರಿಣಾಮ, ಓದುಗ ಇವೆಲ್ಲಾ ಮೀಮಾಂಸೆಗಳಾಗಿವೆ. ಕುವೆಂಪು ಅವರ ಮುನ್ನುಡಿಯ ಮಾತು ಸಂಸ್ಕೃತ ಮತ್ತು ಪಾಶ್ಚಾತ್ಯ ಸಾಹಿತ್ಯವನ್ನು ಒಳಗೊಂಡಿದೆ ಎನ್ನುವ ಮಾತನ್ನು 'ಇಲ್ಲಿ ಯಾರೂ ಮುಖ್ಯರಲ್ಲ' ಕೃತಿಯಲ್ಲಿ ಮುನ್ನುಡಿಯಾಗಿ ಕನ್ನಡ ಮೀಮಾಂಸೆ ಕಟ್ಟುವಲ್ಲಿ ತರೀಕೆರೆಯವರು ಈ ಕೃತಿಯಿಂದ ಒಡಮೂಡಿಸಿದ್ದಾರೆ. ಅಷ್ಟೇ ಅಲ್ಲದೇ ನವೋದಯ ಕಾಲದಿಂದ ಪ್ರಸ್ತುತ ಕಾಲದವರೆಗೂ ಕಾಲಕ್ಕೆ ತಕ್ಕಂತೆ ಮೀಮಾಂಸೆಗಳು, ಚಿಂತನೆಗಳು ಬದಲಾವಣೆಗಳಾಗುತ್ತಿವೆ. 'ಭಾರತೀಯ ಕಾವ್ಯಮೀಮಾಂಸೆ' ಕೃತಿಯು ಹುಟ್ಟುವ ಪೂರ್ವದಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತದ ಪಡಿನೆಳಲಂತಿದೆ. ತನ್ನತನವನ್ನು ಗುರುತಿಸದ ಕಾಲ. ಆದರೆ ಭಾರತೀಯ ಕಾವ್ಯಮೀಮಾಂಸೆ ಕೃತಿ ಪ್ರಕಟಣೆಗೊಂಡ ನಂತರ ಆಧುನಿಕ ಕನ್ನಡ ಸಾಹಿತ್ಯಕ್ಕೆ ಅಸ್ತಿತ್ವ ಬಂದಂತಾಗಿದೆ. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯದ ಹಿರಿಯ ಲೇಖಕರಾದ ಬಿ.ಎಂ.ಶ್ರೀ., ತೀ.ನಂ.ಶ್ರೀ., ಕುವೆಂಪು, ದ.ರಾ.ಬೇಂದ್ರೆ, ಮಾಸ್ತಿ, ಅಡಿಗರು, ಯು.ಆರ್.ಅನಂತಮೂರ್ತಿ ಪ್ರಸ್ತುತ ರಹಮತ್ ತರೀಕೆರೆಯವರೆಗೂ ಕನ್ನಡ ಸಾಹಿತ್ಯದ ವಿಭಿನ್ನ ಮೀಮಾಂಸೆಗಳು ಚರ್ಚೆಗಳಾಗಿವೆ, ಚರ್ಚೆಗಳಾಗುತ್ತಿವೆ. ಇಂಥ ಅನೇಕ ವಿಷಯಗಳಲ್ಲಿ 'ಮುನ್ನುಡಿ ಮೀಮಾಂಸೆ'ಯನ್ನು

ರಚನೆಗೊಳಿಸಬೇಕಾಗಿದೆ. ಒಟ್ಟಾರೆಯಾಗಿ ಭಾರತೀಯ ಕಾವ್ಯಮೀಮಾಂಸೆಯ ಕೃತಿಯ ಮುನ್ನುಡಿಯೂ ಕನ್ನಡ ಸಾಹಿತ್ಯದ ಮೀಮಾಂಸೆ ಕಟ್ಟುವ ಪರಿಕಲ್ಪನೆಯಾಗಿದೆ.

ರಂ.ಶ್ರೀ.ಮುಗಳಿ ಅವರು "ಕನ್ನಡ ಸಾಹಿತ್ಯ ವಿಮರ್ಶೆಯ ತಾತ್ವಿಕ ವಿವೇಚನೆ" ಕೃತಿಯಲ್ಲಿ ಮುನ್ನುಡಿ ಸಾಹಿತ್ಯ ವಿಮರ್ಶೆಯಾಗಿ ಹೇಗೆ ಪ್ರಭಾವಿಸಿಕೊಂಡಿದೆ, ಮುನ್ನುಡಿ ಕನ್ನಡ ಸಾಹಿತ್ಯದ ಚಿಂತನೆಯಲ್ಲಿ ಹೇಗೆ ಛಾಪು ಮೂಡಿಸಿಕೊಂಡಿವೆ ಎನ್ನುವುದನ್ನು ಹೀಗೆ ಹೇಳುತ್ತಾರೆ. "ಹೊಸ ಹೊಸ ಸಾಹಿತ್ಯ ಪ್ರಯತ್ನಗಳಿಗೆ ಬರೆಯಲಾದ ಮುನ್ನುಡಿಗಳಲ್ಲಿ ಈ ರೀತಿ ಎದ್ದು ಕಾಣುತ್ತದೆ. ಮುನ್ನುಡಿಗಳ ಸ್ವರೂಪವೇನಿರಬೇಕು ಎಂಬುದು ಎಲ್ಲಾ ಕಾಲದಲ್ಲಿಯೂ ಒಂದು ಕಠಿಣ ಪ್ರಶ್ನೆಯಾಗಿದೆ. ಅವುಗಳಲ್ಲಿ ಪ್ರಾಮಾಣಿಕ ವಿಮರ್ಶೆ ಅಂದರೆ ಗುಣದೋಷಗಳ ಪರೀಕ್ಷಣವು ಬಂದರೆ ಮುನ್ನುಡಿ ಬರೆಯಲು ಕೇಳಿಕೊಂಡ ಲೇಖಕರು ದೋಷ ನಿರೂಪಣೆಯಿಂದ ಇಡುಕಿಯಾಗಿ ಮುದುಡಿಕೊಳ್ಳುತ್ತಾನೆ. ಈ ಮುದುಡಿಕೆಯನ್ನು ತಪ್ಪಾಗಿಸಿ ಲೇಖಕನಿಗೆ ಸಂತೋಷವಾಗುವಂತೆ ಬರೆದರೆ ವಿಮರ್ಶಕನು ಅಪ್ರಾಮಾಣಿಕನಾಗುತ್ತಾನೆ. ಇಂಥ ಪ್ರಸಂಗಗಳನ್ನು ತಪ್ಪಿಸಬೇಕಾದರೆ ಮುನ್ನುಡಿಯನ್ನು ಬರೆಯಿಸುವ ಲೇಖಕರು ಪ್ರಾಮಾಣಿಕ ವಿಮರ್ಶೆಯನ್ನು ಸ್ವಾಗತಿಸಬೇಕು. ಮುನ್ನುಡಿಕಾರರು ಗುಣಗ್ರಹಣಪೂರ್ವಕವಾಗಿ ಲೇಖಕರ ಪರಿಚಯವನ್ನು ಮಾಡಿಕೊಡುವುದರ ಜೊತೆಗೆ ತಮ್ಮ ವಿಮರ್ಶೆಯನ್ನು ಮಾಡಲು ಹಿಂಜರಿಯಬಾರದು"[೨೦] ಎಂದು ಹೇಳುತ್ತಾರೆ. ಅಂದರೆ ಸಾಹಿತ್ಯ ವಿಮರ್ಶೆಯ ವಿಧಾನದಲ್ಲಿ ಮುನ್ನುಡಿಯೂ ಕೂಡ ವಿಮರ್ಶೆಗೆ ಒಳಪಡುವಂತದ್ದು. ಹಾಗಾಗಿ ಈ ಮುನ್ನುಡಿ ಚಿಂತನೆಯಲ್ಲಿ ಪ್ರಶಂಸೆಗೆ ಹೆಚ್ಚು ಒತ್ತು ಕೊಡಲಾಗದು ಎಂದು ಹೇಳಲಾಗುತ್ತದೆ. ಆದರೆ ಪ್ರಶಂಸೆಗೆ ಒತ್ತು ನೀಡದೆ, ಸಾಹಿತ್ಯ ಸೃಷ್ಟಿ ಅಥವಾ ವಿಮರ್ಶೆಯ ರಚನೆಯಲ್ಲಿ, ಈ ರಚನೆಗೆ ಬರೆಯುವ ಮುನ್ನುಡಿ ಗುಣಗ್ರಹಣವಾಗಿರದೇ ಅದಕ್ಕೆ ಸೂಕ್ತವಾದ ವಿಮರ್ಶೆ ಮೌಲ್ಯ ಕಟ್ಟುವುದು ಹೊಸ ಚಿಂತನೆಯಾಗುತ್ತದೆ.

"ಮುನ್ನುಡಿ ತೋರಣಕ್ಕೊಂದು ಮುನ್ನುಡಿ"[೨೧] ಈ ಲೇಖನದ ಉದ್ದೇಶ ಕುವೆಂಪು ಅವರ ಸಮಗ್ರ ಮುನ್ನುಡಿಗಳ ವಿಶ್ಲೇಷಣೆಯನ್ನು ಒಳಗೊಂಡಿದೆ. ಕುವೆಂಪು ಅವರು ಮುನ್ನುಡಿಗಳನ್ನು, 'ಮುನ್ನುಡಿ ಸಾಹಿತ್ಯ' ಎಂದು ಕರೆಯುತ್ತಾರೆ. "ಮುನ್ನುಡಿ ಸಾಹಿತ್ಯ ಒಂದು ಸಾಹಿತ್ಯ ಪ್ರಕಾರವೆಂಬಂತೆ ವಿಪುಲವಾಗಿ ಬೆಳೆಯುತ್ತಿದೆ. ಮುನ್ನುಡಿಗಳು ಕೃತಿಗಳ ಕಥನ ಹಾಗೂ ಕೃತಿಕಾರನ ಉತ್ತೇಜನ ಸಾಮಾನ್ಯವಾಗಿ ಮುನ್ನುಡಿಯ ಉದ್ದೇಶ, ಮುನ್ನುಡಿ ಸಾಹಿತ್ಯ ಹೊಸ ಚಿಂತನೆಗೆ ಹೊರಳುತ್ತದೆ."[೨೨] ಈ ಹಿನ್ನೆಲೆಯಿಂದ ಮುನ್ನುಡಿ ಸಾಹಿತ್ಯ ಪ್ರಕಾರ ಎಂಬುದಕ್ಕೆ ಎಲ್ಲಾ ಅರ್ಹತೆ ಇದೆ. ಹಾಗೆಯೇ ಕುವೆಂಪು ಅವರು ಬರೆದ ಅನೇಕ ಕೃತಿಗಳ ಮುನ್ನುಡಿಗಳಲ್ಲಿ ಸಾಹಿತ್ಯವನ್ನು ವಿಶ್ಲೇಷಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾಗ ಅನೇಕ ಮುನ್ನುಡಿಗಳನ್ನು ಬರೆದಿದ್ದಾರೆ. ಅದರಲ್ಲಿ 'ಆದಿಪುರಾಣ ಸಂಗ್ರಹ' ಕೃತಿಗೆ ಬರೆದ ಮುನ್ನುಡಿ ಪ್ರಾಚೀನ ಸಾಹಿತ್ಯದ ೧೦ನೇ ಶತಮಾನದ ಪ್ರಸ್ತುತತೆಯನ್ನು ಎತ್ತಿ ತೋರಿಸುತ್ತದೆ. ಅದು ಭರತ ಬಾಹುಬಲಿಯ ಆದರ್ಶತೆ ಪ್ರಸ್ತುತ ಕಾಲದವರೆಗೂ ಇದೆ ಎಂಬ ಧ್ವನಿ ಮುನ್ನುಡಿಯಲ್ಲಿ ವ್ಯಕ್ತಗೊಂಡಿದೆ. ಹಾಗೆಯೇ ಕನ್ನಡ ಸಾಹಿತ್ಯ

ಪಶ್ಚಿಮದಿಂದ ಹೊಸ ದಿಕ್ಕಿನಲ್ಲಿ ಮೂಡಿದೆ. ಆಗ ಪಾಶ್ಚಿಮಾತ್ಯ ಪ್ರಭಾವ ಹೇಗೆ ಕನ್ನಡದ ಮೇಲೆ ಆಗಿದೆ. ಮುನ್ನುಡಿ ಎನ್ನುವುದಕ್ಕೆ ಸಾಹಿತ್ಯವನ್ನು ಕನ್ನಡದ ಹೊಸ ತಿರುಳಾಗಿ ಕೂಡ ವಿಶ್ಲೇಷಿಸಲಾಗಿದೆ. ಕುವೆಂಪು ಅವರ ಮುನ್ನುಡಿಗಳು ಸಾಹಿತ್ಯಕ, ಚಾರಿತ್ರಿಕ, ಸಾಂಸ್ಕೃತಿಕ ಚಿಂತನೆಗಳನ್ನು ಒಳಗುಮಾಡಿಕೊಂಡಿವೆ. ಅವರ ಕರ್ಣಾಟ ಭಾರತ ಕಥಾಮಂಜರಿಯ ಮುನ್ನುಡಿ "ತೋರಣ ನಾಂದಿ"[೨೩] ಅತ್ಯಂತ ಪ್ರಮುಖವಾದುದು. ಅದರಲ್ಲಿ ನೂತನ ಪ್ರಯೋಗವಿದೆ. ಏಕೆಂದರೆ ಆ ಮುನ್ನುಡಿಯ ಶೀರ್ಷಿಕೆಯಲ್ಲಿ ಸಾಹಿತ್ಯ ಚಿಂತನೆಯ ಛಾಪು ಮೂಡಿಸಿದ್ದಾರೆ. ಅವರ ಸಾಹಿತ್ಯ ಲೋಕದಲ್ಲಿ ಒಂದು ಬೃಹತ್ ಕೃತಿಗೆ, ಕುಮಾರವ್ಯಾಸನ ಅಧ್ಯಯನಕ್ಕೆ ಉತ್ತಮ ಪ್ರವೇಶಿಕೆ ಆಗಿದೆ.

ರಾಮಲಿಂಗಪ್ಪ ಟಿ. ಬೇಗೂರು ಅವರ "ಮಾರ್ಗಾಂತರ ಕೃತಿಯ ಮುನ್ನುಡಿ ಬೆನ್ನುಡಿಗಳೆಂಬೊ ಪೋಟುಗಲ್ಲುಗಳು"[೨೪] ಎಂಬ ಲೇಖನದ ಮೂಲಕ ಮುನ್ನುಡಿ ಸಾಹಿತ್ಯದ ರೂಪುರೇಷೆಗಳ ಕುರಿತು ಹೇಳುತ್ತಾರೆ. ಮುನ್ನುಡಿಗಳು ಕೃತಿಗಳ ಮತ್ತು ಲೇಖಕನ ಬಗ್ಗೆ ಹೆಚ್ಚು ಒತ್ತನ್ನು ಕೊಡಲಾಗಿದೆ. "ಮುನ್ನುಡಿ ಒಂದು ಕೃತಿಯ ಕೃಪಾಪೋಷಣೆ ನೀಡುವ ಗುರು ಮತ್ತು ಭಿಕ್ಷಾರ್ಥಿಯ ರೀತಿಯ ಶಿಷ್ಯ ಪಾತ್ರ ಇರುತ್ತದೆ. ಇಂತಹ ಹಿನ್ನೆಲೆಯಿಂದ ಬರೆದ, ಬರೆಯಿಸಿಕೊಂಡ ನುಡಿಗಳು ವಸ್ತುನಿಷ್ಠವಾಗಿರಲು ಹೇಗೆ ಸಾಧ್ಯ."[೨೫] ಹೀಗಾಗಿ ಮುನ್ನುಡಿ ಬರೆಸಿಕೊಳ್ಳುವ ಲಾಜಿಕ್ ಇದೆ. ಅಂದು ತನ್ನ ಕೃತಿಗೆ ಮುನ್ನುಡಿ ಬರೆಸುವವರು ಉತ್ತಮ ಲೇಖಕ, ಕವಿ, ಪ್ರಶಸ್ತಿ ಹೊಂದಿರಬೇಕಾಗುತ್ತದೆ. ಆಗ ನನ್ನ ಕೃತಿ ಬೇಗ ಬೇಗ ಮಾರಾಟವಾಗುತ್ತವೆ ಎಂಬ ನಂಬಿಕೆಯಿಂದ ತನ್ನಲ್ಲಿ ಕೃತಿಕಾರ ಸೃಷ್ಟಿಸಿಕೊಂಡಿರುತ್ತಾನೆ. ಇದರಿಂದ ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಕೊಡಬೇಕಾಗಿದ್ದೇನು ಎಂಬುದು ಪ್ರಶ್ನೆಯಾಗುತ್ತದೆ. ಇದೊಂದು ಮೋಸದ ಜಾಲವಾಗುತ್ತದೆ. ಅದು ಸ್ವಾರ್ಥದ ಕೆಲಸವಾಗುತ್ತದೆ. ಈ ತರನಾದ ಮುನ್ನುಡಿಗಳು ಮುನ್ನುಡಿಗಳೇ ಅಲ್ಲ ಎಂಬ ನಿಲುವನ್ನು ಹೊಂದಬೇಕಾಗುತ್ತದೆ.

ಮುನ್ನುಡಿಗಳಲ್ಲಿ ಮೊದಲಿಗೆ ಆರೋಗ್ಯಕರವಾದ ಬೆಳವಣಿಗೆ ಇತ್ತು. ಅಂದರೆ ಬಿ.ಎಂ.ಶ್ರೀ., ಕುವೆಂಪು, ದ.ರಾ.ಬೇಂದ್ರೆ, ಡಿ.ವಿ.ಜಿ., ಮಾಸ್ತಿ ನವ್ಯ ಕಾಲದ ಸಂದರ್ಭ ಹಾಗೂ ಸಮಕಾಲೀನ ಸಂದರ್ಭಗಳಲ್ಲಿಯೂ ಮುನ್ನುಡಿಗಳಿಗೆ ಮಹತ್ವವಿದೆ. ಆದರೆ ಗಿರಡ್ಡಿ ಗೋವಿಂದರಾಜು ಮತ್ತು ಚಂಪಾ, ನಾಡಿಗೇರ ಕೃಷ್ಣರಾಯ, ಕೆ.ಸತ್ಯನಾರಾಯಣ ಇತ್ಯಾದಿಯವರು ಮುನ್ನುಡಿ ಸಾಹಿತ್ಯದ ಬಗ್ಗೆ ತಮ್ಮ ಗಟ್ಟಿತನದ ನಿಲುವನ್ನು ಸಡಿಲಗೊಳಿಸಿದ್ದಾರೆ. ಗಿರಡ್ಡಿಯವರಿಗೆ ಮುನ್ನುಡಿ ಸಾಹಿತ್ಯದ ವಿಷಯದಲ್ಲಿ ಎಳ್ಳಷ್ಟು ಆಸಕ್ತಿ ಇಲ್ಲದ್ದು ಅವರ "ಮುನ್ನುಡಿಯೆಂಬ ವ್ರತ"[೨೬] "ಮುನ್ನುಡಿಯೆಂಬ ತಂತಿಯ ಮೇಲಿನ ನಡಿಗೆ"[೨೭] ಈ ಲೇಖನಗಳಲ್ಲಿ ಮುನ್ನುಡಿಯ ಕುರಿತು ಅನಾಮಿಕ ಪತ್ರದ ಮೂಲಕ ಪ್ರಸಂಗ ಹಂಚಿಕೊಂಡಿದ್ದಾರೆ. ಈ ಪತ್ರದಲ್ಲಿ ಗಿರಡ್ಡಿಯವರಿಗೆ ನೀವು ಮುನ್ನುಡಿ ಬರೆಯದಿದ್ದರೂ ಸಾಹಿತ್ಯಕ್ಕೆ ನಷ್ಟವಿಲ್ಲ ಎಂಬ ಮಾತು ವ್ಯಕ್ತವಾಗಿದೆ. ಗಿರಡ್ಡಿ ಹಾಗೂ ಇತರರು(ಮುನ್ನುಡಿ ಕ್ಷೇತ್ರ ಅಲ್ಲಗಳೆಯುವವರು) ಮುನ್ನುಡಿಯನ್ನು ಭಾಷೆಯ ಬೌದ್ಧಿಕ ರಾಜಕಾರಣ ಎಂಬ ನೆಲೆಯಲ್ಲಿ ಗ್ರಹಿಸುತ್ತಾರೆ. ಆದರೆ ಮುನ್ನುಡಿ ಬರೆಯಲಾರೆ ಎಂದು ಘಂಟಾಘೋಷವಾಗಿ ಹೇಳಿದವರೆಂದರೆ

ಗಿರಡ್ಡಿಯವರು. ಹಾಗಾಗಿ ರಾಮಲಿಂಗಪ್ಪ ಟಿ. ಬೇಗೂರು ಹೇಳುತ್ತಾ "ಕೆಲವರು ಶಿಸ್ತಾಗಿ, ನೇರವಾಗಿ ನಾನು ಇನ್ನು ಮೇಲೆ ಮುನ್ನುಡಿ ಬರೆಯುವುದಿಲ್ಲ. ಕೇಳಿದವರಿಗೆಲ್ಲ ಮುನ್ನುಡಿ ಬರೆದು ನನ್ನನ್ನು ಜನ "ಮುನ್ನುಡಿ ವಿಮರ್ಶಕ" ಎನ್ನಲಾರಂಭಿಸಿದ್ದಾರೆ ಎಂದು ಸಂಕಲ್ಪ ಮಾಡಿದ್ದಾರೆ. ಕೆಲವರು ಇದೊಂದೇ ಒಂದು ಇನ್ನು ಮುಂದೆ ಮುನ್ನುಡಿ ಬರೆಯುವುದಿಲ್ಲ ಎಂದು ಒಂದೊಂದೇ ಆಗಾಗ ಬರೆಯುವವರಿದ್ದಾರೆ."[೨೮] ಅಂದರೆ ಬೇಗೂರರು ನೇರವಾಗಿ ಹೇಳಲಾರದೆ ಪರೋಕ್ಷವಾಗಿ ಗಿರಡ್ಡಿಯವರಿಗೆ ಹೇಳಿರಬಹುದು. ಬೇಗೂರರು ಮುನ್ನುಡಿ ಕುರಿತ ಚಿಂತನೆಯನ್ನು ಗ್ರಹಿಸುವುದಾದರೆ ಮುನ್ನುಡಿಯನ್ನು ಯಾಕೆ ಇಂಥವರ ಹತ್ತಿರ ಬರೆಸಬೇಕು ಎನ್ನುವುದು ಒಂದು ರೀತಿಯಲ್ಲಿ ಒತ್ತಾಯದ ಸಾಂಸ್ಕೃತಿಕ ರಾಜಕಾರಣವನ್ನು ಒಳಗೊಂಡಿದೆ. ಹಾಗಾಗಿ ಗಿರಡ್ಡಿ ಹೇಳಿದರೂ ಕೂಡ ಅನೇಕ ಕೃತಿಗಳಿಗೆ ಮುನ್ನುಡಿ ಬರೆಯುವ ಪರಂಪರೆ ಮುಂದುವರಿದಿದೆ. ಅದು ಮುನ್ನುಡಿಕಾರರ ಮೇಲೆ ಕೃತಿಯ ವಸ್ತುಸ್ಥಿತಿ ನಿಂತಿದೆ. ಮುನ್ನುಡಿ ಸಾಹಿತ್ಯ ಸಾಹಿತ್ಯವ್ಯವಸ್ಥೆಯೊಳಕ್ಕೆ ಅಧಿಕೃತ ಪ್ರವೇಶ ಸಿಗುವ ಆ ಕೃತಿಗೆ ವಿಮರ್ಶೆಯಾಗಿ ಮಹತ್ವವನ್ನು ಮೊದಲಿಗೆ ದೊರಕಿಸುತ್ತದೆ.

ಆಗಸ್ಟ್ ೨೦೧೩ರ ಹೊಸತು ಪತ್ರಿಕೆಯಲ್ಲಿ ಸಮಕಾಲೀನ ಸಾಂಸ್ಕೃತಿಕ ಬಿಕ್ಕಟ್ಟುಗಳು ಏನು? ಸಮಕಾಲೀನ ತುಡಿತಗಳು ಏನು? ಇಂದಿನ ಸಾಹಿತ್ಯದ ಟ್ರೆಂಡ್ ಏನಾಗಿದೆ ಎನ್ನುವುದಕ್ಕೆ ಡಾ.ವಿನಯಾ ಒಕ್ಕುಂದರವರು ಮುನ್ನುಡಿಯ ಒಳನೋಟಗಳು ಹೇಗೆ ವ್ಯಕ್ತವಾಗುತ್ತದೆ? ಒಂದು ಕೃತಿಯನ್ನು ಬೇರೆಯವರು ಅಥವಾ ಕೃತಿಕಾರರೆ ಮುನ್ನುಡಿ ಬರೆಯುತ್ತಿರುವ ಸಂದರ್ಭಗಳಲ್ಲಿ ಪ್ರಾಯೋಗಿಕವಾಗಿ ಸಾಹಿತ್ಯದ ಒಂದು ಭಾಗದ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಮುನ್ನುಡಿಗಳಲ್ಲಿ ವಿವರಿಸಲಾಗಿದೆ ಎಂಬುದು ಚರ್ಚಿಸಿದ್ದರು. ಅವರ ಮಾತಿನಿಂದ ಕನ್ನಡ ಸಾಹಿತ್ಯಕ್ಕೆ ಮುನ್ನುಡಿಗಳು ಎಷ್ಟೊಂದು ಚಿಂತನೆಗಳನ್ನು ಒಳಗೊಂಡಿವೆ ಎಂಬುದಕ್ಕೆ ಈ ಮಾತೇ ನಿದರ್ಶನವಾಗಿದೆ.

ಯು.ಆರ್.ಅನಂತಮೂರ್ತಿಯವರ ಮುನ್ನುಡಿ ಸಂಕಲನ 'ನವ್ಯಲೋಕ' ಅವರ ಸಮಗ್ರ ಮುನ್ನುಡಿಗಳನ್ನು ಹೊಂದಿವೆ. ಇವರು ಗೋಪಾಲಕೃಷ್ಣ ಅಡಿಗರ 'ಭೂಮಿಗೀತ' ಸಂಕಲನಕ್ಕೆ ಮುನ್ನುಡಿ ಬರೆದಿದ್ದಾರೆ. ಇದು ಕನ್ನಡ ವಿಮರ್ಶೆಯನ್ನು ಬೆಳೆಸಿದ ವಿಮರ್ಶೆ ಮಾತ್ರವಲ್ಲ. ಹೊಸಗನ್ನಡ ವಿಮರ್ಶೆಯ ಬೆರಳೆಣಿಕೆಯ ಶಿಖರಗಳಲ್ಲೊಂದು. ಈ ಮುನ್ನುಡಿಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಕನ್ನಡ ವಿಮರ್ಶೆ ಈಗಾಗಲೇ ಗುರುತಿಸಿದೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಪೂಜನ' ಮುನ್ನುಡಿ ಸಂಕಲನವಾಗಿದೆ. "ಈ ಮುನ್ನುಡಿಗಳನ್ನು ನಾನು ಕಿರಿಯರ ಕೆಲಸವನ್ನು ಮೆಚ್ಚಿ ಆಶೀರ್ವದಿಸುವ ಹಿರಿಯನ ದೃಷ್ಟಿಯಿಂದ ಬರೆಯಲಿಲ್ಲ. ನಮ್ಮ ಹೊಸ ಸಾಹಿತ್ಯ ಸೃಷ್ಟಿಯಾಗಲು ಪ್ರೇರಕವಾದ ತತ್ವಗಳನ್ನು, ಆಯಾ ಕೃತಿಗಳನ್ನು ನೋಡುವವರು ಅದನ್ನು ಯಾವ ದೃಷ್ಟಿಯಿಂದ ನೋಡಬೇಕು ಎನ್ನುವುದನ್ನು ವಿವರಿಸುವುದು ಆಯಾ ವೇಳೆಯಲ್ಲಿ ನನ್ನ ಉದ್ದೇಶವಾಗಿತ್ತು. ಇಂಥ ಮಾತು ಆಯಾ ಕೃತಿಗೆ ಸಂಬಂಧಿಸಿರುತ್ತದೆ. ಹೀಗೆ ಹಲವು ವಿಚಾರ ವಿವರಗಳಲ್ಲಿ ಹೇಗೆ ಹರಿಯುತ್ತದೆ ಎನ್ನುವುದು ಈ ಮುನ್ನುಡಿಗಳ

ಸಂಕಲನದಲ್ಲಿ ಕಾಣುತ್ತದೆ."[೨೫] 'ಪೂಜನ' ಮುನ್ನುಡಿ ಸಂಕಲನವು ಆಯಾ ಕಾಲದ, ಸಂದರ್ಭದ ಸಂಸ್ಕೃತಿ ಚಿಂತನೆಯನ್ನು ಒಳಗೊಂಡಿವೆ. ಅವರು ಯಾವ ದೃಷ್ಟಿಯಿಂದ ಮುನ್ನುಡಿಗಳ ಮೂಲಕ ಹೇಳಿದ್ದಾರೆ. ಹೀಗೆ ಕೃತಿಗಳನ್ನು ನೋಡಬೇಕು ಎಂಬುದನ್ನು ಹಲವಾರು ಮುನ್ನುಡಿಗಳು ಸಾಹಿತ್ಯ ಸಂಸ್ಕೃತಿ ಚಿಂತನೆಗೆ ದಾರಿ ಮಾಡಿಕೊಟ್ಟಿವೆ. 'ಗರತಿಯ ಹಾಡು' ಕೃತಿಯ ಬಿ.ಎಂ.ಶ್ರೀ. ಅವರ ಮುನ್ನುಡಿ, 'ಗರಿ' ಕೃತಿಯ ಬೇಂದ್ರೆ ಮುನ್ನುಡಿ, 'ಭಾರತೀಯ ಕಾವ್ಯಮೀಮಾಂಸೆ' ಕುವೆಂಪು ಅವರ ಮುನ್ನುಡಿ, 'ಇಂಗ್ಲಿಷ್ ಗೀತಗಳು' ಕೃತಿಯ ತೀ.ನಂ.ಶ್ರೀ. ಅವರ ಮುನ್ನುಡಿ, 'ಅಬಚೂರಿನ ಪೋಸ್ಟಾಫೀಸು' ಕೃತಿಯ ತೇಜಸ್ವಿ ಅವರ ಮುನ್ನುಡಿ, 'ಅಕ್ಷರ ಹೊಸ ಕಾವ್ಯ' ಕೃತಿಯ ಪಿ.ಲಂಕೇಶ್ ಅವರ ಮುನ್ನುಡಿ, ಅಡಿಗರ ಭೂಮಿಗೀತಕ್ಕೆ ಯು.ಆರ್.ಅನಂತಮೂರ್ತಿಯವರ ಮುನ್ನುಡಿ, ಹೀಗೆ ಬಿ.ಎಂ.ಶ್ರೀ., ಮಾಸ್ತಿ, ಡಿ.ವಿ.ಜಿ., ಅನೇಕ ಮಹನೀಯರ ಮುನ್ನುಡಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಈ ಅಧ್ಯಯನದ ದೃಷ್ಟಿಯಿಂದ ಮುನ್ನುಡಿ ಸಾಹಿತ್ಯವನ್ನು ಸಾಹಿತ್ಯ ವಿಮರ್ಶೆಯ ಉಪಪ್ರಕಾರದ ಪರ್ಯಾಯ ರೀತಿಯೆಂದು ಕರೆಯಬಹುದಾಗಿದೆ. ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆ ಎರಡೂ ಅವಳಿ ಜವಳಿಗಳೇ. ಹಾಗೆಯೇ ಕೃತಿಯಲ್ಲಿ ಮುನ್ನುಡಿಗೆ ಸ್ಥಾನ ಇರುವುದು ಸಾಮಾನ್ಯ. ಕವಿಯ ನಿರ್ಮಾಣ ಕ್ರಿಯೆಯಲ್ಲಿಯೇ ವಿಮರ್ಶೆ ಕೆಲಸ ಮಾಡುತ್ತದೆ. ಕೃತಿ ರಚನೆಗೊಳ್ಳುತ್ತಿದ್ದಂತೆಯೇ ಮುನ್ನುಡಿಯೂ ಅಸ್ತಿತ್ವಗೊಳ್ಳುತ್ತದೆ. ಹೀಗೆ ಮುನ್ನುಡಿ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಅನಿವಾರ್ಯವಾಗಿದೆ.

**ಮುನ್ನುಡಿ ಸಂಕಥನಗಳು**

ಮುನ್ನುಡಿ ಬರೆಸುವಾಗ ಹಲವು ರೀತಿಯಲ್ಲಿ ಘಟನೆಗಳು, ಪ್ರಸಂಗಗಳು ನಡೆದಿವೆ. ಅವುಗಳಲ್ಲಿ ಕೆಲವು ಕುತೂಹಲಕಾರಿಯಾಗಿವೆ. ಕೆಲವು ನಗೆಪಾಟಲಿಗೆ ಒಳಗಾಗಿವೆ. ಅಷ್ಟೇ ಗಂಭೀರವಾದ ಚಿಂತನೆಗಳನ್ನು ಒಳಗೊಂಡಿವೆ. ಕೃತಿಗಳಿಗೆ ಮುನ್ನುಡಿ ಬರೆಸುವ ಉದ್ದೇಶ ಕೃತಿ ಪ್ರಕಟವಾಗಿ ಪತ್ರಿಕೆಗಳಿಗೆ ವಿಮರ್ಶೆಗೆಂದು ಎರಡೆರಡು ಪ್ರತಿಗಳನ್ನು ಪುಕ್ಕಟೆಯಾಗಿ ಕಳಿಸಿಕೊಟ್ಟರೂ ವಿಮರ್ಶೆ ಪ್ರಕಟವಾಗುವುದು ಬಹಳ ಅಪರೂಪ. ಪ್ರಕಟವಾದರೂ ಅದರಲ್ಲಿ ದಯಾ ದಾಕ್ಷಿಣ್ಯ ಇಲ್ಲದೆ ಕಟುವಿಮರ್ಶೆ ಬಂದೀತೆಂಬ ಹೆದರಿಕೆ ಬೇರೆ. ಸ್ನೇಹಿತರಿಗೆ ಕಾಣಿಕೆಯಾಗಿ ಕಳಿಸಿದರೂ ಅವರು ಯಾವುದೇ ಪ್ರತಿಕ್ರಿಯೆ ಬರೆಯದೇ ಇರುವುದು ಮೇಲ್ನೋಟಕ್ಕೆ ತಿಳಿಯುತ್ತದೆ. ಕೃತಿ ತಲುಪಿದೆಯೆಂದು ಉತ್ತರ ಬರೆಯುವ ಸೌಜನ್ಯವನ್ನು ಕೂಡ ಅನೇಕರು ತೋರಿಸುವುದಿಲ್ಲ. ಹೀಗಾಗಿ ಲೇಖಕರು ತಮ್ಮ ಸ್ನೇಹಿತರಿಂದ ಕೃತಿಗೆ ಮುನ್ನುಡಿಯನ್ನು ಕೇಳುತ್ತಾರೆ. ಹಾಗೆಯೇ ಹಿರಿಯ ಲೇಖಕರು, ಕವಿಗಳ ಹತ್ತಿರ ಮುನ್ನುಡಿ ಬರೆಸುವುದರಿಂದ ವಿಮರ್ಶೆಯಾದರೂ ಕೃತಿಗೆ ಬರಲಿ ಎಂಬುದು ಇದರ ಹಿಂದಿನ ಆಶಯವಾಗಿದೆ.

"ತರುಣ ಕವಿಯೊಬ್ಬ ಹಿರಿಯರಾದ ಬಿ.ಎಂ.ಶ್ರೀಕಂಠಯ್ಯನವರನ್ನು ಕಂಡು ತನ್ನ ಪುಸ್ತಕಕ್ಕೆ ಮುನ್ನುಡಿ ಕೇಳಿದ. ಅವರು ಅದರ ಬಗ್ಗೆ ಒಂದಿಷ್ಟು ಮೆಚ್ಚುಗೆಯ ಮಾತುಗಳನ್ನು ಸೇರಿಸಿ

ಬರೆದುಕೊಟ್ಟರು. ಅದನ್ನು ಓದಿದ ಅವರ ಗೆಳೆಯರೊಬ್ಬರು ಅಂಥ ಸಾಮಾನ್ಯ ಪುಸ್ತಕದ ಬಗ್ಗೆ ಅಷ್ಟೊಂದು ಹೊಗಳಿಕೆಯ ಮಾತು ಬರೆದದ್ದಕ್ಕೆ ಆಕ್ಷೇಪಿಸಿದರಂತೆ. ಅದಕ್ಕೆ ಬಿ.ಎಂ.ಶ್ರೀ. ಅವರು 'ಅಪ್ಪಾ, ಅದು ಆತನ ಮೊದಲ ಕೃತಿ. ಮುಂದೆ ಬೆಳೆದು ಒಳ್ಳೆಯ ಲೇಖಕನಾದರೂ ಆದಾನು. ನನ್ನ ಎರಡು ಒಳ್ಳೆಯ ಮಾತಿನಿಂದ ಅವನಿಗೆ ಉತ್ಸಾಹ ಹೆಚ್ಚಿ ಚೆನ್ನಾಗಿ ಬರೆದರೆ ಉಳಿಯುತ್ತಾನೆ. ಶಕ್ತಿ ಇಲ್ಲದಿದ್ದರೆ ಕಳೆದುಹೋಗುತ್ತಾನೆ. ನನ್ನ ಕೆಟ್ಟ ಮಾತಿನಿಂದ ಇಂದೇ ಅವನನ್ನು ಯಾಕೆ ನಿರುತ್ಸಾಹಗೊಳಿಸಬೇಕು?"[೩೦] ಎಂದು ಹೇಳಿದರಂತೆ. ಈ ತರಹದ ಮಾತು ಪ್ರಥಮ ಲೇಖಕರಿಗೆ ಬಳಸುವ ವಿಧಾನವಾಗಿರಬಹುದುದಿದು ವಿಮರ್ಶೆಯ ಮಾನದಂಡಗಳನ್ನು ಅಲ್ಲಗೆಳದಂತಾಗುತ್ತದೆ. ಒಂದು ಕೃತಿಯು ಹುಟ್ಟಿದರೆ ಅಷ್ಟಾದರೂ ಸಾಹಿತ್ಯ ಲೋಕದಲ್ಲಿ ಬೆಳೆಯಬೇಕು. ಜೊತೆಗೆ ಲೇಖಕರಿಗೆ ಒಳ್ಳೆಯದಾಗಬೇಕು ಎಂಬ ಹಿನ್ನೆಲೆಯು ಮುನ್ನುಡಿಯ ಸಾಂಸ್ಕೃತಿಕ ಜವಾಬ್ದಾರಿಯ ಒಂದು ನಿಲುವು ಎಂದು ಹೇಳಲಾಗುತ್ತದೆ.

ಹೀಗೆಯೇ ದ.ರಾ.ಬೇಂದ್ರೆ ಅವರು ಕೂಡ ಹಲವರಿಗೆ ಮುನ್ನುಡಿ ಬರೆದುಕೊಟ್ಟಿದ್ದಾರೆ. "ಜಾಣತನದಿಂದ ಹೊಗಳಿಕೆಯಂತೆ ಕಾಣುವ ಮಾತಿನಲ್ಲಿಯೇ ಪುಸ್ತಕವನ್ನು ಪರೋಕ್ಷವಾಗಿ ಟೀಕಿಸುವ ತಂತ್ರಗಾರಿಕೆ ಅವರಿಗೆ ಸಿದ್ಧಿಸಿತು. ಅವರು ಹಿರಿಯ ಕವಿಗಳಾಗಿದ್ದರಿಂದ ಎಂಥ ಕಠಿಣ ಪ್ರಸಂಗದಲ್ಲಿಯೂ ಪಾರಾಗುವ ಒಂದು ವಿಶೇಷ ಉಪಾಯ ಅವರ ಬತ್ತಳಿಕೆಯಲ್ಲಿತ್ತು. ಅಂದರೆ ಕೃತಿ ಹಿಡಿಸದಿದ್ದಾಗ ಮುನ್ನುಡಿ ಎಂದು ಒಂದು ಕವಿತೆಯನ್ನು ಬರೆದುಕೊಟ್ಟುಬಿಡುವರು. ಅದು ಲೇಖಕರಿಗೆ ಅರ್ಥವಾಗುತ್ತಿದ್ದಿಲ್ಲ. ಆದುದರಿಂದ ಅದೇ ಒಂದು ದೊಡ್ಡದೆಂದು ಭಾವಿಸಿ ಪುನೀತರಾಗುತ್ತಿದ್ದರು."[೩೧] ಇದರಿಂದ ಬೇಂದ್ರೆಯವರು ಹೊಗಳಿಕೆಗಿಂತ ಮುನ್ನುಡಿಗೆ ಬದಲಾಗಿ ಕವಿತೆ ಬರೆಯುವ ಉದ್ದೇಶ, ಈ ಕವಿತೆ ಎಂದರೆ ಹೀಗಿರಬೇಕು. ಸಾಹಿತ್ಯ ಎಂದರೆ ವಸ್ತು, ವಿಷಯ ಅರ್ಥ ಹೀಗೆ ಒಳಗೊಂಡಿರಬೇಕು ಎಂದು ಮುನ್ನುಡಿ ಕವಿತೆಯಲ್ಲಿ ಹೇಳುತ್ತಾರೆ. ಅದನ್ನು ಓದುಗರು ಗ್ರಹಿಸಬೇಕಾಗಿದೆ.

ಗಿರಡ್ಡಿ ಗೋವಿಂದರಾಜ ಅವರು 'ಮುನ್ನುಡಿ ಎಂಬ ವ್ರತ' ಲೇಖನದಲ್ಲಿ ಉಲ್ಲೇಖಿಸಿದಂತೆ ಒಂದು ಸಲ ನಮ್ಮ ಮನೆಗಾಗಿ ಕಿರಾಣಿ ಅಂಗಡಿಯವನಿಂದ ಏನೋ ಸಾಮಾನು ತೆಗೆದುಕೊಂಡಿದ್ದರಂತೆ. ಆಗ ಅಂಗಡಿಯವನು ಕಾಗದದ ಪುಡಿಕೆಯಲ್ಲಿ ಸಾಮಾನು ಕಟ್ಟಿಕೊಟ್ಟರು. ಆ ಕಾಗದ ಕನ್ನಡದಲ್ಲಿ ಅಚ್ಚಾದ ಯಾವುದೋ 'ಮೂರು ದಾರಿಗಳು' ಕಾದಂಬರಿಯ ಮುನ್ನುಡಿಯಾಗಿತ್ತು. ಅದಕ್ಕೆ ಶಾಂತಿನಾಥ ದೇಸಾಯಿ ಅವರು ಮುನ್ನುಡಿ ಬರೆದಿದ್ದರು. ಗಿರಡ್ಡಿಯವರು ಪರಿಶೀಲಿಸಿ ತಮ್ಮ ಗುರುಗಳಾದ ಶಾಂತಿನಾಥ ದೇಸಾಯಿಯವರಿಗೆ ತೋರಿಸಿದರಂತೆ. ಆಗ ದೇಸಾಯಿಯವರು ಮತ್ತು ಯಶವಂತ ಚಿತ್ತಾಲರು ಆತ್ಮೀಯ ಸ್ನೇಹಿತರು. ಆದರೆ ಚಿಂತನೆಯಲ್ಲಿ ಭಿನ್ನ ಎನ್ನುವುದನ್ನು ಈ ಮುನ್ನುಡಿ ಮೂಲಕ ತಿಳಿಯಬಹುದು. ಚಿತ್ತಾಲರು ತಮ್ಮ ಕಾದಂಬರಿಗೆ ಮುನ್ನುಡಿ ಕೇಳಿದ್ದರಿಂದ ಪಕ್ಕಾ ನವ್ಯ ವಿಮರ್ಶಕರಂತೆ ದೇಸಾಯಿಯವರು ವಸ್ತುನಿಷ್ಠವಾದ, ವಿಮರ್ಶಾತ್ಮಕ ಮುನ್ನುಡಿಯನ್ನು

ಬರೆದುಕೊಟ್ಟರು. ಅದರಲ್ಲಿಯ ನೈಜವಾದ ಚಿಂತನೆಗಳು, ಅಭಿಪ್ರಾಯಗಳು ಚಿತ್ತಾಲರಿಗೆ ಸಮಾಧಾನ ನೀಡಲಿಲ್ಲ. ಕೊನೆಗೆ ಮುದ್ರಣ ಹಂತದಲ್ಲಿ ಮುನ್ನುಡಿಯನ್ನು ಕೈಬಿಟ್ಟರು. ಇದರಿಂದ ಕಾದಂಬರಿಯ ಮಿತಿಗಳನ್ನು ಎತ್ತಿ ತೋರಿಸುವ ಮುನ್ನುಡಿಯನ್ನು ಕಾದಂಬರಿಯ ಜೊತೆಗೆ ಪ್ರಕಟಿಸುವುದು ಸರಿಯೇ? ಇದರಿಂದ ಓದುಗರು ಕಾದಂಬರಿಯನ್ನು ಅದೇ ದಿಕ್ಕಿನಲ್ಲಿ ಓದುವಂತಾಗುವುದಿಲ್ಲವೇ? ಹೇಗೂ ಇಬ್ಬರು ಸ್ನೇಹಿತರು ಎಂದು ದೇಸಾಯಿಯವರಿಗೆ ಹೇಳಿದರಂತೆ. ನಿನಗೆ ಮುನ್ನುಡಿ ಇಷ್ಟವಿಲ್ಲದಿದ್ದರೆ ಪ್ರಕಟಿಸುವುದು ಬೇಡ ಎಂದು ಹೇಳಿದರು. ಇದರಿಂದ ಮುನ್ನುಡಿ ಮೌಲ್ಯ ಏನೆಂದು ಓದುಗರು ತಿಳಿಯಬೇಕಾಗಿದೆ.

'ಮುನ್ನುಡಿ ಎಂಬ ವ್ರತ' ಲೇಖನದ ಮೂಲಕ ಉಲ್ಲೇಖಗೊಂಡಂತೆ, ಗಿರಡ್ಡಿಯವರು ಮುನ್ನುಡಿ ಬರೆಯುವುದಿಲ್ಲ ಎಂದು ಹೇಳಿರುವುದಕ್ಕೆ ಹಲವು ಕಾರಣಗಳಿರಬಹುದು. ಆದರೆ ಅವರು ಮುನ್ನುಡಿ ಬರೆಯಬೇಕೆಂಬ ಒತ್ತಾಸೆಯೂ ಕೆಲವರಲ್ಲಿ ಇರುತ್ತದೆ. ಇದಕ್ಕೆ ಅವರ ಸಾಹಿತ್ಯಕ ಮೌಲ್ಯ, ವಿಮರ್ಶಕ ಪ್ರಜ್ಞೆ ಮುಖ್ಯವಾಗಿದೆ. ಹಾಗಾಗಿ ಗಿರಡ್ಡಿಯವರು ಮುನ್ನುಡಿ ಬರೆಯುವುದಿಲ್ಲ ಎಂಬ ವ್ರತಭಂಗಕ್ಕೆ ಬೆಂಗಳೂರಿನ ಗಿರಡ್ಡಿ ಸ್ನೇಹಿತರು ಕಾದಂಬರಿಯನ್ನು ಬರೆದಿದ್ದರಂತೆ. ಅದಕ್ಕೆ ಮುನ್ನುಡಿ ಬರೆಯಬೇಕೆಂದು ಅಡ್ವಾನ್ಸ್ ಬುಕಿಂಗ್ ಮಾಡಲು ಯತ್ನಿಸಿದರಂತೆ. ಆಗ ಅವರ ಸ್ನೇಹಿತರು ತಮ್ಮ ವ್ರತವನ್ನು ಮುರಿಯಬೇಕು ಎಂದು ಹೇಳಿದರಂತೆ. ಗಿರಡ್ಡಿಯವರು ನಾನು ಒಮ್ಮೆ ವ್ರತವನ್ನು ಮುರಿದರೆ ಉಳಿದವರಿಗೆ ಸಡಿಲು ಸಿಗುತ್ತದೆ ಎಂದು ವಾದ ಮಾಡಿದರಂತೆ.

ಹೀಗೆಯೇ ಗಿರಡ್ಡಿ ಸಾಹಿತಿ ಮಿತ್ರ ಎಸ್.ಎಸ್.ಕೋತಿನ ಎನ್ನುವ ಕವಿ, ಲೇಖಕರು ಒಂದು ವಿಚಿತ್ರ ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದರು. ಅದು ನರದೌರ್ಬಲ್ಯಕ್ಕೆ ಸಂಬಂಧಿಸಿದ ರೋಗ. ಅಂಗಾಂಗ ಬೆರಳುಗಳಿಂದ ಆರಂಭವಾಗುವ ರೋಗವಾಗಿತ್ತು. ಇವರನ್ನು ಗಿರಡ್ಡಿ ಅವರು ಮಾತನಾಡಿಸುವುದಕ್ಕಾಗಿ ಆಗಾಗ ಬೆಂಗಳೂರಿಗೆ ಬರುತ್ತಿದ್ದರು. ಹೀಗೆ ಒಂದು ಸಲ ಅವರ ಮನೆಗೆ ಬಂದ ಗಿರಡ್ಡಿಯವರನ್ನು ಕಂಡು ಎಸ್.ಎಸ್.ಕೋತಿನ ಅವರು ತುಂಬಾ ಸಂತೋಷಪಟ್ಟರು. ಯಾಕೋ ನಿಮ್ಮನ್ನ ನೋಡಬೇಕಂತ ಜೀವ ಬಾಳ ನೆನಪಿಸುತಿತ್ತು. ನೀವು ಬರದೆ ಬಾಳ ದಿನ ಆದವು. ನಿಮ್ಮ ಕೂಡ ಮಾತಾಡೋದು ಬಾಳ ಐತಿ ಎಂದು ಕೋತಿನ ಅವರು ಗಿರಡ್ಡಿಯವರಿಗೆ ಹೇಳಿದರಂತೆ. "ನೀವು ನನಗೆ ಉಪಕಾರ ಮಾಡಬೇಕು ಅದು ನಿಮ್ಮಿಂದ ಸಾಧ್ಯ ಎಂದು ಹೇಳುತ್ತಾ ನನ್ನ ಕೊನೆಯ ಕೃತಿ ನಾಟಕ "ಗೋವರ್ಧನ ಗಿರಿದಾರಿ" ಅದಕ್ಕೆ ಮುನ್ನುಡಿ ಬರೆದುಕೊಡಬೇಕು ಎಂದು ಹೇಳಿದರಂತೆ. ಆಗ ಗಿರಡ್ಡಿಯವರು ನಾನು ಮುನ್ನುಡಿ ಬರೆಯುವುದಿಲ್ಲ ಅನ್ನೋದು ಗೊತ್ತೈತಿ ಅಲ್ವೆ ಎಂದರಂತೆ. ಕೋತಿನ ಅವರು ನಾನು ನಿಮ್ಮಿಂದ ಮುನ್ನುಡಿ ಬರೆಸಿಕೊಂಡೆತೀರಬೇಕು ಅಂತ ಬಾಳ ದಿನದಿಂದ ನನ್ನ ಮನಸಿನ್ಯಾಗ ಕನಸು ಕುಂತಬಿಟ್ಟೈತಿ. ಏನ ಮಾಡಿದರೂ ಹೋಗವಲ್ದು. ಸಾಯೂ ಮನಿಶ್ಯಾನ ಕಡೇ ಆಶಾ ಅಂತ ನೀವು ಒಪ್ಪಿಗೋಬೇಕು"[೨] ಎಂದು ಕೋತಿನ ಅವರು ಹೇಳಿದರು. ಗಿರಡ್ಡಿಯವರು ಕೊನೆಗೆ ನನ್ನ ಮುನ್ನುಡಿ ವ್ರತ ಸಾಯುವ

ಮನುಷ್ಯನ ಮುಂದೆ ಯಾವ ವ್ರತಕ್ಕೆ ಏನು ಅರ್ಥ ಎಂದು ಕೊನೆಗೆ ಬರೆದುಕೊಡಲು ಒಪ್ಪಿದರು. ಕೊನೆಗೆ ಕೋತಿನ ಸತ್ತು ಹೋದರು. ಮುನ್ನುಡಿ ಬರೆಯಲಿಲ್ಲ. ಗಿರಡ್ಡಿ ಬಚಾವಾದೆ ಎಂದು ತಿಳಿದಿದ್ದರು. ಆದರೆ ಕೊನೆಗೆ ಗಿರಡ್ಡಿ ಅವರ ಇಂಗ್ಲಿಷ್ ವಿಭಾಗದ ಕೊಠಡಿಯಲ್ಲಿ ಕೋತಿನ ಅವರ ನಾಟಕದ ಹಸ್ತಪ್ರತಿಯನ್ನು ಯಾರೋ ಇಟ್ಟು ಹೋಗಿದ್ದರು. ಅದರ ಜೊತೆಗೆ ಮುನ್ನುಡಿಗಾಗಿ ಕೋರಿಕೆಯೂ ಇತ್ತು. ಆಗ ಗಿರಡ್ಡಿಯವರಲ್ಲಿ ಹಲವಾರು ಪ್ರಶ್ನೆಗಳು ಎದುರಾದವು. ಕೊನೆಗೆ ಮುನ್ನುಡಿ ಬರೆದುಕೊಟ್ಟರು. ಈ ತರವಾದ ಅನೇಕ ಮುನ್ನುಡಿ ಸಂಕಥನಗಳು ಕನ್ನಡ ಸಾಹಿತ್ಯದಲ್ಲಿ ಇವೆ.

ಹೀಗೆಯೇ ಒಂದೊಂದು ಸಾರಿ "ಸಾಮಾನ್ಯವಾಗಿ ಹೆಸರು ಹೊಂದಿದ ಸಾಹಿತಿಗಳಲ್ಲೊಬ್ಬರಿಂದ ಗ್ರಂಥಕ್ಕೆ ಮುನ್ನುಡಿ ಬರೆಸುವುದು ಪರಿಪಾಠವಿದೆ. ಆದರೆ ಈ ಸಾಹಿತಿಗಳು ಮುನ್ನುಡಿ ಬರೆಯಬೇಕೆಂಬ ಗ್ರಂಥಕಾರನ ಬೇಡಿಕೆಯನ್ನು ಬಹಳ ದಿನಗಳಿಂದ ತಳ್ಳುತ್ತ ಬಂದಿರುತ್ತಾರೆ. ಮಗನ ಮುಂಜಿ, ಮಗನ ಮದುವೆ, ಹೆಂಡತಿಯ ಟೈಫಾಯ್ಡ್(ಈ ಕಾಯಿಲೆ ಹೇಳಿದಲ್ಲಿ ಕೆಲವು ದಿನಗಳು ಅಥವಾ ಅದಕ್ಕೂ ಮೇಲ್ಪಟ್ಟ ದಿನಗಳ ಅವಧಿ ತೆಗೆದುಕೊಳ್ಳಬಹುದು) ಮುಂತಾದ ನೆಪಗಳನ್ನು ಒಡ್ಡಿ ಬರೆಯದೆ ತಪ್ಪಿಸಿಕೊಂಡಿರುತ್ತಾರೆ."[೩೩]

ನಾವು ಕೇಳಿದ ಸಣ್ಣದೊಂದು ಮುನ್ನುಡಿ ಕಥೆ ಹೀಗಿದೆ. ಪ್ರಸಿದ್ಧ ಭಾಷಾಶಾಸ್ತ್ರಜ್ಞರೊಬ್ಬರಿಗೆ ಕಿರಿಯ ಭಾಷಾತಜ್ಞರೊಬ್ಬರು ಕೆಲವು ಚಾರಿತ್ರಿಕ ಕೃತಿಗಳಿಗೆ ಬರೆದ ಮುನ್ನುಡಿಗಳ ನಕಲು ಪ್ರತಿ ಕಳುಹಿಸಿ ಹೀಗೆ ಮುನ್ನುಡಿ ಬರೆಯಬೇಕೆಂದು ತಾಕೀತು ಮಾಡಿದ್ದರಂತೆ. ಇದರಿಂದ ಕೋಪಗೊಂಡ ಹಿರಿಯ ಭಾಷಾತಜ್ಞರು ನಿರ್ದಯವಾಗಿ ಲೇಖಕರ ಹಸ್ತಪ್ರತಿ ಮತ್ತು ಮುನ್ನುಡಿಗಳ ನಕಲುಗಳನ್ನು ಸುಟ್ಟುಹಾಕಿ ತಮ್ಮ ಕೋಪ ಶಮನ ಮಾಡಿಕೊಂಡರಂತೆ.

ಚಂದ್ರಶೇಖರ ಪಾಟೀಲ್ ಅವರ ಸಂಕ್ರಮಣ ಸಾಹಿತ್ಯ(ಸಂ.೩)ದಲ್ಲಿ ಒಬ್ಬ ಅನಾಮಿಕ ವ್ಯಕ್ತಿ ಚಂಪಾ ಅವರಿಗೆ ಕರೆ ಮಾಡಿ ಸರ್ ನಾನು ನಿಮ್ಮ ಜಾತಿಯವನು ನೀವು ನನ್ನ ಕವನ ಸಂಕಲನಕ್ಕೆ ಮುನ್ನುಡಿ ಬರೆದುಕೊಡಬೇಕೆಂದು ಕೇಳಿಕೊಂಡನಂತೆ. ಆಗ ಚಂಪಾ ಅವರು ನೀನು ಯಾವ ಜಾತಿಯವನಾದರೇನು? ನಾನು ಮುನ್ನುಡಿ ಬರೆಯುವುದಿಲ್ಲ ಎಂದು ಹೇಳಿದರಂತೆ.

ಹೀಗೆ ಗಿರಡ್ಡಿಯವರು ಮುನ್ನುಡಿ ಸಾಹಿತ್ಯದ ಕುರಿತಂತೆ ಅವರ 'ಹಿಡಿಯದ ಹಾದಿ' ಕೃತಿಯಲ್ಲಿ 'ಮುನ್ನುಡಿ ಎಂಬ ವ್ರತ' ಲೇಖನದ ಮೂಲಕ ಮುನ್ನುಡಿ ಬರೆದಿರುವ ತಮ್ಮ ಅನುಭವ ಹಾಸ್ಯ ವಿಡಂಬನೆಯಾಗಿ ಮುನ್ನುಡಿ ಸಾಹಿತ್ಯದ ವರ್ಣನೆ ಮಾಡಿದ್ದಾರೆ. ಇದರ ಕುರಿತು ಯಾರೋ ಅನಾಮಿಕ ವ್ಯಕ್ತಿ ಗಿರಡ್ಡಿಯವರಿಗೆ ಟಾಂಗ್ ನೀಡಿದ್ದಾನೆ. ಗಿರಡ್ಡಿಯವರ ಇನ್ನೊಂದು ಕೃತಿ 'ಸಾಹಿತ್ಯ ಲೋಕದ ಸುತ್ತಮುತ್ತ' ಎಂಬ 'ಮುನ್ನುಡಿ ಎಂಬ ತಂತಿಯ ಮೇಲಿನ ನಡಿಗೆ'ಯ ಲೇಖನದಲ್ಲಿ ವಿವರಿಸಿದ್ದಾರೆ. ಅದು 'ಮುನ್ನುಡಿ ಎಂಬ ವ್ರತ' ಲೇಖನಕ್ಕೆ ಪ್ರತಿಯಾಗಿ ಗಿರಡ್ಡಿಯವರಿಗೆ ಪತ್ರದ ಮೂಲಕ 'ಮಾನ್ಯರೇ ನೀವು ಮುನ್ನುಡಿ ಬರೆದರಷ್ಟೇ ಪುಸ್ತಕಗಳು ಪ್ರಕಟವಾಗಬೇಕು ಅಂತ

ಪ್ರಿಂಟಿಂಗ್ ಕೆಲಸಗಾರರ ಕೂಡ ಒಳ ಒಪ್ಪಂದ ಮಾಡಿಕೊಂಡಿರುವಿರಾ? ಅಥವಾ ನೀವು ಮುನ್ನುಡಿ ಬರೆಯದಿದ್ದರೆ ಕನ್ನಡ ಪುಸ್ತಕೋದ್ಯಮವೇ ನಿಂತು ಹೋಗುತ್ತದೆ ಎಂದು ಭಾವಿಸುವಿರಾ? ನಿಮ್ಮ ಮುನ್ನುಡಿಗಳಿಲ್ಲದೆ ನಮ್ಮಂತಹವರ ಪುಸ್ತಕಗಳು ಪ್ರಕಟವೂ ಆಗಿವೆ... ನೀವು 'ಹಿಡಿಯದ ಹಾದಿ' ಹಾಗೂ ಬರೆಯದ ಮುನ್ನುಡಿಗಳೇ ಕನ್ನಡ ಸಾರಸ್ವತ ಪ್ರಪಂಚಕ್ಕೆ ಹೆಚ್ಚು ಪ್ರಶಸ್ತವಾಗಿವೆ ಎಂಬುದನ್ನು ಮರೆತಿರುವಿರಾ?'

'ನನಗೆ ಇನ್ನು ಸಂಶಯವಿದೆ... ನಿಮ್ಮ ಮುನ್ನುಡಿಗಳೇ ಬಾಗಲೋಡಿ ದೇವರಾಯರನ್ನು ಹಾಗೂ ಶ್ರೀ ಕೋತಿನ ಅವರನ್ನು ಹಾಗೂ ಇನ್ನು ಎಷ್ಟೋ ಉದಯೋನ್ಮುಖ ಹಾಗೂ ಉದಯಾಸ್ತ ಸಾಹಿತಿಗಳನ್ನು ಕೊಲೆ ಮಾಡಿವೆ. ಈ ವಿಷಯ ಇನ್ನು ಪೊಲೀಸ್ ಇಲಾಖೆಗೆ ಗೊತ್ತಾಗಿಲ್ಲ. ಇಂಥ ಕೊಲೆಗಳು ಐಪಿಸಿಯ ಯಾವ ಕಲಮಿನೊಳಗೂ ಬರುವುದಿಲ್ಲ ಎಂಬುದೊಂದೇ ಸಮಾಧಾನದ ಸಂಗತಿ. ನೀವು ಬರೆಯಲಾರದ ಮುನ್ನುಡಿಗಳು ಹಾದಿಯನ್ನು ಹಿಡಿಯಲಾರದೇ ಕುಳಿತಿವೆ. 'ಮುನ್ನುಡಿ ಬರೆಯುವುದೆಂದರೆ ತಂತಿಯ ಮೇಲೆ ನಡೆದಂತೆ' ಎಂಬ ನಿಮ್ಮ ಕೈಲಾಗದ ಅನಿಸಿಕೆ, ಕೇವಲ ನಿಮ್ಮದಷ್ಟೇ ಆಗಿದೆ.'

'ಮಾನ್ಯರೆ, ನಿಮಗೆ ಮುನ್ನುಡಿ ಬರೆಯುವುದಾಗುವುದಿಲ್ಲವೆಂದ ಮಾತ್ರಕ್ಕೆ ಕನ್ನಡದ ಲೇಖಕರನ್ನು ಬಯ್ಯುವುದು ಎಷ್ಟು ಸರಿ? ತಂತಿಯ ಮೇಲೆ ಸಾಧ್ಯವಾಗದಿದ್ದರೆ, ಡೊಂಬರಾಟದ ಗುಂಪಿಗೆ ಸೇರಿಕೊಂಡು ತರಬೇತಿ ಪಡೆದುಕೊಳ್ಳಬೇಕಪ್ಪ. ಇದರಲ್ಲಿ ನಿಮ್ಮ ತಪ್ಪೇನೂ ಕಾಣಿಸುವುದೇ ಇಲ್ಲ. ನೀವು ಎಂ.ಎ. ತರಗತಿಯಲ್ಲಿದ್ದಾಗ ನಿಮ್ಮ ಅಧ್ಯಾಪಕರಾದ ಶ್ರೀ ಶಾಂತಿನಾಥ ದೇಸಾಯಿ ಅವರು ನಿಮಗೆ ಶೇಕ್ಸ್‌ಪಿಯರ್, ಡಾಂಟೆ, ಹೋಮರ್, ಎಲಿಯಟ್‌ರನ್ನು ಕಲಿಸಿದಿರೇ ಹೊರತು ಮುನ್ನುಡಿ ಬರೆಯುವುದನ್ನು ಕಲಿಸಲೇ ಇಲ್ಲ. ನಿಮಗೆ ಮುನ್ನುಡಿ ಬರೆಯಲು ಬರದೇ ಇರುವುದು ಕನ್ನಡದ ಅನೇಕ ಮುನ್ನುಡಿ ವಿವರಣೆಗೆ ವರದಾನವಾಗಿದೆ. ಕೆಲವರಂತೂ ಮುನ್ನುಡಿ ಸಾಹಿತಿಗಳೆಂದೇ ಹೆಸರು ಮಾಡಿಕೊಂಡಿದ್ದಾರೆ. ಮುನ್ನುಡಿಯನ್ನು ಬರೆಯಲಾರದ ನೀವು ಪುಸ್ತಕವನ್ನಂತು ಬರೆಯಬಲ್ಲಿರಿ? ಪಠ್ಯಪುಸ್ತಕಗಳನ್ನು ಹೇಗೆ ಬರೆಯಬಲ್ಲಿರಿ? ನೀವು ಮುನ್ನುಡಿ ಬರೆಯಲ್ಲ ಅಂದಿದ್ದಿರಿ. ನೀವು ಮುನ್ನುಡಿ ಬರೆದದ್ದೇ ಆದರೆ ಓದುಗರು ಓದಿಯೇ ತೀರುತ್ತಾರೆಂದು ನಿಮಗೆ ಎಲ್ಲಿಯ ಭರವಸೆ? ಪುಸ್ತಕದ ಪಠ್ಯವನ್ನು ಓದಲಾರದವರು ಮುನ್ನುಡಿ ಕಡೆಗೆ ಕಣ್ಣೆತ್ತಿ ನೋಡುವರೆ? ಆದ್ದರಿಂದ ಇನ್ನು ಮುಂಬರುವ ದಿನಗಳಲ್ಲಿ ನಿಮ್ಮ ಬರೆಯದ ಮುನ್ನುಡಿಗಳ ಮಹಾಗ್ರಂಥವನ್ನು ತಡೆದು ಒಂದೊಂದೇ ಪುಟಗಳನ್ನು ಬಿಚ್ಚುತ್ತಾ ದಾರಿಯಲ್ಲಿ ಚೆಲ್ಲಬಹುದು ನೀವು' ಎಂದು ಅನಾಮಧೇಯ ವ್ಯಕ್ತಿಯಿಂದ ಗಿರಡ್ಡಿಯವರ ನಿಲುವನ್ನು ಮುನ್ನುಡಿ ವಿಷಯವನ್ನಿಟ್ಟುಕೊಂಡು ಕುಟುಕಿದ್ದಾರೆ. ಆದರೆ ಇದು ಹಾಸ್ಯದ ಹೊನಲಿನಲ್ಲಿದೆ ಎಂದು ಕೊನೆಯಲ್ಲಿ ಹೇಳಿಕೊಂಡಿದ್ದಾರೆ.

ಯಾವುದೋ ಒಂದು ನಾಟಕ ನಡೆದಿದೆ ಬೆಂಗಳೂರಿನಲ್ಲಿ. ಪ್ರೇಕ್ಷಾಗೃಹದಲ್ಲಿ ಶ್ರೀ ಸುಬ್ಬಣ್ಣ ಹಾಗೂ ಶ್ರೀ ಬಿ.ವಿ.ಕಾರಂತರು ವಿರಾಜಿಸಿದ್ದಾರೆ. ರಂಗಸ್ಥಳದಲ್ಲಿ ನಾಟಕ ನಡೆದಿದೆ. ನಾಟಕದಲ್ಲಿಯ

ಒಂದು ಪಾತ್ರ ಹೇಳುತ್ತದೆ. 'ನಾನೇ ಇನ್ನು ಮೇಲೆ ಒಂದು ನಾಟಕ ಬರೆಯಬೇಕು' ಕೂಡಲೇ ಕಾರಂತರ ಪ್ರತಿಕ್ರಿಯೆ. 'ಬರೆಯಪ್ಪಾ ಬರೆ... ಏನು ಬರೆಯುತ್ತೀಯೋ ಬರೆ. ನೀನು ಏನೇ ಬರೆದರೂ ಕುರ್ತಕೋಟಿಯವರು ಮುನ್ನುಡಿ ಬರೆದುಕೊಡುತ್ತಾರೆ. ಬರೆ.'

ಆದರೆ ಇಂತಹ ಸಾಹಿತ್ಯಲೋಕದಲ್ಲಿ ವಾಗ್ವಾದಗಳು ನಡೆದಿವೆ. ಗಿರಡ್ಡಿಯವರು ಮುನ್ನುಡಿ ಸಾಹಿತ್ಯದ ಕುರಿತ ನಿಲುವಿನಲ್ಲಿ ಸರಳತೆಯನ್ನು ಹೊಂದಿದ್ದರು. ಆದರೆ ಬೇರೆಯವರ ಮುನ್ನುಡಿ ಸಾಹಿತ್ಯವನ್ನು ಕುರಿತು ಗಮನಿಸಬಹುದು. ಅದರ ಸ್ವರೂಪ, ಚಿಂತನೆ, ಹಲವಾರು ಆಯಾಮಗಳು ಇವೆ, ಎಂಬುದಕ್ಕೆ ಹಲವು ಮುನ್ನುಡಿಗಳಿವೆ ಲಂಕೇಶ್‌ರ ಅಕ್ಷರ ಹೊಸ ಕಾವ್ಯದ ಮುನ್ನುಡಿ, ಅಬಚೂರಿನ ಪೋಸ್ಟಾಫೀಸು ಮುನ್ನುಡಿ, ಗರಿಯ ಮುನ್ನುಡಿ, ಬಿ.ಎಂ.ಶ್ರೀ. ಅವರ ಮುನ್ನುಡಿಗಳು ಸಾಕಷ್ಟಿವೆ. ಇವುಗಳದೇ ಆದ ಸಂಸ್ಕೃತಿ ಚಿಂತನೆ ಇದೆ ಎಂದು ತಿಳಿದುಕೊಳ್ಳಬೇಕಾಗಿದೆ.

### ೨.೧. ಮುನ್ನುಡಿ ಸಾಹಿತ್ಯ: ಪರಿಕಲ್ಪನಾತ್ಮಕ ಚರ್ಚೆ

ಕನ್ನಡ ಸಾಹಿತ್ಯದ ವಿಮರ್ಶೆಯ ಉಪಪ್ರಕಾರವೆಂದೇ ಹೇಳಬಹುದಾದ ಮುನ್ನುಡಿ ಸಾಹಿತ್ಯ ಸಾಹಿತ್ಯವಲಯದಲ್ಲಿ ವಿಶೇಷ ಬರವಣಿಗೆಯಾಗಿ ಹೊಸ ರೂಪ ಪಡೆದುಕೊಂಡಿದೆ. ಸಾಹಿತ್ಯಕ್ಕೆ ಪರಂಪರೆ ಹೇಗೆ ಇದೆಯೋ ಹಾಗೆಯೇ ಮುನ್ನುಡಿಗೂ ಪರಂಪರೆ ಇದೆ. ಆದರೆ ಪ್ರಸ್ತುತ ಅಧ್ಯಯನದ ಮುನ್ನುಡಿಯಲ್ಲಿ ಸಾಂಸ್ಕೃತಿಕ ಚಿಂತನೆಗಳು ಹೇಗೆ ನಡೆದಿವೆ ಎಂಬುದಕ್ಕೆ ಹಲವಾರು ಆಯಾಮಗಳು ಒದಗುತ್ತವೆ. ಹಾಗಾಗಿ ಈ ಅಧ್ಯಯನದ ಶೀರ್ಷಿಕೆಯಲ್ಲಿ 'ಸಾಂಸ್ಕೃತಿಕ' ಎಂಬ ಪರಿಕಲ್ಪನೆಯನ್ನು ಬಳಸಿಕೊಳ್ಳಲಾಗಿದೆ. ಕಳೆದ ಕೆಲವು ದಶಕಗಳಿಂದ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಚಿಂತನ ಸ್ವರೂಪದಲ್ಲಿ ಚರ್ಚೆಯಾಗುತ್ತಿವೆ. ಅದರಲ್ಲಿ ಅತ್ಯಂತ ಹೆಚ್ಚು ಬಳಕೆಯಾಗುತ್ತಿರುವ ಪರಿಕಲ್ಪನೆಯೆಂದರೆ ಸಂಸ್ಕೃತಿ. ಇದು ಎಷ್ಟರಮಟ್ಟಿಗೆ ಜನಪ್ರಿಯವಾಗಿದೆ ಎಂದರೆ ಸಂಸ್ಕೃತಿ ಎಂಬ ಪರಿಕಲ್ಪನೆಯನ್ನು ಹೊರತುಪಡಿಸಿದ ಅಧ್ಯಯನಗಳು ಇಲ್ಲವೇನೊ ಎನ್ನುವಷ್ಟರಮಟ್ಟಿಗೆ ಬಲವಾದ ನಂಬಿಕೆಯಾಗಿ ಸಾಹಿತ್ಯವಲಯದಲ್ಲಿ ಬೇರೂರಿದೆ. ಆದ್ದರಿಂದ ಸಾಹಿತ್ಯದ ಕುರಿತ ಚರ್ಚೆಯಲ್ಲಿ 'ಸಂಸ್ಕೃತಿ'ಯ ಚರ್ಚೆ ಅನಿವಾರ್ಯ ಎಂಬಂತಹ ವಾತಾವರಣ ಸೃಷ್ಟಿಯಾಗಿದೆ. ಇದರಿಂದ 'ಸಂಸ್ಕೃತಿ'ಪದ ಭಾಷೆಯ ಬಳಕೆಯಲ್ಲಿ ಕ್ಲೀಷೆಯಾಗಿ ಸವಕಲಾಗಿ ಹೋಗಿದೆ. ಸಂಸ್ಕೃತಿ ಎಂಬ ಪರಿಕಲ್ಪನೆಯನ್ನು ಬಳಸಿಕೊಳ್ಳುವ ಅಧ್ಯಯನಕಾರರು ತಾವು ಹೇಗೆ ಸಂಸ್ಕೃತಿಯನ್ನು ನಿರ್ಮಿಸಿಕೊಳ್ಳಬೇಕು ಎಂಬುದನ್ನು ಸ್ಪಷ್ಟವಾಗಿ ತಿಳಿಸಿಕೊಡಲು ಗೊಂದಲಕ್ಕೆ ಎಡೆ ಮಾಡಿಕೊಡುತ್ತದೆ. ಈ ತರನಾದ ಅನೇಕ ಸಂದರ್ಭದಲ್ಲಿ ಸಂಸ್ಕೃತಿ ಚರ್ಚೆಗೆ ತಾತ್ವಿಕವಾದ ತಳಹದಿಯು ಕೂಡ ಇರುವುದಿಲ್ಲ. ಇವೆಲ್ಲ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ಸಾಂಸ್ಕೃತಿಕ ಎಂಬ ಪರಿಕಲ್ಪನೆಯನ್ನು ಹೇಗೆ ನಿರ್ವಹಿಸಿಕೊಳ್ಳಲಾಗಿದೆ ಎಂಬುದನ್ನು ವಿವರಿಸಲಾಗಿದೆ.

ಸಂಸ್ಕೃತಿ ಎಂದರೇನು ಎಂಬಂತಹ ಚರ್ಚೆಗೆ ಸಂಬಂಧಿಸಿದಂತೆ ನಮ್ಮಲ್ಲಿ ಸಾಕಷ್ಟು ಅಧ್ಯಯನಗಳು ನಡೆದಿವೆ. ಈಗಲೂ 'ಸಂಸ್ಕೃತಿ'ಯನ್ನು ಸರಿಯಾಗಿ ರೂಪಿಸಿಕೊಂಡಿಲ್ಲ. ಆದರೆ ಬೇರೆ ಬೇರೆ

ವಿಚಾರಧಾರೆಗಳು ಸಂಸ್ಕೃತಿಯನ್ನು ಬೇರೆ ಬೇರೆ ರೀತಿಯಾಗಿ ಆಯ್ದುಕೊಂಡಿದ್ದೇವೆ. ಸನಾತನವಾದಿಗಳ ಹಾಗೂ ಸಾಂಪ್ರದಾಯಿಕರ ಸಂಸ್ಕೃತಿ ಚಿಂತನೆ ನಿರ್ವಹಿಸಿಕೊಳ್ಳುವ ಬಗೆ ಬೇರೆ. ಮಾರ್ಕ್ಸ್‌ವಾದಿಗಳ ಸಂಸ್ಕೃತಿಯ ನಿರ್ವಚನವೇ ಬೇರೆ. ಸಮಾಜಶಾಸ್ತ್ರ, ಮಾನವಶಾಸ್ತ್ರಜ್ಞರ ನಿರ್ವಚನವೇ ಬೇರೆ. ಚರಿತ್ರೆಕಾರರ ಸಂಸ್ಕೃತಿ ಚಿಂತನೆ ಬೇರೆ. ಹಾಗೆಯೇ ಕಾಲ ಕಾಲಕ್ಕೆ ಬೇರೆ ಬೇರೆ ರೀತಿಯಾದ ಚಿಂತನೆ ನಡೆಯುತ್ತವೆ. ಇವೆಲ್ಲದರೊಳಗೆ 'ಸಂಸ್ಕೃತಿ' ಎಂಬ ಪರಿಕಲ್ಪನೆಯ ಅರ್ಥ ಬಳಕೆಯಾಗುವ ಕಾಲಕ್ಕೆ ಬದಲಾಗುತ್ತ ಹೋಗಿದೆ. ಇದರಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬ ಮೌಲ್ಯದ ಚಿಂತನೆ ಕಷ್ಟದ ಹಾದಿಯಾಗಿದೆ. ಇದಕ್ಕಾಗಿ ಅಧ್ಯಯನಗಳು, ವಿಧಾನ, ದೃಷ್ಟಿಕೋನದಿಂದ ಅಧ್ಯಯನಕಾರರ ಮೇಲೆ ನಿಂತಿವೆ. ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ 'ಸಾಂಸ್ಕೃತಿಕ' ಎಂಬ ಪರಿಕಲ್ಪನೆಯಿಂದ ಹಿಡಿಯಾಗಿ ಗ್ರಹಿಸಲಾಗಿದೆ. ಹಾಗೆಯೇ ಮುನ್ನುಡಿ ಸಾಹಿತ್ಯದ ಅಧ್ಯಯನದೊಳಗೆ ವ್ಯಕ್ತಗೊಂಡಿರುವ ಸಾಮಾಜಿಕ, ರಾಜಕೀಯ ಆಯಾಮ, ಸಾಹಿತ್ಯಿಕ ಸ್ವರೂಪ, ಭಾಷೆ, ಶೈಲಿ ಮತ್ತು ಮುನ್ನುಡಿಗಳ ಬರವಣಿಗೆಯ ಕ್ರಮದಲ್ಲಿ ಕನ್ನಡ ಸಾಹಿತ್ಯ ಚಿಂತನೆ ಸ್ವರೂಪದಲ್ಲಿ ಮುನ್ನುಡಿಗಳ ಮೂಲಕ ಸಂಸ್ಕೃತಿಯ ಹುಡುಕಾಟ ಅಧ್ಯಯನಕ್ರಮದಲ್ಲಿ ನಡೆದಿದೆ. ಇವೆಲ್ಲವನ್ನು ಕುರಿತ ಒಟ್ಟಾರೆ ಗ್ರಹಿಕೆಯನ್ನು 'ಸಾಂಸ್ಕೃತಿಕ' ಅಧ್ಯಯನವಾಗಿ ಇಡಿಯಾಗಿ ನಿರ್ವಹಿಸಿಕೊಳ್ಳಲಾಗಿದೆ. ಈ ಆಯಾಮಗಳ ಹುಡುಕಾಟವನ್ನು ಸಾಂಸ್ಕೃತಿಕ ಶೋಧ ಅಥವಾ ಸಾಂಸ್ಕೃತಿಕ ಅಧ್ಯಯನ ಎಂಬ ಸಮಗ್ರದ ನೆಲೆಯಲ್ಲಿ ಗ್ರಹಿಸಿಕೊಳ್ಳಲಾಗಿದೆ. ಈ ಅಧ್ಯಯನದ ಶೀರ್ಷಿಕೆಯಲ್ಲಿ 'ಆಯ್ದ ಮುನ್ನುಡಿಗಳು' ಎಂಬ ಹೆಸರನ್ನು ಸಾಮಾನ್ಯವಾಗಿ ಬಳಸಲಾಗಿದೆ. ಮುನ್ನುಡಿ ಎಂದರೆ ಕೃತಿ ಮತ್ತು ಓದುಗನ ಮಧ್ಯೆ ಸಂಬಂಧವನ್ನು ಕಲ್ಪಿಸುತ್ತದೆ. ಹಾಗೆಯೇ ಮುನ್ನುಡಿ ಕೃತಿಯ ತಿರುಳುನೋಟವಾಗಿದೆ. ಮುನ್ನುಡಿಯ ಮೂಲವನ್ನು ಹುಡುಕುತ್ತ ಹೋದರೆ ಪಾಶ್ಚಿಮಾತ್ಯ ಬರವಣಿಗೆಯ ಕೃತಿಗಳಲ್ಲಿ ಅದು ಆರಂಭಗೊಂಡಿರುವುದು ತಿಳಿಯುತ್ತದೆ.

**ಪಾಶ್ಚಾತ್ಯರ ಪರಿಕಲ್ಪನೆಯಲ್ಲಿ ಮುನ್ನುಡಿ**

ಮೊದಲಿಗೆ ಪಾಶ್ಚಿಮಾತ್ಯ ದೇಶಗಳಲ್ಲಿ ಲೇಖಕರು ಕೃತಿಯ ಮೊದಲಿಗೆ ಬರೆಯುತ್ತಿದ್ದ 'ಪ್ರೊಲಾಗ್' (Prologue) ಎಂಬುದು ಕನ್ನಡದಲ್ಲಿ ಸಂವಾದಿಯಾಗಿ ಪ್ರಸ್ತಾವನೆ, ಪೀಠಿಕೆ ಎಂದು ರೂಪಗೊಂಡಿದೆ. ತದನಂತರ ಸ್ವಲ್ಪ ಕಾಲದಲ್ಲಿ ಈ ಪದಕ್ಕೆ ಹತ್ತಿರವಾಗಿ 'Foreword' ಎಂಬ ಪದ ಬಳಕೆಯಾಯಿತು. ಇದಕ್ಕೆ ಕನ್ನಡದಲ್ಲಿ ಸಂವಾದಿಯಾಗಿ 'ಮುನ್ನುಡಿ' ಎಂಬ ಪರಿಕಲ್ಪನೆ ಬೆಳೆದುಬಂದಿದೆ.

ಆದರೆ ಪ್ರೊಲಾಗ್('ಪೀಠಿಕೆ') ಮತ್ತು ಫೋರ್‌ವರ್ಡ್ಸ್('ಮುನ್ನುಡಿ') ಇವು ಒಂದೇ ಅಂಶಗಳನ್ನು ಹೊಂದಿದ್ದರೂ ಸ್ವಲ್ಪ ವ್ಯತ್ಯಾಸ ಕಂಡುಬರುತ್ತದೆ. ಪೀಠಿಕೆ ಬರವಣಿಗೆಯಲ್ಲಿ ಕೃತಿಯ ಹೊಗಳಿಕೆ ಮತ್ತು ತೆಗಳಿಕೆ ಹಾಗೂ ಬೇರೆ ಬೇರೆ ವಿಷಯಗಳನ್ನು ಚರ್ಚಿಸಲಾಗುವುದಿಲ್ಲ. ಆದರೆ ಮುನ್ನುಡಿಯಲ್ಲಿ ಕೃತಿಯನ್ನು 'ಪ್ರಶಂಸೆ' ಮಾಡುವುದು ಮತ್ತು ಕೃತಿಯ ವಿಮರ್ಶೆ ಮಾಡುವುದು ಹಾಗೂ ಆ ಕೃತಿಯ ಸಮಕಾಲೀನ ಕೃತಿಗಳ ಅಂಶಗಳನ್ನು ಚರ್ಚೆ ಮಾಡುವುದಿದೆ. ಕವಿಯು ಸಾಹಿತ್ಯ ನಿರ್ಮಾಣ

ಮಾಡಿದರೆ ಅದರ ಜೊತೆಗೆ ಮುನ್ನುಡಿಯೂ ಕೂಡ ನಿರ್ಮಾಣಗೊಂಡಂತೆ. ಅಲ್ಲಿ ಕೃತಿಯ ಮೊದಲ ವಿಮರ್ಶೆ ನಡೆಯುತ್ತದೆ. "ಪ್ರಾಚೀನವಾದ ಹೋಮರನ ಕಾವ್ಯಗಳಲ್ಲಿಯೇ ವಿಮರ್ಶೆಯ ಮೊದಲ ಸೂಚನೆಗಳು ಸಿಕ್ಕುತ್ತವೆ. ಕಾವ್ಯ ಹುಟ್ಟುವುದು ಸ್ಫೂರ್ತಿಯ ಪರಿಣಾಮವಾಗಿ. ಅಂಥ ಸ್ಫೂರ್ತಿಯನ್ನು ಕಾವ್ಯದೇವಿಯ ಅನುಗ್ರಹದಿಂದಲೇ ಪಡೆಯಬೇಕಾದದ್ದು. ಈ ನಂಬಿಕೆ ಹಳೆಯದು. ತನ್ನ ಎರಡೂ ಮಹಾಕಾವ್ಯಗಳ ಮೊದಲಲ್ಲಿ ತನಗೆ ಸ್ಫೂರ್ತಿಯನ್ನು ಒದಗಿಸು, ಸತ್ಯವನ್ನು ನುಡಿಸು ಎಂಬ ಪ್ರಾರ್ಥನೆಯನ್ನು ಹೋಮರ್ ಕಾವ್ಯದೇವಿಗೆ ಸಲ್ಲಿಸಿದ್ದಾನೆ. ಹೆಸಿಯೇಡ್ ಕವಿ ತನ್ನ 'ಥಿಯೂಗನಿ' ಎಂಬ ಗ್ರಂಥದ ಮುನ್ನುಡಿಯಲ್ಲಿ ತಾನು ದನ ಕಾಯುತ್ತಿರುವಾಗ ಕಾವ್ಯದೇವಿ ತನ್ನಲ್ಲಿ ಸುರಸಂಗೀತವನ್ನು ಉಸಿರಿಸಿದಳು"[೩೪] ಎಂಬ ಮಾತನ್ನು ಹೇಳಲಾಗಿದೆ. ಈ ಹಿನ್ನೆಲೆಯ ವಿಷಯಗಳನ್ನು ಮುನ್ನುಡಿಯಲ್ಲಿ ಚರ್ಚಿಸಲಾಗುವುದು. ಹಾಗಾಗಿ ಹೋಮರ್ ಕಾವ್ಯದೇವಿಯನ್ನು ಪ್ರಾರ್ಥನೆ ಮಾಡುತ್ತಾನೆ. ಆದರೆ ಹೆಸಿಯೇಡ್ ತಾನು ದನ ಕಾಯುವಾಗ ಕಾವ್ಯ ಎನ್ನುವುದು ಸುರಸಂಗೀತವಾದ ವಿಷಯವನ್ನು ತನ್ನ ನುಡಿಗಳಲ್ಲಿ ಚರ್ಚಿಸಿದ್ದಾರೆ. ಹಾಗಾಗಿ ಪಾಶ್ಚಾತ್ಯರಲ್ಲಿ ಮುನ್ನುಡಿ ಪರಿಕಲ್ಪನೆ, ಕೃತಿಯ ಮೊದಲಲ್ಲಿ ಗಂಭೀರವಾದ, ವಿಚಾರಪೂರ್ಣವಾದ ಕಾವ್ಯ, ಇತರೆ ಬರಹಗಳ ಕುರಿತು ಮುನ್ನುಡಿಯಲ್ಲಿವೆ.

### ಕನ್ನಡದಲ್ಲಿ ಮುನ್ನುಡಿಯ ಪರಿಕಲ್ಪನೆ

ಕನ್ನಡ ಸಾಹಿತ್ಯದ ಮುನ್ನುಡಿ ಬರವಣಿಗೆಯನ್ನು ಗುರುತಿಸುವುದಾದರೆ ಫರ್ಡಿನೆಂಡ್ ಕಿಟೆಲ್ ಅವರು ತಮ್ಮ ಸಂಪಾದಿತ ಕೃತಿ 'ಛಂದೋಂಬುಧಿ'ಗೆ ಬರೆದ ಮುನ್ನುಡಿಯೇ ಮೊದಲನೆಯದು. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಎಂಬ ಪರಿಕಲ್ಪನೆ ಹುಟ್ಟಿದ್ದು ಪಾಶ್ಚಾತ್ಯರಿಂದ. ಏಕೆಂದರೆ ಅವರ ಆಡಳಿತದ ಕಾಲಾವಧಿಯಲ್ಲಿ ಹಸ್ತಪ್ರತಿಗಳ ಶೋಧನೆಯಿಂದ ಕನ್ನಡತ್ವ ಎನ್ನುವ ಹಾದಿ ತೋರಿದವರು. ಹಾಗಾಗಿ ಅವರು ಸಂಪಾದನೆ ಮಾಡಿರುವ ಕೃತಿಗಳಲ್ಲಿ ಮೊದಲು ಬರೆದಿರುವ ಬರವಣಿಗೆಯ ಕ್ರಮ ಮುನ್ನುಡಿಯಾಗಿ ಪರಿಣಮಿಸಿದೆ. ಇದರಿಂದ ಮುನ್ನುಡಿ ಬರೆಯುವುದು ಪರಂಪರೆಯಾಗಿ ಮುಂದುವರಿದಿದೆ. ಆದರೆ ಮುನ್ನುಡಿ ಎಂಬ ಬರವಣಿಗೆ ಕನ್ನಡದ ಮೂಲದ ಹಸ್ತಪ್ರತಿಗಳಲ್ಲಿಯೂ ಕೂಡ ಇತ್ತು. ಅದನ್ನು ಮುನ್ನುಡಿ ಎನ್ನುವುದಕ್ಕೆ ನಮ್ಮಲ್ಲಿ ಯಾವ ತರನಾದ ಪರಿಕಲ್ಪನೆ ಇರಲಿಲ್ಲ. ಏಕೆಂದರೆ ಮೂಲಹಸ್ತಪ್ರತಿಗಳಲ್ಲಿ ಕಾವ್ಯ, ಕಥೆ, ಧರ್ಮಗ್ರಂಥಗಳನ್ನು ಬರೆಯಬೇಕಾದರೆ ತಮ್ಮ ಮೂಲದವರು ಗುರು ಹಿರಿಯರ ನೆನೆಯುವುದು. ತಮ್ಮ ಸಮಕಾಲೀನ ಕೃತಿಗಳ ಬಗ್ಗೆ ಬರೆಯವುದು. ತಂದೆ ತಾಯಿಯನ್ನು ನೆನೆಯುವುದು. ದೇವರ ಹೆಸರಿನಲ್ಲಿ ಮತ್ತು ತಮಗೆ ಪ್ರಭಾವ ಬೀರಿದ ಭಾಷೆ, ಸಂಸ್ಕೃತಿ, ಕವಿಗಳು, ಪರಿಸರ, ಇತ್ಯಾದಿ ವಿಷಯಗಳನ್ನು ನೆನೆದು ಆ ನಂತರ ತಮ್ಮ ಕಾವ್ಯ ಅಥವಾ ಗ್ರಂಥಗಳನ್ನು ಬರೆಯುವುದಕ್ಕೆ ಪ್ರಾರಂಭ ಮಾಡುತ್ತಿದ್ದರು. ಈ ಬರವಣಿಗೆ ಕ್ರಮವನ್ನು ಮುನ್ನುಡಿ ಎಂದು ಮೂಲದಲ್ಲಿ ಅವರು ಕರೆದಿಲ್ಲ. ಆದರೆ ಪಾಶ್ಚಿಮಾತ್ಯರ ಪರಿಕಲ್ಪನೆಯಿಂದ ಕನ್ನಡದಲ್ಲಿ ಕೂಡ ಪ್ರಾಚೀನ ಕಾಲದಲ್ಲಿ ಹಸ್ತಪ್ರತಿಗಳಲ್ಲಿ ಈ ತರನಾದ ಬರವಣಿಗೆ ಇದೆ ಎಂದು ಗುರುತಿಸಬಹುದು. ಇದನ್ನು ಮುನ್ನುಡಿ ಪರಿಕಲ್ಪನೆ ಎಂದು ನಾವು ಈ ಅಧ್ಯಯನದ ಮೂಲಕ ಗ್ರಹಿಸಿಕೊಳ್ಳಬೇಕಾಗಿದೆ.

ಇದರಿಂದ ಪ್ರಾಚೀನ ಕಾಲದಲ್ಲಿ ಮುನ್ನುಡಿ ಶೀರ್ಷಿಕೆಗಳು ಹೀಗಿವೆ. "'ದೇವರ ಹೆಸರಿನಲ್ಲಿ', 'ಇಷ್ಟದೈವ ಪ್ರಾರ್ಥನೆ', 'ಗುರುಸ್ತುತಿ', 'ಪೂರ್ವಸೂರಿಗಳ ಕೀರ್ತಿ', 'ತೋರಣನಾಂದಿ', 'ಉಪೋದ್ಘಾತ', 'ಗುರುವಂದನೆ', 'ಇತಿವೃತ್ತ', 'ಕವಿಕಾವ್ಯ ಪರಿಚಯ', 'ಕವಿಗಳ ಸ್ಮರಣೆ,"[೩೫] ಎಂದು ಗುರುತಿಸಲಾಗಿದೆ. ಇವುಗಳನ್ನು ಪ್ರಾಚೀನ ಮುನ್ನುಡಿಗಳೆಂದು ಗುರುತಿಸಲಾಗಿದೆ. ಹೀಗಾಗಿ ಪಾಶ್ಚಾತ್ಯ ಸಾಹಿತ್ಯದ ಬರವಣಿಗೆಯ ಪರಿಕಲ್ಪನೆಯಿಂದ ಇದನ್ನು ಗುರುತಿಸಲು ಸಾಧ್ಯವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಅಸ್ತಿತ್ವಪಡೆದು ಹೇಗೆ ಮುಂದುವರಿಯಿತು ಎನ್ನುವುದನ್ನು ಪಾಶ್ಚಿಮಾತ್ಯರಿಂದ ಮೊದಲುಗೊಂಡು ಹಸ್ತಪ್ರತಿಗಳನ್ನು ಮೌಲ್ಯಕ್ಕೊಳಪಡಿಸಿ ಸಂಪಾದನೆ ಮಾಡುವಾಗ ಗಮನಿಸಬಹುದು. ಕೃತಿ ಸಂಪಾದನೆಯ ನಂತರ ಆ ಗ್ರಂಥವನ್ನು ಇಡಿಯಾಗಿ, ಸಾರಾಂಶ ಪ್ರಧಾನವಾಗಿ, ಪರಿಚಯಾತ್ಮಕವಾಗಿ ಲೋಪದೋಷಗಳನ್ನು ತಿದ್ದುವುದು, ಸಂಪಾದನೆ ಮಾಡುವಾಗ ಕೆಲವು ಅನುಭವಗಳನ್ನು ಹಂಚಿಕೊಳ್ಳುವುದು, ಕೃತಿಯ ಕುರಿತು ಪ್ರಶಂಸಾತ್ಮಕ ಮಾತುಗಳು, ವಾಗ್ವಾದಗಳಾಗಿ ಚರ್ಚೆ ಮಾಡುವುದು ಇತ್ಯಾದಿಯಾಗಿ ಇಂತಹ ಸನ್ನಿವೇಶಗಳನ್ನು ಮುನ್ನುಡಿಯ ಭಾಗದಲ್ಲಿ ಚರ್ಚಿಲಾಗಿದೆ. ಹಾಗೆಯೇ ಈ ಸಂದರ್ಭದಲ್ಲಿ ಹಸ್ತಪ್ರತಿಗಳಲ್ಲಿರುವ ಮೇಲುನುಡಿಯ ಶೀರ್ಷಿಕೆಗಳ ಮೂಲಕ ಮುನ್ನುಡಿ ಬರೆದಿರುವುದನ್ನು ಕಾಣುತ್ತೇವೆ. ಉದಾಹರಣೆಗೆ: 'ಕರ್ಣಾಟ ಭಾರತ ಕಥಾಮಂಜರಿ' ಕೃತಿಗೆ ಕುವೆಂಪು ಅವರ, "ತೋರಣನಾಂದಿ"[೩೬] ಮುನ್ನುಡಿ ಶೀರ್ಷಿಕೆಯಾಗಿದೆ. ಹಾಗೆಯೇ "ಉಪೋದ್ಘಾತ, ಇತಿವೃತ್ತ, ಪೂರ್ವಸೂರಿಗಳು, ಕವಿಕಾವ್ಯ ಪರಿಚಯ"[೩೭] ಹೆಸರುಗಳ ಮೂಲಕ ಸಂಪಾದನೆ ಮಾಡುವಾಗ ಮುನ್ನುಡಿಗಳಾಗಿ ಬಳಸಲಾಗುತ್ತದೆ.

ಮುನ್ನುಡಿ ಬರವಣಿಗೆ ಮುಂದುವರಿದಂತೆ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಸಮಕಾಲೀನ ಸಂದರ್ಭಗಳಲ್ಲಿ ಮುನ್ನುಡಿ ಹೇಗೆ ಶೀರ್ಷಿಕೆಗಳಾಗಿ ಬರೆಯಲಾಗಿದೆ ಎಂಬುದನ್ನು ಪರಿಶೀಲಿಸಲಾಗಿದೆ. ಅಂದರೆ ಪ್ರಸ್ತಾವನೆ, ಮುನ್ನುಡಿ, ಮೊದಲ ಮಾತು, ಮುಮ್ಮಾತು, ನುಡಿಯ ಮಾತು, ನುಡಿಯ ಬೆಳಗು, 'ಮೊದಲ ನುಡಿ', 'ಪೀಠಿಕೆ,' "ಧ್ಯಾನಸ್ಥ ಬುಗುರಿ,"[೩೮] "ಹಳೆಬೇರು ಹೊಸಚಿಗುರು,"[೩೯] "ಹೊಸದಿಗಂತದೆಡೆಗೆ,"[೪೦] 'ನನ್ನೊಳಗಿನ ಮಾತು,' 'ಸಂಪಾದಕೀಯ ಮಾತು,' "ಒಂದುಬಗೆಯ ಮುನ್ನುಡಿ,"[೪೧] "ಉತ್ಪ್ರೇಕ್ಷೆ ಅಲಂಕಾರ ಚಕ್ರವರ್ತಿ,"[೪೨] "ನಿಮ್ಮ ಉಸಿರು ನನ್ನ ಕವಿತೆ,"[೪೩] "ಮೊಗ್ಗು ಮೊಗ್ಗಿಗೆ ಸೂಜಿ ಸೂಜಿ,"[೪೪] ಇತ್ಯಾದಿಯಾಗಿ ಮುನ್ನುಡಿಯ ಶೀರ್ಷಿಕೆಗಳನ್ನು ಬರೆಯಲಾಗಿದೆ. ಈ ಶೀರ್ಷಿಕೆಗಳ ಭಾಗವಾಗಿ ಮುನ್ನುಡಿ ಎಂಬುದು ಈ ಅಧ್ಯಯನದ ಪರಿಕಲ್ಪನೆಯಾಗಿದೆ. ಅತಿ ಹೆಚ್ಚಾಗಿ 'ಮುನ್ನುಡಿ' ಎಂಬ ಶೀರ್ಷಿಕೆಯಲ್ಲಿ ಬರೆಯಲಾಗಿದೆ.

ಇನ್ನೊಂದು ವಿಚಾರವೇನೆಂದರೆ ಮುನ್ನುಡಿಯ ಕನ್ನಡ ಸಾಹಿತ್ಯ ಕೃತಿಗಳಲ್ಲದೆ ಇನ್ನಿತರ ಚರಿತ್ರೆ, ಸಮಾಜಶಾಸ್ತ್ರ, ವಿಜ್ಞಾನ, ಅರ್ಥಶಾಸ್ತ್ರ, ರಾಜಕೀಯಶಾಸ್ತ್ರ, ಮಾನವಶಾಸ್ತ್ರ, ಸಂಗೀತ, ಚಿತ್ರಕಲೆ ಹಾಗೂ ತಿಂಗಳ ಪತ್ರಿಕೆ, ವಾರದ ಪತ್ರಿಕೆ, ಮೂರು ಮತ್ತು ಆರು ತಿಂಗಳು ಅಥವಾ ವಾರ್ಷಿಕ ಪತ್ರಿಕೆಗಳಲ್ಲಿ ಕೃತಿಯ ರೂಪದಲ್ಲಿ ಪ್ರಕಟವಾಗುವಂತಹವುಗಳು. ಇವುಗಳಿಗೆ ಸಾಮಾನ್ಯವಾಗಿ ಮುನ್ನುಡಿ

ಬರೆಯಲಾಗಿರುತ್ತದೆ. ಹಾಗೆಯೇ ಸರಕಾರದ ಶ್ವೇತಪತ್ರಗಳಲ್ಲಿ 'ಪ್ರಸ್ತಾವನೆ' ಹಾಗೂ ಕಾರ್ಯಕ್ರಮದಲ್ಲಿ 'ಪ್ರಾಸ್ತಾವಿಕ ಮಾತು' ಎನ್ನುವುದು ಒಂದು ರೀತಿಯಲ್ಲಿ ಮುನ್ನುಡಿಯ ಅಂಶಗಳನ್ನು ಹೊಂದಿವೆ. ಇವೆಲ್ಲವುಗಳು ಮುನ್ನುಡಿಯ ರೂಪದಲ್ಲಿರುತ್ತವೆ. ಆದರೆ ನನ್ನ ಅಧ್ಯಯನದ ವ್ಯಾಪ್ತಿ ಪ್ರಮುಖ ಸಾಹಿತ್ಯ ಕೃತಿಗಳನ್ನು ಅನುಲಕ್ಷಿಸಿ ಆಯ್ದ ಮುನ್ನುಡಿಗಳ ಕುರಿತು ಅಧ್ಯಯನ ಮಾಡಲಾಗಿದೆ.

ಮುನ್ನುಡಿ ಸಾಹಿತ್ಯ ಉಗಮವಾಗಬೇಕೆಂದರೆ ಕೃತಿಯು ಮೊದಲು ರಚನೆಯಾಗಿರಬೇಕು. ಆದರೆ ಮುನ್ನುಡಿ ಬರೆಯಲಾಗದ ಎಷ್ಟೋ ಕೃತಿಗಳು ಇವೆ. ಅವುಗಳಲ್ಲಿ ಕಾದಂಬರಿಗಳು ಹೆಚ್ಚಾಗಿವೆ ಎಂದು ಹೇಳಬಹುದು. ಆದರೆ ಪ್ರತಿಯೊಂದು ಕೃತಿಗೂ ಲೇಖಕರ ಅಥವಾ ವಿಮರ್ಶಕರ ಮುನ್ನುಡಿ ಸಾಮಾನ್ಯವಾಗಿ ಇರುತ್ತದೆ. ಅದರ ಸ್ವರೂಪ ಬೇರೆ ಬೇರೆ ನೆಲೆಯಲ್ಲಿರುತ್ತದೆ. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಗಳಿಗೆ ಚರಿತ್ರೆ ಇದೆ. ಪರಂಪರೆಯಿದೆ. ಹಾಗೆಯೇ ಮುನ್ನುಡಿಗಳ ಕುರಿತಂತೆ ಅಧ್ಯಯನಗಳಾಗಿರುವುದು ಅತ್ಯಂತ ಕಡಿಮೆ ಎಂದು ಹೇಳಬಹುದು. ಆದರೆ ಮುನ್ನುಡಿಗಳ ಕುರಿತು ಲೇಖನಗಳಿವೆ. ಮುನ್ನುಡಿ ಸಂಕಲನಗಳಿವೆ. ಮುನ್ನುಡಿಗಳನ್ನು ಪ್ರತ್ಯೇಕ ಅಧ್ಯಯನ ಮಾಡುವಷ್ಟು ವಿಸ್ತೃತವಾಗಿ ಬೆಳೆದಿದೆ. ಇದರಿಂದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹೊಸದಾಗಿ ರೂಪಿಸಿಕೊಳ್ಳುವುದಕ್ಕೆ ಮುನ್ನುಡಿಯ ಸಾಹಿತ್ಯ ಅವಕಾಶ ಒದಗಿಸಿದೆ. ಯಾವುದೇ ಕೃತಿಯ ಕುರಿತ ಮೊದಲ ಮಾತು, ಮೊದಲ ವಿಮರ್ಶೆ, ಮೊದಲ ಅಭಿಪ್ರಾಯ ಆಗಿವೆ. ಹಾಗಾದರೆ ಮುನ್ನುಡಿಯನ್ನು ಸಾಹಿತ್ಯ ಪ್ರಕಾರವೆಂದು ಹೇಳಬಹುದು ಅಥವಾ ಸಾಹಿತ್ಯ ರೂಪವೆಂದು ಹೇಳಬಹುದು. ಆದರೆ ಸಾಹಿತ್ಯವಲಯದಲ್ಲಿ ಮುನ್ನುಡಿಯಂತಹ ಬರವಣಿಗೆ ಇರಬೇಕಾದರೆ ಯಾವುದೇ ಪ್ರಕಾರದ ಕೃತಿಯೂ ಮುಖ್ಯವಾಗಿರುತ್ತದೆ. ಹಾಗಾಗಿ ಮುನ್ನುಡಿಯನ್ನು 'ಸಾಹಿತ್ಯ ರೂಪ' ಅಥವಾ ಸಾಹಿತ್ಯ ವಿಮರ್ಶೆಯ ಉಪಪ್ರಕಾರವೆಂದು ಹೇಳಬಹುದು. ಏಕೆಂದರೆ ಕೃತಿಯ ಮೌಲ್ಯ ಕಟ್ಟುವುದು ಮುನ್ನುಡಿಯಲ್ಲಿದೆ. ಓದುಗರು ಯಾವುದೇ ವಿಷಯಕ್ಕೆ ಸಂಬಂಧಿಸಿದಂತಹ ಕೃತಿಯನ್ನು ಕೈಗೆತ್ತಿಕೊಂಡಾಗ ಸಾಮಾನ್ಯವಾಗಿ ಮೊದಲು ಮುನ್ನುಡಿಯನ್ನು ನೋಡುತ್ತಾರೆ. ಯಾರ ಮುನ್ನುಡಿ ಎನ್ನುವ ಸಂಗತಿಯು ಕೃತಿಯ ಬಗೆಗಿನ ಒಂದು ಅಭಿಪ್ರಾಯವನ್ನು ರೂಪಿಸುತ್ತದೆ. ಆ ನಂತರ ಮುನ್ನುಡಿಯನ್ನು ಓದಿದರೆ ಅದೇ ಕೃತಿಯ ಕುರಿತು ಮತ್ತೊಂದು ಅಭಿಪ್ರಾಯ ರೂಪಗೊಳ್ಳುತ್ತದೆ. ಆದರೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿ ಸಾಹಿತ್ಯವು ಮೊದಲು ಸಂಪಾದಿತ ಕೃತಿಗಳಲ್ಲಿ ಪ್ರಕಟವಾಯಿತು. ಈ ಕೃತಿಗಳಲ್ಲಿ ಮುನ್ನುಡಿಗಳು ಮಹತ್ವದ ಸ್ಥಾನ ವಹಿಸಿಕೊಳ್ಳುತ್ತವೆ. ಹಾಗಾಗಿಯೇ ಮುನ್ನುಡಿ ಪರಂಪರೆ ಬೆಳೆದಿದೆ ಎಂದರೆ ಅದು ಸಂಪಾದಿತ ಕೃತಿಗಳ ಪರಿಕಲ್ಪನೆಯಿಂದಾಗಿದೆ.

ಮುನ್ನುಡಿ ಹುಟ್ಟಿದ್ದು ಪಾಶ್ಚಿಮಾತ್ಯರ ಹಿನ್ನೆಲೆಯಿಂದ ಎಂಬ ಅಪಕಲ್ಪನೆಯಿಂದ ಮುನ್ನುಡಿ ಸಾಹಿತ್ಯವನ್ನು ಅಲ್ಲಗಳೆದು ಅಪವಾದವೆಂಬಂತೆ ಹೇಳುವವರು ಇದ್ದಾರೆ. ಹಾಗೆಯೇ ಮುನ್ನುಡಿ ಸಾಹಿತ್ಯ ಹೀಗಿರಬೇಕು ಎಂದು ಹೇಳುವವರಿದ್ದಾರೆ. ಏನೇ ಆಗಲಿ ಮುನ್ನುಡಿಗಳ ಚರಿತ್ರೆ ಒಂದು ಕುತೂಹಲಕಾರಿಯಾದ ಸಂಗತಿಯಾಗಿದೆ. ಏಕೆಂದರೆ ಮುನ್ನುಡಿ ಸಾಹಿತ್ಯ ಸಾಂಸ್ಕೃತಿಕವಾಗಿ

ಸಂವೇದನೆಯನ್ನು ಮೂಡಿಸುತ್ತದೆ. ಒಟ್ಟಾರೆಯಾಗಿ ಮುನ್ನುಡಿಗಳಲ್ಲಿ ಕೆಲವು ಆ ಕೃತಿಯನ್ನು ಕುರಿತವು ಎಂಬ ಆರೋಪ ಇದ್ದರೂ ಕೆಲವು ಮುನ್ನುಡಿಗಳು ವಿಮರ್ಶೆಯನ್ನು ಕಟ್ಟುವಲ್ಲಿ ಮಹತ್ವದ ಕೆಲಸವನ್ನು ಮಾಡಿವೆ. ಮುನ್ನುಡಿಯ ಪರಿಕಲ್ಪನೆಯಲ್ಲಿ ಎರಡು ಬಗೆಗಳಿವೆ.

೧. ಲೇಖಕರೇ ಬರೆದುಕೊಳ್ಳುವ ಮುನ್ನುಡಿಗಳು

೨. ಅನ್ಯ ಲೇಖಕರು ಬರೆಯುವ ಮುನ್ನುಡಿಗಳು

ಮುನ್ನುಡಿ ಸಾಹಿತ್ಯದ ಸ್ವರೂಪ ಹಲವು ಅರ್ಥಗಳನ್ನು ಒಳಗೊಂಡಿದೆ. ಕೆಲವರ ದೃಷ್ಟಿಯಲ್ಲಿ ಅದು ಕೃತಿ ವಿಮರ್ಶೆಯಾದರೆ ಇನ್ನೊಂದು ಅರ್ಥದಲ್ಲಿ ಮುನ್ನುಡಿಯೆಂಬುದು ಲೇಖಕರು ಕೃತಿಯನ್ನು ಪರಿಚಯ ಮಾಡಿಕೊಡುವ ಸುಲಭವಾದ ಉಪಾಯವಾಗಿದೆ. ಮುನ್ನುಡಿಯು ಕೃತಿಯ ಮೊಟ್ಟಮೊದಲ ಅಭಿಪ್ರಾಯವಾಗಿದೆ. ಹೀಗಾಗಿ ಕೆಲವೊಮ್ಮೆ ಮುನ್ನುಡಿಗಳಲ್ಲಿ ಲೇಖಕರನ್ನು ಕುರಿತಾದ ಅತಿಯಾದ ಪ್ರಶಂಸೆ ಇರುತ್ತದೆ. ಇಲ್ಲವೇ ಟೀಕೆಯೂ ಇರುತ್ತದೆ. ಆದ್ದರಿಂದಲೇ ಅನೇಕರು ಮುನ್ನುಡಿಗಳನ್ನು ಓದುವುದಿಲ್ಲ. ಓದುವವರಾದರೂ ಲಕ್ಷ್ಯವಿಟ್ಟು ಓದುವುದಿಲ್ಲ. ಹಾಗೆಯೇ ಕೆಲವು ಹೇಳಿಕೆಗಳನ್ನು ನಂಬಬಹುದಾದ ಸತ್ಯವೆಂದು ಸ್ವೀಕರಿಸುವುದಿಲ್ಲ. ಕೆಲವು ಮುನ್ನುಡಿಗಳನ್ನು ಹೀಗೆ ಭಾವಿಸಬೇಕಾಗಿಲ್ಲ ಎಂದು ಹೇಳಬಹುದು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬರೆದ ಎಲ್ಲಾ ಮುನ್ನುಡಿಗಳು ಪ್ರಕಟವಾಗಿವೆಯೇ ಎಂದು ಹುಡುಕಿದರೆ ನಿಷ್ಠುರವಾಗಿ ಕಟುವಾಗಿ ವಿಮರ್ಶೆ ಮಾಡಿದ ಎಷ್ಟೋ ಮುನ್ನುಡಿಗಳು ಪ್ರಕಟವಾಗಿರದೇ ಇವೆ. ಅಂಥವುಗಳು ಪ್ರಕಟವಾಗಿದ್ದರೆ ಮುನ್ನುಡಿ ಸಾಹಿತ್ಯಕ್ಕೆ ಮತ್ತಷ್ಟು ಮೆರುಗು ಬರುತ್ತಿತ್ತು. ಮುನ್ನುಡಿ ಸಾಹಿತ್ಯ ಕೆಲವೇ ಪುಟಗಳನ್ನು ಹೊಂದಿದ್ದರೂ ಅದರ ಸ್ವರೂಪ ಮತ್ತು ಮಹತ್ವವನ್ನು ಓದುಗರು ಮುನ್ನುಡಿ ಮೀಮಾಂಸೆಯಾಗಿ ಅರ್ಥ ಮಾಡಿಕೊಳ್ಳುವುದರ ಜೊತೆಗೆ ಹೊಸ ದಿಕ್ಕಿನ ಪರಿಕಲ್ಪನೆಯಾಗಿ ಕಾಣಬೇಕಾಗಿದೆ.

**ಕೊನೆಟಿಪ್ಪಣಿಗಳು**

೧. ಕೆ.ಪಿ.ಪೂರ್ಣಚಂದ್ರ ತೇಜಸ್ವಿ, **ಅಬಚೂರಿನ ಪೋಸ್ಟಾಫೀಸು**, ಪುಟ, ಮುನ್ನುಡಿ ಭಾಗ.

೨. ನಾರಾಯಣ ಕೆ.ವಿ., **ಬೇರು ಕಾಂಡ ಚಿಗುರು**, ಪುಟ, ಮುನ್ನುಡಿ ಭಾಗ.

೩. ನರಸಿಂಹಸ್ವಾಮಿ ಕೆ.ಎಸ್., **ಮೈಸೂರು ಮಲ್ಲಿಗೆ**, ಪುಟ, ಮುನ್ನುಡಿ ಭಾಗ.

೪. ಗುರುಲಿಂಗ ಕಾಪಸೆ(ಸಂ), **ಶತಮಾನದ ಲಲಿತಪ್ರಬಂಧ**, ಪುಟ–೨೨೩.

೫. ಗಿರಡ್ಡಿ ಗೋವಿಂದರಾಜ, **ಹಿಡಿಯದ ಹಾದಿ**, ಪುಟ, ಮುನ್ನುಡಿ ಭಾಗ.

೬. ಅದೇ ಪುಟ, ಮುನ್ನುಡಿ ಭಾಗ, ೫೫.

೭. ರಾಮಲಿಂಗಪ್ಪ ಟಿ. ಬೇಗೂರು, **ಮಾರ್ಗಾಂತರ**, ಪುಟ–೭೩.

೮. ಚಂದ್ರಶೇಖರ ಪಾಟೀಲ್(ಸಂ), **ಸಂಕ್ರಮಣ ಸಾಹಿತ್ಯ**(ಸಂ–೦೩), ಪುಟ–೬.

೯. ಸತ್ಯನಾರಾಯಣ ಕೆ., ಕಸ್ತೂರಿ ಮಾಸಪತ್ರಿಕೆ ಲೇಖನ, **ಮುನ್ನುಡಿ ಮಹಿಮೆ**–೨೦೧೫, ಪುಟ–೫೪.

೧೦. ದೇ.ಜ.ಗೌ., **ಮುನ್ನುಡಿ ಕನ್ನಡಿ ಉಲ್ಲೇಖ**, ಪುಟ, ಮುನ್ನುಡಿ ಭಾಗ.

೧೧. ಅದೇ ಪುಟ, ಮುನ್ನುಡಿ ಭಾಗ.

೧೨. ಮುಗಳಿ.ರಂ.ಶ್ರೀ., **ಕನ್ನಡ ಸಾಹಿತ್ಯ ವಿಮರ್ಶೆಯ ತಾತ್ವಿಕ ವಿವೇಚನೆ**, ಪುಟ-೨೭೬.

೧೩. ರಾಮಲಿಂಗಪ್ಪ ಟಿ. ಬೇಗೂರು, **ಮಾರ್ಗಾಂತರ**, ಪುಟ-೭೪.

೧೪. ದೇ.ಜ.ಗೌ., **ಮುನ್ನುಡಿ ಕನ್ನಡಿ ಉಲ್ಲೇಖ**, ಪುಟ-೧.

೧೫. ಕುವೆಂಪು, **ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ**, ಪುಟ, ಮುನ್ನುಡಿ ಭಾಗ.

೧೬. ದಂಡಪ್ಪ ಎಚ್.(ಸಂ), **ಸುವರ್ಣ ಸಾಹಿತ್ಯ ವಿಮರ್ಶೆ**, ಪುಟ, ಮುನ್ನುಡಿ ಭಾಗ.

೧೭. ರಹಮತ್ ತರೀಕೆರೆ, **ಇಲ್ಲಿ ಯಾರೂ ಮುಖ್ಯರಲ್ಲ**, ಪುಟ-೧.

೧೮. ಅದೇ, ಪುಟ-೧.

೧೯. ಮುಗಳಿ ರಂ.ಶ್ರೀ., **ಕನ್ನಡ ಸಾಹಿತ್ಯ ವಿಮರ್ಶೆಯ ತಾತ್ವಿಕ ವಿವೇಚನೆ**, ಪುಟ-೨೭೬.

೨೦. ದೇ.ಜ.ಗೌ., **ಕುವೆಂಪು ದರ್ಶನ(ಸಂ-೩)**, ಪುಟ-೭೬೩.

೨೧. ಅದೇ, ಪುಟ-೭೬೩.

೨೨. ಕುವೆಂಪು(ಸಂ), **ಕರ್ಣಾಟ ಭಾರತ ಕಥಾಮಂಜರಿ**, ಪುಟ, ಮುನ್ನುಡಿ ಭಾಗ.

೨೩. ರಾಮಲಿಂಗಪ್ಪ ಟಿ. ಬೇಗೂರು, **ಮಾರ್ಗಾಂತರ**, ಪುಟ-೭೩.

೨೪. ಅದೇ, ಪುಟ-೭೪.

೨೫. ಗಿರಡ್ಡಿ ಗೋವಿಂದರಾಜ, **ಹಿಡಿಯದ ಹಾದಿ**, ಮುನ್ನುಡಿ, ಪುಟ-೪೧.

೨೬. ಗಿರಡ್ಡಿ ಗೋವಿಂದರಾಜ, **ಸಾಹಿತ್ಯ ಲೋಕದ ಸುತ್ತಮುತ್ತ**, ಪುಟ-೩೧.

೨೭. ರಾಮಲಿಂಗಪ್ಪ ಟಿ. ಬೇಗೂರು, **ಮಾರ್ಗಾಂತರ**, ಪುಟ-೭೬.

೨೮. ಮಾಸ್ತಿ ವೆಂಕಟೇಶ ಅಯ್ಯಂಗಾರ್, **ಪೂಜನ**, ಪುಟ, ಮುನ್ನುಡಿ ಭಾಗ.

೨೯. ಗಿರಡ್ಡಿ ಗೋವಿಂದರಾಜ, **ಹಿಡಿಯದ ಹಾದಿ**, ಮುನ್ನುಡಿ ಪುಟ-೪೭.

೩೦. ಅದೇ, ಪುಟ-೪೭.

೩೧. ಅದೇ, ಪುಟ-೫೧.

೩೨. ಗುರುಲಿಂಗ ಕಾಪಸೆ, **ಶತಮಾನದ ಲಲಿತಪ್ರಬಂಧ**, ಪುಟ-೨೨೪.

೩೩. ಗಿರಡ್ಡಿ ಗೋವಿಂದರಾಜ, **ಸಾಹಿತ್ಯ ಲೋಕದ ಸುತ್ತಮುತ್ತ**, ಪುಟ-೩೨.

೩೪. ಇನಾಂದಾರ್ ವಿ.ಎಂ., **ಪಾಶ್ಚಾತ್ಯ ಕಾವ್ಯಮೀಮಾಂಸೆ**, ಪುಟ-೧೩.

೩೫. ದೇ.ಜ.ಗೌ., **ಮುನ್ನುಡಿ ಕನ್ನಡಿ ಉಲ್ಲೇಖ**, ಪುಟ, ಮುನ್ನುಡಿ ಭಾಗ.

೩೬. ಕುವೆಂಪು(ಸಂ), **ಕರ್ಣಾಟ ಭಾರತ ಕಥಾಮಂಜರಿ**, ಪುಟ, ಮುನ್ನುಡಿ ಭಾಗ.

೩೭. ದೇ.ಜ.ಗೌ., ಮುನ್ನುಡಿ ಕನ್ನಡಿ ಉಲ್ಲೇಖ, ಪುಟ, ಮುನ್ನುಡಿ ಭಾಗ.

೩೮. ರಾಘವೇಂದ್ರರಾವ್.ಎಚ್.ಎಸ್, ನಮಸ್ಕಾರ, ಪುಟ–೭೫.

೩೯. ನಾರಾಯಣ ಕೆ.ವಿ., ಬೇರು ಕಾಂಡ ಚಿಗುರು, ಪುಟ–೦೫.

೪೦. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ಪುಟ, ಮುನ್ನುಡಿ ಭಾಗ.

೪೧. ಲಂಕೇಶ್ ಪಿ., ಪಾಪದ ಹೂಗಳು, ಪುಟ–೦೫.

೪೨. ಸಿದ್ಧಲಿಂಗಯ್ಯ, ನನ್ನ ಜನಗಳು, ಪುಟ, ಮುನ್ನುಡಿ ಭಾಗ.

೪೩. ನರಸಿಂಹಸ್ವಾಮಿ ಕೆ.ಎಸ್., ಮಲ್ಲಿಗೆ ಮಾಲೆ, ಪುಟ, ಮುನ್ನುಡಿ ಭಾಗ.

೪೪. ಪ್ರತಿಭಾ ನಂದಕುಮಾರ್, ಸಮಗ್ರ ಕಾವ್ಯ, ಪುಟ–೦೫.

ಅಧ್ಯಾಯ ಮೂರು

# ಮುನ್ನುಡಿ ಸಾಹಿತ್ಯ: ಚಾರಿತ್ರಿಕ ಬೆಳವಣಿಗೆ

ಅಧ್ಯಾಯ ಮೂರು

# ಮುನ್ನುಡಿ ಸಾಹಿತ್ಯ: ಚಾರಿತ್ರಿಕ ಬೆಳವಣಿಗೆ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿಗಳು ಅದೇ ಒಂದು ಸಾಹಿತ್ಯ ಪ್ರಕಾರವೆಂಬಂತೆ ವಿಪುಲವಾಗಿ ಬೆಳೆದಿದ್ದು ಚಾರಿತ್ರಿಕ ದಾಖಲೆಯಾಗಿದೆ. ಆದರೆ ಈ ಮುನ್ನುಡಿಯ ಚಾರಿತ್ರಿಕ ದಾಖಲೆಯನ್ನು ಹುಡುಕುತ್ತಾ ಹೋದರೆ, ಮೊದಲು ಮುನ್ನುಡಿಗೆ ಪ್ರಮುಖ ಸ್ಥಾನ ಸಿಕ್ಕಿರುವುದು ಪಾಶ್ಚಿಮಾತ್ಯ ಸಾಹಿತ್ಯದ ನೆರಳಿನಲ್ಲಿ ಎಂದು ಹೇಳಬಹುದು. ಏಕೆಂದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಲೇಖಕರು ಕೃತಿ ಮೊದಲಿಗೆ "ಪ್ರೋಲಾಗ್" ಎಂದು ಬರೆಯುತ್ತಿದ್ದರು. ಇದಕ್ಕೆ ಕನ್ನಡದಲ್ಲಿ ಸಂವಾದಿಯಾಗಿ 'ಪೀಠಿಕೆ', 'ನಾಂದಿ', 'ಮೊದಲ ಮಾತು' ಎಂಬ ಅರ್ಥಗಳಿವೆ. ಈ ತರಹದ ಬರವಣಿಗೆಯ ಶೈಲಿ ಮುಂದುವರಿದಂತೆ ಮುನ್ನುಡಿಯಂತಹ ಬರವಣಿಗೆಗೆ ತಿರುಗಿರಬಹುದು. ಈ ಎರಡು ಪದಗಳು ಒಂದನ್ನೇ ಸೂಚಿಸುತ್ತವೆ. ಹಾಗೆಯೇ ಉದ್ದೇಶವೂ ಒಂದೇ ಆಗಿದೆ. ಹಾಗಾಗಿ 'ಮುನ್ನುಡಿ'ಯ(Foreword) ಬರವಣಿಗೆಯಾಗಿ ಮುಂದುವರಿದಿದೆ.

ಪಾಶ್ಚಿಮಾತ್ಯರು ಭಾರತಕ್ಕೆ ಬಂದ ಸಂದರ್ಭದಲ್ಲಿ ತಮ್ಮ ರಾಜಕೀಯದ ವಿಸ್ತರಣೆಯ ದೃಷ್ಟಿಯಿಂದ ಸದೃಢವಾದ ರಾಜಕೀಯ, ಸಾಂಸ್ಕೃತಿಕವಾದ ಹಿನ್ನೆಲೆಯಿಂದ ಕನ್ನಡ ಸಾಹಿತ್ಯದ ಹಲವಾರು ಗ್ರಂಥಗಳ ಸಂಪಾದನೆಯಲ್ಲಿ ತೊಡಗಿ ಅನೇಕ ಗ್ರಂಥಗಳಿಗೆ ಮುನ್ನುಡಿ ಬರೆದಿದ್ದಾರೆ. ಮೊದಲಿಗೆ ಗುರುತಿಸುವುದಾದರೆ ನಾಗವರ್ಮನ ಛಂದೋಂಬುಧಿಗೆ ಬರೆದ ಎಫ್. ಕಿಟೆಲ್‌ರ ಮುನ್ನುಡಿ ಚಾರಿತ್ರಿಕ ದಾಖಲೆಯಾಗಿದೆ. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಪರಂಪರೆಯೊಳಗೆ ಮುನ್ನುಡಿ ಸಾಹಿತ್ಯ ಪ್ರವೇಶಗೊಳ್ಳುತ್ತದೆ.

### ೩.೧. ಚಾರಿತ್ರಿಕ ಹಿನ್ನೆಲೆ

ಮುನ್ನುಡಿ ಸಾಹಿತ್ಯವನ್ನು ಮೊದಲಿಗೆ ಪಾಶ್ಚಿಮಾತ್ಯದ ನೆರವಿನಿಂದ ಸೃಷ್ಟಿಗೊಂಡಿತು. ಏಕೆಂದರೆ ಕನ್ನಡ ಸಾಹಿತ್ಯ ಓಲೆಯ ಗರಿಗಳಲ್ಲಿ ಅಡಗಿದ್ದು ಉಸಿರುಗಟ್ಟಿದ್ದ ಸಾಹಿತ್ಯವಾಗಿತ್ತು. ನಮ್ಮ ದೇಶಕ್ಕೆ ಪಾಶ್ಚಾತ್ಯ ವಿದ್ವಾಂಸರ ಪ್ರವೇಶದೊಡನೆ ಅಚ್ಚಿನ ಮತ್ತು ಕಾಗದದ ಸೌಕರ್ಯ ದೊರೆತಾಗ ಓಲೆಯ ಗರಿ, ಬಟ್ಟೆಗಳಲ್ಲಿ ಅಡಗಿದ್ದ ಕನ್ನಡ ಸಾಹಿತ್ಯವನ್ನು ನೆಲದಿಂದ ನಿಧಿ ತೆಗೆದಂತಾಯಿತು. ಅದರ ವಿಸ್ತಾರ ವೈವಿಧ್ಯತೆ ಹೇಳತೀರದು. ಕನ್ನಡ ನಾಡಿನ ಸಾಹಿತ್ಯದ ಅಭಿವೃದ್ಧಿಗೆ ನಮ್ಮ ದೇಶದ ಮತ್ತು

ಯುರೋಪ್ ದೇಶದ ವಿದ್ವಾಂಸರು ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಆದರೆ ಮುನ್ನುಡಿ ಎಂಬ ಪರಿಕಲ್ಪನೆ ಕನ್ನಡ ಪ್ರಾಚೀನ ಸಾಹಿತ್ಯದಲ್ಲಿಯೂ ಇತ್ತು. ಆದರೆ ಮುನ್ನುಡಿ ಎಂದು ಹೇಳಲು ಅಥವಾ ಗುರುತಿಸುವುದಕ್ಕೆ ಪಾಶ್ಚಿಮಾತ್ಯರ ಮುನ್ನುಡಿ ಪರಿಕಲ್ಪನೆ ಬೇಕಾಗಿತ್ತು. ಇವರ ಅಧ್ಯಯನದಿಂದ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಯನ್ನು ಗುರುತಿಸಬಹುದು. ಅವುಗಳೆಂದರೆ ಪ್ರಾಚೀನ ಮತ್ತು ಮಧ್ಯಕಾಲಿನ ಸಾಹಿತ್ಯ ಸಂದರ್ಭಗಳಲ್ಲಿ ಮುನ್ನುಡಿಯನ್ನು ಬಳಕೆ ಮಾಡಲಾಗಿತ್ತು. ಆದರೆ ಬೇರೆ ಬೇರೆ ಸ್ವರೂಪದಿಂದ ಕೂಡಿತ್ತು. "ದೇವರ ಹೆಸರಿನಲ್ಲಿ', 'ಇಷ್ಟ ದೈವ ಪ್ರಾರ್ಥನೆ', 'ಗುರುಸ್ತುತಿ', 'ಪೂರ್ವಸೂರಿಗಳ ಕೀರ್ತಿ', 'ತೋರಣನಾಂದಿ', 'ಉಪೋದ್ಘಾತ', 'ಗುರುವಂದನೆ', 'ಇತಿವೃತ್ತ', 'ಕವಿಕಾವ್ಯ ಪರಿಚಯ', 'ನಾಂದಿ"[೧] ಮೊದಲಾದ ಸಂಗತಿಗಳನ್ನು ಪ್ರಸ್ತಾಪಿಸುವುದು ರೂಢಿಯಾಗಿತ್ತು(ಮೂಲ ಹೆಸರುಗಳು ಹಸ್ತಪ್ರತಿಗಳಲ್ಲಿ ಕಂಡುಬರುತ್ತವೆ). ಈ ಶೀರ್ಷಿಕೆಗಳ ಅನ್ವಯದಿಂದ, ಪಾಶ್ಚಿಮಾತ್ಯರ ಅಧ್ಯಯನದ ಹಿನ್ನೆಲೆಯಿಂದ ಈ ಪ್ರಾಚೀನ ಮುನ್ನುಡಿಗಳನ್ನು ಕನ್ನಡ ಸಾಹಿತ್ಯ ಸಂಶೋಧನೆಗೆ ಒಳಪಡಿಸಿದಾಗ ಈ ತರಹದ ಚಿಂತನೆಯನ್ನು ಗುರುತಿಸುತ್ತೇವೆ. ಕನ್ನಡ ಸಾಹಿತ್ಯದ ಪ್ರಾಚೀನ ಮುನ್ನುಡಿಗಳಲ್ಲಿ ಆಧ್ಯಾತ್ಮದ ಮತ್ತು ಧಾರ್ಮಿಕತೆಯ ಒಲವು ಕಂಡುಬರುತ್ತವೆ. ಆದರೆ ಆಧುನಿಕ ಸಂದರ್ಭದ ಮುನ್ನುಡಿಗಳಲ್ಲಿ ಸಮಕಾಲೀನ ಚಿಂತನೆ ಹಾಗೂ ಹೊಗಳಿಕೆ ಹೆಚ್ಚಾಗಿ ಕಂಡುಬರುತ್ತವೆ. ಮೇಲೆ ಗುರುತಿಸಿದಂತೆ ಪ್ರಾಚೀನ ಕಾಲದ ಮುನ್ನುಡಿಗಳ ಸ್ವರೂಪವೇನೆಂದರೆ ಹಸ್ತಪ್ರತಿಗಳನ್ನು ಆಧರಿಸಿ ಪಂಪ, ರನ್ನ, ಪೊನ್ನ, ಜನ್ನ, ಕುಮಾರವ್ಯಾಸ, ಲಕ್ಷ್ಮೀಶ, ಮುದ್ದಣನ ಕಾಲದವರೆಗೂ ಕವಿಗಳು ಬರವಣಿಗೆ ಮಾಡಬೇಕಾದರೆ ದೇವರ ಹೆಸರನಲ್ಲಿ ಪ್ರಾರಂಭಿಸುವುದು, ಆಧ್ಯಾತ್ಮಿಕ ಗುರುಗಳನ್ನು ಪ್ರಸ್ತಾಪಿಸುವುದು, ತಮ್ಮ ಹಿರಿಯರನ್ನು ನೆನೆಯುವುದು ಮತ್ತು ಕವಿಕಾವ್ಯ ಪರಿಚಯ ಮಾಡುವುದು, ತಮ್ಮ ಸಮಕಾಲೀನರ ಕೃತಿಯನ್ನು ಹೋಲಿಸಿಕೊಳ್ಳುವುದು ಕಂಡುಬರುತ್ತದೆ. ಸಿಂಹಾವಲೋಕನ ಕ್ರಮದಿಂದ ತಮ್ಮ ಚಿಂತನೆಗಳನ್ನು ಕೃತಿಯಲ್ಲಿ ಒಳಗು ಮಾಡಿಕೊಳ್ಳುತ್ತಿದ್ದರು. ಜೊತೆಗೆ ಕವಿ, ಕೃತಿ, ವಿಶ್ಲೇಷಣೆ, ಕಾಲ, ದೇಶ(ಸ್ಥಳ), ಹೀಗೆ ಅನೇಕ ವಿಷಯಗಳನ್ನು ಹೇಳುತ್ತಾ ತಮ್ಮ ಬರವಣಿಗೆ ಪ್ರಾರಂಭಿಸುತ್ತಿದ್ದರು.

ಕವಿರಾಜಮಾರ್ಗಕಾರನು ತನ್ನ ಸಮಕಾಲೀನರನ್ನು ಅಂದರೆ 'ವಿಮಲೋದಯ', 'ನಾಗಾರ್ಜುನ', 'ಜಯಬಂಧು', 'ದುರ್ವಿನೀತ', 'ಗುಣಸೂರಿ', 'ನಾರಾಯಣ', 'ಬಾಣ', 'ಭಾರವಿ', 'ಕಾಳಿದಾಸ', 'ಮೇಘ' ಹೀಗೆ ಅವರ ಸಾಹಿತ್ಯವನ್ನು ನೆನೆದಿದ್ದಾನೆ. ಹಾಗೆಯೇ ಪಂಪನು ಕೂಡ ವ್ಯಾಸ ಮುನೀಂದ್ರರನ್ನು ನೆನೆಯುತ್ತಾನೆ. ರನ್ನನು 'ಪಂಪ,' 'ಪೊನ್ನ'ರನ್ನು ಸ್ಮರಿಸುತ್ತಾನೆ. ಪೊನ್ನನು ಅಸಗನನ್ನು ನೆನೆಯುವುದು, ಜನ್ನ 'ಗುಣವರ್ಮ,' 'ಪಂಪ', 'ನಾಗವರ್ಮ', 'ರನ್ನ', 'ನಾಗಚಂದ್ರ', 'ನೇಮಿನಾಥ' ಇತರರನ್ನು ನೆನೆಯುತ್ತಾನೆ. ಲಕ್ಷ್ಮೀಶನು ತನ್ನ 'ಪೂರ್ಣ ಸತ್ಕವಿಗಳಿಗೆ' ನಮಿಸಿ ಹೇಳುವುದು, ಕುಮಾರವ್ಯಾಸ, ವ್ಯಾಸರನ್ನು ಪಂಪರನ್ನಾದಿಗಳನ್ನು ನೆನೆಯುತ್ತಾನೆ. ಇಂತಹ ಸನ್ನಿವೇಶಗಳನ್ನು ಹಳಗನ್ನಡ ಕಾವ್ಯದ ಮುನ್ನುಡಿಗಳಲ್ಲಿ ಗುರುತಿಸಬಹುದು. ರನ್ನ ತನ್ನ ಸಿಂಹಾವಲೋಕನ ಕ್ರಮದಿಂದ ಪಂಪನ ವಿಕ್ರಮಾರ್ಜುನ ವಿಜಯ ಕೃತಿಯ ಬಗ್ಗೆ ಪ್ರಸ್ತಾಪಿಸುತ್ತಾನೆ. ಈ ತರಹದ ಸನ್ನಿವೇಶಗಳು

ಮುನ್ನುಡಿಗಳಲ್ಲಿ ವ್ಯಕ್ತಗೊಂಡಿವೆ. ಆದರೆ ಹಸ್ತಪ್ರತಿಗಳ ಮೊದಲಲ್ಲಿ ಸ್ಮರಿಸುವುದು, ಹಾಗೂ ವಂದನೆ ತಿಳಿಸುವುದು ಹೆಚ್ಚಾಗಿ ಕಂಡುಬರುತ್ತವೆ. ಇವುಗಳನ್ನು ಅಧ್ಯಯನಕ್ಕೆ ತೆಗೆದುಕೊಂಡು ಅಥವಾ ವಿಸ್ತರಿಸಿಕೊಂಡು ಮುನ್ನುಡಿಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಕೆಲವರು ತಮ್ಮ ಧರ್ಮೀಯ(ಜೈನ)ರನ್ನು ನೆನೆಯುವುದನ್ನು ನೋಡುತ್ತೇವೆ. ಈ ಹಿನ್ನೆಲೆಯ ವಿಷಯ ವಸ್ತು ಕನ್ನಡ ಸಾಹಿತ್ಯ ಪರಂಪರೆಯನ್ನು ಕಟ್ಟುವುದಕ್ಕೆ ಸಾಧ್ಯತೆಯಾಗುತ್ತದೆ. ಇಲ್ಲಿ ವಸ್ತು ಮತ್ತು ಅಭಿವ್ಯಕ್ತಿಯ ನೆಲೆಯಲ್ಲಿ ನಾವು ಮುನ್ನುಡಿಗಳನ್ನು ಗುರುತಿಸಬಹುದು.

ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಭಾಗವಾಗಿ ಮುನ್ನುಡಿಯ ರೂಪವಾಗಿ ಗುರುತಿಸುತ್ತೇವೆ. ಇದರಲ್ಲಿ ಪ್ರಾಚೀನ ಕಾಲದಿಂದಲೂ ಮೂರು ಬಗೆಯ ಮುನ್ನುಡಿಗಳನ್ನು ಬರೆಯುತ್ತಾರೆ.

೧. ಕೃತಿಕಾರನೇ ತನ್ನ ಕೃತಿಗೆ ಮುನ್ನುಡಿ ಬರೆಯುವುದು.

೨. ಬೇರೆಯವರು ತಮ್ಮ ಕೃತಿಗೆ ಮುನ್ನುಡಿ ಬರೆಯುವುದು

೩. ಸಂಪಾದಕರು ಬೇರೆ ಬೇರೆ ಕೃತಿಗಳನ್ನು ಸಂಪಾದಿಸಿ ಆ ಕೃತಿಗೆ ಮುನ್ನುಡಿ ಬರೆಯುವುದು.

### ೩.೧.೧. ಮುನ್ನುಡಿ ಸಾಹಿತ್ಯದಲ್ಲಿ ಪಾಶ್ಚಿಮಾತ್ಯರ ಮಹತ್ವ

ಪಾಶ್ಚಿಮಾತ್ಯರ ಆಡಳಿತದ ಅವಧಿಯಲ್ಲಿ ಕನ್ನಡ ಸಾಹಿತ್ಯಕ್ಕೆ ಆದ ದೊಡ್ಡ ಆವಿಷ್ಕಾರವೆಂದರೆ ಕನ್ನಡ ಪ್ರಾಚೀನ ಕೃತಿಗಳ(ಹಸ್ತಪ್ರತಿ) ಸಂಪಾದನೆಯಲ್ಲಿ ತೊಡಗಿದು. ಇದರಿಂದ ಕನ್ನಡ ಸಾಹಿತ್ಯ, ಚರಿತ್ರೆ, ಮತ್ತು ಅಧ್ಯಯನ ವಿಧಾನವನ್ನು ತಿಳಿದುಕೊಂಡಿರುವುದು. ಹೀಗಾಗಿ ೧೭ನೇ ಶತಮಾನದ ಹೊತ್ತಿಗೆ ಭಾರತದ ಬೇರೆ ಬೇರೆ ಪ್ರಾಂತ್ಯಗಳಿಗೆ ಕ್ರೈಸ್ತಮಿಷನರಿಗಳು ಆಗಮಿಸಲಾರಂಭಿಸಿದರು. ಹೀಗೆ ಬಂದಂತಹ ಮಿಶನರಿಗಳು ಬೇರೆ ಬೇರೆ ಪ್ರದೇಶದಲ್ಲಿ ನೆಲೆ ನಿಂತು ಮಿಷನ್ ಕೇಂದ್ರಗಳನ್ನು ತೆರೆದು ಆ ಮೂಲಕ ತಮ್ಮ ಮತ ಪ್ರಚಾರದ ಕಾರ್ಯವನ್ನು ಮಾಡತೊಡಗಿದವು. ಮಿಷನರಿಗಳು ಸ್ಥಳೀಯ ಜನಸಮುದಾಯಗಳ ಭಾಷೆಯನ್ನು ಅರಿಯುತ್ತಿದ್ದಂತೆ ಆಯಾ ಭಾಷೆಯ ಸಾಹಿತ್ಯ ಮತ್ತು ಭಾಷೆ ಕುರಿತು ಮಾಡಿದ ಕಾರ್ಯಗಳು ದೊಡ್ಡವು. ಫರ್ಡಿನೆಂಡ್ ಕಿಟೆಲ್ ಸೇರಿದಂತೆ ಇತರೆ ಪಾಶ್ಚಿಮಾತ್ಯ ವಿದ್ವಾಂಸರು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಮರೆಯಲಾಗದ ಹೆಸರುಗಳಾಗಿ ಉಳಿದಿದ್ದಾರೆ. ಅದರಲ್ಲೂ ಕನ್ನಡ ಸಾಹಿತ್ಯ ಚರಿತ್ರೆಯ ಬರವಣಿಗೆಗೆ ಅಡಿಗಲ್ಲು ಹಾಕಿದರು. ತಮ್ಮ ಆಡಳಿತದ ಸಂದರ್ಭದಲ್ಲಿ ಹೊಸ ಹೊಸ ಚಿಂತನೆಗಳಿಂದ ರೂಪಗೊಂಡ ಆಧುನೀಕರಣ ಪ್ರಕ್ರಿಯೆಯ ಅಂಗವಾಗಿ ಮೂಡಿದ ಮುದ್ರಣ ಯಂತ್ರಗಳ ಸ್ಥಾಪನೆ ಮಾಡಿದರು. ಕಾಗದದ ಬಳಕೆಯಿಂದಾಗಿ ಅಂದು ಸಹಜವಾಗಿಯೇ ಗ್ರಂಥಗಳ ಪ್ರಕಟಣೆಗೆ ಉತ್ತೇಜನ ದೊರೆಕಿತು. ಈ ಮೊದಲು ರಚನೆಗೊಂಡಿದ್ದ ಕನ್ನಡ ಸಾಹಿತ್ಯ ವಲಯವನ್ನು ಶೋಧಿಸಿ, ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸುವಂತಹ ಕಾರ್ಯವನ್ನು ಪಾಶ್ಚಾತ್ಯ ವಿದ್ವಾಂಸರು ಕೈಗೊಂಡರು. ಇದಕ್ಕೆ ಮುಖ್ಯ ಕಾರಣ ತಾವು ಆಳುತ್ತಿರುವ ದೇಶದ ಭಾಷೆ,

ಸಂಸ್ಕೃತಿ, ಸಾಹಿತ್ಯದ ಪರಿಚಯ ಪಡೆದು ಅದರ ಬಗ್ಗೆ ತಿಳುವಳಿಕೆ ಮೂಡಿಸಿಕೊಂಡರು. ದೇಶವನ್ನು ತಮ್ಮ ಅಧೀನದಲ್ಲೇ ಇಟ್ಟುಕೊಳ್ಳಬೇಕೆಂಬ ಬ್ರಿಟಿಷ್ ಸಾಮ್ರಾಜ್ಯಶಾಹಿ ಮನೋಭಾವದ ಹುನ್ನಾರದ ಹಿನ್ನೆಲೆಯಿಂದ ಓರಿಯಂಟಲ್(ಪಶ್ಚಿಮ) ಅಧ್ಯಯನಗಳು ನಡೆದಿವೆ. ಭಾರತದ ಶಾಸನಗಳನ್ನು, ಹಸ್ತಪ್ರತಿಗಳನ್ನು, ಸಂಸ್ಕೃತಿಯನ್ನು, ಇತಿಹಾಸವನ್ನು ತಮ್ಮ ಅಳತೆಗೋಲಿನಿಂದ ತಮ್ಮ ಪೂರ್ವ ನಿರ್ಧಾರಿತ ಚಿಂತನೆಗಳಿಂದ ಅಧ್ಯಯನ ಮಾಡಿದರು. ಹಳಗನ್ನಡ ಸಾಹಿತ್ಯ ಕೃತಿಗಳ ಸಂಪಾದನೆಯ ಸಂದರ್ಭದಲ್ಲಿ ಮುನ್ನುಡಿಗಳ(ಪ್ರಸ್ತಾವನೆ)ಲ್ಲಿ ರೂಪಗೊಂಡ ವಿಚಾರಗಳು ಕನ್ನಡ ಸಾಹಿತ್ಯದಲ್ಲಿ ಪಾಶ್ಚಾತ್ಯದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿವೆ. ಈ ಹಿನ್ನೆಲೆಯಿಂದ ಓಲೆಗರಿಗಳಲ್ಲಿದ್ದ ಕನ್ನಡ ಸಾಹಿತ್ಯವನ್ನು ಕಾಗದದ ಮೇಲೆ ತಂದು ಮುದ್ರಿಸಿ ಅಕ್ಷರ ರೂಪದಲ್ಲಿ ಸಮಾಜಕ್ಕೆ ಉಣಬಡಿಸಿದರು, ಪಾಶ್ಚಾತ್ಯ ವಿದ್ವಾಂಸರು ಮತ್ತು ಬ್ರಿಟಿಷ್ ಅಧಿಕಾರಿಗಳು ಅದರಲ್ಲೂ ಎಫ್.ಕಿಟೆಲ್, ಲೂಯಿ ರೈಸ್, ಇ.ಪಿ.ರೈಸ್, ಜಿ.ಗ್ಯಾರೆಟ್, ಮೆಕಂಜಿ, ಮೊದಲಾದವರು ಪ್ರಮುಖರಾಗಿದ್ದಾರೆ. ಇವರು ಹಸ್ತಪ್ರತಿಗಳನ್ನು ಸಂಗ್ರಹಿಸುವುದು, ಅವುಗಳ ಅಧ್ಯಯನ ನಡೆಸಿ ಸರಿಯಾದ ಪಾಠ ಪರಿಷ್ಕಾರವನ್ನು ಸರಿಪಡಿಸುವುದು ಅವುಗಳಿಗೆ ವಿವರಣಾತ್ಮಕವಾದ ಮುನ್ನುಡಿ ಅಥವಾ ಪ್ರಸ್ತಾವನೆಗಳಲ್ಲಿ ಆ ಕೃತಿಯ ಸಾರಾಂಶ ಅಥವಾ ಕೃತಿಯ ತಾತ್ವಿಕ ವಿಚಾರವನ್ನು ಹೇಳುವುದು, ಹೀಗೆ ಪ್ರಕಟಿಸುವುದು ಕಾಣುತ್ತೇವೆ. ಗ್ರಂಥಸಂಪಾದನಶಾಸ್ತ್ರವನ್ನು ಕನ್ನಡ ಸಾಹಿತ್ಯಕ್ಕೆ ಮುನ್ನುಡಿಗಳ ಮೂಲಕವಾಗಿ ಪರಿಚಯ ಮಾಡಿಕೊಟ್ಟವರಲ್ಲಿ ಪಾಶ್ಚಾತ್ಯ ವಿದ್ವಾಂಸರು ಪ್ರಮುಖರು. ಹಾಗೆಯೇ ಸಂಪಾದನೆಯ ಜೊತೆಗೆ ವಿಮರ್ಶಾತ್ಮಕ ಚಿಂತನೆಯನ್ನು ಬೆಳೆಸಿದರು.

ಪಾಶ್ಚಿಮಾತ್ಯರು ಮೊದಲ ಹಂತದಲ್ಲಿ ಆಕರ ಸಂಗ್ರಹವೆಂದು ಹಲವು ಕೃತಿಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. 'ಜೈಮಿನಿಭಾರತ', 'ಕರ್ಣಾಟಕ ಭಾಷಾ ಭೂಷಣ', 'ಶಬ್ದಾನುಶಾಸನ', 'ಕಾವ್ಯಾವಲೋಕನ', 'ಶಬ್ದಮಣಿದರ್ಪಣ', 'ಪಂಪಭಾರತ', 'ಛಂದೋಂಬುಧಿ' ಮೊದಲಾದ ಪ್ರಮುಖ ಕೃತಿಗಳನ್ನು ಮೊದಲಿಗೆ ಪ್ರಕಟಿಸಿದರು. ಪಾಶ್ಚಿಮಾತ್ಯರ ಬರವಣಿಗೆಯನ್ನು ಕನ್ನಡ ಸಾಹಿತ್ಯ ಚರಿತ್ರೆಯ ಗಮನಾರ್ಹ ಮಾದರಿ ಎಂದೇ ಹೇಳುತ್ತೇವೆ. ಮೊದಲ ಬಾರಿಗೆ ಕನ್ನಡ ಸಾಹಿತ್ಯ ಚರಿತ್ರೆಗೆ ಒಂದು ರೂಪವನ್ನು, ಚೌಕಟ್ಟನ್ನು ಕಟ್ಟುವ ಪ್ರಯತ್ನ ಇಲ್ಲಿ ನಡೆಯಿತು. ಹಾಗೆಯೇ ತಮ್ಮ ಮತ ಪ್ರಚಾರದ ಹಿನ್ನೆಲೆಯಿಂದ ಬಂದ ಅವರು ಸ್ಥಳೀಯ ಭಾಷೆಯನ್ನು ಕಲಿಯಲೇಬೇಕಾಗಿತ್ತು ಕೂಡ. ಆದರೆ ತಮ್ಮ ತತ್ವ ಮೀರಿ ಭಾಷೆಯ ಮೇಲಿನ ಪ್ರೀತಿಯಿಂದ ಈ ಕಾರ್ಯವನ್ನು ಮುಂದುವರಿಸಿದರು. ಇ.ಪಿ.ರೈಸರು ಕನ್ನಡ ಸಾಹಿತ್ಯ ಚರಿತ್ರೆಯನ್ನು ಇಂಗ್ಲಿಷ್ ಭಾಷೆಯಲ್ಲಿ ರಚನೆ ಮಾಡಿದರು. ಇದು ಕನ್ನಡದಲ್ಲಿ ಮುಂದೆ ಬಂದ ಸಾಹಿತ್ಯ ಚರಿತ್ರೆಗಳ ರಚನೆಯ ವಿಷಯಕ್ಕೆ ಸಂಬಂಧಿಸಿದಂತೆ ಆಧಾರ ಗ್ರಂಥವಾಗಿದೆ. ಹಾಗೆಯೇ ಕಿಟೆಲ್‌ರು ೧೮೭೫ರಲ್ಲಿ ನಾಗವರ್ಮನ ಛಂದೋಂಬುಧಿಯನ್ನು ಸಂಪಾದಿಸಿ ಅದರಲ್ಲಿ 'Essay on carerese literature' ಎಂಬ ದೀರ್ಘ ಮುನ್ನುಡಿ ಬರೆದು ಕನ್ನಡ ಸಾಹಿತ್ಯಕ್ಕೆ ಹೊಸ ಅಧ್ಯಯನದ ವಿಧಾನವನ್ನು ಸೃಷ್ಟಿ ಮಾಡಿದ್ದಾರೆ. ಇದರಿಂದ ಈ ಛಂದೋಂಬುಧಿ ಕೃತಿಯ ಮುನ್ನುಡಿಯ ರೂಪ ಕನ್ನಡ ಸಾಹಿತ್ಯಕ್ಕೆ ವೇದಿಕೆಯಾಗಿ, ಚರಿತ್ರೆಯಾಗಿ ದಾಖಲೆಯಾಯಿತು.

ಏಕೆಂದರೆ ಕನ್ನಡ ಸಾಹಿತ್ಯದಲ್ಲಿ ಹಳಗನ್ನಡ ಸಾಹಿತ್ಯ ಪರಂಪರೆಯನ್ನು ಮುರಿದು ಕಟ್ಟುವುದು, ಅಂದರೆ ಹಳೆಯ ಸಾಹಿತ್ಯದ ಪರಂಪರೆಯನ್ನು ಹೊಸ ನೆಲೆಯಲ್ಲಿ ಕಂಡು ಕೊಂಡಿರುವುದು ಮಹತ್ವದ ಸಂಗತಿಯಾಗಿದೆ. ಹಾಗೆಯೇ ಈ ಇಬ್ಬರು ಮಹನೀಯರು ಮಾಡಿದ ಕೆಲಸಗಳು, ಹಾಕಿದ ತಳಪಾಯದ ಮೇಲೆ ಸಾಹಿತ್ಯ ಚರಿತ್ರೆ ರಚನೆಯ ಬೃಹತ್ ಕಟ್ಟಡ ಎದ್ದು ನಿಂತಿದ್ದು, ರಂ.ಶ್ರೀ. ಮುಗಳಿಯವರ ಕಾಲಕ್ಕೆ ಎಂದು ಹೇಳಬಹುದು. ಕಿಟೆಲ್‌ರ ಪ್ರಕ್ರಿಯೆಯಲ್ಲಿ ಸೈದ್ಧಾಂತಿಕವಾಗಿ ಕನ್ನಡ ಸಾಹಿತ್ಯದ ಬೆಳವಣಿಗೆಯ ಹಂತಗಳನ್ನು, ಬೆಳವಣಿಗೆಯ ಕ್ರಮವನ್ನು ಗುರುತಿಸುವಲ್ಲಿ ಛಂದೋಂಬುಧಿಯ ಮುನ್ನುಡಿಯಲ್ಲಿ ಅವರು ಸಫಲರಾಗಿದ್ದಾರೆ. ಮುಂದೆ ಈ ಕ್ರಮವಾಗಿ ಭಿನ್ನ ಭಿನ್ನ ತಾತ್ವಿಕ ವಾಗ್ವಾದಗಳು ಚರ್ಚೆಗಳು ಹುಟ್ಟಿಕೊಂಡವು. ಹಾಗೆಯೇ ಕನ್ನಡ ಸಾಹಿತ್ಯ ಚರಿತ್ರೆಯ ಪರಿಕಲ್ಪನೆಗಳು ಗಟ್ಟಿಗೊಳಿಸುತ್ತಾ ಕನ್ನಡ ಸಾಹಿತ್ಯ ಚರಿತ್ರೆಯ ಹೊಸ ಹೊಸ ಆಯಾಮಗಳು ರೂಪಗೊಳ್ಳತೊಡಗಿವೆ.

ಇದರಿಂದಾಗಿ ಪಾಶ್ಚಾತ್ಯರ ಓರಿಯಂಟಲ್ ಅಧ್ಯಯನಗಳಿಂದ ನಮಗಾದ ಬಹುದೊಡ್ಡ ಉಪಕಾರವೆಂದರೆ ಆಕರ ಸಂಗ್ರಹ, ಮಾಹಿತಿ ಸಂಗ್ರಹ ಕಾರ್ಯಗಳಾಗಿವೆ. ಈ ಬಗೆಯ ಸಂಗ್ರಹವನ್ನು ಮೊದಲಿಗೆ ಅವರು ಹೇಳಿಕೊಟ್ಟರು. ನಮ್ಮಲ್ಲಿ ಅಜ್ಞಾನದಲ್ಲಿದ್ದ ಎಲ್ಲಾ ಬಗೆಯ ಜ್ಞಾನ ಪರಿಕರಗಳನ್ನು ಹುಡುಕಿ ತೆಗೆದು ಶೋಧಿಸಿ ದೀರ್ಘವಾದ ಮುನ್ನುಡಿಗಳ ಮೂಲಕ ಪ್ರಕಟಿಸುವುದರ ಜೊತೆಗೆ ಸಾಮಗ್ರಿ ಸಂಗ್ರಹದ ಅಗತ್ಯ ಮತ್ತು ಕಾರ್ಯ ವಿಧಾನವನ್ನು ನಮಗೆ ತಿಳಿಸಿದರು. ಅವರು ಶಾಸನಗಳ ಸಂಗ್ರಹ, ನಾಣ್ಯ ಸಂಗ್ರಹ, ವಾಸ್ತುಶಿಲ್ಪದ ಬಗೆಗಿನ ವಿವರ, ಹಳಗನ್ನಡ ಹಸ್ತಪ್ರತಿಗಳ ಸಂಗ್ರಹ, ಅನೇಕ ಹಸ್ತಪ್ರತಿಗಳನ್ನಿಟ್ಟುಕೊಂಡು ಸರಿಯಾದ ವಿಷಯ ಸಂಗ್ರಹಣೆಗೆ ಪಟ್ಟ ಶ್ರಮ ಇವೆಲ್ಲಾ ಇಂದಿಗೂ ಮಾರ್ಗದರ್ಶಕವಾಗಿವೆ. ಪಾಶ್ಚಾತ್ಯ ಅಧ್ಯಯನಗಳ ಬಹುದೊಡ್ಡ ಕೊಡುಗೆ ಎಂದರೆ ಮಾಹಿತಿ ಸಂಗ್ರಹ ಮತ್ತು ಆಕರ ಸಂಗ್ರಹ ಕಾರ್ಯವಾಗಿದೆ.

ಪಾಶ್ಚಾತ್ಯ ವಿದ್ವಾಂಸರು ತಾವು ಸಂಪಾದಿಸಿದ ಗ್ರಂಥವನ್ನು ಪ್ರಕಟಿಸುವಾಗ ಮೊದಲಿಗೆ 'ಪೀಠಿಕೆ', 'ಉಪೋದ್ಘಾತ', 'ಮುನ್ನುಡಿ', 'ಪ್ರಸ್ತಾವನೆ'(ದೀರ್ಘವಲ್ಲದ್ದು) ಎಂಬ ಭಾಗವನ್ನು ಗ್ರಂಥದ ಮೊದಲ ಭಾಗದಲ್ಲಿ ರೂಪಿಸಿ ಅದರಲ್ಲಿ ಕವಿ, ಕೃತಿ, ಕಾಲ ಅವನ ಧರ್ಮ, ಅವನ ಸ್ಥಳದ ವಿಚಾರವಾಗಿ ಚರ್ಚೆ ನಡೆಸಿದ್ದಾರೆ. ತಮಗೆ ದೊರೆತ ಆಕರಗಳ ಹಿನ್ನೆಲೆಯಲ್ಲಿ ದೊರೆತ ಹಸ್ತಪ್ರತಿಗಳ ವಿಚಾರವನ್ನು ನೀಡುತ್ತಾ ಕಥಾಸಾರದ ನಿರೂಪಣೆ, ಆ ಕಾವ್ಯದ ಬಗ್ಗೆ ವಿಮರ್ಶೆ ಬರೆದು ವಾಗ್ವಾದಗಳ ಸೃಷ್ಟಿಯಲ್ಲಿ ಪ್ರಮುಖ ಪಾಠಾಂತರಗಳನ್ನು ಕೊಡುತ್ತಾ ಕಡೆಯಲ್ಲಿ ಕಠಿಣ ಪದಗಳ ಅರ್ಥಕೋಶ ನೀಡುತ್ತಾ, ಹೀಗೆ ಶಾಸ್ತ್ರಶುದ್ಧ ಸಂಪಾದನೆಯಾಗಿ ಮುನ್ನುಡಿ ರೂಪದಲ್ಲಿ ವಿಮರ್ಶೆಯ ವಿಧಾನವನ್ನು ಕನ್ನಡ ಸಾಹಿತ್ಯದಲ್ಲಿ ಮೊದಲಿಗೆ ರೂಪಿಸಿದ್ದಾರೆ. ಈ ಮೂಲಕವಾಗಿ ಅಂದರೆ ಅವರು ಕಲೆ ಹಾಕಿದ ಆಕರ ಸಂಗ್ರಹದ ಜೊತೆಗೆ ಮುಂದೆ ಆರ್.ನರಸಿಂಹಚಾರ್ಯರು 'ಕವಿಚರಿತೆ' ಕೃತಿಗೆ ಸಹಾಯಕವಾಯಿತು. ಎಫ್.ಕಿಟೆಲ್ ಅವರು ನಾಗವರ್ಮನ ಛಂದೋಂಬುಧಿ ಮುನ್ನುಡಿಯಲ್ಲಿ ಅದರ ಮೊದಲ ಭಾಗದಲ್ಲಿ ಕವಿ ಕೃತಿ ವಿಚಾರವಾಗಿ ಚರ್ಚಿಸುತ್ತಾರೆ. ಜೊತೆಗೆ ಕನ್ನಡ ಸಾಹಿತ್ಯದ

ಮೇಲೆ ದೀರ್ಘ ಪ್ರಬಂಧವನ್ನು ಮುನ್ನುಡಿಯಾಗಿ ಬರೆಯುತ್ತಾರೆ. ಕನ್ನಡ ಸಾಹಿತ್ಯ ಕುರಿತು ಮತಪರವಾದ ವಿವೇಚನೆಯನ್ನು ಮಾಡಿದ್ದು, ಕನ್ನಡ ಸಾಹಿತ್ಯವನ್ನು ಮತಧರ್ಮ ದೃಷ್ಟಿಯಲ್ಲಿ ನೋಡುವ ಪರಿಪಾಟವನ್ನು ನಮಗೆ ಕಲಿಸಿದವರು ಪಾಶ್ಚಾತ್ಯರು. ಹಾಗೆಯೇ ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ ಪರಿಕಲ್ಪನೆ ಕಟ್ಟಿದವರು ಕಿಟೆಲ್ ಅವರು. ಇವರು ನಾಗವರ್ಮನ ಛಂದೋಂಬುಧಿಗೆ ಬರೆದ ಮುನ್ನುಡಿಯನ್ನು 'ನಾಗವರ್ಮನ ಕನ್ನಡ ಛಂದಸ್ಸು' ಎಂದು ಸಂಪಾದಿಸಿದ್ದಾರೆ.

ಈ ದೀರ್ಘ ಮುನ್ನುಡಿಯಲ್ಲಿ "An essay on canarese literature" ಎಂಬ ೫೮ ಪುಟಗಳ ಲೇಖನವಿದ್ದು. ಇದರಲ್ಲಿ "ಕಿಟೆಲ್ ಕ್ರಿ.ಶ.೮೦೦ರಿಂದ ೧೮೭೫ರ ಕಾಲಘಟ್ಟದ ಕನ್ನಡ ಸಾಹಿತ್ಯವನ್ನು ಪೂರ್ವಾರ್ಧ(೮೦೦-೧೩೦೦) ಮತ್ತು ಉತ್ತರಾರ್ಧ(೧೩೦೦-೧೮೭೫) ಎಂದು ಎರಡು ಘಟ್ಟಗಳಲ್ಲಿ ವರ್ಗೀಕರಿಸಿ ರಾಜರ/ಕವಿಗಳ ಕಾಲನಿರ್ಣಯಕ್ಕೆ ಮಹತ್ವ ಕೊಟ್ಟು. ಅನಂತರ ಈ ಘಟ್ಟಗಳ ಲೇಖಕರ ಪಟ್ಟಿಗಳನ್ನು ಕೊಟ್ಟಿದ್ದಾರೆ."[೨] ಅಂದರೆ ಇದು ಸ್ವರೂಪದ ರೀತಿಯಲ್ಲಿರದೇ ಟಿಪ್ಪಣಿಗಳಿರುವ ಗ್ರಂಥಸೂಚಿಯಾಗಿದೆ. ಕಿಟೆಲ್‌ರ ಪ್ರಬಂಧದ ಎರಡು ಅಂಶಗಳು ಮುಖ್ಯವಾಗಿದ್ದು ಒಂದು ಕಿಟೆಲ್ ಕೊಡುವ ಮೊದಲ ಕಾಲಘಟ್ಟದ ಪಟ್ಟಿಯಲ್ಲಿ ೪೦ ಲೇಖಕರ ಹೆಸರುಗಳಿವೆ. ಇವರಲ್ಲಿ ಹತ್ತು ಜನರು ಕನ್ನಡ ಲೇಖಕರಲ್ಲ. ಅವರು ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಬರೆದಿದ್ದಾರೆ. "ಅಮೃತನಂದಿ, ಕವಿಕಾಮ, ಗುಣಭದ್ರದೇವ, ಇತ್ಯಾದಿ ಕವಿಗಳನ್ನು ಕೇಶಿರಾಜ, ನಾಗವರ್ಮ ಮುಂತಾದವರು ಹೆಸರಿಸುತ್ತಾ ತಮ್ಮ ಲೇಖಕರ ಪಟ್ಟಿಯನ್ನು ದಾಖಲಿಸಿದ್ದಾರೆ."[೩] ಇಂತಹ ಸಂಗತಿಗಳನ್ನು ಕಿಟೆಲ್‌ರ ನಾಗವರ್ಮನ ಛಂದಸ್ಸು ತಿಳಿಸುತ್ತದೆ. ಕನ್ನಡ ಕವಿಗಳು ತಮ್ಮ ಪೂರ್ವಕವಿಗಳ ಸ್ಮರಣೆಯಲ್ಲಿ ಇತರ ಭಾಷಿಕರನ್ನು ನೆನೆಯುವುದು ಕಂಡುಬಂದಿದೆ. ಅಂದರೆ ಕನ್ನಡದ ತೆಲುಗು, ತಮಿಳು ಅಂದಿನ ದಿನಗಳಲ್ಲಿ ಇತ್ತು ಎನ್ನುವುದನ್ನು ಈ ಪ್ರಬಂಧ ಉಲ್ಲೇಖಿಸುತ್ತದೆ. ಹಾಗೆಯೇ ಸಂಸ್ಕೃತ ಕವಿಗಳ ಕುರಿತು ಹೇಳಿಕೊಂಡಿದ್ದಾನೆ. ಮೊದಲ ಘಟ್ಟದ ಕವಿಗಳೆಲ್ಲರೂ ಸಂಸ್ಕೃತದ ಸಾಹಿತ್ಯದ ಪ್ರಭಾವಕ್ಕೊಳಗಾಗಿದ್ದಾರೆ.

ಎರಡನೆಯ ಭಾಗದಲ್ಲಿ ಸಾಹಿತ್ಯ, ಸಂಸ್ಕೃತಿ, ಇತ್ಯಾದಿ ವಿಷಯಗಳ ಕುರಿತು ಚರ್ಚಿಸಿದ್ದಾರೆ. ಅಂದರೆ ನಮಗಿರುವ ನಿಲುವನ್ನು ಒಂದು ಕಾಲಘಟ್ಟದ ಕ್ರಿಯಾಶೀಲವಾಗಿರುವ ಸಂಕಥನವನ್ನು ಚರ್ಚಿಸುತ್ತಾರೆ. ಅದಕ್ಕಾಗಿ ಈ ಮುನ್ನುಡಿಯಲ್ಲಿ ಪ್ರಮುಖ ಅಂಶಗಳಾಗಿ ಕಿಟೆಲ್ ಹೊರಹಾಕಿದ್ದಾರೆ. ಕಿಟೆಲ್‌ರಲ್ಲಿ ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯದ ಬಗ್ಗೆ ಅಪಾರವಾದ ನಂಬಿಕೆ ಇದ್ದುದರಿಂದ ಕನ್ನಡ ಸಾಹಿತ್ಯಕ್ಕೆ ಈ ಮುನ್ನುಡಿಯ ಮೂಲಕವಾಗಿ ಗ್ರಂಥ ಸಂಪಾದನೆ ಹೇಗೆ ಮಾಡಬೇಕು, ಅವುಗಳ ತಿದ್ದುಪಡಿ ಮತ್ತು ಪ್ರಕಟಣೆ ಹೇಗೆ ಮಾಡಬೇಕು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇದೇ ರೀತಿಯಾಗಿ ಈ ಮುನ್ನುಡಿಯ ಒಂದು ಭಾಗವಾಗಿ ಪ್ರಾಚೀನ ಕನ್ನಡ ಸಾಹಿತ್ಯವನ್ನು ಕುರಿತು "ಜೈನ ಕೃತಿಗಳಿಂದ ಪ್ರಾರಂಭಿಸಿ ಸಾಳ್ವನವರಿಗೆ ಕನ್ನಡ ಸಾಹಿತ್ಯದ ಪ್ರಥಮ ಘಟ್ಟದಲ್ಲಿ ಕಂಡುಬರುವ ಒಂದು ವಿಶಿಷ್ಟ ಲಕ್ಷಣವೆಂದರೆ ಅಶ್ಲೀಲ ವಿಷಯಗಳ ಬಗ್ಗೆ, ಅದರಲ್ಲಿರುವ ಅಸಹ್ಯಕರ ಅಭಿರುಚಿಯ ಬಗ್ಗೆ

ಈ ಅಭಿರುಚಿಯು ಕನ್ನಡ ಸಾಹಿತ್ಯದ ಎಲ್ಲ ಪಂಥಗಳ ಎಲ್ಲ ಶಾಖೆಗಳಲ್ಲಿಯೂ ಮುಂದಿನ ಶತಮಾನಗಳಲ್ಲಿ ಕಡಿಮೆಯೇನಾಗಲಿಲ್ಲ ಮತ್ತು ಇಂದಿಗೂ ಅಂತಹದೇ ಕೀಳು ಅಭಿರುಚಿ ಮುಂದುವರಿಯುತ್ತಿದೆ. ಇಂತಹ ಪರಿಸ್ಥಿತಿಯ ಮೇಲಿನ ಅಂಶಗಳನ್ನೊಳಗೊಂಡ ಧಾರ್ಮಿಕ ಪುರಾಣ ಕಥೆಗಳ ಮತ್ತು ಅಶಿಕ್ಷಿತ ಜನರ ಮನಸ್ಸಿನಲ್ಲಿ ದುಷ್ಪರಿಣಾಮಗಳನ್ನುಂಟು ಮಾಡುವ ಅವುಗಳ ವ್ಯಾಖ್ಯಾನಗಳ ಪುನಃ ಮುದ್ರಣಗಳಿಂದ ಮುಂದುವರಿಯುತ್ತಿದೆ"[೪] ಎಂದು ಹೇಳುತ್ತಾರೆ. ಅಂದರೆ ಜೈನರಿಂದ ಸಾಳ್ವನವರಿಗೆ ಸಂಸ್ಕೃತದ ಪ್ರಭಾವ, ರಾಜಾಶ್ರಯದ ಪ್ರಭಾವ ಇದರಿಂದ ಪ್ರಭುತ್ವ ಮೇಲುಗೊಂಡಿರುವುದು ಮೇಲ್ನೋಟಕ್ಕೆ ಸಾಕ್ಷಿಯಾಗಿದೆ. ಇಲ್ಲಿ ಧರ್ಮ, ತತ್ವ ಜಾತಿ ಪ್ರಮುಖವಾಗಿದೆ. ಹಾಗೆಯೇ ಇನ್ನುಳಿದ ಜಾತಿ, ದಲಿತ ಅಲ್ಪಸಂಖ್ಯಾತ ಜಾತಿಗಳು ಶ್ರೇಣೀಕರಣಗೊಂಡಿವೆ. ಇಲ್ಲಿ ಬಹುಸಂಖ್ಯಾತರು ಇದ್ದರೂ ಪ್ರಭುತ್ವ ಯಾರದ್ದಾಗಿದೆ? ಸಮಾಜ ಯಾರ ಹಿಡಿತದಲ್ಲಿದೆ? ಎನ್ನುವುದು ಮುಖ್ಯ. ಬಡ ದಲಿತ ಹಿಂದುಳಿದ ದುಡಿವ ವರ್ಗ, ಆರ್ಥಿಕತೆ ಸಮಾಜ ಶ್ರೇಣೀಕರಣಕ್ಕೆ ಒಳಗಾಗಿದೆ ಮತ್ತು ಅಶಿಕ್ಷಿತ(ಶಿಕ್ಷಣ)ರಿಗೆ ಆ ಕಾಲಘಟ್ಟದಲ್ಲಿ ಮಾನ್ಯತೆ ಕೊಟ್ಟಿಲ್ಲ ಎಂಬುದನ್ನು ಈ ಮುನ್ನುಡಿಯಲ್ಲಿ ಕಿಟೆಲ್‌ರು ಸೂಕ್ಷ್ಮವಾಗಿ ವ್ಯಕ್ತಪಡಿಸಿರಬಹುದು. ಪಂಪ ಹೇಳುವ 'ಮನುಷ್ಯ ಜಾತಿ ತಾನೊಂದೆ ವಲಂ' ಎನ್ನುವ ಉಲ್ಲೇಖ, ಜೈನರಿಂದ ಸಾಳ್ವ ಹಾಗೂ ಪ್ರಸ್ತುತದವರೆಗೆ ಜಾತಿಪದ್ಧತಿ ಎನ್ನುವುದು ಅಸಹ್ಯಕರ. ಅದಕ್ಕಾಗಿ ಕಿಟೆಲ್‌ರು ಈ ಮುನ್ನುಡಿಯ ಮೂಲಕವಾಗಿ ಮುಂದಿನ ಪೀಳಿಗೆಗೆ ಇಂತಹ ವಿಷಯಕ್ಕೆ ಆಸ್ಪದ ಕೊಡದೆ ಸಮಾಜದ ಅಭಿವೃದ್ಧಿಗೆ ಶಿಕ್ಷಣ, ಜನಕಲ್ಯಾಣಕ್ಕಾಗಿ ಸಮೃದ್ಧಿಗೆ ಒತ್ತು ಕೊಡಬೇಕಾಗಿದೆ ಎಂದು ಹೇಳಿರಬಹುದು.

ಕಿಟೆಲ್‌ರು ತಮ್ಮ ತತ್ವಚಿಂತನೆಯಿಂದ ಹಳಗನ್ನಡ ಹಸ್ತಪ್ರತಿಗಳ ಸಂಪಾದನೆಯನ್ನು ತಮ್ಮದೇ ಆದಂತಹ ವಿಧಾನದ ಮೂಲಕ ಪಾಠಾಂತರಗಳನ್ನು ಗೊತ್ತುಪಡಿಸಿ ವಿಸ್ತಾರವಾದ ಕೃತಿ ಪರಿಚಯದೊಡನೆ ಹೊರತಂದಿದ್ದಾರೆ. 'ಛಂದೋಂಬುಧಿ ಕೃತಿಯ ವೈಶಿಷ್ಟ್ಯವೆಂದರೆ ಅದರ ಮುನ್ನುಡಿಯಲ್ಲಿ ಕನ್ನಡ ಸಾಹಿತ್ಯ ಕುರಿತು ಒಂದು ಪ್ರಬಂಧವನ್ನು ಸೇರಿಸಿರುವುದೇ ದೊಡ್ಡ ವಿಚಾರವಾಗಿದೆ. ಹಾಗೆಯೇ ಅನೇಕ ಹಳಗನ್ನಡ ಗ್ರಂಥಗಳ ಬಗ್ಗೆ ಮಾಹಿತಿ ಲಭ್ಯವಿದ್ದರೂ ಅದರ ಆಧಾರದಿಂದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಅದುವರೆಗೂ ಯಾರೂ ನಿರೂಪಿಸಿರಲಿಲ್ಲ. ಕಿಟೆಲ್‌ರು ಈ ಕೆಲಸವನ್ನು ವ್ಯವಸ್ಥಿತವಾಗಿ ಮಾಡಿದ್ದಾರೆ. ಹಾಗೆಯೇ ಛಂದೋಂಬುಧಿ ಕೃತಿ ಛಂದಸ್ಸಿನ ಗ್ರಂಥವಾಗಿದೆ. ಆದರೆ ಕಿಟೆಲ್‌ರು ಅಂದಿನ ಸಂದರ್ಭದಲ್ಲಿ ಕೃತಿಯ ಮುನ್ನುಡಿಯಲ್ಲಿ ಪ್ರಬಂಧ ಸೇರಿಸಿ ಇಡಿಯಾಗಿ ಕನ್ನಡ ಸಾಹಿತ್ಯದ ಪ್ರಾಚೀನ ಸಂದರ್ಭಗಳನ್ನು ಚರ್ಚಿಸಿದ್ದಾರೆ.

ಇದರಲ್ಲಿ ಛಂದಸ್ಸಿಗೂ ಮತ್ತು ಸಾಹಿತ್ಯ ಚರಿತ್ರೆಗೂ ಏನು ಸಂಬಂಧ ಎನ್ನುವುದಕ್ಕೆ ಮುನ್ನುಡಿಯಲ್ಲಿ ಆಕರ ಸಾಮಗ್ರಿಗಳಾಗಿದ್ದರಿಂದ ಬೇರೆಯಾಗಿ ಪ್ರಕಟಿಸುವುದಕ್ಕಿಂತ ಛಂದಸ್ಸು ಗ್ರಂಥದ ಒಟ್ಟಿಗೆ ಇರಲಿ ಎಂದು ಪ್ರಬಂಧವನ್ನು ಮುನ್ನುಡಿ ಜೊತೆಗೆ ಪ್ರಕಟಿಸಿರಬಹುದು. ಹಾಗೆಯೇ ಕನ್ನಡ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ಈ ನಿಬಂಧ ಆಕರವಾಗಲಿ ಎನ್ನುವ ಉದ್ದೇಶದಿಂದ ಅಥವಾ

'ಛಂದಸ್ಸು' ಮತ್ತು ಸಾಹಿತ್ಯ ಚರಿತ್ರೆಯನ್ನು ಚಾರಿತ್ರಿವಾಗಿ ದಾಖಲು ಮಾಡಿರಬಹುದಾಗಿದೆ. ಒಟ್ಟಾರೆಯಾಗಿ ಕನ್ನಡ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ಇದು ಪ್ರೇರಣೆಯಾಗಿದೆ. ಕಿಟೆಲ್‌ರು ಎರಡು ಶಾಸ್ತ್ರಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಆದರೆ ಕನ್ನಡದ ಬಹುಪಾಲು ಕೃತಿಗಳು ಅಮುದ್ರಣಗೊಂಡಾಗ ಪ್ರಾಚೀನ ಸಾಹಿತ್ಯದ ಬಗೆಗೆ ಸುತ್ತಣ ಪರಿಸರದಲ್ಲಿ ಅಷ್ಟೇನೂ ಒಲವು ಇಲ್ಲದಿದ್ದಾಗ ಪ್ರಾಚೀನ ಕೃತಿಗಳನ್ನು ಹೇಗೆ ಸಂಪಾದಿಸಬೇಕು ಎಂಬುದು ಪ್ರಶ್ನೆಯಾಗಿತ್ತು, ಆದರೆ ಕಿಟೆಲ್ ವೈಧಾನಿಕತೆಯಲ್ಲಿ ಕೃತಿಗಳ ವಿನ್ಯಾಸಕ್ರಮ ಹೇಗೆ ಇರುತ್ತದೆ. ಸೂತ್ರ, ಅದರ ಎಡಮಗ್ಗುಲಿಗೆ ಇಂಗ್ಲಿಷ್‌ನಲ್ಲಿ ಸ್ಥೂಲವಾದ ಸೂತ್ರಾರ್ಥ, ಸೂತ್ರದ ಕೆಳಗೆ ಕ್ರಮವಾಗಿ ಪರಿಚ್ಛೇದ, ಅನ್ವಯ, ಟೀಕು, ವೃತ್ತಿ ಮತ್ತು ಪ್ರಯೋಗಗಳನ್ನು ಸ್ವರೂಪ ರೀತಿಯಲ್ಲಿ ಚರ್ಚಿಸಿದ್ದಾನೆ. ಈ ಹಿನ್ನೆಲೆಯಂತಹ ಅನೇಕ ವಿಷಯಗಳನ್ನು ಕುರಿತು ಹೇಳುತ್ತಾ ಕೃತಿಗೆ ಮುನ್ನುಡಿಯಂಥ ಬರವಣಿಗೆ ಬೇಕಾಗಿದೆ. ಹೀಗಾಗಿ ಮುನ್ನುಡಿಯಿಂದ ಕನ್ನಡ ಸಾಹಿತ್ಯಕ್ಕೆ ದೊಡ್ಡ ಬೆನ್ನೆಲುಬಾಗಿ ಹೊಸ ತಿರುವುಗಳನ್ನು ಪಡೆದಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಂಪಾದನಾ ಕ್ಷೇತ್ರದ ಮೂಲಕ ಮುನ್ನುಡಿಗಳು ಮುಂದಿನ ಅಧ್ಯಯನಕ್ಕೆ ಮಾದರಿಯಾದವು. ಉಳಿದ ಹಳಗನ್ನಡ ಹಸ್ತಪ್ರತಿಗಳು, ಕೃತಿಗಳು ಕಿಟೆಲ್ ಮಾದರಿಯಲ್ಲಿಯೇ ಪಾಠಾಂತರ, ಪರಿಷ್ಕಾರ ಟೀಕು, ವಿಮರ್ಶಾತ್ಮಕ ಮಾದರಿಯಾಗಿ ವಿಶ್ಲೇಷಣಾತ್ಮಕವಾಗಿ ಸಾರಾಂಶಪ್ರಧಾನವಾಗಿ ಅಂದಿನಿಂದ ಇಂದಿನವರೆಗೆ ಮುನ್ನುಡಿಗಳಲ್ಲಿ ಮೌಲ್ಯಕ್ಕೊಳಪಡಿಸಲಾಗುತ್ತಿದೆ.

ಹಳಗನ್ನಡ ಕಾವ್ಯಸಂಗ್ರಹ ಪ್ರಕಟಣೆಗೆ ಸಂಬಂಧಿಸಿದಂತೆ ಪಾಶ್ಚಾತ್ಯ ವಿದ್ವಾಂಸರು ರೂಪಿಸಿದ ವಿಧಾನ ತುಂಬಾ ಉಪಯುಕ್ತವಾಗಿದ್ದು, ಅನಂತರ ನಮ್ಮ ದೇಸಿ ವಿದ್ವಾಂಸರು ಗ್ರಂಥ ಸಂಪಾದನೆಯ ಸಂದರ್ಭದಲ್ಲಿ ಅದನ್ನು ಬಳಸಿ ಮತ್ತಷ್ಟು ಹೊಸ ವಿಚಾರಗಳೊಂದಿಗೆ ಮುನ್ನುಡಿ ಮೂಲಕವಾಗಿ ಉತ್ತಮವಾದ ಗ್ರಂಥಸಂಪಾದನೆಯನ್ನು ಮಾಡಲು ಕಲಿತರು. ಹೀಗೆ ಗ್ರಂಥ ಸಂಪಾದನೆ ಸಂದರ್ಭದಲ್ಲಿ ಕವಿ, ಕೃತಿ, ಶೋಧನೆಯೊಡನೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ರೂಪಿಸುವ ಪ್ರಯತ್ನಗಳನ್ನು ಮತ್ತು ಅದರ ವಿಶಿಷ್ಟತೆಯನ್ನು ಪ್ರತಿಪಾದಿಸುವ ಪ್ರಯತ್ನವನ್ನು ಅದರ ಅಧ್ಯಯನಗಳ ಮೂಲಕ ಕಾಣಲು ಸಾಧ್ಯವಾಗಿದೆ.

**೩.೧.೨. ಮುನ್ನುಡಿ ಸಾಹಿತ್ಯದಲ್ಲಿ ದೇಶೀಯ ಮಹತ್ವ**

ಪಾಶ್ಚಾತ್ಯ ವಿದ್ವಾಂಸರ ನಂತರ ಕನ್ನಡದ ವಿದ್ವಾಂಸರು ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ತೊಡಗಿಸಿಕೊಂಡರು. ಬಿ.ಎಲ್.ರೈಸ್, ಕಿಟೆಲ್, ಜಿ.ಗ್ಯಾರೆಟ್ ಇನ್ನಿತರ ಪಾಶ್ಚಾತ್ಯರ ಹತ್ತಿರ ಶಿಕ್ಷಣ ಪಡೆದ ಕೆ.ಬಿ.ಪಾಠಕ್, ಆರ್.ನರಸಿಂಹಚಾರ್ಯ ಇವರು ಹಳಗನ್ನಡ ಸಂಪಾದನೆಯ ಕ್ಷೇತ್ರವನ್ನು ಮುಂದುವರಿಸಿದರು. ಇವರನ್ನು ಕುರಿತು ಎಂ.ಚಿದಾನಂದಮೂರ್ತಿಯವರು "ಅಶಾಸ್ತ್ರೀಯ ಸಂಪಾದನೆಗಳೆಂದು ಮೂಗು ಮುರಿಯುವುದು ಸುಲಭ. ಆದರೆ ಪ್ರಾಚೀನ ಗ್ರಂಥಗಳ ಪ್ರಕಟಣೆಯ ಕಾರ್ಯದಲ್ಲಿ ಇವರಿಬ್ಬರು ಮಾಡಿರುವ ಸೇವೆ ಚಿರಸ್ಮರಣೀಯವಾದುದು"[೫] ಎಂದು ಹೇಳುತ್ತಾರೆ. ಹೀಗೆಯೇ ಕರ್ನಾಟಕದ ಉತ್ತರಭಾಗದಲ್ಲಿ ಫ.ಗು.ಹಳಕಟ್ಟಿ, ದಕ್ಷಿಣ ಭಾಗದಲ್ಲಿ

ಎಂ.ಎ.ರಾಮಾನುಜಯ್ಯಂಗಾರರು ಪ್ರಕಟಣೆಯಲ್ಲಿ ಹಾಗೂ ಸಂಪಾದನೆಯಲ್ಲಿ ತೊಡಗಿಸಿಕೊಂಡಿದ್ದರು. ಕನ್ನಡ ಗ್ರಂಥಸಂಪಾದನೆಯ ಮೊದಲ ಹಂತ ಸಾಮಗ್ರಿ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾದದ್ದು. ಪಾಶ್ಚಾತ್ಯರ ಸಂಪಾದನೆಯ ಮಾದರಿಯಲ್ಲಿಯೇ ಇವರು ತೊಡಗಿದ್ದರು. ಆದರೆ ಪ್ರಕಟಣೆಯ ಮೊದಲು ದೇಶೀಯ ಚಿಂತನೆಗೆ ಒಳಪಡಿಸಲಾಗುತ್ತಿತ್ತು. ಪಾಶ್ಚಾತ್ಯರು ಮಾಡಿರುವ ಪಾಠಾಂತರ, ಪರಿಸ್ಕರಣೆ, ವಿಮರ್ಶಾತ್ಮಕ ಚಿಂತನೆಯನ್ನು ಭಿನ್ನವಾಗಿ ಪ್ರಕಟಣೆ ಮಾಡಿರುವುದು ಗಮನಿಸಬೇಕಾಗಿದೆ. ಈ ಸಂದರ್ಭದಲ್ಲಿ ಮುನ್ನುಡಿಯಲ್ಲಿಯೇ ಚರ್ಚಿಸುವುದಕ್ಕೆ ಜಾಗ ಇರುತ್ತಿತ್ತು. ಆ ಕಾಲದಲ್ಲಿ ಬಹುತೇಕವಾಗಿ ಹಳಗನ್ನಡ ಕಾವ್ಯಗಳೆಲ್ಲಾ ಪ್ರಕಟಣೆಗೊಂಡಿದ್ದು ಮಹತ್ವದ ವಿಚಾರವಾಗಿದೆ. ಪಾಠ ಪರಿಷ್ಕರಣೆ, ಸಂಶೋಧನೆ, ಕವಿಪಾಠ, ನಿಷ್ಕರ್ಷೆ, ಕವಿಕಾವ್ಯ ವಿಮರ್ಶೆ, ರಸವಿಮರ್ಶೆಯಾಗಿ ಈ ವಿಷಯಗಳ ಕುರಿತು ಮುನ್ನುಡಿಗಳಲ್ಲಿ ಆಧುನಿಕ ವಿಚಾರಗಳಾಗಿ ಹಳಗನ್ನಡ ಕೃತಿಗಳನ್ನು ಸಾರಾಂಶ ಪ್ರಧಾನವಾಗಿ ಓದುಗರಿಗೆ ಮುಂದಿಟ್ಟರು.

ಮೈಸೂರು ವಿವಿಯಿಂದ ಪ್ರಕಟವಾದ ಆದಿಪುರಾಣ ಸಂಗ್ರಹದಲ್ಲಿ ಕೆ.ವಿ.ಪುಟ್ಟಪ್ಪನವರು ಮುನ್ನುಡಿಯಲ್ಲಿ "೧೮೩೮ರಲ್ಲಿ ಬೆಂಗಳೂರು ಸರಕಾರದ ಮುದ್ರಣಾಲಯದಲ್ಲಿ ಆಗ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಜಿ.ಗ್ಯಾರೆಟ್ ಅವರು ಮೊದಲಿಗೆ 'ಶಬ್ದಮಣಿದರ್ಪಣ' ಕೃತಿಯನ್ನು ಮುದ್ರಿಸಿದರು."[೬] ಇದು ಕನ್ನಡ ಸಾಹಿತ್ಯದಲ್ಲಿ ಮೊದಲ ಪ್ರಕಟಣೆಗೊಂಡ ಕೃತಿಯಾಗಿದೆ. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಚದುರಿ ಹೋಗಿದ್ದನ್ನು ಒಟ್ಟುಗೂಡಿಸುವ ಕೆಲಸ ಜಿ.ಗ್ಯಾರೆಟ್‌ರಿಂದ ಮೊದಲುಗೊಳ್ಳುತ್ತದೆ. ಇದಕ್ಕೆ ಸಾಥ್ ನೀಡಿದವರು ಕಿಟೆಲ್, ಇ.ಪಿ.ರೈಸ್, ಆರ್.ನರಸಿಂಹಾಚಾರ್, ಟಿ.ಮಲ್ಲಪ್ಪ, ರಾಮಾನುಜಯ್ಯಂಗಾರ್ ಪ್ರಮುಖರು. ಹೀಗೆ ಕನ್ನಡ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ಮೊದಲ ಪ್ರಯತ್ನವಾಗಿ ಮುನ್ನುಡಿಗಳು(ಪ್ರಸ್ತಾವನೆ) ವೇದಿಕೆಯಾಗಿ ಪರಿಣಮಿಸುತ್ತವೆ. ಕನ್ನಡ ಸಾಹಿತ್ಯ ಕುರಿತು ಮೊದಲ ವಿಮರ್ಶೆ ನಡೆದದ್ದು ಮುನ್ನುಡಿಗಳಲ್ಲಿ ಎಂದು ಮನಗಾಣಬೇಕಾಗಿದೆ. ನಮ್ಮ ದೇಸಿ ವಿದ್ವಾಂಸರಿಗೆ ಮಾರ್ಗದರ್ಶನ, ಪ್ರೇರಣೆ ನೀಡಿದ ಕೀರ್ತಿ ಪಾಶ್ಚಾತ್ಯ ವಿದ್ವಾಂಸರಿಗೆ ಸಲ್ಲುತ್ತದೆ. ಪಾಶ್ಚಿಮಾತ್ಯರು ತಮ್ಮ ಭಾಷೆಯನ್ನು ಆಡಳಿತಾತ್ಮಕವಾಗಿ ಬಳಸುವ ದೃಷ್ಟಿಯನ್ನು ಹೊಂದಿದ್ದರು. ಆದರೆ ಯಾವಾಗ ಕನ್ನಡ ಪ್ರಾಚೀನ ಹಸ್ತಪ್ರತಿಗಳು, ಶಾಸನಗಳು, ಇವುಗಳ ಬಗ್ಗೆ ಸಂಪಾದನೆಯಲ್ಲಿ ತೊಡಗಿದಾಗ ಈ ಜನರಿಗೆ ಇತಿಹಾಸ ಪ್ರಜ್ಞೆ ಇಲ್ಲ ಎಂಬುದನ್ನು ಮನಗಂಡಿದ್ದರು. ಆದರೆ ಭಾರತೀಯರು ಇತಿಹಾಸ ಸೃಷ್ಟಿ ಮಾಡುತ್ತಾರೆ. ಆದರೆ ಚರಿತ್ರೆಪ್ರಜ್ಞೆ ಕಡಿಮೆ ಎಂದು ತಿಳಿದರು. ಈ ಮೂಲಕವಾಗಿ ಹಲವಾರು ಕನ್ನಡ ಹಸ್ತಪ್ರತಿಗಳನ್ನು ಸ್ಥಳೀಯರ ಜೊತೆಗೆ ಸೇರಿಕೊಂಡು ಸ್ಥಳೀಯ ಚರಿತ್ರೆ, ಶಾಸನಗಳು, ಹಸ್ತಪ್ರತಿಗಳು ದೇಶೀಯ ವಿದ್ವಾಂಸರು ಸಾಥ್ ಕೊಟ್ಟಿದ್ದರ ಪರಿಣಾಮವಾಗಿ ಮುದ್ರಣದ ಮೂಲಕ ರೂಪಕೊಟ್ಟರು. ಈ ಸಂದರ್ಭದಲ್ಲಿ ಮುನ್ನುಡಿಗಳಲ್ಲಿ ಕೃತಿಯ ಸಂಪಾದನೆ, ಪಾಶ್ಚಾತ್ಯರ ನೆರವು, ಈ ವಿಷಯಗಳ ಕುರಿತು ತಾತ್ವಿಕ ರೂಪದಲ್ಲಿ ನಿರೂಪಿಸಿರುವುದು ಚಾರಿತ್ರಿಕ ಸಂಗತಿಯಾಗಿದೆ. ಆಗ ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಬಾಸಲ್ ಮಿಷನರಿಗಳು, ಪಾಶ್ಚಿಮಾತ್ಯರ ನೆರವು, ಅವರ ಕೊಡುಗೆ ಅಪಾರವೆಂದು ದೇಶೀಯ ವಿದ್ವಾಂಸರು ಶ್ಲಾಘಿಸಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆಯ ಬಿಕ್ಕಟ್ಟುಗಳಿಗೆ ಪಾಶ್ಚಾತ್ಯರ ಅಧ್ಯಯನ, ಸಂಶೋಧನೆಗಳಿಂದ, ವಿದ್ವಾಂಸರ ಸಹಾಯ ಸಹಕಾರಗಳಿಂದ, ಅನೇಕ ಪರಿಹಾರ ದೊರಕಿತು. ಕನ್ನಡ ನಾಡಿನ ಅನೇಕ ಮಹತ್ವದ ಕೃತಿಗಳಾದ 'ಕವಿರಾಜಮಾರ್ಗ', 'ಪಂಪಭಾರತ', 'ಪಂಪರಾಮಾಯಣ', 'ಶಬ್ದಮಣಿದರ್ಪಣ,' 'ಛಂದೋಂಬುಧಿ' 'ಶಬ್ದಾನುಶಾಸನ', 'ಕರ್ನಾಟಕ ಭಾಷಾಭೂಷಣ' ಇತ್ಯಾದಿ ಕೃತಿಗಳು ಪಾಶ್ಚಾತ್ಯರ ನೆರವಿನಿಂದ ಪ್ರಕಟಣೆಗೊಂಡವು. ಈ ಕೃತಿಗಳಿಗೆ ವಿಸ್ತೃತವಾದ ಮುನ್ನುಡಿಗಳನ್ನು ಬರೆದು ಸಾಹಿತ್ಯ ಚಿಂತನೆಗೆ ಹಣಿ ಮಾಡಿದರು. ಕಿಟೆಲ್‌ರು ಹೇಳುತ್ತಾ "ಹಸ್ತಪ್ರತಿ ಸಂಸ್ಕರಣೆ ಪರಿಷ್ಕರಣೆ ಮಾಡಿ ರೂಪಕೊಡುವುದು ಚರಿತ್ರೆಗಳಾಗಿ ರೂಪಗೊಳ್ಳುತ್ತವೆ" ಎಂದು ಹೇಳುತ್ತಾರೆ. ಇ.ಪಿ.ರೈಸರು ಬರೆದ ಕನ್ನಡ ಸಾಹಿತ್ಯ ಚರಿತ್ರೆಯ ಸಂದರ್ಭವೆಂದರೆ ಅದು ಕನ್ನಡ ಸಾಹಿತ್ಯ ಚರಿತ್ರೆಯ ಮಗು ಹುಟ್ಟಿದ ಕಾಲವಾಗಿತ್ತು, ಆದರೆ ತದನಂತರ ಮುನ್ನುಡಿಗಳು ವೇದಿಕೆಗಳಾಗಿ ರೂಪಗೊಳ್ಳುತ್ತಾ ಕನ್ನಡ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ಹೊಸ ಚಿಂತನೆ ನಡೆಯಿತು.

ಇದರಿಂದ ಕನ್ನಡವರಿಯದ ಭಾಷಾಬಂಧುಗಳಲ್ಲಿ ನಮ್ಮ ಸಾಹಿತ್ಯವನ್ನು ಪ್ರಚಾರ ಮಾಡುತ್ತಾ, ಪಾಶ್ಚಾತ್ಯ ವಿದ್ವಾಂಸರ ಜೊತೆ ಜೊತೆಗೆ ಸ್ಥಳೀಯ ವಿದ್ವಾಂಸರು ಪ್ರಮುಖ ಪಾತ್ರ ವಹಿಸುತ್ತಾರೆ. ಹಾಗೆಯೇ ಪಾಶ್ಚಿಮಾತ್ಯರ ಮತ್ತು ದೇಶೀಯ ವಿದ್ವಾಂಸರ ಕೈಚಳಕದಿಂದ ಧಾರ್ಮಿಕ ಸ್ಥಾನ ಹೊಂದಿದ್ದ ಕೆಲವು ಹಸ್ತಪ್ರತಿಗಳನ್ನು ಶೋಧಿಸಿದರು. ಆಗ ಕನ್ನಡ ಸಾಹಿತ್ಯಕ್ಕೆ ಮತ್ತು ಇತರ ಅನ್ಯ ಜ್ಞಾನಶಿಸ್ತು ಪ್ರಕಾರಗಳಿಗೆ ಮಹತ್ವ ಬಂತು. ಕನ್ನಡದ ಮೊಟ್ಟಮೊದಲನೇಯ ಪ್ರೇಮಕಥೆಯಾದ 'ಕರ್ನಾಟಕ ಕಾದಂಬರಿ'ಯನ್ನು ಒಂದೇ ಒಂದು ಹಸ್ತಪ್ರತಿಯಿಂದ ಗ್ರಂಥಪಾತವಾಗಿದ್ದ ಭಾಗಗಳನ್ನು ವಿದ್ವಾಂಸರಿಂದ ತುಂಬಿಸಿ ಉಳಿಸಿಕೊಟ್ಟ ಕೀರ್ತಿ ಟಿ.ಮಲ್ಲಪ್ಪನವರಿಗೆ ಸಲ್ಲಬೇಕಾಗಿದೆ. ಇದಲ್ಲದೇ ಎಂ.ಎನ್.ರಾಮಾನುಜಯ್ಯಂಗಾರರು, ಎಸ್.ಜಿ. ನರಸಿಂಹಾಚಾರ್ಯರು, ಆರ್.ನರಸಿಂಹಾಚಾರ್ಯರು ಇವರ ಸಹಕಾರ ನೆರವಿನಿಂದ ಹಲವಾರು ಕನ್ನಡ ಕಾವ್ಯಗಳನ್ನು ಹೊರತಂದರು. ಇದರ ಜೊತೆಗೆ ಮೈಸೂರು ಪ್ರಾಚ್ಯಕೋಶದಿಂದ ಅನೇಕ ಕಾವ್ಯಗಳನ್ನು ಮುದ್ರಿಸಿ ಅದಕ್ಕೆ ದೀರ್ಘಮುನ್ನುಡಿಗಳಾಗಿ ಉಪೋದ್ಘಾತದ ಮೂಲಕ ವಿಶ್ಲೇಷಣೆ ವಿಮರ್ಶೆ ಮಾಡಿ ಹಸ್ತಪ್ರತಿಗಳ ಕಾವ್ಯಗಳಿಗೆ ನ್ಯಾಯ ದೊರಕಿಸಿದ್ದಾರೆ.

ದೇಶೀಯರು ಸಂಪಾದನೆಯ ಮೂಲಕ ಮುನ್ನುಡಿಗಳಲ್ಲಿ ಅವರ ಸ್ವರೂಪ ಹೇಗಿದೆ ಎಂಬುದನ್ನು ಗುರುತಿಸುತ್ತಾ, ದೇಶೀಯ ವಿದ್ವಾಂಸರ ಮೇಲೆ ಪಾಶ್ಚಾತ್ಯರ ಪ್ರಭಾವ ಪ್ರೇರಣೆಯಾಗಿದ್ದರೂ ಸ್ಥಳೀಯ ಸಂಸ್ಕೃತಿಗೆ ಹೆಚ್ಚು ಹೆಚ್ಚು ಒಲವು ನೀಡಿದರು. ಹಾಗೆಯೇ ಸಾಹಿತ್ಯದ ಸ್ವರೂಪ ನಿರ್ಮಾಣದ ಜೊತೆಗೆ ಹಲವಾರು ಹಳಗನ್ನಡ, ನಡುಗನ್ನಡ ಕೃತಿಗಳ ಸಂಪಾದನೆಯಲ್ಲಿ ತೊಡಗಿದ್ದರು. ಆಗ ಎರಡು ರೀತಿಯಲ್ಲಿ ಸಂಪಾದನೆ ಮಾಡಿದ್ದನ್ನು ಗುರುತಿಸಬಹುದು. ಹಳಗನ್ನಡ ಕೃತಿಗಳನ್ನು ಪ್ರಾಚೀನ ಮುನ್ನುಡಿಗಳ ಹೆಸರಿನಲ್ಲಿ ಅಂದರೆ 'ಉಪೋದ್ಘಾತ', 'ತೋರಣ ನಾಂದಿ', 'ಪೂರ್ವಸೂರಿಗಳ ಕೀರ್ತಿ', 'ಪೀಠಿಕೆ ಭಾಗ', 'ಪ್ರಸ್ತಾವನೆ', 'ಮುನ್ನುಡಿ' ಇತ್ಯಾದಿಯಾಗಿ ಸಂಪಾದನೆಗೆ ತೊಡಗಿದರು.

೧. ನೇರವಾಗಿ ಹಸ್ತಪ್ರತಿಗಳ ಮೂಲಕ ಸಂಪಾದನೆ ಮಾಡಿರುವುದು.

೨. ಸಂಪಾದನೆ ಮಾಡಿದವುಗಳನ್ನು ಪುನರ್ ಸಂಪಾದನೆ ಅಥವಾ ಪುನರ್ ಮೌಲ್ಯೀಕರಣ ಮಾಡುವುದು.

ಈ ಹಿನ್ನೆಲೆಯಿಂದ ಕಿಟೆಲ್, ಇ.ಪಿ.ರೈಸ್, ಬಿ.ಎಲ್.ರೈಸ್, ಆರ್.ನರಸಿಂಹಾಚಾರ್, ಟಿ.ಮಲ್ಲಪ್ಪ, ಎಂ.ಎನ್.ರಾಮಾನುಜಯ್ಯಂಗಾರ್ ಇತ್ಯಾದಿಯವರಿಂದ ಪ್ರೇರಣೆ ಪ್ರಭಾವದಿಂದ ಹಾಗೂ ಇತರ ಅನ್ಯಜ್ಞಾನ ಶಿಸ್ತುಗಳಿಂದ, ಜ್ಞಾನ ಪರಿಕರಗಳಿಂದ ಹಳೆಬೇರು ಹೊಸಚಿಗುರು ಬೆಳೆಸುವ ವಿಧಾನವನ್ನು ರೂಪಿಸಿಕೊಂಡರು. ಜೊತೆಗೆ ತಮ್ಮ ಸಿದ್ಧಾಂತವನ್ನು ರೂಪಿಸಿಕೊಂಡು ಸಾಹಿತ್ಯ ರಚನೆಯಲ್ಲಿಯೇ ಹಳಗನ್ನಡ ಕೃತಿಗಳನ್ನು ಸಂಪಾದನೆ ಮಾಡಿದರು. ಅಂಥವರಲ್ಲಿ ಟಿ.ಎಸ್.ವೆಂಕಣ್ಣಯ್ಯ, ಎಸ್.ಜಿ.ನರಸಿಂಹಾಚಾರ್ಯ, ಫ.ಗು.ಹಳಕಟ್ಟಿ, ಗೋವಿಂದ ಪೈ, ಎ.ಆರ್.ಕೃಷ್ಣಶಾಸ್ತ್ರಿ, ಎಲ್.ಬಸವರಾಜು, ಶಿ.ಶಿ.ಬಸವನಾಳ, ಡಿ.ಎಲ್.ನರಸಿಂಹಾಚಾರ್ಯ, ಕೆ.ಜಿ.ಕುಂದಣಗಾರ, ಎಚ್.ದೇವಿರಪ್ಪ, ಕುವೆಂಪು, ವಿ.ಸೀತಾರಾಮಯ್ಯ, ಡಿ.ವಿ.ಜಿ., ದೇ.ಜ.ಗೌ. ಅವರು ಇತ್ಯಾದಿ ಅನೇಕ ವಿದ್ವಾಂಸರಿಂದ ಹಂತಹಂತವಾಗಿ ಹಳಗನ್ನಡ ಕೃತಿಗಳನ್ನು ಮರುಮೌಲ್ಯಮಾಪನ ವಸ್ತುವಿಷಯವಾಗಿ ಮುನ್ನುಡಿಗಳಲ್ಲಿ ಮಾಡತೊಡಗಿದರು.

* ಹಸ್ತಪ್ರತಿಗಳ ವಿಚಾರ
* ತಾಳೆಯೋಲೆಯ ವಿಚಾರ
* ಕವಿಕಾವ್ಯದ ವಿಚಾರ
* ಚಾರಿತ್ರಿಕ ಅಂಶಗಳು
* ಕವಿಯ ಪ್ರಾಶಸ್ತ್ಯ
* ಕವಿಗಳ ಮೇಲಾದ ಯಾವ ಸಾಹಿತ್ಯದ ಪ್ರಭಾವ
* ಕಾವ್ಯದ ಛಂದೋವಿಚಾರ
* ಸಂಕೇತದ ಮೂಲಕ ಚರ್ಚೆ ಮಾಡಿರುವುದು
* ಪಾಶ್ಚಿಮಾತ್ಯರು ಸಂಪಾದನೆ ಮಾಡಿರುವ ಕೆಲವು ದೋಷಗಳ ಕುರಿತು ವಿಶ್ಲೇಷಣೆ
* ಸಾರಾಂಶಪ್ರಧಾನವಾದ ವಿಷಯ

ಹೀಗೆ ಮೇಲಿನ ಅಂಶಗಳನ್ನು ಗುರುತಿಸುತ್ತಾ 'ಹಸ್ತಪ್ರತಿ ವಿಚಾರ'ವಾಗಿ ಅವುಗಳಿಂದ ನೇರವಾಗಿ ವಿಷಯವನ್ನು ಚರ್ಚಿಸುವುದು. ಅವುಗಳಲ್ಲಿ 'ತಾಳೆಯೋಲೆಯ ವಿಚಾರ'ವಾಗಿ ಅದರ ವಸ್ತುವಿಷಯ ಹಾಗೂ ಅದರ ಮೂಲ ಯಾವ ಸ್ಥಳದಲ್ಲಿ ಸಿಕ್ಕಿದೆ ಎಂಬುದನ್ನು ಚರ್ಚಿಸುವುದು. ಕವಿಕಾವ್ಯದ ವಿಚಾರವಾಗಿ ಕವಿ ಯಾವ ದೇಶ, ಕಾಲ, ಸ್ಥಳದ ವಿಚಾರ, ಅವನ ಹೆಸರು, ಅವನ ಗುರುಗಳು, ತಂದೆ, ತಾಯಿ, ಯಾರು ಎನ್ನುವುದನ್ನು ಮೊದಲ ಹಂತದ ವಿಚಾರಗಳಾಗಿ ಚರ್ಚಿಸಿದ್ದಾರೆ. ಕೆಲವು ಸಾರಿ ಕವಿಯ ಕಾಲದ ವಿಚಾರವಾಗಿ ವಾಗ್ವಾದಗಳು ಸೃಷ್ಟಿಗೊಂಡಿವೆ.

ರತ್ನಾಕರವರ್ಣಿ ಕಾಲ ಹಾಗೂ ಅವನ ಗುರುಗಳು ಯಾರು ಎಂಬುದು ಚರ್ಚೆ ನಡೆದಿದ್ದವು. ಪಂಪ ಹುಟ್ಟಿದ ಸ್ಥಳ ಹಾಗೂ ತಂದೆ, ತಾಯಿ ವಿಚಾರವಾಗಿ ಚರ್ಚೆ ನಡೆದಿದ್ದವು. 'ಚಾರಿತ್ರಿಕ ಅಂಶಗಳು' ಕೂಡ ನಡೆದಿವೆ. ಯಾವ ಕೃತಿಕಾರ, ಯಾವ ಕೃತಿ, ಯಾವ ಕಾಲಘಟ್ಟದಲ್ಲಿದ್ದ ಹಾಗೂ ಅವನಿಗೆ ಯಾವ ರಾಜವಂಶಜರು ಆಶ್ರಯ ನೀಡಿದರು ಮತ್ತು ರಾಜನ ಕುರಿತು ಸಮೀಕರಿಸಿ ಬರೆದಿದ್ದನ್ನು ಚಾರಿತ್ರಿಕವಾಗಿ ಕೃತಿಗಳಲ್ಲಿ ಗುರುತಿಸುತ್ತೇವೆ. 'ಕರ್ಣಾಟಕ ಕಾದಂಬರಿ' ಕೃತಿಯ ಕುರಿತು ಕಾಲ ಹಾಗೂ ಕವಿಯ ವಿಚಾರ ಒಳಗೊಂಡಿದೆ. ಇದಕ್ಕೆ ಆರ್.ನರಸಿಂಹಾಚಾರ್, ಶ್ರೀ ಎಚ್.ಎಂ.ಶಂಕರನಾರಾಯಣರು ವಾಗ್ವಾದ ಮಾಡಿದ್ದು ಮುನ್ನುಡಿಯಲ್ಲಿದೆ. ಕವಿಯು ತನ್ನ ಕಾವ್ಯದಲ್ಲಿ ಯಾವ ವಸ್ತು ವಿಷಯಕ್ಕೆ ಪ್ರಾಶಸ್ತ್ಯ ನೀಡಿದ್ದ ಎನ್ನುವುದನ್ನು ಪುರಾಣವಸ್ತುವಾಗಿ, ಚಾರಿತ್ರಿಕ ವಸ್ತುವಾಗಿ, ಧಾರ್ಮಿಕ ವಸ್ತುವಾಗಿ, ಲೌಕಿಕ ವಸ್ತುವಾಗಿ, ಆಗಮಿಕ ವಸ್ತುವಾಗಿ ಪರಿಶೀಲಿಸಿದ್ದಾರೆ. ಮುನ್ನುಡಿಗಳಲ್ಲಿ ವ್ಯಕ್ತಗೊಂಡ ವಸ್ತುವಿಷಯದಲ್ಲಿ ಪಂಪ, ರನ್ನ, ಪೊನ್ನ, ಲೌಕಿಕ ಆಗಮಿಕವಾಗಿ ಕಾವ್ಯ ರಚನೆ ಮಾಡಿದ್ದು ಅನೇಕ ವಿಷಯಗಳ ಕುರಿತು ಚರ್ಚಿಸಲಾಗಿದೆ. ಕನ್ನಡ ಕವಿಗಳ ಮೇಲೆ ಸಂಸ್ಕೃತ ಸಾಹಿತ್ಯ, ತಮಿಳು ಸಾಹಿತ್ಯದ ಪ್ರಭಾವವಿರುವುದನ್ನು ಗುರುತಿಸಲಾಗಿದೆ. "ತೊಲ್ಕಾಪ್ಪಿಯಮ್ ಕಾವ್ಯ" ವಚನ ಸಾಹಿತ್ಯದ ಮೇಲೆ ತಮಿಳು ಸಾಹಿತ್ಯದ ಪ್ರಭಾವ ಬೀರಿರುವುದನ್ನು ಗುರುತಿಸಲಾಗಿದೆ. ಪಂಪ, ರನ್ನ, ಕುಮಾರವ್ಯಾಸ, ಇತರರಿಗೆ ವ್ಯಾಸ ಭಾರತ ಹಾಗೂ ರಾಮಾಯಣ ಕಥೆಗಳ ಪ್ರಭಾವ ಹಳಗನ್ನಡ ಸಾಹಿತ್ಯಕ್ಕೆ ಪ್ರೇರಣೆಯಾಗಿದೆ. ಹಳಗನ್ನಡ ಕಾವ್ಯದ ಭಾಷೆ ಮತ್ತು ಶೈಲಿಯ ಕಾವ್ಯಾತ್ಮಕವಾಗಿ ರೂಪಗೊಂಡು ಕಾವ್ಯದಲ್ಲಿ ಚಂಪು, ಸಾಂಗತ್ಯ, ಕಂದ, ರಗಳೆ, ತ್ರಿಪದಿ, ಇತರ ಛಂದೋರೂಪಗಳನ್ನು ಪಡೆದುಕೊಂಡಿವೆ. ಆದರೆ ಅತಿ ಹೆಚ್ಚಾಗಿ ಸಂಸ್ಕೃತ ಭಾಷೆ ಹೊಂದಿದ್ದರೂ ಅದರ ಪ್ರಭಾವ ಕಡಿಮೆಯಾಗಿದೆ. ನಯಸೇನ ಮತ್ತು ಆಂಡಯ್ಯ ಶುದ್ಧಗನ್ನಡದಲ್ಲಿ ಕಾವ್ಯ ರಚನೆ ಮಾಡಬೇಕು ಎಂದು ಪ್ರತಿಪಾದಿಸಿದವರು. ಹೀಗೆ ಮುದ್ದಣನು ಕೂಡ 'ಗದ್ಯಂ ವದ್ಯಂ ಪದ್ಯಂ, ಹೃದ್ಯಂ' ಎಂದು ಹೇಳಿದ್ದಾನೆ. ವಚನಕಾರರು ಕೂಡ ಜನಭಾಷೆಗೆ ಹತ್ತಿರದ ಜನರಿಗೆ ತಿಳಿಯುವ ವಚನಗಳನ್ನು ರಚಿಸಿದ್ದಾರೆ.

ಆದರೆ ಹಳಗನ್ನಡ ಸಾಹಿತ್ಯ ಪಂಡಿತ, ಪುರೋಹಿತಶಾಹಿ ನೆಲೆಯಲ್ಲಿ ರಚನೆಗೊಂಡಿದೆ. ಆಗ ಅಕ್ಷರ ಬರದ ಎಷ್ಟೋ ಜನರಿಗೆ ಪಂಪ, ಕುಮಾರವ್ಯಾಸ ಎಂದರೆ ತಿಳಿಯಲೇ ಇಲ್ಲ. ಆದರೆ ಪುರೋಹಿತಶಾಹಿ ನೆಲೆಯಲ್ಲಿ ರೂಪಗೊಂಡ ವಚನಗಳು, ಪದ್ಯಗಳು ಪ್ರಚುರಗೊಂಡಿವೆ. ಅಂದಿನ ದಿನಗಳಲ್ಲಿ ಪುರೋಹಿತ ನಿಲುವು ಹಾಗೂ ರಾಜಾಶ್ರಯದಲ್ಲಿ ರಾಜನೇ ಅಂತಿಮ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ. ಇಂತಹ ವಿಷಯಗಳ ಕುರಿತು ಪಾಶ್ಚಾತ್ಯರಿಂದ ಮೊದಲುಗೊಂಡು ದೇಶೀಯ ವಿದ್ವಾಂಸರಿಂದ ಪ್ರಸ್ತುತ ಕೃತಿಯ ಸಾರಾಂಶಪ್ರಧಾನವಾದ ವಿಷಯದಲ್ಲಿ ಮುನ್ನುಡಿ ಅಥವಾ ಪ್ರಸ್ತಾವನೆ ಉಪೋದ್ಘಾತ ಮೂಲಕವಾಗಿ ನಮ್ಮ ಮುಂದೆ ಇವೆ. ಪಾಶ್ಚಾತ್ಯರು ಸಂಪಾದನೆ ಮಾಡಿರುವ ಭಾಷೆ, ಶಬ್ದಗಳ ಬಳಕೆ, ಸ್ಥಳಗಳು, ಇನ್ನಿತರ ವಿಷಯಗಳ ಕುರಿತಂತೆ ದೇಶೀಯ ವಿದ್ವಾಂಸರು ಕೆಲವು ಲೋಪದೋಷಗಳನ್ನು ಸರಿಪಡಿಸಿರುವುದರ ಜೊತೆಗೆ ಪಾಶ್ಚಿಮಾತ್ಯರ ಓರಿಯಂಟಲ್ ಅಧ್ಯಯನದ ಮಾದರಿಯನ್ನು ಸ್ಥಳೀಕರಣಗೊಳಿಸಿ ಸಂಪಾದನೆ ಮಾಡಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಅತಿ ಹೆಚ್ಚಾಗಿ ಚರ್ಚೆಗೊಳ್ಳುತ್ತಾ ಬಂದಿರುವ ಪ್ರಾಚೀನ ಕವಿಗಳು ಹಾಗೂ ಅವರ ಕೃತಿಗಳ ಮುನ್ನುಡಿಯಲ್ಲಿ ಹೀಗೆ ವ್ಯಕ್ತಗೊಂಡಿವೆ ಎನ್ನುವುದಕ್ಕೆ ಕವಿರಾಜಮಾರ್ಗ ಕೃತಿ ಉತ್ತಮ ಉದಾಹರಣೆಯಾಗಿದೆ. ಹಳಗಕನ್ನಡ ಸಾಹಿತ್ಯದ ಸಂಪಾದನೆ, ಮರುಸಂಪಾದನೆ, ಮರುಮೌಲ್ಯಮಾಪನಕ್ಕೊಳಗಾದ ಅನೇಕ ಕೃತಿಗಳಲ್ಲಿ ಕವಿರಾಜಮಾರ್ಗ ಹಾಗೂ ಪಂಪನ ಕೃತಿಗಳು ಪ್ರಮುಖವಾಗಿವೆ. ಕನ್ನಡ ಸಾಹಿತ್ಯದ ಮೇಲೆ ಗಾಢ ಪರಿಣಾಮ ಬೀರಿವೆ. ಅದಕ್ಕಾಗಿ ಮುನ್ನುಡಿಯಲ್ಲಿ ವ್ಯಕ್ತಗೊಂಡ ವಿಷಯ ಕುರಿತು ಚರ್ಚಿಸಲಾಗುವುದು. ಕವಿರಾಜಮಾರ್ಗದಿಂದ ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಪಂಪಪೂರ್ವ ಹಾಗೂ ಪಂಪನ ಕಾಲದ ಸಂದರ್ಭವು ವಿಶೇಷವಾದುದು. ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ಅರಸರು, ಬಹಮನಿ ಸುಲ್ತಾನರು ಹಾಗೂ ಮೈಸೂರು ಒಡೆಯರ ತನಕ ಕನ್ನಡ ಸಾಹಿತ್ಯ, ಸಂಸ್ಕೃತಿ, ಕಲೆ, ಸಾಹಿತ್ಯಕ್ಕೆ ಇವರದೇ ಆದ ಅನನ್ಯತೆಯಿದೆ. ಅವರ ಸಾಂಸ್ಕೃತಿಕ ಕೊಡುಗೆ ಅಪಾರವಾಗಿದೆ. ಇವರು ಕನ್ನಡನಾಡಿನ ಸಾಂಸ್ಕೃತಿಕ ಗತವೈಭವವನ್ನು ಉಜ್ವಲಗೊಳಿಸಿದ್ದಾರೆ. ಕನ್ನಡ ಸಾಹಿತ್ಯದ ಅನನ್ಯತೆಯ ಮೊದಲಿಗೆ ಶ್ರೀವಿಜಯನ ಕವಿರಾಜಮಾರ್ಗ ಕೃತಿಯ ಮೂಲಕ ಗುರುತಿಸುತ್ತೇವೆ. ಈ ಕಾಲದ ಸಂದರ್ಭದಲ್ಲಿ ಸಂಸ್ಕೃತ ಪ್ರಭಾವ ದಟ್ಟವಾಗಿದ್ದರೂ ಕನ್ನಡದ ಅಸ್ಮಿತೆಯನ್ನು ವಿಸ್ತರಿಸಿಕೊಂಡಿದೆ. ಈ ಕೃತಿಯಲ್ಲಿ ರಾಜ್ಯ, ಸಂಸ್ಕೃತಿ ವಿಸ್ತರಣೆಯ ನೆಲೆಯನ್ನು "ಕಾವೇರಿಯಿಂದ ಮಾ ಗೋದಾವರಿವರ ಮಿರ್ಪ ನಾಡದಾ ಕನ್ನಡದೊಳ್" ಎನ್ನುವ ಉಲ್ಲೇಖವೇ ನಮ್ಮ ಸಂಸ್ಕೃತಿ ಪ್ರಭುತ್ವದ ವಿಶಾಲ ವಲಯದ ಒಂದು ಭಾಗವಾಗಿತ್ತು. ಆದರೆ ಅರಸುತನದ ಜೊತೆಗಿನ ಅನುಸಂಧಾನದ ಸಾಹಿತ್ಯ, ಸಂಸ್ಕೃತಿಯು ಅನಿವಾರ್ಯದ ಗುಣವಾಗಿಬಿಟ್ಟಿತ್ತು. ಎಲ್ಲ ಸನ್ನಿವೇಶಗಳಲ್ಲಿ ಕೂಡ ಅರಸೊತ್ತಿಗೆಯ ಜೊತೆಗೆ ಪ್ರಜ್ಞಾ ಪೂರ್ವಕವಾದ ಪ್ರಭುತ್ವ ಹೊಂದಿತ್ತು. ಆದರೆ ಇದರ ಮಧ್ಯೆ ಹಲವು ಸಮಸ್ಯೆಗಳು ದ್ವಂದ್ವಗಳು ಮೂಡುತ್ತದೆ. ಡಿ.ಆರ್.ನಾಗರಾಜ ಅವರು ಕವಿರಾಜಮಾರ್ಗ ಕೃತಿಯ ಕುರಿತು ಹೇಳುವಾಗ "ಸೌಹಾರ್ದ ಸೆಣಸಾಟಗಳ ದ್ವಂದ್ವ ಮುಂದುವರಿದಿತ್ತು" ಎಂದು ಹೇಳುತ್ತಾರೆ. ಈ ಹೇಳಿಕೆಯನ್ನು ಪರಿಶೀಲಿಸಿದರೆ ಅರಸೊತ್ತಿಗೆ ನೆರಳು, ರಾಜನ ಆಜ್ಞೆಯೇ ಅಂತಿಮ ಎಂದು ಹೇಳಬಹುದು. ಕೃತಿಯ ಕುರಿತು ಶ್ರೀವಿಜಯನು ಕವಿರಾಜಮಾರ್ಗ ಕೃತಿ ಬರೆದಿದ್ದಾನೆ ಅಥವಾ ನೃಪತುಂಗ ಬರೆದಿದ್ದಾನೆ ಎಂಬುದು ವಿದ್ವಾಂಸರ ಚಿಂತನೆ. ಆದರೆ ಕೃತಿಯ ಆಶಯ ರಾಜನ ನಿಲುವು ಹೊಂದಿರಬೇಕಾಗುತ್ತದೆ. ಏಕೆಂದರೆ ಆ ಸಂದರ್ಭದಲ್ಲಿ ಕೃತಿಯ ಹಲವು ಸಂಸ್ಕೃತಿ ಚಿಂತನೆಗಳು ಕೃತಿಕಾರರಲ್ಲಿ ಮೂಡುತ್ತವೆ. ಆದರೆ ಅರಸೊತ್ತಿಗೆ ಮಡಿಲಿಗೆ ಕೃತಿಕಾರರು ಒಳಗಾಗಿರುವುದು ಕಾಣಬಹುದು. ಕೃತಿಗಳಲ್ಲಿ ಬಡವರು, ಸಾಮಾನ್ಯರು, ಜಾತಿ, ಧರ್ಮ, ವರ್ಣ, ಭಾಷೆ ಹಲವು ಸಂಘರ್ಷಗಳು ನಡೆದಿರುತ್ತವೆ. ಇವನ್ನು ಕೃತಿಕಾರರಲ್ಲಿ ಹಲವಾರು ರೀತಿಯಲ್ಲಿ ಕಾಣಬಹುದು. ಆದರೆ ಇವೆಲ್ಲವುಗಳು ರಾಜನಿಗೆ ಸಂಬಂಧವಿಲ್ಲದೇ ಇರಬಹುದು. ಆದರೆ ರಾಜನ ನಿಲುವು ಏನಿದೆ ಎಂಬುದು ಮುಖ್ಯವಾಗಿರುತ್ತದೆ. ೧೨ನೇ ಶತಮಾನದ ನಂತರ ಧರ್ಮವನ್ನು ಪ್ರಚುರ ಪಡಿಸುವುದು, ರಾಜನನ್ನು ಸಮೀಕರಿಸಿ ಕೃತಿ ಬರೆಯುವುದು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಡಿಮೆಯಾಗುತ್ತದೆ.

ಏಕೆಂದರೆ ರಾಜನ ಅಧೀನದಲ್ಲಿರುವ ಸಮಾಜವನ್ನು ಕುರಿತು ಕೃತಿಕಾರರು ಸಾಹಿತ್ಯ ನಿರ್ಮಾಣ ಮಾಡಿರುವುದನ್ನು ಗಮನಿಸಬಹುದು. ಆದರೆ ಪ್ರಭುಸಂಹಿತೆಯಾಗಿ ಸಾಹಿತ್ಯ ಮತಧರ್ಮದ ತತ್ವಗಳು, ಮೌಲ್ಯಗಳು, ಆ ಸಂದರ್ಭಗಳಲ್ಲಿ ಮೂಡಿಬಂದಿವೆ. ಆದರೆ ಕವಿಯ ಸ್ವೋಪಜ್ಞತೆ ತಮ್ಮ ಕೃತಿಗಳಲ್ಲಿ ಆಶಯವಾಗಿರದೇ ರಾಜನ ಆಶಯವಾಗಿದ್ದವು. ಆಗ ಕೃತಿಕಾರರ ಆಶಯ ಗೌಣ ನೆಲೆಯಾಯಿತು. 

ಪಂಪನು ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಮೂಲಕ ಸಾಹಿತ್ಯಕ್ಕೆ ಭದ್ರಬುನಾದಿ ಹಾಕಿಕೊಟ್ಟನು. "ಬೆಳಗುವೆನಿಲ್ಲ ಲೌಕಿಕಮನಲ್ಲಿ ಜಿನಾಗಮಮಂ" ಎಂದು ಹೇಳುತ್ತಾನೆ. ತನ್ನ ಸಾಹಿತ್ಯ ಲೌಕಿಕ ಪ್ರಪಂಚದ ತೆರೆಯಲ್ಲಿದೆ. ಪಂಪನು ಲೌಕಿಕ ಮತ್ತು ಆಗಮಿಕ ಕೃತಿ ರಚನೆ ಮಾಡಿದನು. ಪಂಪನ ಪ್ರಸಿದ್ಧ ಕೃತಿಯಾದ ವಿಕ್ರಮಾರ್ಜುನ ವಿಜಯ ಕೃತಿಯು ತನ್ನ ಕಾಲದ ನಾಡಿನ ಜನ ಜೀವನವನ್ನು ಆಳವಾಗಿ ಬಿಂಬಿಸಿರುವುದನ್ನು ಮನಗಾಣಬಹುದು. ಕುವೆಂಪು ಪಂಪನ ಕೃತಿಯ ಆದಿಪುರಾಣದ ವಸ್ತು ಸ್ಥಿತಿಯನ್ನು ಕುರಿತು "ಸ್ವಾಭಿಮಾನ, ಸತ್ಯ, ಸಾಹಸ ಪ್ರಿಯತೆ, ಸ್ವಾಮಿಭಕ್ತಿ ಸರ್ವಗುಣಗಳನ್ನು ಹೊಂದಿದ್ದ"[೭] ಎಂದು ಕುರಿತು ಹೇಳುತ್ತಾರೆ. ಪಂಪನು ಸಮಾಜದ ವಸ್ತುಸ್ಥಿತಿಯನ್ನು ಲೌಕಿಕ ಮತ್ತು ಆಗಮಿಕ ಎಂಬ ಪರಿಕಲ್ಪನೆಯಲ್ಲಿ ಚರ್ಚಿಸಿದ್ದಾನೆ. ವಿಕ್ರಮಾರ್ಜುನ ವಿಜಯ ಕೃತಿಯು ಸಾಮಾಜಿಕ ಮೌಲ್ಯಗಳನ್ನು ಬಿಂಬಿಸುವ ಮತ್ತು ಶೋಧಿಸುವ ಕೃತಿಯಾಗಿದೆ. ಅದೇ ರೀತಿಯಾಗಿ ಆದಿಪುರಾಣ ಕೃತಿಯು ನೈತಿಕ ಮೌಲ್ಯಗಳ ಹೋರಾಟವಾಗಿ ಕೊನೆಗೆ ಮೋಕ್ಷ ಎಂಬುದು ಪ್ರತಿಜ್ಞೆಯಾಗಿದೆ. ಅದು ಜೈನಧರ್ಮದ ತತ್ವವನ್ನು ಸಾರಿದೆ. ಆದರೆ ೧೦ನೇ ಶತಮಾನದ ಕೃತಿಗಳು ಧರ್ಮವನ್ನು ಮೀರುವ ಪ್ರಸಂಗ ಬಂದರೂ ಕೂಡ ಒಂದೊಂದು ಕಡೆ ತಮ್ಮತನವನ್ನು ಗಟ್ಟಿಗೊಳಿಸುವ ನೆಲೆ ಹೊಂದಿವೆ. ಏಕೆಂದರೆ ಪಂಪನು ಮೀರುವ ಪ್ರಯತ್ನವಿದ್ದರೂ ಪ್ರಭುತ್ವ ತಡೆದಿರಬಹುದು. ಇಲ್ಲಿ ಹಲವು ರಾಜಕೀಯತೆಯಿಂದ ಕೂಡಿರಬಹುದು. ಆದರೆ ಯಾಕೆ? ಮತ್ತೆ ಮತ್ತೆ ಪಂಪ ಪ್ರಸ್ತುತ ಎಂಬುದಕ್ಕೆ "ಮನುಷ್ಯಜಾತಿ ತಾನೊಂದೆ ವಲಂ" ಎನ್ನುವ ಹಾಗೂ ಲೌಕಿಕ ಆಗಮಿಕ ಎನ್ನುವ ನಿಲುವಿನಿಂದ ಪಂಪ ಪ್ರಸ್ತುತವಾಗಿದ್ದಾನೆ. ಹೀಗೆ ಹಲವು ರೀತಿಯಲ್ಲಿ ಉತ್ತರಿಸಿಕೊಳ್ಳಬಹುದು. ಆದಿಪುರಾಣದಲ್ಲಿ ಬಾಹುಬಲಿಯ ಆದರ್ಶತೆ, ನಿಷ್ಠತೆಯನ್ನು ಬಾಹುಬಲಿಯ ಮೂಲಕವಾಗಿ ಪಂಪನನ್ನೇ ನೋಡಬಹುದು.

ಈ ತರಹದ ಅನೇಕ ಅಂಶಗಳನ್ನು ಒಳಗೊಂಡ ಅನೇಕ ಮುನ್ನುಡಿಗಳು ಹಳಗನ್ನಡ ಸಾಹಿತ್ಯ ಕೃತಿಗಳ ಸಂಪಾದನೆ ಸಂದರ್ಭದಲ್ಲಿ ಮತ್ತೆ ಮತ್ತೆ ಮರು ಮೌಲ್ಯಮಾಪನಕ್ಕೊಳಗಾಗಿ, ವಾಗ್ವಾದಗಳ ಜೊತೆಗೆ ನವೋದಯ ಕೃತಿಕಾರರ ಚಿಂತನೆಯಲ್ಲಿ ಮುನ್ನುಡಿಯು ವೇದಿಕೆಯಾಗಿ ಸೃಷ್ಟಿಸಿಕೊಂಡಿದ್ದರು.

ಆದರೆ ಪಾಶ್ಚಿಮಾತ್ಯರ ಪೂರ್ವದಲ್ಲಿ ಹಳೆಗನ್ನಡ ಕೃತಿಗಳು ಕಾವ್ಯಗಳಾಗಿರದೇ ಪುರಾಣ ಕಾವ್ಯಗಳಾಗಿದ್ದವು. ಇವು ಪಂಡಿತ ಪಾಮರರಿಗೆ ಮೀಸಲಾಗಿದ್ದವು. ಪುರಾಣ ಪ್ರವಚನದ ಮೂಲಕ ಕಾವ್ಯಗಳ ಮಹತ್ವ ಸಾಮಾನ್ಯ ಜನರಿಗೆ ತಲುಪುತ್ತಿತ್ತು. ಆದರೆ ಇವು ವೈಚಾರಿಕ, ಲೌಕಿಕ

ಕಾವ್ಯಗಳಾಗಿರದೆ ಧಾರ್ಮಿಕತೆಯ ಕಾವ್ಯಗಳಾಗಿ ಅವು ಮೂಡಿಬರುತ್ತವೆ. ಪಂಡಿತ ಪುರೋಹಿತರನ್ನು ದೇವರ ಸಮಾನವೆಂದು ಅಂದಿನ ದಿನಗಳಲ್ಲಿ ಜನರು ಭಾವಿಸುತ್ತಿದ್ದರು. ಹಾಗೆಯೇ ಕಾವ್ಯಗಳು ಕೂಡ ಅದೇ ರೀತಿ ಸಾಮಾನ್ಯ ಬಡ ಹಿಂದುಳಿದ ಜನರ ಕಾವ್ಯಗಳ ಹಸ್ತಪ್ರತಿಗಳನ್ನು ದೇವರ ಸಮಾನ ಜನರು ಭಾವಿಸುತ್ತಿದ್ದರು. ಅಂದು ದಲಿತರು, ಬಡವರು, ಹಿಂದುಳಿದವರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದು ಅಕ್ಷರಸ್ಥರಾಗಿರಲಿಲ್ಲ. ಅಂಥವರಿಗೆ ಪುರೋಹಿತವರ್ಗದ ಕಾವ್ಯಗಳ ಕುರಿತು ತಮಗೆ ಬೇಕಾದ ನಿಲುವುವನ್ನು ಇಷ್ಟಾರ್ಥವನ್ನು ಸಾಮಾನ್ಯ ಜನರಿಗೆ ಹೇಳಲಾಗುತ್ತಿತ್ತು, ಇವುಗಳನ್ನು ಜನರು ನಂಬುತ್ತಿದ್ದರು. ಈ ರೀತಿಯ ಆರ್ಥಿಕ ರಾಜಕಾರಣ, ಜಾತಿ ರಾಜಕಾರಣ, ಸಾಮಾಜಿಕ ರಾಜಕಾರಣ, ಇವೆಲ್ಲಾ ಮೇಲ್ವರ್ಗಗಳು ಪುರೋಹಿತಶಾಹಿಗಳು ಆರ್ಥಿಕವಾಗಿ ಸಾಮಾಜಿಕವಾಗಿ ಪ್ರಬಲ ಸಮುದಾಯಗಳು ತಮ್ಮ ಸ್ವಾರ್ಥದ ನೆಲೆಯಿಂದ ಸಾಮಾನ್ಯರ ಸಮಾಜವನ್ನು ಹತ್ತಿಕ್ಕುವ ಕೆಲಸ ನಡೆದಿತ್ತು. ಪಂಪ, ರನ್ನ, ಮುದ್ದಣನ ಕಾಲದವರೆಗೂ ರಾಜಾಶ್ರಯದಿಂದ ಈ ವಾತಾವರಣ ಸೃಷ್ಟಿಯಾಗಿತ್ತು, ಆದರೆ ಅವರು ರಾಜನ ನಿಲುವು ರಾಜನನ್ನು ಹೊಗಳಿಕೆಯ ಮಾತುಗಳು, ಧರ್ಮಕೇಂದ್ರದ ನೆಲೆಯಿಂದ ಸಂಪ್ರದಾಯದ ನೆಲೆಗಳನ್ನು ಸನ್ನಿವೇಶಗಳನ್ನು ಸಮಾಜದಲ್ಲಿ ಬಿತ್ತರಿಸಿದ್ದರು. ಈ ಹಿನ್ನೆಲೆಯಿಂದ ಅಂದು ಸಾಹಿತ್ಯ ರಚನೆ, ಸಾಹಿತ್ಯ ಓದು, ಮೇಲುವರ್ಗಗಳಿಗೆ ಸಂಬಂಧಿತವಾಗಿತ್ತು. ಆದರೆ ಬಡ, ದಲಿತ, ಹಿಂದುಳಿದ ಜನರಿಗೆ ಯಾವ ತೆರನಾಗಿಯೂ ಸಾಮಾಜಿಕವಾಗಿ ಅಸ್ತಿತ್ವ ಇರಲಿಲ್ಲ. ಹಾಗಾಗಿ ಗೊಡ್ಡು ಸಂಪ್ರದಾಯವನ್ನು ಸೃಷ್ಟಿಸಲಾಗಿತ್ತು. ಈ ಎಲ್ಲವು ಪುರೋಹಿತ ಹಾಗೂ ಆಳುವ ವರ್ಗಗಳ ಮೂಲಕವಾಗಿಯೇ ದೊರೆಯುತ್ತಿತ್ತು ಎಂಬುದು ಗಮನಾರ್ಹ ಸಂಗತಿಯಾಗಿದೆ.

ವಸಾಹತುಶಾಹಿಗಳ ಯುಗಾರಂಭದಿಂದ ಹೊಸ ಹೊಸ ಪ್ರಯತ್ನಗಳಿಂದ ಹಲವು ಬಹುತ್ವಗಳಿಂದ ಜನರಲ್ಲಿ ಹೊಸತನ ಪ್ರಜ್ಞೆ ಮೂಡಿತು. ಆದರೆ ವಸಾಹತುಶಾಹಿಗಳು ತಮ್ಮ ಬೇಳೆ ಬೇಯಿಸಿಕೊಳ್ಳುವ ಉದ್ದೇಶದಿಂದ ಒಡೆದು ಆಳುವ ನೀತಿ ಅವರಲ್ಲಿತ್ತು. ಆದರೆ ಒಂದು ಕಡೆ ಸಮನ್ವಯ ದೃಷ್ಟಿಯಂತಹ ಸೇವೆಗಳು ಇದ್ದವು ಎನ್ನುವುದಕ್ಕೆ ಜನರ ಮಧ್ಯೆ ರೈಲು ಸೇವೆ, ಅಂಚೆ ಸೇವೆ ಇತ್ಯಾದಿ ಅಭಿವೃದ್ಧಿಯಿಂದ ಭಾರತೀಯರ ಮಧ್ಯೆ ಇದ್ದ ಅಸಮಾನತೆಯನ್ನು ತೊಲಗಿಸಲು ಪ್ರಯತ್ನಿಸಿದರು. ಆದರೆ ಯುರೋಪಿನ್ನರು ಭಾರತವನ್ನು ಹಿಂದುಳಿದ ದೇಶ, ಶಿಕ್ಷಣದಿಂದ ವಂಚಿತರು, ಆಧುನಿಕತೆ, ತಂತ್ರಜ್ಞಾನ ಅರಿವು ಕಾಣದವರು ಎಂಬುದಾಗಿ ಭಾವಿಸಿದ್ದರು. ಹಾಗೆಯೇ ಪಶ್ಚಿಮದವರು ಭಾರತವನ್ನು ದಲಿತತ್ವವಾಗಿ ಕಂಡರು. ನಮ್ಮಲ್ಲಿ ಹೇಗೆ ದಲಿತ ಪ್ರಜ್ಞೆ, ದಲಿತ ಸಂವೇದನೆಗಳು ಇದ್ದವೋ, ಹಾಗೆಯೇ ಬ್ರಿಟಿಷರ ಕಾಲದಿಂದಲೂ ದಲಿತರನ್ನು ಕೀಳುಭಾವನೆಯಿಂದ ನೋಡಲಾಗಿದೆ. ಇಂದೂ ಇದು ಮುಂದುವರಿದಿದೆ. ಆರ್ಥಿಕವಾಗಿ ಹಿಂದುಳಿದ ಜನರು ದಲಿತರಾಗಿಯೇ ಉಳಿದಿದ್ದಾರೆ. ಯುರೋಪಿನ್ನರು ಯಾವುದೇ ತಂತ್ರಜ್ಞಾನ, ಶಿಕ್ಷಣ ಅಭಿವೃದ್ಧಿ ಕಾರ್ಯಗಳನ್ನು ಅಷ್ಟೇನೂ ಮಾಡಲಿಲ್ಲ. ಆದರೆ ಅವರು ತಮ್ಮ ವಸಾಹತು ಸ್ಥಾಪನೆಗಾಗಿ, ರಾಜಕೀಯವಾಗಿ ಹಾಗೂ ಆಡಳಿತಾತ್ಮಕವಾಗಿ ಮಾಡಿಕೊಂಡಿರುವ ಕಾರ್ಯಗಳೇ ಅವರು ಭಾರತದಲ್ಲಿ ಮಾಡಿರುವ ಅಭಿವೃದ್ಧಿ

ಕಾರ್ಯಗಳಾಗಿವೆ ಎಂದು ಹೇಳಲಾಗುತ್ತಿದೆ. ಪ್ರಮುಖವಾಗಿ ತಮ್ಮ ಭಾಷೆಯನ್ನು ನೆಲೆಯೂರಿಸಲು ಆಡಳಿತದ ದೃಷ್ಟಿಯಿಂದ ಮತ್ತು ಮತಾಂತರದ ದೃಷ್ಟಿಯಿಂದ ಕಾರ್ಯಗಳನ್ನು ಮಾಡಿರುವುದನ್ನು ನಾವು ಮನಗಾಣಬೇಕಾಗಿದೆ. ಈ ಹಿನ್ನೆಲೆಯಿಂದ ಪಾಶ್ಚಿಮಾತ್ಯರ ಆಡಳಿತ ಭಾರತದಲ್ಲಿ ದೀರ್ಘವಾಗಿದ್ದರಿಂದ ಕಾಲ ಕಾಲಕ್ಕೆ ಬದಲಾವಣೆಯ ಮೂಲಕ ಭಾರತದಲ್ಲಿ ಹೊಸ ಶಕೆ ಆರಂಭವಾಯಿತು ಎನ್ನುವುದಕ್ಕೆ ಅವರ ಸಂಶೋಧನೆ, ಶೋಧನೆ ಮೂಲಕ ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯನ್ನು ಮೂಡಿಸಿದರು. ಈ ಹಿನ್ನೆಲೆಯಿಂದ ಸಾಹಿತ್ಯವಲಯದಲ್ಲಿ ಹೊಸ ಆವಿಷ್ಕಾರವಾಯಿತು.

### ೩.೧.೩. ಮುನ್ನುಡಿಗಳ ಮೂಲಕ ಕನ್ನಡ ಸಾಹಿತ್ಯ ಚರಿತ್ರೆ ಕಟ್ಟುವ ನೆಲೆ

ಈ ಮೇಲಿನ ಅಂಶಗಳನ್ನು ಚರ್ಚಿಸುತ್ತಾ ಸಂಪಾದಕರಲ್ಲೂ ತಮ್ಮ ಸಿದ್ಧಾಂತ ನಿಲುವುಗಳನ್ನು ಪ್ರತಿಪಾದಿಸುವ ನಿಟ್ಟಿನಲ್ಲಿ ಅನೇಕ ರೀತಿಯಲ್ಲಿ ಪ್ರಶ್ನಾತೀತವಾಗಿ ಉಳಿದಿವೆ. ಹಾಗೆಯೇ ಚರ್ಚೆಗಳಾಗುತ್ತಿವೆ. ಒಂದು ಕಡೆ ಹಳಗನ್ನಡ ಸಂಪಾದನೆ, ಇನ್ನೊಂದು ಕಡೆ ಓರಿಯಂಟಲ್ ಅಧ್ಯಯನದ ಪ್ರಭಾವದಿಂದ ಕನ್ನಡ ಸಾಹಿತ್ಯವನ್ನು ಕಸಿ ಮಾಡುವ ಪರಿ ನಡೆಯಿತು. ಆದರೆ ಪಾಶ್ಚಿಮಾತ್ಯರು ಭಾರತವನ್ನು ಅಖಂಡ ರೀತಿಯಾಗಿ ರಾಜಕೀಯ, ಆಡಳಿತ ಮಾಡಿರುವುದು ಅವರ ಪರಿಕಲ್ಪನೆಯಿಂದ ಅವರ ಸಾಹಿತ್ಯದ ಸೊಗಡು ನಮ್ಮ ಕನ್ನಡ ಸಾಹಿತ್ಯದಲ್ಲಿ ಬೇರೂರಿದೆ. ಇದರ ಪ್ರತಿಫಲವೇ ಅವರ ಸಂಪಾದನೆಯಲ್ಲಿ ತೊಡಗಿರುವ ಅನೇಕ ಕೃತಿಗಳಿಗೆ ಬರೆದಿರುವ ಮುನ್ನುಡಿಗಳು ಚಾರಿತ್ರಿಕ ದಾಖಲೆಗಳಾಗಿವೆ. ಆರ್.ನರಸಿಂಹಾಚಾರ್‌ರು "ಕನ್ನಡ ಕವಿಚರಿತೆ"ಗೆ ಬರೆದಿರುವ ಮುನ್ನುಡಿ ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾದುದು. ಈ ಮುನ್ನುಡಿಯ ಮೂಲಕ ಸಮಗ್ರವಾಗಿ ಕವಿಗಳ ಚರಿತ್ರೆಯನ್ನು ಒದಗಿಸಿದ್ದಾರೆ. ಇದರಿಂದ ಚಾರಿತ್ರಿಕವಾಗಿ ಮುನ್ನುಡಿ ಮುಖ್ಯವಾಗಿದೆ. ಇಲ್ಲಿ ಕನ್ನಡದ ಹೊಸ ಸಿದ್ಧಾಂತ ರೂಪಗೊಂಡಿದಂತಾಗಿದೆ. ಆದರೆ ಇದೆಲ್ಲಾ ಸಾಧ್ಯವಾದದ್ದು ಪಾಶ್ಚಾತ್ಯ ವಿದ್ವಾಂಸರ ಆಕರ ಸಂಗ್ರಹಗಳ ಸಹಾಯದಿಂದ. ಆರ್.ನರಸಿಂಹಾಚಾರ್ಯರು ಮತ್ತಷ್ಟು ಆಕರಗಳನ್ನು ಸಂಗ್ರಹಿಸಿ ಮೂರು ಸಂಪುಟಗಳಲ್ಲಿ 'ಕವಿಚರಿತೆ'ಯನ್ನು ಕನ್ನಡ ಸಾಹಿತ್ಯಕ್ಕೆ ಒದಗಿಸಿದರು. ಹೀಗೆ ಈ ಕೃತಿಗಳ ಮುನ್ನುಡಿಯಲ್ಲಿಯೂ ಕೂಡ ಮುಂದಿನ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸಿದರು. ಇದರಿಂದ ಮುಂದಿನ ಸಾಹಿತ್ಯ ಚರಿತ್ರೆಗೆ ಮಾರ್ಗವಾಯಿತು. ಹಾಗೆಯೇ ಅಜ್ಞಾತವಾಗಿದ್ದ ಕವಿ ಕೃತಿಗಳನ್ನು ಪರಿಚಯಿಸುವುದರ ಮೂಲಕ ಆರ್.ನರಸಿಂಹಾಚಾರ್ಯರು ವಿಪುಲವಾದ ಕನ್ನಡ ಸಾಹಿತ್ಯ ಸಂಪತ್ತನ್ನು ಮೊದಲ ಬಾರಿಗೆ ತೋರಿಸಿಕೊಟ್ಟರು. ಅನಂತರ ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ದೊಡ್ಡ ಪಡೆಯಾಗಿ ಕನ್ನಡ ಸಂಶೋಧಕ ಬಳಗವನ್ನು ಸೃಷ್ಟಿಸಿದರು. ಇದರಲ್ಲಿ ಮುಖ್ಯವಾಗಿ ಶಿ.ಶಿ.ಬಸವನಾಳ, ತೀ.ನಂ.ಶ್ರೀಕಂಠಯ್ಯ, ಟಿ.ಎಸ್.ವೆಂಕಣ್ಣಯ್ಯ, ಎ.ಆರ್.ಕೃಷ್ಣಶಾಸ್ತ್ರಿ, ಡಿ.ಎಲ್.ನರಸಿಂಹಾಚಾರ್, ಎಸ್.ಜಿ.ನರಸಿಂಹಾಚಾರ್, ಕೆ.ಜಿ.ಕುಂದಣಗಾರ, ಎಲ್.ಬಸವರಾಜು, ದೇ.ಜ.ಗೌ. ಮುಂತಾದವರು ಮುಖ್ಯರಾಗಿದ್ದಾರೆ.

ಆರ್.ನರಸಿಂಹಾಚಾರ್ ಅವರ ಕೃತಿಗಳು ಇವರಿಗೆ ಪ್ರೇರಣೆಯಾಗಿವೆ. ಹಳಗನ್ನಡದ ಮೇರು ಕೃತಿಗಳು ಕನ್ನಡ ವಿದ್ವತ್‌ವಲಯಕ್ಕೆ ಸಾಮಗ್ರಿಯಾಯಿತು. ಏಕೆಂದರೆ ಎಲ್ಲರೂ ಕನ್ನಡದ ಚಿಂತನೆಯಿಂದ ಚರಿತ್ರೆಯನ್ನು ಕಟ್ಟಲು ಪ್ರಯತ್ನಿಸಿದರು. ಆರ್.ನರಸಿಂಹಾಚಾರ್ಯರ ಕರ್ನಾಟಕ ಕವಿಚರಿತೆಯ ಮುನ್ನುಡಿಯಲ್ಲಿ "ಇದು ಸಾಹಿತ್ಯ ಚರಿತೆಯಲ್ಲಿ ವಿಸ್ತೃತ ಟಿಪ್ಪಣಿಸಹಿತ ಲೇಖಕ ಗ್ರಂಥಸೂಚಿ"[೮] ಎಂದು ಹೇಳುತ್ತಾರೆ. ಹಾಗಾದರೆ ಕನ್ನಡ ಸಾಹಿತ್ಯಕ್ಕೆ ಚರಿತ್ರೆ ಯಾವುದು ಎಂಬುದು ಚರ್ಚೆಯಾಯಿತು. ಕವಿಚರಿತೆಯ ಸಂಪುಟಗಳಲ್ಲಿ ಆರ್.ನರಸಿಂಹಾಚಾರ್ ಯುಗಗಳನ್ನು, ಯುಗಪ್ರವರ್ತಕರನ್ನು ಲೆಕ್ಕಿಸದೇ ಅಂದು ಗೊತ್ತಿದ್ದ ಎಲ್ಲ ಕನ್ನಡ ಕವಿಗಳ ಹಾಗೂ ಕೃತಿಗಳ ಬಗ್ಗೆ ಮತ್ತು ಅವರ ಅವುಗಳ ಕಾಲ ದೇಶಗಳ ಬಗ್ಗೆ ಲಭ್ಯ ಮಾಹಿತಿ ಕೊಟಿದ್ದಾರೆ. ಇವರು ಇಂಗ್ಲಿಷ್‌ನಲ್ಲಿ ಬರೆದಂತಹ History of Kannada Literature ಒಂದು ನೆಲೆಯಲ್ಲಿ ತುಂಬಾ ಮಹತ್ವದ ಕೃತಿಯಾಗಿದೆ. ಏಕೆಂದರೆ ಈ ಕೃತಿ ತಮಿಳು, ತೆಲುಗು, ಮಲೆಯಾಳಂ ಮತ್ತು ಸಂಸ್ಕೃತ ಸಾಹಿತ್ಯಗಳೊಡನೆ ಕನ್ನಡ ಸಾಹಿತ್ಯದ ತೌಲನಿಕ ವಿಮರ್ಶೆಗೆ ಮೀಸಲಾಗಿದೆ ಎಂದು ಹೇಳಬಹುದು. ಈ ತರಹದ ಯೋಚನೆಯನ್ನು ಈ ಹಿಂದೆ ಕಿಟೆಲ್ ಅವರು ಮಾಡಿದ್ದರು. ಅವರ ಮಾರ್ಗದರ್ಶನದೊಡನೆ ಕನ್ನಡದ ವಿದ್ವಾಂಸರಾಗಿ ಇಂತಹ ವಿಷಯಗಳನ್ನು ಗುರುತಿಸುತ್ತಾರೆ.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟುವಲ್ಲಿ ಕೂಡ ಕಿಟೆಲ್ ಮತ್ತು ಇ.ಪಿ.ರೈಸ್ ಅವರು ಉತ್ತಮ ಪ್ರಯತ್ನ ಮಾಡಿದ್ದಾರೆ. ಆದರೆ ಪಾಶ್ಚಾತ್ಯರ ಅಧ್ಯಯನ ಈ ವಿಷಯದಲ್ಲಿ ಬಿಡಿ ಪ್ರಯತ್ನವಾಗಿದೆ. ಆರ್.ನರಸಿಂಹಾಚಾರ್ಯರು ಕಿಟೆಲ್‌ರ ಮಾದರಿ ಅನುಸರಿಸಿದ್ದಾರೆ ಎಂದು ಹೇಳಬಹುದು. ಒಂದು ಅರ್ಥದಲ್ಲಿ ಸಾಹಿತ್ಯ ಚರಿತ್ರೆಯ ರಚನೆ ಪ್ರಾರಂಭವಾದದ್ದು ಬಿ.ಎಂ.ಶ್ರೀ. ಅವರಿಂದ, ಅವರ ಕನ್ನಡ ಸಾಹಿತ್ಯ ಚರಿತ್ರೆಯಿಂದ(ಅಪೂರ್ಣ). ಇದರೊಡನೆಯೇ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ವೈಚಾರಿಕ ಚೌಕಟ್ಟುಗಳ ಸಮಸ್ಯೆಯೂ ಪ್ರಾರಂಭವಾಯಿತು. ಏಕೆಂದರೆ ಕಿಟೆಲ್‌ರ ಛಂದೋಂಬುಧಿಯ ಮುನ್ನುಡಿಯಲ್ಲಿ ಮತೀಯವಾದಂತಹ ಕಾಲಘಟ್ಟದಿಂದ ಚರಿತ್ರೆ ಕಟ್ಟುವುದಕ್ಕೆ ಪ್ರಯತ್ನಿಸಿದ್ದು ಆರ್.ನರಸಿಂಹಾಚಾರ್ಯರು. ಬಿ.ಎಂ.ಶ್ರೀ.ಯವರು ಇಂಗ್ಲಿಷ್ ಪ್ರಾಧ್ಯಾಪಕರು. ಇಂಗ್ಲಿಷ್ ಸಾಹಿತ್ಯ ಚರಿತ್ರೆಗಳನ್ನು ಬಲ್ಲವರಾಗಿದ್ದರಿಂದ ಆ ನೆಲೆಯಲ್ಲಿ ಹಾಗೂ ಅಂತಹುದೇ ಚರಿತ್ರೆಯನ್ನು ಕನ್ನಡ ಸಾಹಿತ್ಯದ ಬಗ್ಗೆ ಕಟ್ಟಲು ಪ್ರಯತ್ನಿಸಿದರು. ಆರ್.ನರಸಿಂಹಾಚಾರ್ಯರ ಕವಿಚರಿತೆಯ ಮುನ್ನುಡಿಯಲ್ಲಿಯೂ ಕೂಡ ಸಾಧ್ಯವಾದಂತಹ ಭಿನ್ನ ಚೌಕಟ್ಟುಗಳನ್ನು(ಕಾಲಕ್ಕನುಗುಣವಾಗಿ, ಮತಕ್ಕನುಗುಣವಾಗಿ) ಚರ್ಚಿಸುತ್ತಾ ಕೊನೆಗೆ ಮತಪ್ರಧಾನವಾದ ಮೂರು ಘಟ್ಟಗಳನ್ನು ಮತ್ತು ಕೊನೆಯ ಆಧುನಿಕ ಘಟ್ಟವನ್ನು ಹೀಗೆ ಗುರುತಿಸುತ್ತಾರೆ.

"೧. ಆರಂಭ ಕಾಲ ೧೦ನೇ ಶತಮಾನ.

೨. ಮತಪ್ರಾಬಲ್ಯಕಾಲ ೧೦ರಿಂದ ೧೯ನೇ ಶತಮಾನದ ಕಾಲ(ಅಂದರೆ ಜೈನಕವಿಗಳು, ೧೦ನೇ ಶತಮಾನದಿಂದ ವೀರಶೈವ ಕವಿಗಳು, ೧೨ನೇ ಶತಮಾನದಿಂದ ಬ್ರಾಹ್ಮಣಕವಿಗಳು, ೧೫ನೇ ಶತಮಾನದಿಂದ).

೩. ನವೀನ ಕಾಲ: ೧೯ನೇ ಶತಮಾನದಿಂದ ಇ.ಪಿ.ರೈಸ್ ಅವರ Kanarese Literutare (1921) ರವರೆಗೆ ಎಂದು ವರ್ಗೀಕರಣ ಮಾಡಿಕೊಂಡಿದ್ದಾನೆ"[೮]

ಆದರೆ ಯಾಕೆ ಮತ ಆಧಾರಿತವಾಗಿ ಕಾಲಘಟ್ಟದ ಚರಿತ್ರೆಯನ್ನು ಕಟ್ಟಲಾಯಿತು ಇದರಲ್ಲಿ ಎಲ್ಲಾ ಕೃತಿಗಳು ಮತ್ತು ಕೃತಿಕಾರರನ್ನು ಉಲ್ಲೇಖಿಸಿದೆಯೇ ಅಥವಾ ಕೆಲವರನ್ನು ಬಿಡಲಾಗಿದೆಯೇ? ರಂ.ಶ್ರೀ. ಮುಗಳಿಯವರು ತಮ್ಮ "ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮತತತ್ವಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟಿದ್ದಾರೆ ಎಂದೆನಿಸುತ್ತದೆ. ಆದರೆ ಕವಿ, ವ್ಯಕ್ತಿ ಮುಖ್ಯವಾಗಿ ಚರ್ಚಿಸಿದ್ದಾರೆ. ಹೀಗಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿಶಾಲವಾಗಿ ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ ಎಂದು ವಿಭಾಗಿಸಿದ್ದಾರೆ. ಆದರೆ ಈ ವಿಭಾಗಕ್ರಮ ಪ್ರಸ್ತುತವಾಗಿ ಒಪ್ಪಿಕೊಳ್ಳಲಾಗುವುದಿಲ್ಲ. ಸಾಹಿತ್ಯ ಚರಿತ್ರೆ ಕಾಲಾಧಾರಿತ ಚೌಕಟ್ಟು, ನಿರ್ಭಾವುಕವಾಗಿ ಯಾಂತ್ರಿಕವೆಂಬಂತೆ ಕಾಣಬಹುದು. ಸಿ.ಎನ್.ರಾಮಚಂದ್ರನ್ ಹೇಳುವಂತೆ "ಬಿ.ಎಂ.ಶ್ರೀ, ಇ.ಪಿ.ರೈಸ್ ಮುಂತಾದವರ ಮತಾಧಾರಿತ ಚೌಕಟ್ಟಿನ ಪರಿಣಾಮವೇನೆಂದರೆ, ೧೯ನೇ ಶತಮಾನದವರೆಗಿನ ಪ್ರಾಚೀನ ಸಾಹಿತ್ಯವೆಲ್ಲವೂ ಮತಪ್ರಚಾರ ಕೇಂದ್ರಿತ ಸಾಹಿತ್ಯವಾಗಿದೆ. ಆದ್ದರಿಂದ ಇಂದು ಅಷ್ಟೇನೂ ಪ್ರಶಸ್ತವಲ್ಲವೆಂದು, ಸಾಮಾನ್ಯ ಓದುಗರು ಭಾವಿಸುವಂತಾಯಿತು. ಇಂದಿಗೂ ಈ ಗ್ರಹಿಕೆ ಸಂಪೂರ್ಣವಾಗಿ ಬದಲಾಗಿಲ್ಲ."[೯] ಎಂದು ಹೇಳುತ್ತಾರೆ. ಏಕೆಂದರೆ ಈ ಚೌಕಟ್ಟಿನ ಗ್ರಹಿಕೆ ಕ್ರಮವು ಪರೋಕ್ಷವಾಗಿ ಅನೇಕ ಪರಿಣಾಮಗಳಾಗಿವೆ. ಹಾಗೆಯೇ ಅವುಗಳಲ್ಲಿ ಸಾಹಿತ್ಯವೆಂಬ ಪರಿಕಲ್ಪನೆಯಿಂದ ಕಾವ್ಯ, ಸಾಹಿತ್ಯ ಪರಿಭಾಷೆಗೆ ಅಂದರೆ ಶಬ್ದಗಳಿಗೆ ಯೋಗ್ಯವಾದ ಅಥವಾ ಶ್ರೇಷ್ಠವಾದ ಅರ್ಥವನ್ನು ಹುಡುಕುವ ಕೆಲಸ ನಡೆಯಿತು. ಆದರೆ ಶಾಸ್ತ್ರಗ್ರಂಥಗಳು, ಕಾವ್ಯಮೀಮಾಂಸೆ, ಸಂಶೋಧನೆ ಹಾಗೂ ಕೆಳಸಮುದಾಯದ ಹಿನ್ನೆಲೆಯಿಂದ ಬಂದ ಕೃತಿಕಾರರನ್ನು ಹಾಗೂ ಜನಭಾಷೆಯಾಗಿ ಜಾನಪದವನ್ನು ಮತ್ತು ಮಹಿಳೆಯರ ಸಾಹಿತ್ಯವನ್ನು ಗೌಣಗೊಳಿಸಲಾಯಿತು. ಅದನ್ನು ಹಾಗೆಯೇ ಕೈಬಿಡಲಾಯಿತು. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಚರಿತ್ರೆ ಎಂಬುದು ಅಸಮಗ್ರತೆಯನ್ನು ಹೊಂದಿದೆ ಎಂದು ದೂರಲಾಯಿತು.

ಬಿ.ಎಂ.ಶ್ರೀಯವರು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟುವುದಕ್ಕೆ ಮೊದಲು ಪ್ರಯತ್ನಿಸಿದ್ದರು. ಅವರ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಅಪ್ರಕಟಿತಗೊಂಡಿದೆ. ಆದರೆ ಅವರ ಚಿಂತನೆ ಹೇಗಿತ್ತು ಎಂದರೆ ನವೋದಯ ಆರಂಭದಲ್ಲೇ ಹೊಸಗನ್ನಡ ಸಾಹಿತ್ಯ ಸೃಷ್ಟಿಗೆ ಶ್ರೀಕಾರ ಹಾಡಿದ ಬಿ.ಎಂ.ಶ್ರೀ.ಯವರು ಹಳಗನ್ನಡ ಸಂಪಾದನೆ, ಪ್ರಕಟಣೆಯ ಅಗತ್ಯವನ್ನು ಮೊದಲಿಗೆ ಪ್ರಕಟಿಸಿದರು. ಅದು "ಕನ್ನಡ ಮಾತು ತಲೆಯೆತ್ತುವ ಬಗೆ ಮತ್ತು ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ"[೧೦] ಲೇಖನಗಳಲ್ಲಿ ಪ್ರಾಚೀನ ಕೃತಿಗಳ ಸಂಗ್ರಹ ಸಂಪಾದನೆ, ಪ್ರಕಟಣೆ, ಹಾಗೆಯೇ ಮುನ್ನುಡಿಗಳಲ್ಲಿ ನಡೆದಿರುವ ಚಿಂತನೆ ವಾಗ್ವಾದಗಳ ಅಂಶಗಳನ್ನು ಆಧರಿಸಿ ಆ ಮೂಲಕ ಕನ್ನಡ ಸಾಹಿತ್ಯ ಪರಂಪರೆಯನ್ನು ಕಟ್ಟಿಕೊಳ್ಳುವ ಅಗತ್ಯತೆಯನ್ನು ಪ್ರತಿಪಾದಿಸುತ್ತಾರೆ. ಇಂಗ್ಲಿಷ್ ಸಾಹಿತ್ಯದಿಂದಲೇ ಕನ್ನಡ ಬೆಳೆಯಬೇಕೆಂದು ಪರಭಾವಿಸಿದ ಶ್ರೀಯವರು ಕನ್ನಡಕ್ಕೆ ಒಂದು ಪರಂಪರೆಯಿರುವುದನ್ನು,

ಅದಕ್ಕೆ ಅದರದೇ ಆದ ಜಾಯಮಾನವಿರುವುದನ್ನು ಕಡೆಗಣಿಸುವುದಿಲ್ಲ. ಆದರೆ ಸಾಂಸ್ಕೃತಿಕ ಪುನರುಜ್ಜೀವನದಂಥ ನವೋದಯ ಸಂದರ್ಭದಲ್ಲಿ ಹೊಸಸಾಹಿತ್ಯ ಸೃಷ್ಟಿಯಾಗುವುದು ಅಗತ್ಯವೆಂದು ಬಿ.ಎಂ.ಶ್ರೀ.ಯವರು ಪ್ರತಿಪಾದಿಸುತ್ತಾರೆ.

ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ಸಮಗ್ರ ದೃಷ್ಟಿಯಿಂದ ಆ ಕೃತಿಗಳಿಗೆ ಧಕ್ಕೆ ಬರದಂತೆ ಸಂಪಾದಿಸಬೇಕೆಂದು ಬಿ.ಎಂ.ಶ್ರೀ.ಯವರು ನಂಬಿದ್ದರು. ಆಗ ಎಲ್ಲಾ ಕಾಲದ, ಎಲ್ಲಾ ಧರ್ಮದ, ಎಲ್ಲಾ ಸಂಸ್ಕೃತಿಯ ಸಾರವನ್ನು ಆಯಾ ಕೃತಿಗಳ ಸಂಪಾದನೆಯ ಸಂದರ್ಭದಲ್ಲಿ ನಿರ್ಲಕ್ಷಿಸಿದೆ. ವಿಶಾಲ ಮನೋಭಾವದಿಂದ ಸಂಪಾದನೆ ನಡೆಯಬೇಕೆಂದು ಬಿ.ಎಂ.ಶ್ರೀ.ಯವರು ಆಶಿಸುತ್ತಾರೆ. ಏಕೆಂದರೆ ಅಂದು ಪ್ರಾಚೀನ ಸಾಹಿತ್ಯವೆಲ್ಲ ಮತೀಯವಾದದ್ದು ಎಂಬ ನಿಲುವುನಿಂದ ಸಮಕಾಲೀನ ಸಂದರ್ಭದಲ್ಲಿ ಆದರ್ಶವಾಗಿದ್ದ ಧರ್ಮವಲ್ಲದ ಅನೇಕ ಪ್ರಾಚೀನ ಕೃತಿಗಳನ್ನು, ಅದರಲ್ಲಿಯೂ ಮತೀಯ ಭಾಗಗಳನ್ನು ಬಿಟ್ಟು, ಉಳಿದ ರಸನಿರೂಪಣೆಯ ಪ್ರಕೃತಿಯ ವರ್ಣನೆಯ ಕಥಾಂಶಗಳನ್ನು ಮಾತ್ರ ವಿಶ್ಲೇಷಿಸುವ ಮನೋಭಾವ ಹೊಂದಿತ್ತು. ಆಗ ಶ್ರೀಯವರು "ನಮ್ಮ ಹಿರಿಯರು ಕೂಡಿಸಿಟ್ಟಿದ್ದ ನಿಕ್ಷೇಪ ಹಸ್ತಗತವಾಗಿ ಸರ್ವರಿಗೂ ಸಮಾನವಾದ ಸಾಹಿತ್ಯಕವಾಗಿ ಜೈನ ಕಾವ್ಯವೇ ಆಗಲಿ ವೀರಶೈವ ಕಾವ್ಯವೇ ಆಗಲಿ, ಬ್ರಾಹ್ಮಣ ಕಾವ್ಯವೇ ಆಗಲಿ ಆಗಲೇ ಸಿದ್ಧವಾಗಿರುವ ಕನ್ನಡ ಬೈಬಲ್ ಜೊತೆಗೆ ಒಂದು ಕ್ರೈಸ್ತ ಕಾವ್ಯ ಮಾಲೆಯೂ ಮತ್ತು ಮಹಮ್ಮದಿಯರ ಕಾವ್ಯಮಾಲೆಯೂ ಶೀಘ್ರದಲ್ಲಿಯೇ ನಮ್ಮ ಇತರ ಸಾಹಿತ್ಯ ವಾಹಿನಿಗಳೊಡನೆ ತಾವು ಒಂದು ಕೊಡುವುದೊಂದು ನಾವು ಹಾರೈಸುತ್ತೇನೆ. ಯಾವ ಸಾಹಿತ್ಯ ಶಾಖೆಯೇ ಆಗಲಿ ಎಲ್ಲವು ನಮ್ಮ ಕನ್ನಡವೆಂದೂ ಅದರಿಂದ ನಮ್ಮದೆಂದೂ ಆಧರಿಸುವ ಕಾಲ ಇದು"[೧೧] ಎಂದು ಉತ್ತಮವಾದ ಆದರ್ಶವನ್ನು ನಮ್ಮ ಮುಂದಿಡುತ್ತಾರೆ. ಈ ಪರವಾದ ಮನೋಧರ್ಮ ಹಾಗೂ ಅನಂತರದ ಗ್ರಂಥಸಂಪಾದಕರಲ್ಲಿ ಎಷ್ಟರಮಟ್ಟಿಗೆ ಕೆಲಸ ಮಾಡಿದೆ ಎಂಬುದನ್ನು ಹುಡಕಬೇಕಾಗಿದೆ.

ಹಳಗನ್ನಡ ಕೃತಿಗಳ ಸಂಪಾದನೆಯ ಜೊತೆಗೆ "ಹಳಗನ್ನಡ ಕಾವ್ಯ ಸಂಗ್ರಹ"ಗಳು ಮೂಡಿಬಂದವು. ಯಾಕಾಗಿ ಈ ಕಾರ್ಯ ಎಂದರೆ ವಿದ್ಯಾರ್ಥಿಗಳ ದೃಷ್ಟಿಯಿಂದ, ಜನಸಾಮಾನ್ಯರ ದೃಷ್ಟಿಯಿಂದ, ಪ್ರಾಚೀನ ಸಾಹಿತ್ಯವನ್ನು ಪ್ರಚಾರ ಮಾಡಬೇಕೆಂಬ ಆಶಯದಿಂದ ಈ ಬಗೆಯ ಕಾವ್ಯಸಂಗ್ರಹಗಳು ಹುಟ್ಟಿಕೊಂಡಿದ್ದು ಗಮನಾರ್ಹ ಸಂಗತಿಯಾಗಿದೆ. ಈ ಹಳಗನ್ನಡ ಕೃತಿಗಳು ವಿದ್ಯಾರ್ಥಿಗಳ ಪಠ್ಯ ಪುಸ್ತಕವಾಗಲು 'ಸಂಗ್ರಹ'ಗೊಂಡವು. ಹೀಗೆ ಸಂಗ್ರಹಗೊಂಡಾಗ ಕೃತಿಯ ಯಾವ ಭಾಗಗಳನ್ನು ಬಿಟ್ಟು, ಯಾವ ಭಾಗಗಳನ್ನು ಆಯ್ದು ಸಂಗ್ರಹಿಸಲಾಯಿತು ಎಂದು ಪರಾಮರ್ಶಿಸಬೇಕಾಗಿದೆ. ಆ ಮೂಲಕ ಹಳಗನ್ನಡ ಕಾವ್ಯ ಸಂಗ್ರಹದಲ್ಲಿ ಮುನ್ನುಡಿ ಭಾಗಗಳಲ್ಲಿ ಮೂಡಿದ ವಿಚಾರಗಳು ಸಾಹಿತ್ಯ ಚರಿತ್ರೆ ಕಟ್ಟುವುದರ ಬಗೆಗೆ ಚಿಂತನೆಯಾಯಿತು.

ಹೀಗೆಯೇ ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಆಧುನಿಕತೆಯ ಪರಿಕರಗಳಿಂದ ನಿರ್ದಿಷ್ಟ ಪರಂಪರೆಯನ್ನು, ಚರಿತ್ರೆಯನ್ನು ಹೊಂದಿರುವ ನಿರ್ದಿಷ್ಟ ಗುಣಸ್ವರೂಪದ ಕನ್ನಡದ

ಪ್ರಾಚೀನ ಕೃತಿಗಳನ್ನು, ಹೀಗೆ ಸಂಗ್ರಹಿಸಬೇಕು ಎಂಬ ನಿಯಮವಿತ್ತು. ಏಕೆಂದರೆ ಅದರಲ್ಲಿ ಬಹುಪಾಲು ಧಾರ್ಮಿಕ ವಿಚಾರಗಳನ್ನು ಕೈಬಿಡಲಾಯಿತು. ಅಂದಿನ ಧರ್ಮನಿರಪೇಕ್ಷ ಮನೋಧರ್ಮದ ಹಿನ್ನೆಲೆಯಲ್ಲಿ ಬ್ರಿಟಿಷ್ ಶಿಕ್ಷಣಪದ್ಧತಿ, ಆಡಳಿತ ರೂಪಿಸಿದ ಆಶಯದೊಳಗೆ, ಪ್ರಾಚೀನ ಕನ್ನಡ ಕೃತಿಗಳನ್ನು ಅವುಗಳ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿಟ್ಟು ನೋಡುವ ಬದಲು ತಮ್ಮ ಕಾಲದ ಮನೋಧರ್ಮದ ಹಿನ್ನೆಲೆಯಿಂದ ಅಧ್ಯಯನ ಮಾಡುವ ಕ್ರಮ ರೂಪಗೊಂಡಿತು.

ಹಳಗನ್ನಡ ಕೃತಿಗಳನ್ನು ಸಂಪಾದಿಸುವ ಹಾಗೂ ಸಂಗ್ರಹಿಸುವ ದೊಡ್ಡ ಉಪಕಾರವನ್ನು ಟಿ.ವಿ.ವೆಂಕಟಾಚಲಶಾಸ್ತ್ರಿಯವರು 'ಹರಿಶ್ಚಂದ್ರ ಕಾವ್ಯ ಸಂಗ್ರಹ' ಮುನ್ನುಡಿಯಲ್ಲಿ ಹೀಗೆ ಗುರುತಿಸುತ್ತಾರೆ. "ಈ ಸಂಗ್ರಹ ಪ್ರಕಟಗೊಂಡ ರೀತಿಯಿಂದ ಆವರೆಗೆ ಯಾವ ಪ್ರಾಚೀನ ಗ್ರಂಥಗಳು ಹಿಡಿಮಂದಿಯ ಕಡಿಮೆ ಪ್ರಚಾರದ ವಾಚನ ಪಠ್ಯಗಳಾಗಿದ್ದುವೋ ಅವು ಈಗ ಪಂಡಿತ ಪಾಮರವೆನ್ನುವ ಭೇದವಳಿದು ಬಹುಮಂದಿಯ ಅಧಿಕ ಪ್ರಚಾರದ ಪಠ್ಯಗಳಾದವು. ಯಾವ ಗ್ರಂಥಗಳು ತಕ್ಕ ಭಾಷಾ ವ್ಯಾಸಂಗವಿಲ್ಲದೆ, ಭಾಷೆ ಶೈಲಿಗಳ ಪ್ರಾಚೀನತೆ ಪ್ರೌಢಿಮೆಗಳು ಕಾರಣವಾಗಿ ಕ್ಲಿಷ್ಟವೆನಿಸಿದ್ದವೋ ವರ್ಣನೆ ಉಪಕಥೆ ಮೊದಲಾದವುಗಳ ಬಾಹುಳ್ಯದಿಂದ ಕಥಾ ಸ್ವರೂಪವೋ ಕಾವ್ಯದ ಸ್ವಾರಸ್ಯವೋ ಚೆನ್ನಾಗಿ ತಿಳಿಯದೆ ಓದುವುದಕ್ಕೆ ಆಯಾಸ ಬೇಸರಗಳನ್ನು ತರುತ್ತಿದ್ದುವೋ ಅವು ಈಗ ಸರಳವೂ ಸರಸವೂ ಆಗತೊಡಗಿದವು. ಆವರೆಗೆ ಪ್ರೌಢ ವಿದ್ಯಾರ್ಥಿಗಳ ವಿಶೇಷ ಆಸಕ್ತರ ಅಭ್ಯಾಸದ ಕೃತಿಯಾಗಿದ್ದ ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಈಗ ಎಲ್ಲಾ ಕುತೂಹಲಿಗಳ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಸಹ ಒದಗುವುದಾಗಿ ಆ ಕಾವ್ಯದ ಪ್ರಚಾರ ಪ್ರಸಿದ್ಧಿಗಳು ಹೆಚ್ಚಿದವು"[೨] ಎಂದು ವಿವರಿಸುತ್ತಾರೆ. ಇದರಿಂದ ಸಂಪಾದನೆ, ಸಂಗ್ರಹ ಮಾಡುವಾಗ ಹೊಸ ಕಾಲದ ಅಭಿರುಚಿಗೆ ಒಪ್ಪುವ ಹಾಗೆ ಮುಖ್ಯ ಕಥೆಗೆ, ಮಾನವೀಯ ಸಂಗತಿಗೆ, ಸರಸ ಪರಿಭಾಷಣೆಗಳಿಗೆ ಪ್ರಾಶಸ್ತ್ಯವಿತ್ತು. ವನವರ್ಣನೆ, ಜಲಕ್ರೀಡೆ, ವೇಶ್ಯಾವಾಟಿಕೆ ಮತ್ತು ಮೃಗಯಾವಿಹಾರ, ವರ್ಣನೆಗಳ ಭಾಗಗಳನ್ನು ಬಲುಮಟ್ಟಿಗೆ ಕೈಬಿಡಲಾಗಿದೆ ಎಂದು ಮುನ್ನುಡಿಯಲ್ಲಿ ಚರ್ಚಿಸುತ್ತಾರೆ. ಹೀಗೆ ಸಂಪಾದನೆ, ಮರು ಸಂಪಾದನೆ ಮಾಡುವಾಗ ಕಥೆಯ ಏಕಮುಖತೆಗೆ ಗಮನ ಕೊಟ್ಟು ವಿವರಣೆ ವರ್ಣನೆಯ ಭಾಗಗಳನ್ನು ಕೈಬಿಡಲಾಗಿರುವುದನ್ನು ಟಿ.ವಿ.ವೆಂಕಟಾಚಲಶಾಸ್ತ್ರಿಯವರು ಸಮರ್ಥವಾಗಿ ಗುರುತಿಸಿದ್ದಾರೆ.

ಆದರೆ ಹಳಗನ್ನಡ ಕೃತಿಗಳ ಮೂಲದ ಸಂಪಾದನೆಯ ಸಂದರ್ಭದಲ್ಲಿ ಕೆಲವು ಅನವಶ್ಯಕ ಎನ್ನುವ ವಿಷಯಗಳನ್ನು ಕಾಲಕ್ಕೆ ತಕ್ಕಂತೆ ಹಾಗೂ ಭಿನ್ನ ಸಾಂಸ್ಕೃತಿಕ ಕಾವ್ಯ ಸಂದರ್ಭದ ಸಾಹಿತ್ಯ ಚಿಂತನೆಯ ಆಧಾರದಿಂದ, ಶಿಕ್ಷಣದ ಉದ್ದೇಶದಿಂದ, ಕನ್ನಡದ ಪ್ರಾಚೀನ ಕಾವ್ಯವೊಂದನ್ನೇ ತಮ್ಮ ಉದ್ದೇಶಪೂರ್ವಕವಾಗಿ ಕತ್ತರಿಸಿ, ಕತ್ತರಿಸಿ, ಜೋಡಿಸುವ ಈಜಿನ ವಿಧಾನದಿಂದ ಕೆಲವು ಕೃತಿಗಳ ಸೊಬಗನ್ನು ಕೆಲವು ವರ್ಣನೆಗಳನ್ನು ಸಾಮಾಜಿಕ, ಸಾಂಸ್ಕೃತಿಕ ಮಹತ್ತರ ಸಂಗತಿಗಳು ಕಳೆದು ಹೋಗಿ ಪ್ರಾಚೀನ ಕಾವ್ಯಪದ್ಧತಿಯ ಮೂಲಸ್ವರೂಪವೂ, ಕವಿಯ ಕಾವ್ಯದ ಶಕ್ತಿಯ ವಿವಿಧ ಮುಖಗಳೂ ತಿಳಿಯದಂತಾಯಿತು. ಹೀಗೆ ಪುರಾಣ ಕಥನ ಕನ್ನಡ ಕಾವ್ಯ ಪರಂಪರೆಯ ಕಾವ್ಯವೊಂದನ್ನು ಆಧುನಿಕ ಸಂದರ್ಭದ ಅಗತ್ಯಕ್ಕೆ ತಕ್ಕಂತೆ ನಾವು ಕಟ್ಟಿಕೊಂಡಿದ್ದು ಈ ಬಗೆಯಲ್ಲಿ.

ಆದರೆ ಕಥೆಗೆ ಗಮನ ನೀಡಿ ಅನೇಕ ವರ್ಣನೆಗಳಲ್ಲಿ, ವಿವರಗಳಲ್ಲಿ ಮಾಡುವ ಸಾಮಾಜಿಕ ಸಂಗತಿ ಸಂಸ್ಕೃತಿ ವಿಚಾರಗಳನ್ನು ಬಿಟ್ಟು ಬಿಡಲಾಗಿದೆ. ಇವುಗಳನ್ನು ಹಳಗನ್ನಡ ಕೃತಿಗಳ ಸಂಗ್ರಹದ ಮರು ಸಂಪಾದನೆಯ ಸಂದರ್ಭದಲ್ಲಿ ಅವುಗಳ ಮುನ್ನುಡಿ ಭಾಗದಲ್ಲಿ ನಡೆಸುತ್ತಿದ್ದ ಚರ್ಚೆ, ವಿಷಯ ವಿಶ್ಲೇಷಣೆ, ಸಂಶೋಧನೆ ಮಹತ್ವದ ವಿಚಾರವಾಗಿದೆ. ಹಾಗೆಯೇ ಗ್ರಂಥದ ಪೂರ್ಣ ಪರಿಚಯ ಮತ್ತು ಮೌಲ್ಯ ಮಾಪನಗಳಿಗೆ ಬೇಕಾದ ಎಲ್ಲಾ ಮಾಹಿತಿಗಳನ್ನು 'ಪೀಠಿಕೆ' ಅಥವಾ 'ಮುನ್ನುಡಿ' ಭಾಗದಲ್ಲಿ ಸೇರಿಸಲಾಗುತ್ತಿತ್ತು. ಅಧ್ಯಯನದ ಎಲ್ಲಾ ಮುಖಗಳ ವಿವರಗಳಿದ್ದು ಓದುಗರು ಮತ್ತು ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಹಾಗೂ ಎಲ್ಲರ ಅವಶ್ಯಕತೆಗೆ ಅನುಗುಣವಾಗಿ ವಿಷಯಗಳನ್ನು ಪೂರೈಸುವ ಹಿನ್ನೆಲೆಯಾಗಿ ತುಂಬಾ ಉಪಯುಕ್ತವಾದ ವಿಚಾರಗಳಾಗಿವೆ. ಮುನ್ನುಡಿ ಭಾಗದಲ್ಲಿಯೇ ಕಾವ್ಯ ವಿಮರ್ಶೆಯನ್ನು ಕೂಡ ಮಾಡಲಾಗುತ್ತಿತ್ತು. ಕಾವ್ಯದ ಮೌಲ್ಯಮಾಪನ, ವಿಶ್ಲೇಷಣೆಯಿದ್ದು, ಅದು ಮಹತ್ವಪೂರ್ಣವಾಗಿರುತ್ತಿತ್ತು. ಹಾಗೆಯೇ ಮುಂದಿನ ವಿಮರ್ಶಾ ಸಾಹಿತ್ಯ ಚಿಂತನೆಯ ರಚನೆಗೆ ಅಡಿಪಾಯವೆಂಬಂತೆ ಹಳಗನ್ನಡ ಸಂಪಾದನೆ ಕೃತಿಗಳ ಮುನ್ನುಡಿಯ ಭಾಗವಾಗಿ ಒಟ್ಟು ಕಾವ್ಯಮಹತ್ವವನ್ನು ತಿಳಿಸುವ ದೃಷ್ಟಿಯಿಂದ ಕೂಡಿದ್ದು ಅರ್ಥಪೂರ್ಣವಾಗಿರುತ್ತಿತ್ತು. ಈ ವಿಷಯಕ್ಕೆ ಆಧಾರವಾಗಿ 'ಪಂಪರಾಮಾಯಣ ಸಂಗ್ರಹ' ಹಾಗೂ 'ಹರಿಶ್ಚಂದ್ರ ಕಾವ್ಯ ಸಂಗ್ರಹ' ಮುನ್ನುಡಿಭಾಗಗಳಲ್ಲಿ ಇದಕ್ಕೆ ನಿದರ್ಶನಗಳಿವೆ.

ಪಂಪರಾಮಾಯಣ ಸಂಗ್ರಹಕ್ಕೆ ಡಿ.ಎಲ್.ನರಸಿಂಹಾಚಾರ್ಯರು ಬರೆದಿರುವ ಮುನ್ನುಡಿ ಮಹತ್ವಪೂರ್ಣದ್ದಾಗಿದೆ. ಈ ಮುನ್ನುಡಿಯಲ್ಲಿ ಸಂಗ್ರಹರೂಪವಾಗಿ ತೌಲನಿಕ ಅಧ್ಯಯನಕ್ಕೆ ಒತ್ತು ಕೊಡಲಾಗಿದೆ. ಇಲ್ಲಿ ಬೌದ್ಧ, ಜೈನ, ವೈದಿಕ, ರಾಮಾಯಣಗಳು ಸಾಕಷ್ಟು ಕಂಡುಬರುತ್ತವೆ. ಜೈನ ರಾಮಾಯಣಕ್ಕೆ ಸಂಬಂಧಿಸಿದಂತೆ ವಿಮಲಸೂರಿಯ ಪಉಮಚರಿಯ ಕೃತಿಗೂ ಪಂಪರಾಮಾಯಣಕ್ಕೂ ಇರುವ ಸಾಮ್ಯತೆ ಭೇದ ಏನು ಎಂಬುದನ್ನು ಡಿ.ಎಲ್.ಎನ್. ಚರ್ಚಿಸಿ, ನಾಗಚಂದ್ರನ ಮೂಲ ಪಾಠವನ್ನು ಶೋಧಿಸಿ ಸಂಗ್ರಹ ರೂಪವಾಗಿ ಮರುಮೌಲ್ಯಮಾಪನಗೊಳಿಸುವ ಚಿಂತನೆಯಾಗಿ ಮುನ್ನುಡಿಯಲ್ಲಿ ಸಂಪಾದಕರು ರೂಪಿಸಿದ್ದಾರೆ. ಇದರಿಂದ ಪ್ರಾಚೀನ ಕಾವ್ಯ ಅಧ್ಯಯನಕ್ಕೆ ಉಪಕಾರಿಯಾಗಿದ್ದು, ಇಂದಿಗೂ ಮಹತ್ವದ ವಿಚಾರಗಳಾಗಿವೆ. ಈ ಬಗೆಯ ಮುನ್ನುಡಿಗಳಲ್ಲಿ ತಮ್ಮ ತತ್ವದ ವಿಚಾರಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ.

ತೀ.ನಂ.ಶ್ರೀ. ಮತ್ತು ಡಿ.ಎಲ್.ಎನ್. ಇವರು ಗ್ರಂಥಸಂಪಾದನೆಯಲ್ಲಿ ಕವಿಪಾಠಕ್ಕಾಗಿ ಶೋಧ ನಡೆಸಿ ಹೆಚ್ಚು ಶುದ್ಧವೆಂದು ತೋರುವ ಕೃತಿಯ ಪಾಠವನ್ನು ಗುರುತಿಸಿದ್ದಾರೆ. ಹೀಗೆ ತಮ್ಮ ಸಿದ್ಧಾಂತ, ನಿಲುವಿನಿಂದ ಅನೇಕ ಹಸ್ತಪ್ರತಿಗಳ ಸಹಾಯದಿಂದ ಕವಿಪಾಠವನ್ನು ರೂಪಿಸುವ ಕಾರ್ಯ ನಡೆಸಿದ್ದಾರೆ. ಹೀಗಾಗಿ ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ಕವಿ ಮತ್ತು ಕೃತಿಯ ಚರಿತ್ರೆ ಕಟ್ಟಿಕೊಳ್ಳುವ ಮಹತ್ವದ ಜವಾಬ್ದಾರಿಯನ್ನು ತೋರುತ್ತಾರೆ. ಆಕರ ಸಂಗ್ರಹವಷ್ಟೇ ಅಲ್ಲದೆ ದೊರೆತ ಮಾಹಿತಿಗಳ ಆಧಾರದಿಂದ ಕವಿಯೊಬ್ಬನ ಮನೋಭಾವ, ಲೇಖನ ಸಾಮರ್ಥ್ಯ, ಭಾಷೆ, ಶೈಲಿ, ವಸ್ತು, ನಿರೂಪಣಾ ತಂತ್ರ ಹೀಗೆ ಅವನ ಕಾವ್ಯಶಕ್ತಿಯನ್ನು ವಿಶ್ಲೇಷಿಸುತ್ತಾ ಸಾಧ್ಯವಾದಷ್ಟು

ಕವಿಪಾಠವನ್ನು ಹೋಲುವ ಪಾಠಗಳ ಪರಿಷ್ಕರಣೆ ನಡೆಸಿ, ಶಾಸ್ತ್ರೀಯವಾಗಿ ಗ್ರಂಥಸಂಪಾದನೆ ನಡೆಸಿದ್ದಾರೆ. ಹಾಗಾಗಿ ಪ್ರಾಚೀನ ಸಾಹಿತ್ಯದ ಪರಿಚಯ ದೊರೆಯುವಂತಾಯಿತು. ಆ ಮೂಲಕ ಕನ್ನಡ ಸಾಹಿತ್ಯದ ಸ್ವಭಾವ, ಗುಣ, ಲಕ್ಷಣಗಳ ತಿಳುವಳಿಕೆಯನ್ನು ತಿಳಿದುಕೊಳ್ಳಲು ಸಹಾಯಕವಾಯಿತು ಎಂಬುದು ತೀ.ನಂ.ಶ್ರೀ.ಯವರ ನಿಲುವಾಗಿತ್ತು.

ಟಿ.ಎಸ್.ವೆಂಕಣ್ಣನವರು ಕನ್ನಡ ಪ್ರಾಚೀನ ಕೃತಿ ಸಂಪಾದನೆಯಲ್ಲಿ ಪಾಶ್ಚಾತ್ಯರ ಸಂಶೋಧನೆಯನ್ನು ಅನುಕರಣೆ ಮಾಡಿದವರು. ತಮ್ಮ ಕೃತಿಯ ಸಂಪಾದನೆಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಳ್ಳುವುದಕ್ಕೆ ಇವರ ಪ್ರಾಚೀನ ಕನ್ನಡ ಕಾವ್ಯ ಸಮೀಕ್ಷೆ ಪ್ರಮುಖವಾದುದು. ಇವರ ಸಂಪಾದನೆ 'ಶ್ರೀ ವಿಜಯ', 'ಸಂತ,' ಹರಿಹರ ಮೊದಲಾದ ಕವಿಗಳ, ಕೃತಿಗಳ ಕುರಿತು ಅವರು ಬರೆದ ಬಿಡಿಬರಹಗಳು, ಮುನ್ನುಡಿಗಳು ಅವರ ಸಂಶೋಧನಾ ದೃಷ್ಟಿಯ ಕೈಗನ್ನಡಿಗಳಾಗಿವೆ. ಟಿ.ಎಸ್.ವೆಂಕಣ್ಣಯ್ಯನವರು ಹರಿಹರ ಕವಿಯ 'ಬಸವರಾಜ ದೇವರ ರಗಳೆ' ಸಂಪಾದನ ಕಾರ್ಯದಲ್ಲಿ ಅನುಸರಿಸುವ ವಿಧಾನ ಕನ್ನಡ ಕಾವ್ಯ ಸಮೀಕ್ಷೆಯ ದೃಷ್ಟಿಯಿಂದ ಮಹತ್ವದ್ದು ಸುಮಾರು ನಲವತ್ತು ಪುಟಗಳ 'ಮುನ್ನುಡಿ ಭಾಗದಲ್ಲಿ ಬಸವಣ್ಣನ ಕುರಿತು ವೀರಶೈವ ಪುರಾಣಗಳ ವಿವರಗಳಿಂದ ಬಸವರಾಜ ದೇವರ ರಗಳೆಯ ಕರ್ತೃ, ಕಾಲ, ಅದರ ಕಥಾ ಸಾರಾಂಶ ಮತ್ತು ವಿಮರ್ಶೆ ಕೂಡಿದೆ. ವಿಮರ್ಶಾ ಭಾಗದಲ್ಲಿ ಭಾಷೆಯ ದೃಷ್ಟಿಯಿಂದ ವಿಚಾರಾರ್ಹವಾದ ಕೆಲವು ಅಂಶಗಳನ್ನು ಚರ್ಚಿಸಿದ್ದಾರೆ. "ಸಾಮಾನ್ಯವಾಗಿ ಹಳಗನ್ನಡ ಶಬ್ದರೂಪಗಳು ಪ್ರಯೋಗವಾಗುತ್ತವೆ. ಜತೆಗೆ ಕೆಲವು ವೇಳೆ ಹೊಸಗನ್ನಡದ ಶಬ್ದ ರೂಪಗಳು ಬರುತ್ತವೆ. ಭಾಷೆ ಸಾಮಾನ್ಯವಾಗಿ ವ್ಯಾಕರಣಬದ್ಧವಾಗಿದ್ದರೂ ವ್ಯಾಕರಣ ನಿಯಮಗಳಿಗೆ ಹೊಂದದ ಕೆಲವು ಹೊಸ ರೂಪಗಳ ಪ್ರಯೋಗಗಳು ದೊರೆಯುತ್ತವೆ. ಹರಿಹರನ ಕಾಲದಲ್ಲಿ ಕನ್ನಡ ಭಾಷೆ ಹಳಗನ್ನಡದ ರೂಪದಿಂದ ಹೊಸಗನ್ನಡದ ರೂಪಕ್ಕೆ ತಿರುಗುತ್ತಿತ್ತು. ಹೀಗಾಗಿ ಹರಿಹರನೂ ಕೆಲವು ಹೊಸ ರೂಪಗಳನ್ನು ಪ್ರಯೋಗಿಸಿರಬಹುದು"[೧೩] ಎನ್ನುತ್ತಾರೆ. ಪ್ರಾಚೀನ ಕೃತಿಯ ಸಂಪಾದನೆಯ ಸಂದರ್ಭದಲ್ಲಿ ಭಾಷೆಯ ಬಗೆಗಿನ ಅಧ್ಯಯನಗಳನ್ನು ಬೆಳೆಸುವ ಪ್ರಯತ್ನದಿಂದ ವೆಂಕಣ್ಣಯ್ಯನವರು ಮೇಲಿನ ವಿಚಾರಗಳಿಂದ ಕನ್ನಡ ಸಾಹಿತ್ಯಕ್ಕೆ ಚರಿತ್ರೆಯನ್ನು ಒದಗಿಸಬೇಕೆಂದು ನಿರ್ಧರಿಸಿದ್ದಾರೆ.

ಡಿ.ಎಲ್.ನರಸಿಂಹಾಚಾರ್ ಅವರು ಹಳಗನ್ನಡ ಕೃತಿಗಳ ಸಂಪಾದನೆ ಕಾರ್ಯದಲ್ಲಿ ಮಹತ್ವದ ಹೆಸರನ್ನು ಪಡೆದಿದ್ದಾರೆ. ಡಿ.ಎಲ್.ಎನ್. ಅವರು 'ವಡ್ಡಾರಾಧನೆ', 'ಶಬ್ದಮಣಿದರ್ಪಣ,' 'ಸಿದ್ಧರಾಮಚಾರಿತ್ರ', 'ಪಂಪರಾಮಾಯಣ ಸಂಗ್ರಹ' ಕೃತಿಗಳನ್ನು ಸಂಪಾದಿಸಿದ್ದಾರೆ. ಅವರ ಆಳವಾದ ವಿದ್ವತ್ತು ಪಾಂಡಿತ್ಯ, ರಸಪ್ರಜ್ಞೆ, ಪರಿಶ್ರಮಗಳಿಂದ ಗ್ರಂಥಸಂಪಾದನೆ ಕಾರ್ಯದಲ್ಲಿ ಆದರ್ಶ ಪ್ರಾಯವಾದ ವಿಧಾನ, ಅವರ ಸಂಪಾದಿತ ಕೃತಿಗಳ 'ಮುನ್ನುಡಿ'ಯಲ್ಲಿ ಚರ್ಚಿಸುವ ವಿಚಾರಗಳಲ್ಲಿ ಕಾಣಬರುತ್ತದೆ. 'ವಡ್ಡಾರಾಧನೆ' ಕೃತಿಯ ಮುನ್ನುಡಿಯಲ್ಲಿ ಅವರು ತೋರಿರುವ ಪಾಂಡಿತ್ಯ, ವಿವೇಕ ಅನನ್ಯ ರೀತಿಯದಾಗಿದೆ. "ಈ ಕುರಿತು ಕೃತಿಯ ಹೆಸರು, ಕವಿಯ ಹೆಸರು, ಕಾಲದೇಶ

ವಿಚಾರಗಳನ್ನು ಕುರಿತು ಮುನ್ನುಡಿಯಲ್ಲಿ ವಿಪುಲವಾಗಿ ಚಿಂತಿಸಿದ್ದಾರೆ. ಹಸ್ತಪ್ರತಿಗಳ ಸಂಕಲನ, ಪಾಠಾಂತರ ಸಂಕಲನ, ಪಾಠನಿಯೋಜನೆ, ಸಂಸ್ಕೃತ, ಪ್ರಾಕೃತ ಭಾಷೆಗಳ ಉಲ್ಲೇಖಗಳನ್ನು ಬಳಸಿಕೊಂಡು ಅತ್ಯಂತ ಎಚ್ಚರಿಕೆಯಿಂದ, ಅಪಾರ ಶ್ರಮದಿಂದ ಕೆಲಸ ಮಾಡಿದ್ದಾರೆ. ಬಹುಶಃ ಈಗಿರುವ ಸಾಮಗ್ರಿಯ ಸಹಾಯದಿಂದ ಅದಕ್ಕಿಂತ ಉತ್ತಮ ಪಾಠವನ್ನು ನಾವು ಕೊಡಲಾರೆವು"[೧೪] ಎಂದು ಚಿದಾನಂದಮೂರ್ತಿ ಅವರ ಅಭಿಪ್ರಾಯವಾಗಿದೆ.

ಮುಖ್ಯವಾಗಿ ಡಿ.ಎಲ್.ಎನ್. ಅವರಿಗೆ ದೊರೆತ ಹಸ್ತಪ್ರತಿಗಳ ವಂಶಾವಳಿಯನ್ನು ರಚಿಸುವುದರ ಮೂಲಕ ಗ್ರಂಥದ ಮೂಲವನ್ನು ಪುನರ್ ನಿರ್ಮಿಸಿಕೊಳ್ಳುವ ಮಹತ್ವದ ಕಾರ್ಯ ವೈಖರಿಯನ್ನು 'ವಡ್ಡಾರಾಧನೆ' ಸಂಪಾದನೆ ಸಂದರ್ಭದಲ್ಲಿ ಮಾಡಿ ತೋರಿಸಿದ್ದಾರೆ. ಆದರೆ ಡಿ.ಎಲ್.ಎನ್. ಸಂಪಾದನೆಯ ಮರುಸಂಪಾದನೆ ಮಾಡುವಾಗ ಅಥವಾ ಹಸ್ತಪ್ರತಿಗಳನ್ನು ಮೌಲ್ಯಮಾಪನ ಮಾಡುವಾಗ ತಮ್ಮ ಸೈದ್ಧಾಂತಿಕ ನಿಲುವು ಹಾಗೂ ತಮ್ಮ ಕಾಲದ ಸಂದರ್ಭಕ್ಕೆ ಬೇರೆಯವರ ಹೇಳಿಕೆ ಆಧರಿಸಿ ಸಂಪಾದನೆ ಮಾಡಿದವರು ಇದ್ದಾರೆ. ಅವರ ಗ್ರಂಥದ ಮೂಲವನ್ನು ಹುಡುಕುವ ಮತ್ತು ಪುನರ್ ಜಾರಿಗೆ ತರುವ ಕೆಲಸ ಮಾಡುತ್ತಾರೆ. ಹಾಗೆಯೇ ಪಾಠವನ್ನು ಪರಿಶೀಲಿಸುವಲ್ಲಿ ಮೂಲ ಪಾಠವನ್ನು ನಿರ್ಧರಿಸುವಲ್ಲಿ ಅವರು ತೋರುವ ವಿಮರ್ಶಾಪ್ರಜ್ಞೆ ಮಾರ್ಗದರ್ಶಕವಾಗಿದೆ.

ಪಂಪರಾಮಾಯಣ ಸಂಗ್ರಹಕ್ಕೆ ಡಿ.ಎಲ್.ಎನ್. ಅವರು ಬರೆದಿರುವ ಮುನ್ನುಡಿ ಬಹಳ ಉಪಯುಕ್ತವಾಗಿದ್ದು. ಇದರಲ್ಲಿ ತೌಲನಿಕ ಅಧ್ಯಯನ ಶಿಸ್ತಿನಿಂದ ಕೂಡಿದೆ. 'ವಿಮಲಸೂರಿಯು ಕೊಟ್ಟಿರುವ ರುದ್ರಪಾತ್ರವನ್ನು ನಾಗಚಂದ್ರ ಎಷ್ಟರಮಟ್ಟಿಗೆ ಬಳಸಿಕೊಂಡಿದ್ದಾನೆಂಬಲ್ಲಿ ಯೋಗ್ಯವಾದ ರೀತಿಯಲ್ಲಿ ಬರೆದಿದ್ದಾನೆ. ನಾಗಚಂದ್ರನಲ್ಲಿ "ಮೂಲದಲ್ಲಿರುವಷ್ಟು ಸೌಂದರ್ಯವಿಲ್ಲ, ಗಾಂಭೀರ್ಯವಿಲ್ಲ"[೧೫] ಎಂಬ ಡಿ.ಎಲ್.ಎನ್. ಅವರ ಮಾತುಗಳು ಅವರ ತೌಲನಿಕ ವಿಮರ್ಶೆಯ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಅಲ್ಲದೆ, ಮುನ್ನುಡಿಯಲ್ಲಿ ಜೈನಧರ್ಮ, ಸಾಹಿತ್ಯದ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದಾರೆ. ಅಲ್ಲೆಲ್ಲಾ ಅವರ ಪಾಂಡಿತ್ಯ ಪರಿಶ್ರಮಗಳ ಜೊತೆಗೆ ಹಳಗನ್ನಡ ಕೃತಿಯೊಂದನ್ನು ಸಂಪಾದಿಸುವಾಗ ತಿಳಿದಿರಲೇಬೇಕಾದ ಸಂಗತಿಗಳು ಯಾವುವು ಎಂಬುದು ತಿಳಿಯುತ್ತದೆ, 'ಧರ್ಮ'ಪ್ರಧಾನವಾದ ಕೃತಿಯೊಂದನ್ನು ಸಂಗ್ರಹಿಸುವಾಗ ಧರ್ಮಕ್ಕೆ ಕವಿಧರ್ಮಕ್ಕೆ ಎಳ್ಳಷ್ಟು ಅಸಮಂಜಸವೆನಿಸದ ಹಾಗೂ ಸಂಪಾದನೆ ಮಾಡುವಲ್ಲಿ ಶ್ರದ್ಧೆಯನ್ನು ಔಚಿತ್ಯವನ್ನು ತೋರಬೇಕೆಂಬುದು ಡಿ.ಎಲ್.ಎನ್. ಅವರ ಮುನ್ನುಡಿಯಿಂದ ತಿಳಿದುಬರುತ್ತದೆ. ಇದರಿಂದ ಚರಿತ್ರೆ ಕಟ್ಟುವಾಗ ಯಥಾವತ್ತಾದ ರೀತಿಯಲ್ಲಿರದೇ ಮೂಲವನ್ನು ಒದಗಿಸಬೇಕೆಂದು ಅವರ ಚಿಂತನೆಯಾಗಿದೆ.

ಶಿ.ಶಿ.ಬಸವನಾಳರು ಸಂಪಾದಿಸಿದ ಪ್ರಾಚೀನ ಕೃತಿಗಳನ್ನು ಕುರಿತು ಅವರು ಚರ್ಚೆ ಮಾಡಿರುವ 'ಮುನ್ನುಡಿ'ಗಳು ಅವರ ವಿದ್ವತ್ತಿಗೆ, ರಸಪ್ರಜ್ಞೆಗೆ ಸಾಕ್ಷಿಯಾಗಿವೆ. ಅವರಲ್ಲಿ ತೌಲನಿಕ ಅಧ್ಯಯನದ ಹೊಳಹುಗಳಿವೆ. ಉದಾ:- ಚೆನ್ನಬಸವಪುರಾಣ ಕೃತಿಯ ಮುನ್ನುಡಿಯಲ್ಲಿ ಈ ಗ್ರಂಥವನ್ನು ಇತರ ಕಾವ್ಯಗಳೊಡನೆ ಹೋಲಿಸಬಹುದಾಗಿದೆ. ಅದರ ಮೇಲೆ ಆಗಿರುವ ಇತರ ಕಾವ್ಯಗಳ ಪ್ರಭಾವ

ಜೈಮಿನಿಭಾರತ, ಚೆನ್ನಬಸವ ಪುರಾಣಗಳಲ್ಲಿಯೂ ಆಗಿರುವುದನ್ನು ಕಾಣಬಹುದು. ಹೀಗೆ ಪ್ರಾಚೀನ ಕೃತಿಗಳ ಸಂಪಾದನೆಯಲ್ಲಿ ಸಾಮ್ಯತೆಯನ್ನು ಅಥವಾ ತೌಲನಿಕ ಅಧ್ಯಯನಕ್ಕೆ ಉಪಯುಕ್ತವಾಗುತ್ತದೆ ಎನ್ನುವುದನ್ನು ಶಿ.ಶಿ.ಬಸವನಾಳರು ತೋರಿಸಿದ್ದಾರೆ.

ಶಿ.ಶಿ.ಬಸವನಾಳರ ಬಹುಮುಖ್ಯ ಕಾರ್ಯ ವಚನಗಳಿಗೆ ಸಂಬಂಧಿಸಿದ್ದು. ಬಸವಣ್ಣವರ ಷಟ್‌ಸ್ಥಲದ ವಚನಗಳು ಎಂಬ ಅವರ ಗ್ರಂಥ ಪ್ರಧಾನವಾದದ್ದು. "ಈ ಗ್ರಂಥವು ಅವರ ಸಂಪಾದನಾ ಸಾಮರ್ಥ್ಯದ ಎಲ್ಲ ಅಂಶಗಳನ್ನು ಒಳಗೊಂಡು ಅಂತರ್‌ದೃಷ್ಟಿ ಪ್ರತಿಭೆಗಳ ಫಲದಿಂದ ಉಂಟಾಗಿರುವ ಕೃತಿಯಾಗಿದೆ. ನಮ್ಮ ದೃಷ್ಟಿಯಲ್ಲಿ ಈ ವಚನ ಸಂಕಲನವು ವಚನಗಳತ್ತ ಹೊಸ ದೃಷ್ಟಿಯಿಂದ ನೋಡುವುದನ್ನೇ ಕಲಿಸಿತು"[೧೬] ಎಂದು ತಮ್ಮಲ್ಲಿ ತಾವು ಅಂದುಕೊಳ್ಳುತ್ತಾರೆ. ಹಾಗೆಯೇ ವಚನಗಳನ್ನು ಕುರಿತು ಹೀಗೆ ಗುರುತಿಸುತ್ತಾ "ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ ಜನವಾಣಿಯನ್ನೆ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರದು"[೧೭] ಎಂದು ಬಸವಣ್ಣನವರ ಷಟ್‌ಸ್ಥಲ ವಚನಗಳು ಮುನ್ನುಡಿ ಭಾಗದಲ್ಲಿ ಹೇಳುತ್ತಾರೆ. ಈ ಕುರಿತು ಗ್ರಂಥದ ಮುನ್ನುಡಿ ತುಂಬಾ ಉಪಯುಕ್ತವಾಗಿದೆ. ಆದರೆ ವಚನಕಾರರ ಕಾಲಘಟ್ಟದಲ್ಲಿ ಶಿಕ್ಷಣಕ್ರಮ ಓದುವವರ್ಗ, ಅಕ್ಷರವಂತರು ಯಾರಾಗಿದ್ದರು ಎಂಬುದನ್ನು ಶಿ.ಶಿ.ಬಸವನಾಳ ಅವರು ವೀರಶೈವರು ವಚನ ಸಾಹಿತ್ಯವನ್ನು ಜನವಾಣಿಯಾಗಿದ್ದನ್ನು ದೇವವಾಣಿ ಆಗುವ ಮಟ್ಟಕ್ಕೇರಿಸಿದ ಪವಾಡ ಎಂದು ಬಣ್ಣಿಸಿದ್ದಾರೆ. ಆದರೆ ಪವಾಡ ಎಂದು ತಿಳಿದವರು ಯಾರು? ಪವಾಡ ಎಂದು ನಂಬಿಸಿದವರ್‍ಯಾರು? ನಂಬಿಕೆಗೆ ಒಳಗಾದವರು ಯಾರು? ಎನ್ನುವುದನ್ನು ಪ್ರಶ್ನೆ ಮಾಡಿಕೊಳ್ಳಬೇಕಾಗಿದೆ. ಶಿ.ಶಿ.ಬಸವನಾಳರ ಮುನ್ನುಡಿ ಆಳವಾದ ವಿಮರ್ಶಾಪ್ರಜ್ಞೆಯಿಂದ ಕೂಡಿದ್ದು, ಈ ಮುನ್ನುಡಿಯಲ್ಲಿ ವಚನ ಪಾಠ ನಿರ್ಣಯಕ್ಕೆ ತಾವು ಅನುಕರಿಸಿದ ಮಾರ್ಗವನ್ನು ವಿವರಿಸಿದ್ದಾರೆ. 'ಬಸವಣ್ಣನ ವಚನಗಳಲ್ಲಿ ಬಳಕೆಯಾಗಿರುವ ಶಬ್ದಗಳ ರೂಪ, ಶಬ್ದಪ್ರಯೋಗಗಳ ವ್ಯಾಕರಣದ ವೈಶಿಷ್ಟ್ಯ ಇತ್ಯಾದಿಯಾದ ವಿವರಗಳು ವಚನಗಳಿಗೆ ತಮ್ಮದೇ ಆದ ಅಭಿವ್ಯಕ್ತಿ ಸ್ವರೂಪವಿರುವುದನ್ನು ಕಾಣಿಸುತ್ತದೆ ಎಂಬ ತಿಳುವಳಿಕೆಯಿಂದ ಇವರು ವಚನಗಳ ಮುದ್ರಣವನ್ನು ಹೊಸ ರೀತಿಯಿಂದ ಮಾಡಿದ್ದಾರೆ. ವಚನಗಳನ್ನು ಅರ್ಥಾನುಸಾರಿಯಾದ ಸಾಲುಗಳಾಗಿ ಒಡೆದು, ಅರ್ಥಸ್ಪಷ್ಟತೆಗೆ ತಕ್ಕ ವಿರಾಮ, ಚಿಹ್ನೆಗಳನ್ನು ಉಪಯೋಗಿಸಿ ವಚನಗಳ ಅರ್ಥಸ್ಪಷ್ಟತೆ ಗೋಚರಿಸುವಂತೆ ಮಾಡಿದ್ದಾರೆ. ಇದಷ್ಟೇ ಅಲ್ಲದೇ ಅಶುದ್ಧ ಪಾಠವನ್ನು ವಿಕಾರವಾದ ಶಬ್ದಗಳನ್ನು ಸಾರ್ಥಕ ಶಬ್ದಗಳನ್ನಾಗಿ ಪರಿಷ್ಕರಿಸಿಕೊಳ್ಳುವಲ್ಲಿ ಶಿ.ಶಿ.ಬಸವನಾಳರ ವಿದ್ವತ್ತು ಬಹು ಜಾಗೃತ ಸಾಹಿತ್ಯಪ್ರಜ್ಞೆ ಅವರಲ್ಲಿ ಎದ್ದು ಕಾಣುತ್ತದೆ.

ಎಂ.ಆರ್.ಶ್ರೀನಿವಾಸ ಮೂರ್ತಿಯವರು ಕೂಡ ಕನ್ನಡ ಗ್ರಂಥ ಸಂಪಾದನೆಯಲ್ಲಿ ಪ್ರಮುಖರು. ಇವರು ಕೂಡ ಸಾಹಿತ್ಯ ಚರಿತ್ರೆ ಕಟ್ಟಲು ತಮ್ಮ ಚಿಂತನೆಯನ್ನು ಅಣಿಗೊಳಿಸಿದ್ದಾರೆ. ಇವರ ಪ್ರಾಚೀನ ಕೃತಿ ಸಂಪಾದನೆಯಲ್ಲಿ ಅದರಲ್ಲೂ ವೀರಶೈವ ಕಾವ್ಯ ಪುರಾಣಗಳ ಸಂಪಾದನೆ, ವಿಮರ್ಶೆ ಮತ್ತು ಸಂಶೋಧನೆಯನ್ನು ತಮ್ಮ ಮುಖ್ಯ ಪ್ರವೃತ್ತಿಯನ್ನಾಗಿಸಿಕೊಂಡು ದುಡಿದವರು. ಎಂ.ಆರ್.ಶ್ರೀ.ಯವರ

'ವಚನಧರ್ಮಸಾರ' ಕೃತಿ ಮೌಲಿಕವಾದದ್ದು, ವಚನ ಸಾಹಿತ್ಯವನ್ನು ಕುರಿತು 'ಇವರ ವಿಚಾರಗಳು ಇಂದಿಗೂ ಪ್ರಸ್ತುತವಾಗಿದೆ. ಪ್ರಭುಲಿಂಗಲೀಲೆಗೆ ಬರೆದ ಮುನ್ನುಡಿ, ಶೂನ್ಯ ಸಂಪಾದನೆಗಳನ್ನು ಕುರಿತ ಅವರ ಲೇಖನಗಳು ಮೊಟ್ಟ ಮೊದಲಬಾರಿಗೆ ವೀರಶೈವ ಪುರಾಣ ಬಗೆಗೆ ಅವರು ಬರೆದ ಸುದೀರ್ಘ ಲೇಖನಗಳಾಗಿದ್ದು ಐತಿಹಾಸಿಕ ದಾಖಲೆಗಳಾಗಿವೆ. ಆದರೆ ಎಂ.ಆರ್.ಶ್ರೀಯವರು ಲೇಖನಗಳ ಆಕೃತಿಯನ್ನು ಓಲೈಸುವ ತಂತ್ರವಾಗಿದೆ. ಹಾಗೆಯೇ ಹೊಸ ದೃಷ್ಟಿಯಿಂದ ನೋಡುವ ಪರಿಕರವಾಗಿದೆ. 'ವಚನಧರ್ಮಸಾರ'(೧೯೪೨) ಕೃತಿಯ ಮುನ್ನುಡಿಯಲ್ಲಿ "ಬಿ.ಎಂ.ಶ್ರೀ.ಅವರು ವಚನಗಳ ತಾತ್ಪರ್ಯವನ್ನು ಅವುಗಳಿಂದ ಹೊರಡುವ ಅಭಿಪ್ರಾಯಗಳನ್ನು ಗ್ರಂಥಕರ್ತರು ಹೊಸ ದೃಷ್ಟಿಯಿಂದ ನೋಡುತ್ತಿದ್ದಾರೆ"[೧೮] ಎಂದು ಸಮರ್ಥವಾಗಿ ಗುರುತಿಸುತ್ತಾರೆ.

ವಚನ ಧರ್ಮಸಾರದ ಮುನ್ನುಡಿಯಲ್ಲಿ ಎಂ.ಆರ್.ಶ್ರೀಯವರು ವಚನಧರ್ಮಸಾರ ಯಾರಿಗೆ ಸತ್ಯವೇ ಯಾರಿಗೆ ಧರ್ಮವೇ ಎನ್ನುತ್ತ "ಸಾಹಿತ್ಯದ ದೃಷ್ಟಿಯಿಂದಲೂ ಮತಧರ್ಮದ ದೃಷ್ಟಿಯಿಂದಲೂ ಹೊಸದೊಂದು ಬೆಳಕು ಕನ್ನಡ ನಾಡಿನಲ್ಲಿ ಹರಡಿದೆ. ವಿವಿಧ ಮತಗಳೆಂಬ ಬಾಹ್ಯ ರೂಪಗಳು ಕಂಡುಬರುತ್ತಿದ್ದರೂ ಒಳಗಿರುವ ಆತ್ಮ ಒಂದೇ ಎಂಬುದು ವಚನ ಧರ್ಮಸಾರದಿಂದ ತಿಳಿದುಬರುತ್ತದೆ. ಬಸವಣ್ಣನವರು ಅಲ್ಲಮಪ್ರಭು, ಮಹಾದೇವಿಯಕ್ಕ ಇವರನ್ನು ಕನ್ನಡಿಗರು ಹೆಮ್ಮೆ ಪಡಬಹುದಾದ ಮಹಾವ್ಯಕ್ತಿಗಳು"[೧೯] ಎನ್ನುತ್ತಾರೆ. ವಚನಗಳ ಬಗ್ಗೆ ಎಂ.ಆರ್.ಶ್ರೀಯವರ ಮುಖ್ಯ ನಿಲುವು ವಚನಧರ್ಮದೊಳಗೆ ದೇಶ ಕಾಲಾಧಿಗಳ ವ್ಯತ್ಯಾಸ ಇಲ್ಲಿದೆ. ಎಲ್ಲರಿಗೂ ಅನ್ವಯಿಸುವ ವಿಶ್ವಧರ್ಮವೊಂದು ಸೇರಿಕೊಂಡಿತು ಎಂಬುದು ನವೋದಯ ಸಂದರ್ಭದ ಮಹತ್ವದ ವಿಚಾರವಾದ ಧರ್ಮನಿರಪೇಕ್ಷ ನೆಲೆ ಹಾಗೂ ಮಾನವತಾವಾದಿ ನೆಲೆಯಲ್ಲಿ ಎಂ.ಆರ್.ಶ್ರೀಯವರು ವಚನಗಳನ್ನು ಮುಖಾಮುಖಿಯಾಗಿಸುತ್ತಾರೆ. ಅವರ ವಚನಗಳ ವಚನಕಾರರ ಸ್ವರೂಪವನ್ನು ಗ್ರಹಿಸುವುದು ಹೇಗೆ! ವಚನಕಾರರು ಸಿದ್ಧಾಂತಕ್ಕೆ ಪ್ರಾಮುಖ್ಯತೆ ಕೊಡದೆ, ಶಾಸ್ತ್ರಕ್ಕೆ ವಿಧಿವಿಧಾನಕ್ಕೆ ಕಟ್ಟುಬೀಳದೆ ಅನುಭವಕ್ಕೆ ಪ್ರಾಮುಖ್ಯತೆ ನೀಡುತ್ತಾರೆ. ಸಿದ್ಧಗೊಂಡ ಧರ್ಮಕ್ಕೆ ಬದಲಾಗಿ ತಮ್ಮ ತಮ್ಮ ಅರಿವಿನ ಮೂಲಕ ಗಳಿಸುವ ಧರ್ಮ ಮುಖ್ಯ ಎನ್ನುತ್ತಾರೆ. ಈ ಬಗೆಯ ವಿಚಾರಗಳನ್ನು ನವೋದಯದ ಸಾಂಸ್ಕೃತಿಕ ಪುನರುಜ್ಜೀವನದ ಮನಸ್ಸು ಮತ್ತು ಆಧುನಿಕ ಶಿಕ್ಷಣದ ತಿಳುವು ಮೂಡಿಸುವಂತಿದೆ. ಈ ವಿಚಾರಗಳಿಂದಲೇ ಎಂ.ಆರ್.ಶ್ರೀಯವರು ವಚನಗಳನ್ನು ಕಾಲಾತೀತ ನೆಲೆಯಲ್ಲಿ ಚರ್ಚಿಸಿದ್ದಾರೆ.

'ವಚನ ಧರ್ಮಸಾರ' ಕೃತಿಯುದ್ಧಕ್ಕೂ ಒಂದು ಮುಖ್ಯ ತಾತ್ವಿಕತೆ ಮಿಡಿಯುತ್ತಿದೆ. ಅದೇ ಮಾನವತಾವಾದಿ ಚಿಂತನೆ. ಈ ಕೃತಿಯಲ್ಲಿ 'ಧರ್ಮ'ಶ್ರದ್ಧೆಯನ್ನು ಒಳಗೊಂಡು 'ಧರ್ಮ'ದ ಪರಿಕಲ್ಪನೆಯನ್ನು ವಿಸ್ತರಿಸುವ ಆಧುನಿಕ ಚಿಂತಕನ ನಿಲುವಿದೆ. ಈ ಹಿನ್ನೆಲೆಯಿಂದ ನವೋದಯ ಸಂದರ್ಭದ ಸಂಪಾದಿತ ಕೃತಿಗಳಲ್ಲಿ ವಾಗ್ವಾದಗಳ ರೀತಿಯಲ್ಲಿ ಚರ್ಚೆಗಳಲ್ಲಿ, ಆ ಕೃತಿಯ ಸಂಪಾದನೆಯ ವಿಷಯವಾಗಿ ಮುನ್ನುಡಿಯಲ್ಲಿ ಈ ಚಿಂತನೆಗಳು ನಡೆಯುತ್ತಿವೆ.

ಹೀಗೆ ಹಳಗನ್ನಡ ಸಂಪಾದನ ಕೃತಿಗಳಲ್ಲಿ ಮೂಡಿಬಂದಿರುವ ಮುನ್ನುಡಿ ಭಾಗದಲ್ಲಿ ನವೋದಯ ಸಂದರ್ಭದಲ್ಲಿ ಕವಿಚರಿತೆಗಿಂತ ಸಾಹಿತ್ಯಚರಿತ್ರೆಗೆ ಹೊರಡುವ ಪ್ರಕ್ರಿಯೆಯಿದೆ. ಆರ್.

ನರಸಿಂಹಾಚಾರ್ಯರ ಸಂದರ್ಭದಲ್ಲಿ 'ಕವಿಚರಿತೆ' ಪ್ರಭಾವವಾಗಿತ್ತು. ಅನಂತರ ಅದು ಹಳಗನ್ನಡ ಸಂಪಾದನ ಕೃತಿಗಳಲ್ಲಿ ಸಾಹಿತ್ಯಚರಿತ್ರೆಯನ್ನು ಕಟ್ಟುವ ವಿಚಾರಗಳಿಗೆ ತಿರುಗಿತು. ಭಾಷೆಯ ವಿಷಯವಾಗಿ ವ್ಯಾಕರಣಬದ್ಧವಾಗಿ ನಡೆಯಬೇಕಾದ ವಿವೇಚನೆಯು ಹೊಸಗನ್ನಡ ಭಾಷೆ ರೂಪಗೊಳ್ಳುತ್ತಿದ್ದ ಹಿನ್ನೆಲೆಯಲ್ಲಿ ಭಾಷಾ ವಿಶ್ಲೇಷಣೆಯಾಗಿ ಮಾರ್ಪಟ್ಟಿತು. ಭಾಷೆ ಹೀಗಿರಬೇಕು ಎಂದು ನಿರ್ದೇಶಿಸುವ ಬದಲಿಗೆ ಕಾವ್ಯದ ಭಾಷೆಯನ್ನು ವಿಶ್ಲೇಷಿಸುವ ವಿವರಿಸುವ ವಿಧಾನ ಆರಂಭಗೊಂಡಿತು. ಈ ತರದ ಮಾತು ಛಂದಸ್ಸಿಗೂ ಅನ್ವಯಿಸುತ್ತದೆ. ಛಂದಸ್ಸನ್ನು ನಿರ್ಧರಿಸುವ ವಿಧಿಸುವ ಪ್ರಕ್ರಿಯೆಗೆ ಬದಲಾಗಿ ಛಂದೋವಿಶ್ಲೇಷಣೆ ಆರಂಭಗೊಂಡು ಹೊಸ ಬಗೆಯ ಛಂದೋಲಯಗಳನ್ನು ಗುರುತಿಸುವ ಹಳಗನ್ನಡ ಕೃತಿಗಳ ಛಂದಸ್ಸಿನಲ್ಲಿರುವ ವೈವಿಧ್ಯತೆಯನ್ನು ಲಯಗತಿಯನ್ನು ವಿಶ್ಲೇಷಿಸುವ ಕಾರ್ಯ ಆರಂಭಗೊಂಡಿತು. ಹೀಗೆ ನವೋದಯದ ಆರಂಭಘಟ್ಟದಲ್ಲಿ ಸಮಾಜ, ಸಾಂಸ್ಕೃತಿಕವಾಗಿ ಪಲ್ಲಟಗೊಳ್ಳುತ್ತಿದ್ದ ಸಂದರ್ಭದಲ್ಲಿ ಹಳೆಯದನ್ನು ಹೊಸ ಬಗೆಯಲ್ಲಿ ಗ್ರಹಿಸಿ, ಕನ್ನಡ ಸಾಹಿತ್ಯ ಚರಿತ್ರೆ ಕಟ್ಟಿಕೊಳ್ಳುವ ಆ ಮೂಲಕ ಆಧುನಿಕ ಕಾಲಕ್ಕೆ ಸಂಹವನಗೊಳಿಸುವ ಪ್ರಯತ್ನಗಳನ್ನು ಅಂದಿನ ಕನ್ನಡ ಚಿಂತನೆ ನಡೆಸಿತು.

ಹೀಗೆಯೇ ಕನ್ನಡಕ್ಕೆ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಚಿಂತನೆ ನೆಲೆಯಲ್ಲಿ ಬಿ.ಎಂ.ಶ್ರೀ.ಅವರು ಇನ್ನೊಂದು ಹೊಸ ಬಗೆಯಲ್ಲಿ ದಾಪುಗಾಲು ಇಡುತ್ತಾರೆ. ಅಂದರೆ ಇದರ ಮಧ್ಯೆ ಬಿ.ಎಂ.ಶ್ರೀ.ಅವರು ಅನೇಕ ಪಾಶ್ಚಾತ್ಯ ಸಂಗತಿಗಳನ್ನು ಕನ್ನಡಕ್ಕೆ ತರುವುದರಲ್ಲಿ ತೊಡಗಿದ್ದರು. ಅವರ 'ಇಂಗ್ಲಿಷ್ ಗೀತಗಳು' ಅಂದಿನ ದಿನಮಾನಗಳಲ್ಲಿ ಹೊಸ ಸಂಚಲನೆಯನ್ನು ಸೃಷ್ಟಿ ಮಾಡಿತು ಎನ್ನುವುದಕ್ಕೆ ತೀ.ನಂ.ಶ್ರೀ.ಅವರ ಮುನ್ನುಡಿಯಿಂದ ಹೊಸ ಬೆಳಕು ಚೆಲ್ಲುತ್ತದೆ. ಇಂಗ್ಲಿಷ್ ಗೀತಗಳು ಅನುವಾದದ ಹಿನ್ನೆಲೆಯಿಂದ ಓದುಗರಲ್ಲಿ ಅಭಿರುಚಿಗಳು ಬೇರೆಯಾಯಿತು. ಏಕೆಂದರೆ ಪಶ್ಚಿಮ ಪ್ರಭಾವದ ಅನುಕರಣೆಯ ಇಂಗ್ಲಿಷ್ ಗೀತಗಳು ಅನುವಾದದಿಂದ ಹೊಸ ಸಂಸ್ಕೃತಿಯ ಬಿರುಗಾಳಿ ಬೇಗನೆ ಕನ್ನಡ ಸಾಹಿತ್ಯಕ್ಕೆ(ಹಳಗನ್ನಡ ಕೃತಿಗಳ ಓದು ಮತ್ತು ಪ್ರಾಸದ ವಿಚಾರಣೆಯಲ್ಲಿ ಇರುವಾಗ)ತಟ್ಟಿತು. ಈ ಕೃತಿಯ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಹಲವಾರು ರೀತಿಯಲ್ಲಿ ಚರ್ಚೆಗೊಳಪಟ್ಟಿತ್ತು. ಅಂಥ ಸಂದರ್ಭದಲ್ಲಿ 'ಇಂಗ್ಲಿಷ್ ಗೀತಗಳು' ಅನುವಾದಗೊಂಡವು. ಈ ಕೃತಿಯ ಮುನ್ನುಡಿ ಕನ್ನಡ ಸಾಹಿತ್ಯದಲ್ಲಿ ಆಧುನಿಕತೆ ಎಂಬ ಹೊಸತನದ ಪರಿಕಲ್ಪನೆಯ ತಿರುವು ಪಡೆದುಕೊಂಡಿತು. ಹೀಗೆ ಎರಡು ಸಂಸ್ಕೃತಿಯ ಸಮ್ಮಿಲನವು ಸಾಂಸ್ಕೃತಿಕವಾಗಿ ತನ್ನದೇ ಆದ ಅಸ್ತಿತ್ವವನ್ನು ಪಡೆಯಿತು. ಈ ಮುನ್ನುಡಿಯಿಂದ ಆಧುನಿಕತೆಯ ಮಗ್ಗುಲುಗಳು ಹೊಸ ಚಿಂತನೆಯ ಜೊತೆಜೊತೆಗೆ ಸಾಹಿತ್ಯರಚನೆ ಚಿಂತನೆಯಲ್ಲಿಯೂ ಕೂಡ ಹಲವು ಪಲ್ಲಟಗೊಂಡಿವೆ. "ಇಂಗ್ಲಿಷ್ ಸಂಪರ್ಕದಿಂದ ಕನ್ನಡ ಸಾಹಿತ್ಯ ಕಸಿಮಾಡಿ ಬೆಳೆಸುವುದು"[೨೦] ಎಂಬ ಮಾತು ಅಕ್ಷರಶಃ ಸಾಂಸ್ಕೃತಿಕವಾಗಿ ಕೂಡಿದೆ. ಅವತ್ತಿನ ಕಾಲಘಟ್ಟದ ಸಂದರ್ಭದಲ್ಲಿ ಪಶ್ಚಿಮದ ಒತ್ತಡ ಪ್ರಭಾವಗಳು ಅನಿವಾರ್ಯವಾಗಿ ಬಂದಿವೆ. ಆದರೆ ಇವುಗಳ ಮುಂದೆ ನಮ್ಮ ಸಂಸ್ಕೃತಿ, ಸಾಹಿತ್ಯ ಸೊರಗಿದೆ ಎನ್ನುವಷ್ಟರ ಮಟ್ಟಿಗೆ ಪ್ರಭಾವಕ್ಕೊಳಗಾಯಿತು. ಆದರೂ ಸಾದರ ಸ್ವೀಕಾರ ರೀತಿಯಲ್ಲಿ ತಮ್ಮನ್ನು ಒಳಗೊಂಡಂತೆ ಕವಿಗಳು ಕೃತಿಕಾರರು ತಮ್ಮ

ಅಸ್ಮಿತೆಯನ್ನು ಪಶ್ಚಿಮ ಸಾಹಿತ್ಯದಿಂದ ಪಡೆದ. ಇದರಿಂದ ಪ್ರಾಸಬದ್ಧವಾದ ಬರವಣಿಗೆ ಸೀಮಿತಗೊಂಡಿತು. ಸರಳವಾದ ಕಾವ್ಯ ರಚನೆ ಓದು, ಗದ್ಯ ರೂಪದ ಬರವಣಿಗೆ ಕ್ರಮಗಳು ಪ್ರಾರಂಭವಾದವು. ಇದರಿಂದ ಕನ್ನಡ ಸಾಹಿತ್ಯ ನವೋದಯ ಪರಿಕಲ್ಪನೆಗೊಂಡಿತು. ಹಾಗೆಯೇ ಓರಿಯಂಟಲ್ ಅಧ್ಯಯಗಳು ಒಳಗೊಂಡಂತೆ ಹಲವಾರು ಜಾಗತಿಕ ಲೇಖಕರ ಪ್ರಭಾವ ಪ್ರೇರಣೆಯಿಂದ ಕನ್ನಡ ಸಾಹಿತ್ಯದಲ್ಲಿ ಬರವಣಿಗೆಗೆ ಅವಕಾಶವಾಯಿತು.

ಹೀಗೆ ಕೃತಿಕಾರರು, ಕವಿಗಳು ಹಳಗನ್ನಡ ಕೃತಿಗಳ ಪ್ರಸ್ತಾವನೆ ಬರೆಯುವುದರ ಮೂಲಕ ಸಾಹಿತ್ಯ, ಸಂಸ್ಕೃತಿ, ತಮ್ಮ ಸಮಕಾಲೀನ ಸಂದರ್ಭಕ್ಕೆ ಕೃತಿಗಳ ವಿಶ್ಲೇಷಣೆ ಹೊಸ ಹೊಸ ಚಿಂತನೆಯಿಂದ ಸಾಹಿತ್ಯ ಚರಿತ್ರೆ, ಸಂಸ್ಕೃತಿ ಪುನರ್ ನಿರ್ಮಾಣದ ಕಾಲವಾಯಿತು. ಇದರ ಹೊಸ ಗಾಳಿಯಿಂದ ಹೊಸ ಸಂಸ್ಕೃತಿ, ಸಾಮಾಜಿಕ ಬದಲಾವಣೆಯಿಂದ ಆಗಿನ ಸಮಕಾಲೀನ ಕವಿಗಳಿಗೆ ಬರಹಗಾರರಿಗೆ ಹೊಸ ಸಿಂಚನ ಮೂಡಿತು. ಆಗ ಹಳಗನ್ನಡ ಕೃತಿಗಳು ಮತ್ತು ದೇಸಿ ಹಾಗೂ ಪಾಶ್ಚಾತ್ಯ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಹೊಸ ಬೇರು ಹೊಸ ಚಿಗುರು ಬೆಳೆಸುವ ವಿಧಾನ ಬೇರೆಯಾಯಿತು.

ಮುನ್ನುಡಿ ಸಾಹಿತ್ಯ ನವೋದಯ ಕಾಲಕ್ಕೆ ಕನ್ನಡ ಸಾಹಿತ್ಯದಲ್ಲಿ ತನ್ನ ಅಸ್ತಿತ್ವವನ್ನು ಮೂಡಿಸಿಕೊಂಡಿತು. ಇದೇ ಮುಂದುವರಿದು, ನವ್ಯ, ನವ್ಯೋತ್ತರ ಹಾಗೂ ಸಮಕಾಲೀನ ಕಾಲಕ್ಕೆ ಮುನ್ನುಡಿ ಸಾಹಿತ್ಯ ಬರೆಸುವುದು ಒಂದು ಉತ್ತುಂಗವಾಗಿ ಬೆಳೆದಿದ್ದನ್ನು ಕಾಣುತ್ತೇವೆ. "ಕುವೆಂಪು ಅವರು 'ಮುನ್ನುಡಿ'ಯನ್ನು ಮುನ್ನುಡಿ ಸಾಹಿತ್ಯ ಎಂದು ಕರೆಯುತ್ತಾರೆ."[೨೧] ಹೀಗೆ ಮುನ್ನುಡಿ ಸಾಹಿತ್ಯವನ್ನು ಹಲವು ಶೀರ್ಷಿಕೆಗಳಾಗಿ 'ಪ್ರಸ್ತಾವನೆ' 'ಮೊದಲಮಾತು', 'ನುಡಿಬೆಳಗು', 'ಮುನ್ನುಡಿ', 'ನುಡಿಯ ಮಾತು', 'ಮೊದಲ ನುಡಿ', 'ಸಂಪಾದಕೀಯ ಮಾತು', 'ಹೊಸ ಬೇರು ಹೊಸ ಚಿಗುರು', 'ನನ್ನದೆಯ ಉಸಿರು' ಇತ್ಯಾದಿ ಹೆಸರುಗಳಾಗಿ ಕನ್ನಡ ಸಾಹಿತ್ಯವಲಯದಲ್ಲಿ ಮುನ್ನುಡಿ ಕ್ಷೇತ್ರವನ್ನು ಗುರುತಿಸುತ್ತೇವೆ. ಮುನ್ನುಡಿಯ ಪ್ರಮುಖ ಕಾರ್ಯ ಓದುಗರು ಹಾಗೂ ಕೃತಿಯ ನಡುವಿನ ಸಂಬಂಧವನ್ನು ಮೂಡಿಸುವ ಕೆಲಸವಾಗಿದೆ. ಮುನ್ನುಡಿ ಪ್ರತಿಯೊಂದು ಕೃತಿಗೂ ಸಾಮಾನ್ಯವಾಗಿದೆ. ಹಾಗೆಯೇ ಪರಂಪರೆಯಾಗಿಯೂ ಸಂಪ್ರದಾಯವಾಗಿಯೂ ಮುಂದುವರಿದಿದೆ.

### ೩.೧.೪. ಮುನ್ನುಡಿ ಸಾಹಿತ್ಯ: ಪರಂಪರೆ

ಆಧುನಿಕ ಕನ್ನಡ ಸಾಹಿತ್ಯ ತನ್ನ ಸಮಕಾಲೀನ ಸಾಹಿತ್ಯದೊಂದಿಗೆ ಸಂವಾದ ಮತ್ತು ಅಂದಿನ ಸಾಹಿತ್ಯದೊಂದಿಗೆ ಅನುಸಂಧಾನ ಎರಡನ್ನೂ ಒಳಗೊಂಡಿದೆ. ನವೋದಯ ಸಾಹಿತ್ಯದ ಪ್ರಾರಂಭದಲ್ಲಿ ಬಿ.ಎಂ.ಶ್ರೀ., ಮಾಸ್ತಿ, ಕುವೆಂಪು, ಡಿ.ವಿ.ಜಿ., ಎಸ್.ವಿ.ರಂಗಣ್ಣ, ವಿ.ಸೀ., ಪು.ತಿ.ನ., ಎ.ಆರ್.ಕೃಷ್ಣಶಾಸ್ತ್ರಿ, ರಂ.ಶ್ರೀ.ಮುಗಳಿ ಮುಂತಾದವರ ಆಳವಾದ ಅಧ್ಯಯನ, ಪರಿಶ್ರಮ, ವಿದ್ವತ್ತಿನಿಂದ ಪ್ರಾರಂಭಗೊಂಡ ಕನ್ನಡ ಸಾಹಿತ್ಯ ವಿಮರ್ಶೆ ಮುಂದೆ ಅಲ್ಪಕಾಲದ ಪ್ರಗತಿಶೀಲರಲ್ಲಿ ಅ.ನ.ಕೃ. ನಿರಂಜನ, ಬಸವರಾಜ ಕಟ್ಟೀಮನಿ ಇವರಿಂದ ನವ್ಯದ ಸಂದರ್ಭದಲ್ಲಿ ವಿ.ಕೃ.ಗೋಕಾಕ್, ಕೀರ್ತಿನಾಥ ಕುರ್ತಕೋಟಿ,

ಗೋಪಾಲಕೃಷ್ಣ ಅಡಿಗರು, ಎಂ.ಜಿ.ಕೃಷ್ಣಮೂರ್ತಿ, ಯು.ಆರ್.ಅನಂತಮೂರ್ತಿ, ಯಶವಂತ ಚಿತ್ತಾಲ ಮುಂತಾದವರಿಂದ ಮತ್ತಷ್ಟು ಶಿಸ್ತು ಮತ್ತು ಪ್ರಬುದ್ಧತೆಯನ್ನು ಪಡೆದುಕೊಂಡಿತು. ಈ ಪರಂಪರೆಯ ಮುಂದುವರಿಕೆಯಾಗಿ ಪಿ.ಲಂಕೇಶ್, ಜಿ.ಎಸ್.ಆಮೂರ, ಗಿರಡ್ಡಿ ಗೋವಿಂದರಾಜ, ಜಿ.ಎಚ್.ನಾಯಕ, ಕೆ.ವಿ.ನಾರಾಯಣ, ಎಚ್.ಎಸ್.ರಾಘವೇಂದ್ರರಾವ್, ಟಿ.ಪಿಅಶೋಕ, ರಾಜೇಂದ್ರ ಚೆನ್ನಿ, ಬರಗೂರು ರಾಮಚಂದ್ರಪ್ಪ, ಡಿ.ಆರ್.ನಾಗರಾಜ, ರಹಮತ ತರೀಕೆರೆ, ಬಿ.ಎನ್.ಸುಮಿತ್ರಾಬಾಯಿ, ವಿಜಯಾ ದಬ್ಬೆ ವೀಣಾ ಶಾಂತೇಶ್ವರ, ಸಿ.ಎನ್.ರಾಮಚಂದ್ರನ್, ನರಹಳ್ಳಿ ಬಾಲಸುಬ್ರಹ್ಮಣ್ಯ ಇನ್ನು ಮುಂತಾದ ಅನೇಕ ವಿಮರ್ಶಕರ ಪರಂಪರೆ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ.

ನವೋದಯ ಸಾಹಿತ್ಯದ ಪ್ರಾರಂಭದಲ್ಲಿ ಹಳಗನ್ನಡ ಸಾಹಿತ್ಯ ಮತ್ತು ಕವಿಗಳನ್ನು ಕುರಿತು ಚರ್ಚೆಗಳು, ಕೃತಿಗಳ ಸಂಪಾದನ ಕಾರ್ಯ, ಸಾಹಿತ್ಯ ಚರಿತ್ರೆಯ ರಚನೆಗಳು, ಕೃತಿಗಳ ಮುಖ್ಯ ಭಾಗಗಳನ್ನು ಕುರಿತಂತೆ ನಡೆದ ಚಿಂತನೆಗಳು ವಿಮರ್ಶೆಯ ಬಹುಮುಖತೆಯ ಸೂಚಕವಾಗಿವೆ. ಈ ಜವಾಬ್ದಾರಿಯಿಂದ ವಿಮರ್ಶಾ ಪ್ರಕಾರದ ಚಿಂತನೆ ಹುಟ್ಟುತ್ತದೆ. ತನ್ನ ಸಮಕಾಲೀನ ಲೇಖಕ ಲೇಖಕಿಯರನ್ನು ಪ್ರೋತ್ಸಾಹಿಸುವ ಸಾಂಸ್ಕೃತಿಕ ಹೊಣೆಗಾರಿಕೆಯನ್ನು ಹೊತ್ತಿತ್ತು. ಆಗ ಮುನ್ನುಡಿಗಳ ಮುಖಾಂತರ ಹೊಸಬರನ್ನು ಹುರಿದುಂಬಿಸುವ ವಿಮರ್ಶಿಸುವ ಕೆಲಸವನ್ನು ಅಂದಿನ ಹಿರಿಯರು ಮಾಡಿದರು. ಇದಕ್ಕೂ ಮೊದಲು ಎಫ್.ಕಿಟೆಲ್‌ರನ್ನು ನೆನೆಯಬೇಕಾಗುತ್ತದೆ. ಏಕೆಂದರೆ ಛಂದೋಂಬುಧಿಗೆ ಬರೆದ ಮುನ್ನುಡಿ ಇಡೀ ಕನ್ನಡ ಸಾಹಿತ್ಯ ಚಿಂತನೆಯನ್ನು ಒಳಗೊಂಡಿದೆ. ಈ ಹಿನ್ನೆಲೆಯಿಂದ ಅನೇಕ ಹಳಗನ್ನಡ ಕೃತಿಗಳಿಗೆ ಮುನ್ನುಡಿ ಬರೆಯುತ್ತಾ, ಹೊಸ ಸಂಸ್ಕೃತಿ, ಭಾಷೆ, ರಚನೆ, ವಿನ್ಯಾಸ ಹಲವು ಸ್ತರದ ಬರವಣಿಗೆಯಾಗಿ ವಾಗ್ವಾದಗಳ ಸೃಷ್ಟಿಯಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ರೂಪ ಕೊಟ್ಟವರು. ಹಾಗಾಗಿ ಯುರೋಪಿಯನ್ನರನ್ನು ನೆನೆಯಬೇಕಾಗುತ್ತದೆ. ಇವರ ಪ್ರೇರಣೆಯಿಂದ ಕನ್ನಡ ಸಾಹಿತ್ಯದಲ್ಲಿ ಸಂಶೋಧನೆ ಮತ್ತು ಸಂಪಾದನಾ ಕ್ಷೇತ್ರಕ್ಕೆ ಅಡಿಗಾಲು ಇಟ್ಟರು. ಹಳಗನ್ನಡ ಕೃತಿಗಳ ಸಂವಾದ, ಚರ್ಚೆಗೆ ಮುನ್ನುಡಿಗಳು ವೇದಿಕೆಯಾದವು.

ಆಧುನಿಕ ಕನ್ನಡ ಸಾಹಿತ್ಯ ಪ್ರವರ್ತಕ ಬಿ.ಎಂ.ಶ್ರೀ.ಅವರ ಚಿಂತನೆಯಲ್ಲಿ ಹಳೇಬೇರು ಹೊಸಚಿಗುರು ಎನ್ನುವ ನೆಲೆಯಲ್ಲಿ ನವೋದಯ ಕಾಲ ಸೃಷ್ಟಿಗೊಂಡಿತು. ಆಗ ಅನೇಕ ತರಹದ ಸಾಹಿತ್ಯ ಪ್ರಕಾರದ ಕೃತಿಗಳಿಗೆ ಮುನ್ನುಡಿಗಳು ಪ್ರಮುಖವಾದವು. ಸಾಮಾನ್ಯ ಕೃತಿಯೊಂದಕ್ಕೆ ಮೆಚ್ಚುಗೆಯ ಮಾತುಗಳ ಮುನ್ನುಡಿ ಬರೆದ ಬಿ.ಎಂ.ಶ್ರೀ.ಯವರನ್ನು ಇವರ ಗೆಳೆಯರೊಬ್ಬರು ಆಕ್ಷೇಪಿಸಿದಾಗ ಉತ್ತರವಾಗಿ ಬಿ.ಎಂ.ಶ್ರೀಯವರು ಹೇಳಿದರಂತೆ. "ಅಪ್ಪಾ ಅದು ಆತನ ಮೊದಲ ಕೃತಿ, ಮುಂದೆ ಬೆಳೆದು ಒಳ್ಳೆಯ ಲೇಖಕನಾದರೂ ಆದಾನು, ನನ್ನ ಎರಡು ಒಳ್ಳೆಯ ಮಾತಿನಿಂದ ಅವನಿಗೆ ಉತ್ಸಾಹ ಹೆಚ್ಚಿ ಚೆನ್ನಾಗಿ ಬರೆದರೆ ಉಳಿಯುತ್ತಾನೆ. ಶಕ್ತಿ ಇಲ್ಲದಿದ್ದರೆ ಕಳೆದುಹೋಗುತ್ತಾನೆ. ನನ್ನ ಕೆಟ್ಟ ಮಾತಿನಿಂದ ಇಂದೇ ಅವನನ್ನು ಯಾಕೆ ನಿರುತ್ಸಾಹಗೊಳಿಸಬೇಕು?"[೨] ಎಂಬ ಮಾತುಗಳು ಆ ವೇಳೆಗೆ ಅವರು ನಿರ್ವಹಿಸಿದಂತ ಜವಾಬ್ದಾರಿಯ ಹೊಣೆಗಾರಿಕೆಯನ್ನು ಕುರಿತು

ಹೇಳುತ್ತದೆ. ನವೋದಯ ಸಾಹಿತ್ಯದ ಮುಖ್ಯ ಕೃತಿಗಳಿಗೆ ಮಾಸ್ತಿಯವರು ಬರೆದ ಮುನ್ನುಡಿಗಳು ಉತ್ತಮ ವಿಮರ್ಶೆಗೆ ಮಾದರಿಯಾಗಿವೆ. ದ.ರಾ.ಬೇಂದ್ರೆಯವರ 'ನಾದಲೀಲೆ' ಕವನಸಂಕಲನ ಇವುಗಳು ನವೋದಯ ಸಾಹಿತ್ಯದ ಮೊದಲ ಹಂತದಲ್ಲಿ ಬಂದ ಮುನ್ನುಡಿಗಳು ಸಾಕಷ್ಟು ದೀರ್ಘವಾಗಿದ್ದು, ಅವು ಕನ್ನಡ ಕಾವ್ಯ, ಸಾಹಿತ್ಯಮೀಮಾಂಸೆಗಳ ಬಗೆಗಿನ ಚರ್ಚೆಗಳಾಗಿದ್ದವೆಂಬುದು ಗಮನಿಸಬೇಕಾದ ಅಂಶ. ಹಳೆಯ ಕಾವ್ಯಗಳ ಪ್ರಾರಂಭದಲ್ಲಿ ಬರೆದ ಮುನ್ನುಡಿಗಳು ಆ ಕಾವ್ಯವನ್ನು ಅರ್ಥೈಸಿಕೊಳ್ಳುವ ಹಂತದಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸಿದ್ದವು. ಹಾಗಾಗಿ ಇದು ಸಾಂಸ್ಕೃತಿಕ ವಿಮರ್ಶೆಯ ಮಾದರಿಯದಾಗಿದೆ.

೧೯೫೨ರಲ್ಲಿ 'ನಡೆದು ಬಂದ ದಾರಿ' ಕವನ ಸಂಕಲನದ ಮುನ್ನುಡಿಯಲ್ಲಿ ಗೋಪಾಲಕೃಷ್ಣ ಅಡಿಗರು ಸ್ವಂತಿಕೆ ಎಂದರೇನೆಂದು ಅದರ ಲಕ್ಷಣಗಳನ್ನು ಹೇಳುವುದರ ಜೊತೆಗೆ ಹೊಸ ಕಾವ್ಯದ ಲಕ್ಷಣಗಳನ್ನು ಕುರಿತು ಮಾತನಾಡಿದ್ದಾರೆ. ಈ ಮುನ್ನುಡಿಯು ಅಡಿಗರು ಹೊಸ ಕಾವ್ಯದ ಲಕ್ಷಣಗಳೆಂದು ಯುಗದ ವಾತಾವರಣವನ್ನು ಚಿತ್ರಿಸುವ ಹೊಸ ಮಾತಾಗಿದೆ. ಈ ಹೊಸ ನುಡಿಗಟ್ಟಿನ ಮೂಲಕ ಸಮಾಜದ ವಾಣಿಯಾಗುವುದನ್ನು ಭಾವಗಳು, ದೃಷ್ಟಿಕೋನ, ವಿದ್ಯಮಾನ, ಅನುಭವ ಮತ್ತು ಆದರ್ಶ ಸ್ವರೂಪದ ಕನಸಿನ ಒಂದಂಶ ಕಾವ್ಯ-ಕಾವ್ಯದಲ್ಲಿರಬೇಕಾದ್ದನ್ನು ಹೇಳಿದರು. ೧೯೬೨ರ ಸಂದರ್ಭದಲ್ಲಿ 'ಸಾಕ್ಷಿ ಪತ್ರಿಕೆ'ಗಳಿಗೆ ಬರೆದ ಮುನ್ನುಡಿಯಲ್ಲಿ ಅಡಿಗರು ವಿಮರ್ಶೆಯ ಬಹುಮುಖಿ ನೆಲೆಗಳನ್ನು ಸೂಚಿಸುತ್ತಾರೆ. ಕೃತಿನಿಷ್ಠ, ವಸ್ತುನಿಷ್ಠ ನೆಲೆಯಲ್ಲಿ ವಿಮರ್ಶೆಗೆ ಒತ್ತನ್ನು ಕೊಡುವ ಅಡಿಗರು "ವಿಮರ್ಶೆಯ ಮೊದಲನೆಯ ಕೆಲಸ, ಕೃತಿಯ ಆಮೂಲಾಗ್ರವಾದ ಅಭ್ಯಾಸ, ಆ ಅಭ್ಯಾಸಕ್ಕೆ ತಕ್ಕ ಊಹಾ ಶಕ್ತಿ, ಭಾಷಾಜ್ಞಾನ, ವಿನಯ ಮತ್ತು ತಾಳ್ಮೆ, ಅತ್ಯಗತ್ಯ"[೨೩] ಎಂದು "ವಿಮರ್ಶೆಯ ಕೆಲಸ ಸರಿಯಾಗಿ ನಡೆಯಬೇಕಾದರೆ ಕೃತಿ ಒಂದು ಸ್ವತಂತ್ರ ವಸ್ತು ಎಂಬ ಅರಿವು ಬರೆದವನೊಡನೆ ತನಗಿರಬಹುದಾದ ಭಾವಾನಾತ್ಮಕ, ಭೌದ್ಧಿಕ ಸಾಂಘಿಕ ಅಥವಾ ರಾಜಕೀಯ ಸಂಬಂಧಗಳಿಂದ ಸಂಪೂರ್ಣ ವಿಮುಕ್ತಿಯೂ ಅವಶ್ಯ"[೨೪] ಎಂದು ಹೇಳುತ್ತಾರೆ.

ನವ್ಯದ ಸಂದರ್ಭದಲ್ಲಿ ಬಂದ ಮುನ್ನುಡಿಗಳು ಬಹಳ ಗಂಭೀರವಾಗಿಯೇ ಕೃತಿಯನ್ನು ವಿಶ್ಲೇಷಣೆಗೆ ಒಳಪಡಿಸಿರುವುದನ್ನು ಗಮನಿಸಬಹುದು. ಲಂಕೇಶ್ ಅವರ ಅನೇಕ ಮುನ್ನುಡಿಗಳು ಕೇವಲ ಹೊಗಳಿಕೆಯ ನುಡಿ ಲೇಖನಗಳಾಗಿರದೆ ಕೃತಿ ರಚನೆಯ ಸಂದರ್ಭದಲ್ಲಿನ ಅನುಭವ, ಗ್ರಹಿಕೆ, ಉತ್ಸಾಹ ಮತ್ತು ಸಾಮಾಜಿಕ ಬದ್ಧತೆಯ ಕಡೆ ಲಕ್ಷಿಸಿರುವುದನ್ನು ಗಮನಿಸಬಹುದು. ಕೃತಿಯ ಸತ್ವ ಮತ್ತು ಲೋಪಗಳನ್ನು ಹೇಳುವಾಗ ಲಂಕೇಶರು ಯಾವ ಮುಲಾಜಿಗೂ ಒಳಗಾಗಿ ಬರೆಯುತ್ತಿರಲಿಲ್ಲವೆಂಬುದು ಸಾಹಿತ್ಯಲೋಕಕ್ಕೆ ತಿಳಿದ ಸಂಗತಿಯಾಗಿದೆ. ನವೋದಯ ಕಾಲದಿಂದ ಬರವಣಿಗೆಯನ್ನು ಪ್ರಾರಂಭಿಸಿ ಇತ್ತೀಚಿನ ವರ್ಷಗಳಲ್ಲಿ ಬರವಣಿಗೆ ನಿಲ್ಲಿಸಿದ ಜಿ.ಎಸ್.ಶಿವರುದ್ರಪ್ಪನವರು ತಮ್ಮ ಬರವಣಿಗೆಯ ಕ್ರಮದಲ್ಲಿ, ಅವರ ಕಾಲಮಾನದಲ್ಲಿ ಬರೆದ ಮುನ್ನುಡಿಗಳ ಸಂಗ್ರಹ 'ಕಾವ್ಯಸಂವಾದ'ದಲ್ಲಿ ಕನ್ನಡ ಕಾವ್ಯಕ್ಕೆ ಅವರು ಸ್ಪಂದಿಸಿದ್ದು ದಾಖಲೆಯಾಗಿದೆ. ಇಲ್ಲಿನ ಬರಹಗಳು

ಕೇವಲ ಔಪಚಾರಿಕ ಟಿಪ್ಪಣಿಗಳಾಗಿರದೆ, ಕನ್ನಡ ಕಾವ್ಯ ಬೆಳವಣಿಗೆಯನ್ನು ಹತ್ತಿರದಿಂದ ಕಂಡು ಸ್ಪಂದಿಸಿದ ಸಹೃದಯ ನೆಲೆಯಾಗಿವೆ.

ಬಂಡಾಯ ಸಾಹಿತ್ಯದ ಮುಂಚೂಣಿಯಲ್ಲಿ ನಿಂತು ಸಮಕಾಲೀನ ಕಿರಿಯರ ಬೆನ್ನು ತಟ್ಟುವ ಬರಗೂರು ರಾಮಚಂದ್ರಪ್ಪನವರು "ನನಗೆ ಕಟ್ಟುವ ಕೆಲಸ ಮುಖ್ಯ. ಕೆಡುಹುವ ಕೆಲಸ ಕನಸಿನಲ್ಲಿ ಇಣುಕಬಾರದು. ಕಟ್ಟುವ ಕೆಲಸದಲ್ಲಿ ಶ್ರಮ, ಸಂಕಟ, ಸಂತೋಷ, ಉತ್ಸಾಹ, ವಿಷಾದ, ಎಲ್ಲವೂ ಮುಖ್ಯ"[೨೫] ಎಂದು ಹೇಳುತ್ತಾ ಮುನ್ನುಡಿ ಮೂಲಕ ಬಂಡಾಯ ಸಾಹಿತ್ಯವನ್ನು ಕಟ್ಟುವ ಕೆಲಸ ಮಾಡಿದ್ದಾರೆ.

ಹೀಗೆ ನವೋದಯ ಸಾಹಿತ್ಯದ ಸಂದರ್ಭದಲ್ಲಿ ರಸ ವಿಮರ್ಶೆಯಾಗಿ ನವ್ಯದ ಸಮಯದಲ್ಲಿ ಶಾಸ್ತ್ರದ ಶಿಸ್ತು ಮತ್ತು ಪ್ರಬುದ್ಧತೆಗಳನ್ನು ಮೈಗೂಡಿಸಿಕೊಂಡು ಬೆಳೆದ ವಿಮರ್ಶೆ ಮುನ್ನುಡಿಗಳ ಮೂಲಕ ಇಂದು ಕನ್ನಡ ಸಾಹಿತ್ಯಕ್ಕೆ ಸಾಕಷ್ಟು ಕೊಡುಗೆಯನ್ನು ಕೊಟ್ಟಿದೆ, ಕೊಡುತ್ತಿದೆ. ಮುನ್ನುಡಿಗಳ ಮೂಲಕ ಸಹೃದಯ ತನ್ನ ಮತ್ತು ಕೃತಿಕಾರನ ನಡುವೆ ಸೇತುಬಂಧವನ್ನು ನಿರ್ಮಿಸುವ ಕೆಲಸವನ್ನು ಮಾಡುತ್ತಾನೆ. ರಸಿಕನಾದ ಓದುಗನೊಬ್ಬ ತನ್ನ ವಿಮರ್ಶನ ಪ್ರಜ್ಞೆಯಿಂದ ಕೃತಿಯ ಒಳ-ಹೊರಗನ್ನು ತೆರೆದಿಡುವ ಅನುಸಂಧಾನವೇ ಮುನ್ನುಡಿ ಸಾಹಿತ್ಯವಾಗಿದೆ.

**ಮುನ್ನುಡಿಕಾರ ಮತ್ತು ಕೃತಿಕಾರನ ತೌಲನಿಕ ಚರ್ಚೆ**

ಸಾಹಿತ್ಯದ ಗದ್ಯಪ್ರಕಾರಗಳಲ್ಲಿ ಮುನ್ನುಡಿ ಬರಹಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಪರ್ಯಾಯವಾಗಿ ವಿಮರ್ಶಾ ಚಿಂತನ ರೂಪದಲ್ಲಿರುವ ಈ ಬರಹಗಳಿಗೆ ಒಂದು ಆಪ್ತವಾದ ಸಂಬಂಧವನ್ನು ರೂಪಿಸುತ್ತದೆ. ವಿಮರ್ಶೆ ಎನ್ನುವುದು ಕೃತಿಯ ಒಟ್ಟು ಅವಲೋಕನವಾದರೆ, ಮುನ್ನುಡಿ ಕೃತಿಯ ಜೊತೆ ಜೊತೆಗೆ ಕೃತಿಕಾರನ ಹಾಗೂ ಮುನ್ನುಡಿ ಬರಹಗಾರನ ವೈಯಕ್ತಿಕ ಅಭಿವ್ಯಕ್ತಿಗಳನ್ನು ಹೇಳಿಕೊಳ್ಳಲು ಒಂದು ವಿಸ್ತೃತವಾದ ವೇದಿಕೆ ಸಾಧ್ಯವಾಗುತ್ತದೆ. ಮುನ್ನುಡಿ ಬರಹವೆಂಬುದು ಓದಿನ ಅನಿವಾರ್ಯವಾದ ಮತ್ತು ಅಂತಿಮವಾದ ಬರವಣಿಗೆಯ ಶಕ್ತಿ. ಕೃತಿಕಾರರ ಬರವಣಿಗೆಯ ಮೊದಲ ಓದುಗನಾಗಿ ನಿಂತು ಅನಿಸಿಕೆಗಳನ್ನು ಹೇಳಿ ಬಿಡುವ ಒಂದು ಕೌಶಲ ಈ ಮುನ್ನುಡಿ. ಮುನ್ನುಡಿಕಾರ ಕೃತಿಕಾರನಿಗಿಂತ ದೊಡ್ಡವನೇ ಆಗಬೇಕಿಲ್ಲ. ಕೃತಿಕಾರನ ಜೊತೆಗೆ(ನವೋದಯ) ಮುನ್ನುಡಿಕಾರನ ಹೆಸರೂ ಪ್ರಧಾನವಾಗಿ ಪ್ರಕಟವಾಗುತ್ತಿತ್ತು. ಇಂಥವರ ಮುನ್ನುಡಿ ಎಂದು ಹೇಳಿಕೊಂಡು ಕೃತಿಯನ್ನು ದೊಡ್ಡವಾಗಿ ತೋರುವ ಮಾನ್ಯತೆ ಹಿಂದೆ ಜಾರಿಯಲ್ಲಿತ್ತು. ಒಂದು ಕೃತಿಗೆ ಮುನ್ನುಡಿ ಎಂಬುದು ಕೃತಿಯ ಪ್ರವೇಶಕ್ಕೆ ರಹದಾರಿ ಇದ್ದಂತೆ. ಹೀಗಾಗಿ ಪ್ರತಿಯೊಬ್ಬ ಕೃತಿಕಾರ ತನ್ನ ಕೃತಿ ಸಿದ್ಧವಾದ ಮೇಲೆ ಯಾರಿಂದ ಮುನ್ನುಡಿ ಬರೆಸಬೇಕು, ಅವರು ನನ್ನ ಕೃತಿಗೆ ಸರಿಯಾದ ನ್ಯಾಯ ಒದಗಿಸಬಲ್ಲರೆ? ನನ್ನ ಕೃತಿಗೆ ಮುನ್ನುಡಿ ಬರೆಯಲು ಒಪ್ಪಿಕೊಳ್ಳಬಹುದೆ? ಚಿಕ್ಕದಾಗಿ ಬರೆಯುತ್ತಾರೋ, ದೊಡ್ಡದಾಗಿ ಬರೆಯುತ್ತಾರೋ ಎಂಬ ಪ್ರಶ್ನೆಯನ್ನು ಎದುರಿಸಬೇಕಾಗುತ್ತದೆ. ನಮ್ಮ ಅನೇಕ ಹಿರಿಯರು ತಮ್ಮ ಮುನ್ನುಡಿಗಳ ಮೂಲಕ ಕೃತಿಯ ಮೌಲ್ಯ ಹೆಚ್ಚಿಸಿದ್ದಾರೆ.

ಮುನ್ನುಡಿ ಬರೆಸುವವರು ದೇಶ, ನಾಡು, ನುಡಿ, ಚಿಂತಕರು, ಸಹೃದಯ ಸ್ವಭಾವದವರು, ಮಿತ್ರರು, ವಿದ್ವತ್ತುಳ್ಳವರಾದವರ ಹತ್ತಿರ ಮುನ್ನುಡಿ ಬರೆಸಲು ಅಪೇಕ್ಷೆ ಪಡುತ್ತಾರೆ. ಕೆಲವರು ತಿಂಗಳು, ವರ್ಷ ಕಾದು ಮುನ್ನುಡಿ ಬರೆಸುವವರಿದ್ದಾರೆ. ಮುನ್ನುಡಿ ಕೆಲವು ಸಾರಿ ಸ್ನೇಹ ಪ್ರೀತಿ ವಿಶ್ವಾಸಗಳಿಗೆ ಕಟ್ಟುಬಿದ್ದು ತಮ್ಮ ಸಮಕಾಲೀನರಿಗೆ ಇಲ್ಲವೇ ಕೆಲವೊಮ್ಮೆ ಕಿರಿಯರು ಹಿರಿಯರಿಗೂ ಮುನ್ನುಡಿ ಬರೆದುಕೊಡುವ ಪರಿಪಾಟ ನಮ್ಮ ಸಾಹಿತ್ಯದಲ್ಲಿದೆ. ಹಾಗೆಯೇ ಕೃತಜ್ಞತೆಯೋ, ಋಣಾನುಭಾವವೋ ಎಂಬಂತೆ ಕಂಡುಬರುತ್ತದೆ. ಮುನ್ನುಡಿ ಸಾಹಿತ್ಯ "ಪ್ರಸ್ತುತವಾಗಿ ಶಾಬ್ದಿಕ ರಾಜಕಾರಣವಾಗಿ ಕಲ್ಚರಲ್ ರಿಚುವಲ್ ರೀತಿಯಾಗಿದೆ"[೨೬] ಎಂದು ರಾಮಲಿಂಗಪ್ಪಟಿ. ಬೇಗೂರು ಅವರು ಹೇಳುತ್ತಾರೆ. ಇದರಿಂದ ಅನುಕೂಲಕ್ಕಿಂತ ಅಪಾಯ ಜಾಸ್ತಿಯಾಗುತ್ತದೆ. ಏಕೆಂದರೆ ಮುನ್ನುಡಿಯ ಮೂಲಕ ಕೃತಿಯನ್ನು ಓದಬೇಕು ಎಂಬುದು ಮುಖ್ಯವಾಗಿದೆ. ಇಲ್ಲಿ ಮುನ್ನುಡಿ ಬರೆಸುವುದು ನಂಬಿಕೆ, ವಿಶ್ವಾಸವಾಗಿದೆ. ಆದರೆ ಕೆಲವರು ಯಾವುದೇ ಮುಲಾಜಿಗೆ ಒಳಗಾಗದೆ ಕೃತಿನಿಷ್ಠ ವಿಮರ್ಶೆ ಮಾಡಿ ಮುನ್ನುಡಿ ಬರೆದಿದ್ದಾರೆ. ಮುನ್ನುಡಿ ಹೊಸ ಬರಹಗಾರರಿಗೆ ಬೆನ್ನು ತಟ್ಟಿ ಪ್ರೋತ್ಸಾಹಿಸುವ ಕೆಲಸ ಮಾಡುತ್ತವೆ. ತಿದ್ದಿಕೊಂಡು ಬೆಳೆಯಲು ಸಹಾಯ ಮಾಡುತ್ತವೆ. ಮುನ್ನುಡಿ ಬರೆಸುವ ಮತ್ತು ಬರೆಯುವ ನಂಬಿಕೆಗಳ ಹಿಂದಿನ ರಾಜಕಾರಣವನ್ನು ಶೋಧಿಸಿದರೆ ನಿಜವಾಗಿಯೂ ನಮ್ಮ ಸಾಹಿತ್ಯ ಸಂಸ್ಕೃತಿಯ ಕೆಡುಕುಗಳು, ಒಳ ರಾಜಕೀಯಗಳು ಬಯಲಾಗಬಹುದು. ಆದರೆ ಕೆಲವು ಮುನ್ನುಡಿಗಳು ನೇರವಾಗಿ ಮುಲಾಜಿಗೆ ಒಳಗಾಗದೆ ಕೃತಿಯ ವಸ್ತುಸ್ಥಿತಿಯನ್ನು ಬಿಚ್ಚಿಡುತ್ತವೆ. ಹೊಸಬರಿಗೆ ಬರೆಯುವ ಮುನ್ನುಡಿಗಳು ಆದರ್ಶವಾದ ರೀತಿ ಇರಬೇಕು. ಬರಹದಲ್ಲಿ ಕಟು ವಿಮರ್ಶೆ ಇರಬಾರದು. ಗುಣಗ್ರಹಣ ಮಾತ್ರ ಇರಬೇಕು. ಹಿರಿಯರಿಗೆ, ಸ್ಥಾಪಿತರಿಗೆ ಮುನ್ನುಡಿ ಬರೆಯುವಾಗ ಅವರ ಇಮೇಜಿಗೆ ತಕ್ಕ ವಿನಯ, ಸ್ನೇಹಗಳೇ ಇರಬೇಕು. ವಸ್ತುನಿಷ್ಠತೆಯೆಂದರೆ ಅದು ಸೊಕ್ಕುತನವೆಂದು ತಿಳಿಯಬೇಕಾಗುತ್ತದೆ. ಮುನ್ನುಡಿ ದೀರ್ಘವಾಗಿರಬಾರದೆಂದು ಈ ತರಹದ ಚಿಂತನೆಗಳು ಮುನ್ನುಡಿ ಬರೆಯುವಾಗ ಸಾಹಿತ್ಯ ವಲಯ ವಿಶಿಷ್ಟತೆಯ ಬರವಣಿಗೆಯಾಗಿ ರೂಪಗೊಂಡು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಒಳಗೊಂಡಿದೆ.

ಕನ್ನಡ ಸಾಹಿತ್ಯದಲ್ಲಿ ಮುನ್ನುಡಿ ಸಾಹಿತ್ಯದ ಮಹತ್ವ ಸಂಗತಿ ಎಂದರೆ 'ಅಬಚೂರಿನ ಪೋಸ್ಟಾಫೀಸು' ಕೃತಿಯ ಮುನ್ನುಡಿ. ಇದು ಸಾಹಿತ್ಯದ ಹೊಸ ಪ್ರಕಾರವನ್ನು ಸೃಷ್ಟಿ ಮಾಡಿದೆ. ಕೆಲವು ಮುನ್ನುಡಿಗಳು ಪರಂಪರೆಯನ್ನು ಸೃಷ್ಟಿ ಮಾಡುತ್ತಾ, ಒಬ್ಬ ಲೇಖಕನ ಇಡೀ ಸಾಹಿತ್ಯವನ್ನು ಮುನ್ನುಡಿಯಲ್ಲೂ ಗುರುತಿಸಿದ್ದು ಇದೆ. ತೇಜಸ್ವಿಯವರ 'ಕರ್ವಾಲೋ' ಕೃತಿಗೆ ಜಿ.ಎಚ್.ನಾಯಕರ ಮುನ್ನುಡಿಯನ್ನು ಗಮನಿಸಬಹುದು. ಆದರೆ ತೇಜಸ್ವಿಯವರು ಬೇರೆಯವರಿಂದ ಮುನ್ನುಡಿ ಬರೆಸಿದ್ದು ಮತ್ತು ತಾವು ಇನ್ನೊಬ್ಬರಿಗೆ ಮುನ್ನುಡಿ ಬರೆದಿದ್ದು ಕಡಿಮೆ. ಜಿ.ಎಚ್. ನಾಯಕರು ಕರ್ವಾಲೋ ಕೃತಿಗೆ ಮುನ್ನುಡಿಯನ್ನು ದೀರ್ಘವಾಗಿ ಬರೆದಿದ್ದಾರೆ. ಆದರೆ ಪ್ರಸ್ತುತ ಕರ್ವಾಲೋ ಕೃತಿಯಲ್ಲಿ ಈ ಮುನ್ನುಡಿ ಕಂಡುಬರುವುದಿಲ್ಲ. ಇದರ ಹಿಂದೆ ಹಲವು ಕಾರಣಗಳು ಇರಬಹುದು. ಜೊತೆಗೆ ತೇಜಸ್ವಿಯವರು ಈ ದೀರ್ಘವಾದ ಮುನ್ನುಡಿಯನ್ನು ಅಪೇಕ್ಷಿಸದಿರಬಹುದು.

ಮುನ್ನುಡಿ ಸಾಹಿತ್ಯವನ್ನು ಮುನ್ನುಡಿಕಾರ ಸೃಷ್ಟಿಯ ತತ್ವದ ನೆಲೆಯಲ್ಲಿ ಗುರುತಿಸಿಕೊಳ್ಳುತ್ತಾನೆ. ಅದನ್ನು ಓದುಗರು ಬಿಡಿಸಿಕೊಳ್ಳಬೇಕಾಗಿದೆ.

* ಓದುಗನಿಗೆ ಕೃತಿಕಾರನ ಪರಿಚಯ

* ಕೃತಿಯ ಸಾರಾಂಶ ಸಂಗ್ರಹ

* ವಸ್ತು, ತಂತ್ರ, ಪಾತ್ರ, ಪ್ರಯೋಜನ, ಓದಿನ ಪರಿಣಾಮಗಳ ಸೂಕ್ಷ್ಮ ವಿವೇಚನೆ.

* ಕೃತಿಯ ವೈಶಿಷ್ಟ್ಯ ಹಾಗೂ ಗುಣಗಳನ್ನೆತ್ತಿ ತೋರಿಸುವ ಮೂಲಕ ಕೃತಿಕಾರನಿಗೆ ಪ್ರೋತ್ಸಾಹ ನೀಡುವುದು, ಓದುಗರ ಗಮನವನ್ನು ಸೆಳೆಯುವುದು, ಕೃತಿಯ ಉತ್ತಮ ವಿಮರ್ಶೆಯ ಪ್ರವೇಶಿಕೆಯನ್ನು ನೀಡುವುದು. ಕೃತಿಕಾರನ ಮನಸ್ಸಿಗೆ ನೋವಾಗದಂತೆ ಸಹಾನುಭೂತಿಯಿಂದ ಪ್ರಾಮಾಣಿಕವಾಗಿ ನ್ಯೂನತೆಗಳನ್ನು ಸೂಚಿಸುವುದು.

ಈ ಹಿನ್ನೆಲೆಯಲ್ಲಿ ಮುನ್ನುಡಿಕಾರರು ಮುನ್ನುಡಿ ಬರೆಯುವ ಪರಂಪರೆಯನ್ನು ಗುರುತಿಸುತ್ತೇವೆ. ಒಂದೊಂದು ಸಂದರ್ಭದಲ್ಲಿ ಕೃತಿ ಚಿಕ್ಕದಾಗಿದ್ದರೂ ಮುನ್ನುಡಿ ಬಹಳ ದೊಡ್ಡದಾಗಿರುತ್ತದೆ. ಮುನ್ನುಡಿಯೇ ಕೃತಿಯಂತೆ ದೊಡ್ಡದಾಗಿದ್ದು ಓದುಗರನ್ನು ಆಶ್ಚರ್ಯಗೊಳಿಸುತ್ತದೆ. ಕೆಲವು ಸಾರಿ ಕವನ ಸಂಕಲನಗಳಿಗೆ ಕವಿಯ ಮುನ್ನುಡಿ, ಕಥಾಸಂಕಲನಗಳಿಗೆ ಕಥೆಗಾರರ ಮುನ್ನುಡಿ ಹೀಗೆ ಕಾದಂಬರಿ ವಿಮರ್ಶೆ, ಜೀವನಚರಿತ್ರೆ, ಪ್ರಬಂಧ, ಸ್ವ ಅಥವಾ ಪರರ ನಿಲುವು ಮುನ್ನುಡಿಯಲ್ಲಿ ವ್ಯಕ್ತಗೊಂಡಿರುತ್ತವೆ. ಕೆಲವು ಕೃತಿಗಳಿಗೆ ತಾವೇ ಬರೆದುಕೊಂಡ ಮುನ್ನುಡಿಗಳು ಸ್ವಲ್ಪ ಭಿನ್ನವಾಗಿ ಸಾಹಿತ್ಯ ಸಂಸ್ಕೃತಿಯನ್ನು ತಮ್ಮ ಕೃತಿಯ ನೆಲೆಯಲ್ಲಿ ತಿಳಿಸಿದ್ದಾರೆ. ಕೆಲವು ಮುನ್ನುಡಿಗಳು ಸಾಹಿತ್ಯ ಸಂಸ್ಕೃತಿಯ ದಿಕ್ಕು ದೆಸೆಗಳನ್ನು ಪಲ್ಲಟಿಸುವಂಥ ಕೆಲಸ ಮಾಡಿವೆ. ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನಕ್ಕೆ 'ಹೊಸದಿಗಂತದೆಡೆಗೆ' ಮುನ್ನುಡಿ ಕನ್ನಡ ಸಾಹಿತ್ಯದ ಹೊಸ ಸಂಪ್ರದಾಯವನ್ನು ಬಂಡಾಯದ ನೆಲೆಯಲ್ಲಿ ರೂಪಿಸಿದೆ. ಅಡಿಗರ 'ನಡೆದು ಬಂದ ದಾರಿ' ಕೃತಿಯ ಮುನ್ನುಡಿ, ಪಿ.ಲಂಕೇಶರ 'ಅಕ್ಷರ ಹೊಸ ಕಾವ್ಯ'ಕ್ಕೆ ಬರೆದ ಮುನ್ನುಡಿ, 'ಗರಿ', 'ನಾದಲೀಲೆ', 'ಮಾಂದಳೀರು', ಭಾರತೀಯ ಕಾವ್ಯಮೀಮಾಂಸೆ, 'ಇಂಗ್ಲಿಷ್ ಗೀತಗಳು' ಕೃತಿಯ ಮುನ್ನುಡಿಗಳು ಮಹತ್ವಪೂರ್ಣವಾಗಿವೆ. ಇವು ಸಾಹಿತ್ಯ ಸಂಸ್ಕೃತಿ ಚಿಂತನೆಗೆ ಅತೀ ಹೆಚ್ಚು ಒತ್ತನ್ನು ನೀಡಿವೆ.

ಕೆಲವು ಸಂದರ್ಭಗಳಲ್ಲಿ ಮುನ್ನುಡಿಕಾರನಿಗೂ ಕೃತಿಕಾರನಿಗೂ ಪರಿಚಯವೇ ಇರುವುದಿಲ್ಲ. ಆದರೆ ಕೃತಿಕಾರನು ಒಬ್ಬ ಮಧ್ಯಸ್ಥಗಾರನನ್ನು ಪತ್ತೆ ಹಚ್ಚಿ ಅವನ ನೆರವಿನಿಂದ ಮುನ್ನುಡಿಯನ್ನು ಕೃತಿಗೆ ಬರೆಸುತ್ತಾರೆ. ಹಾಗೆ ಕೆಲವರು ಮುನ್ನುಡಿ ಬರೆಯಲು ಹಾತೊರೆಯುವ ಮಹನೀಯರು ಸಾಹಿತ್ಯವಲಯದಲ್ಲೂ ಕಾಣಸಿಗುತ್ತಾರೆ. ಇವರು ಬರೆಯುವುದಕ್ಕೆ ಅವಕಾಶ ಇದೆ ಎಂಬ ಕಾರಣಕ್ಕೇ ತಮ್ಮ ಸ್ವಪ್ರಶಂಸೆಯನ್ನು ಆರಂಭಿಸಿ ಬಿಡುತ್ತಾರೆ. ತಾವು ನೋಡಿದ ದೊಡ್ಡ ಮನುಷ್ಯರ, ಲೇಖಕರ ಕುರಿತು, ಓದಿದ ಅಥವಾ ಓದದೇ ಇರುವ ಕೃತಿಗಳ ಪಟ್ಟಿ ಹೇಳುವುದು, ಇಲ್ಲದಿದ್ದರೆ ತಾವು

ಬರೆದಿರುವ ಅಥವಾ ಬರೆಯಬೇಕೆಂದಿರುವ ಕೃತಿಗಳ ಪಟ್ಟಿ ಹೇಳುವುದು. ಆ ಮೇಲೆ ಕೃತಿಯ, ಕೃತಿಕಾರರ ಬಗ್ಗೆ ಹೇಳಿ ಮುನ್ನುಡಿ ಮುಗಿಸಿ ಬಿಡುವ ಸಂಗತಿಗಳು ಇವೆ.

ಇದೇ ರೀತಿಯಾಗಿ ಮುನ್ನುಡಿಯಿಂದ, ಮುನ್ನುಡಿಕಾರರಿಂದ ಕೃತಿಕಾರರು ಏನನ್ನು ನಿರೀಕ್ಷಿಸಬಹುದು. ಏನನ್ನು ನಿರೀಕ್ಷಿಸುತ್ತಾರೆ.? ಎನ್ನುವುದಾದರೆ ಮುನ್ನುಡಿಕಾರ ತನ್ನ ಹಿತಾಸಕ್ತಿಗೆ ಅನುಗುಣವಾಗಿ ಹೇಳುತ್ತಾ, ನನ್ನದು ಸಮಕಾಲೀನರಲ್ಲಿ ಮೊದಲನೆಯ ಸ್ಥಾನವೆಂದು ಹೇಳುತ್ತಾ, ಸಾಹಿತ್ಯ ಪರಂಪರೆಯ ಹಾದಿಯಲ್ಲಿ ನನ್ನ ಸ್ಥಾನ ಭದ್ರವಾಗಿದೆ ಎಂಬುದನ್ನು ಸ್ಪಷ್ಟವಾಗಿ ಹೇಳಿಕೊಳ್ಳುತ್ತಾ, ನಾನು ಟಾಲ್‌ಸ್ಟಾಯ್, ವ್ಯಾಸ, ಕಮೂ ಹಾಗೂ ಬಿ.ಎಂ.ಶ್ರೀ., ಕುವೆಂಪು, ತೇಜಸ್ವಿ, ಅನಂತಮೂರ್ತಿ, ದೊಡ್ಡ ದೊಡ್ಡ ಲೇಖಕರ ಜೊತೆಗೆ ಹೋಲಿಸಿಕೊಳ್ಳುತ್ತಾ, ಆ ಮೇಲೆ ಕತೆ, ಕವನ, ಇತರೆ ಪ್ರಕಾರಕ್ಕೆ ಸೇರಿದ ಕೃತಿಗೆ ಸಂಬಂಧಿಸಿಂತೆ ಮುನ್ನುಡಿಯನ್ನು ಬರೆಯತೊಡುಗುತ್ತಾರೆ.

ಮುನ್ನುಡಿ ಸಾಹಿತ್ಯವನ್ನು ಹಲವು ರೀತಿಯಲ್ಲಿ ಗ್ರಹಿಸಿದವರಿದ್ದಾರೆ. ಆದರೆ ಮುಖ್ಯವಾಗಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿಗಳನ್ನು ಗಮನಿಸಿದ್ರೆ ಮುನ್ನುಡಿ ಸಾಹಿತ್ಯದ ಪರಂಪರೆ, ಮಹತ್ವ ಹಲವು ನೆಲೆಯಲ್ಲಿ ನಮ್ಮ ಮುಂದೆ ಕಾಣುತ್ತದೆ. ಕೆಲವರು ಮುನ್ನುಡಿ ಸಾಹಿತ್ಯ ಅಲ್ಲಗಳೆವವರು ಇದ್ದಾರೆ. ಹಳಗನ್ನಡ ಸಾಹಿತ್ಯ ಸಂಪಾದನಾ ಕ್ಷೇತ್ರದಲ್ಲಿ ಯುರೋಪಿಯನ್ನರು ಒಳಗೊಂಡಂತೆ ಆರ್.ನರಸಿಂಹಾಚಾರ್, ಇತರೆ ಕನ್ನಡ ವಿದ್ವಾಂಸರು, ಸಂಪಾದಕರು ಮೊದಲು ಮುನ್ನುಡಿಯ ಮೂಲಕ ಹಳಗನ್ನಡ ಕೃತಿಗಳ ಮಹತ್ವವನ್ನು, ಹೊಸಗನ್ನಡದ ಚಿಂತನೆಯನ್ನು ನಮಗೆ ತಿಳಿಸಿಕೊಟ್ಟಿದ್ದಾರೆ. ಮುನ್ನುಡಿ ಸಾಹಿತ್ಯದ ಮೂಲಕ ಸಾಹಿತ್ಯ ಸಿದ್ಧಾಂತ ರೂಪಿಸಿಕೊಂಡವರಿದ್ದಾರೆ. ಹಾಗಾಗಿ ಮುನ್ನುಡಿ ಸಾಹಿತ್ಯದ ಧೋರಣೆಯನ್ನು ಮುನ್ನುಡಿಕಾರ ಮತ್ತು ಕೃತಿಕಾರ ಇಬ್ಬರು ಒಳಗೊಳ್ಳುತ್ತಾರೆ.

ಮುನ್ನುಡಿ ಮುಖ್ಯವಾಗಿ ಕೃತಿಯ ಸ್ಥೂಲ ಪರಿಚಯವಾಗಿದೆ. ಅದರ ಉತ್ತಮ ಗುಣಗಳನ್ನು ಮುನ್ನುಡಿಕಾರ ಗ್ರಹಿಸಿ ಮೊದಲು ಓದುಗರಿಗೆ ತಿಳಿಸಬೇಕು. ಅದರ ಕುಂದುಕೊರತೆಗಳನ್ನು ಸೂಚ್ಯವಾಗಿ ಪರೋಕ್ಷವಾಗಿ ತೋರಿಸಬಹುದು. ಕೃತಿಯ ಯೋಗ್ಯತೆಯ ಬಗ್ಗೆ ತನ್ನ ನಿರ್ಣಯವೇ ಮುಖ್ಯ. ಅದೇ ಕೊನೆಯ ಮಾತು ಎಂಬ ಭಾವನೆ ಮುನ್ನುಡಿಕಾರನಲ್ಲಿರಬಾರದು. ಕೃತಿಯ ಉತ್ತಮ ಗುಣಗಳನ್ನು ಹೇಳುವುದು ವಿಮರ್ಶೆ ಎಂಬುದನ್ನು ಮರೆಯಬಾರದು. ಪ್ರಾಮಾಣಿಕ ಮುನ್ನುಡಿಕಾರನಿಂದ ನಿರೀಕ್ಷಿಸಬಹುದಾದ ಮುಖ್ಯ ಗುಣ, ಮುಖ್ಯವಾಗಿ ಕೃತಿಯನ್ನು ಶ್ರದ್ಧೆಯಿಂದ, ತಾಳ್ಮೆಯಿಂದ ಪೂರ್ತಿ ಓದಿದ ನಂತರ ಅದರ ಬಗ್ಗೆ ವಿವರವಾಗಿ ಬರೆಯಬಹುದೇ ಹೊರತು, ಅದು ಅವಸರದ ಬೇಕಾಬಿಟ್ಟಿಯ ಬೇಜವಾಬ್ದಾರಿಯ ಕೆಲಸವಾಗಬಾರದು. ಕೃತಿಯ ಮತ್ತು ಅಧ್ಯಾಯಗಳ ಶೀರ್ಷಿಕೆಯನ್ನಾಧರಿಸಿ ಅಥವಾ ಅಲ್ಲಿಷ್ಟು ಇಲ್ಲಿಷ್ಟು ಓದಿಯೋ ತನಗೆ ತೋಚಿದ ನಾಲ್ಕು ಮಾತುಗಳು ಬರೆದರೆ ಅದು ಕೃತಿಕಾರನಿಗೆ ಮಾತ್ರವಲ್ಲ, ಓದುವ ವರ್ಗಕ್ಕೆ ಹಾಗೂ ಸಾಹಿತ್ಯಲೋಕಕ್ಕೆ ವಂಚನೆ ಮಾಡಿದಂತಾಗುತ್ತದೆ. ಅದು ಒಂದು ರೀತಿಯಲ್ಲಿ ಆತ್ಮವಂಚನೆಯೂ

ಆಗುತ್ತದೆ. ಒಂದು ರೀತಿಯಲ್ಲಿ ಮುನ್ನುಡಿ ಓದುಗರಿಗೆ ಮಾರ್ಗದರ್ಶಿಯಾಗಬೇಕಲ್ಲದೆ, ತೃಪ್ತಿಯನ್ನುಂಟುಮಾಡುವಂತಿರಬೇಕು. ಕೆಲವರಿಂದ ಪ್ರೇರಿತರಾಗಿ, ಇಡಿ ಕೃತಿಯನ್ನು ಶ್ರದ್ಧೆಯಿಂದ ಓದಬಹುದು. ಕೃತಿಯ ಓದುವಿನ ಬಗ್ಗೆ ಫ್ರಾನ್ಸಿಸ್ ಬೇಕನ್ ಮಂಡಿಸಿರುವ ಸೂತ್ರಗಳನ್ನು ಮುನ್ನುಡಿಕಾರನೂ ಅನುಸರಿಸಬಹುದು.

"ಗ್ರಂಥದ ಸಾರಸರ್ವಸ್ವವನ್ನು ನಾಲ್ಕು ಮಾತುಗಳಲ್ಲಿ ಬೀಜ ವಾಕ್ಯಗಳಲ್ಲಿ ಹಿಡಿದಿಡುವ ಜಾಣ್ಮೆ ಮುನ್ನುಡಿಕಾರನಿಗಿರಬೇಕು. ಗ್ರಂಥಾಂತರಂಗದ ಕಿರುಕನ್ನಡಿಯಾಗಬೇಕು. ಮುನ್ನುಡಿ ಗದುಗಿನ ಭಾರತದ ಸೂಚನಾ ಪದ್ಯಗಳಂತಿರಬೇಕು. ಅದು ಗ್ರಂಥ ಮಂದಿರದ ಪ್ರವೇಶ ದ್ವಾರದಂತಿರಬೇಕು, ಕೀಲಿಕೈ ಆಗಬೇಕು. ಮಾತೃಗ್ರಂಥದಿಂದ ಪ್ರತ್ಯೇಕಗೊಂಡಾಗ ಅದಕ್ಕೆ ಸ್ವತಂತ್ರ ಅಸ್ತಿತ್ವವಿರುವಂತಾಗಬೇಕು. ವಿಮರ್ಶೆಯ ಸ್ಥಾನಮಾನ ಅದಕ್ಕೆ ದೊರಕುವಂತಿರಬೇಕು. ಆಗ ಮಾತ್ರ ಮುನ್ನುಡಿ ಸಾರ್ಥಕವಾಗುತ್ತದೆ. ಮುನ್ನುಡಿಕಾರನ ಶ್ರಮಕ್ಕೆ ಫಲ ದೊರೆತಂತಾಗುತ್ತದೆ. ನಿಜಕ್ಕೂ ಮುನ್ನುಡಿಗಳು ಗುಡಿಯ ಅಥವಾ ಮನೆಯ ಮುಂದಣ ರಂಗೋಲಿಗಳಾಗಬೇಕು"[೨೭] ಎಂದು ದೇ.ಜ.ಗೌ. ಅವರು ತಮ್ಮ 'ಮುನ್ನುಡಿ ರಂಗೋಲಿ' ಕೃತಿಯಲ್ಲಿ ಉಲ್ಲೇಖಿಸುತ್ತಾರೆ. ಮುನ್ನುಡಿ ಸಾಹಿತ್ಯವನ್ನು ಓದುವ ಮತ್ತು ಗ್ರಹಿಸುವ ವಿಧಾನವನ್ನು ತಿಳಿಯಬೇಕಾಗಿದೆ.

ಒಟ್ಟಾರೆಯಾಗಿ ಮುನ್ನುಡಿ ಸಾಹಿತ್ಯ ಭಿನ್ನತೆಗಳ ನೆಲೆ ಹೊಂದಿದ್ದರೂ ಕನ್ನಡದ ಸಾಹಿತ್ಯದಲ್ಲಿ ಪ್ರಕಾರ ಎನ್ನುವಷ್ಟು ಅಂಶಗಳನ್ನು ಹೊಂದಿವೆ. ಮುನ್ನುಡಿಗಳು ವಿಮರ್ಶೆಯ ಅಥವಾ ಪ್ರಬಂಧದ ವಂಶಕ್ಕೆ ಸೇರಿವೆ ಎಂದು ಹೇಳಬಹುದು. ಒಂದು ರೀತಿಯ ಸಾಂಸ್ಕೃತಿಕ ಸಮತೋಲನತೆ ಹೊಂದಿದ್ದು, ಪ್ರತಿಯೊಂದು ಕೃತಿಗೂ ತೋರಣನಾಂದಿಯಾಗಿ ಹೊಸ ಚಿಂತನೆಗೆ ದಾರಿ ಮಾಡಿಕೊಡುತ್ತವೆ. ಅದೇನೆ ಇರಲಿ, ಮುನ್ನುಡಿ ಸಾಹಿತ್ಯ ಹೊರತಾದ ಅಸಾರ್ಥಕವಾದ ಸಾಹಿತ್ಯವಲ್ಲ, ಶ್ರದ್ದೆಯಿಂದ ಓದಿ, ಚಿಂತನ ಮಂಥನ ನಡೆಸಿದ ನಂತರ ಸಿದ್ಧವಾದ ಮುನ್ನುಡಿ ಸಂಬಂಧಪಟ್ಟ ಕೃತಿಗೆ ಕನ್ನಡಿಯಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಮೊದಲ ಸಂದರ್ಭದಲ್ಲಿ ಬಂದಂತಹ ಮುನ್ನುಡಿಗಳು ಹೆಚ್ಚಾಗಿ ಕೃತಿ ಅಥವಾ ಲೇಖಕರ ಸುತ್ತುಲೇ ಸುತ್ತುತ್ತಿದ್ದವು. ಆದರೆ ಅನಂತರದ ದಶಕದ ಮುನ್ನುಡಿಗಳು ಕೃತಿಯನ್ನು ಲೇಖಕರನ್ನು ಪರಂಪರೆಯ ಸಂದರ್ಭದಲ್ಲಿಟ್ಟು ಚರ್ಚಿಸುವ ದೃಷ್ಟಿಕೋನ ಬೆಳೆಯುತ್ತಾ ಮುಂದುವರಿಯಿತು.

**ಕೊನೆಟಿಪ್ಪಣಿಗಳು**

೧. ದೇ.ಜ.ಗೌ., 'ಮುನ್ನುಡಿ ಕನ್ನಡಿ', ಪುಟ–I.

೨. ಫರ್ಡಿನೆಂಡ್ ಕಿಟೆಲ್, 'ನಾಗವರ್ಮನ ಕನ್ನಡ ಛಂದಸ್ಸು', ಉಲ್ಲೇಖ (ಅನುವಾದ) ಸಿ.ಎನ್.ರಾಮಚಂದ್ರನ್, ಪುಟ– II ೧೮೭೫.

೩. ಅದೇ, ಪುಟ–II.

೪. ಅದೇ, ಪುಟ-III.

೫. ಚಿದಾನಂದಮೂರ್ತಿ ಎಂ., 'ಹೊಸತು ಹೊಸತು', ಪುಟ-೪೫೧.

೬ ಪುಟ್ಟಪ್ಪ ಕೆ.ವಿ., 'ಆದಿಪುರಾಣ ಸಂಗ್ರಹ', ಪುಟ-I.

೭ ಅದೇ, ಪುಟ-I.

೮. ನರಸಿಂಹಾಚಾರ್ ಆರ್., 'ಕರ್ನಾಟಕ ಕವಿಚರಿತೆ ಮುನ್ನುಡಿ ಭಾಗ, ೧೯೦೭.

೯. ಅದೇ, ಪುಟ, ಮುನ್ನುಡಿ ಭಾಗ.

೧೦. ಬಿ.ಎಂ.ಶ್ರೀ., 'ಶ್ರೀಸಾಹಿತ್ಯ', ಪುಟ-೨೪೫.

೧೧. ಬಿ.ಎಂ.ಶ್ರೀ., 'ಇಸ್ಲಾಂ ಸಂಸ್ಕೃತಿ', ಪುಟ, ಮುನ್ನುಡಿ ಭಾಗ.

೧೨. ವೆಂಕಟಾಚಲಶಾಸ್ತ್ರಿ ಟಿ.ವಿ, 'ಹರಿಶ್ಚಂದ್ರಕಾವ್ಯ ಸಂಗ್ರಹ'(ಸಂ), ಪುಟ-VI.

೧೩. ವೆಂಕಣ್ಣಯ್ಯ ಟಿ.ಎಸ್(ಸಂ), 'ಬಸವರಾಜದೇವರ ರಗಳೆ', ಪುಟ-VI

೧೪. ಚಿದಾನಂದಮೂರ್ತಿ ಎಂ., 'ಹೊಸತು ಹೊಸತು', ಪುಟ-೪೫೨.

೧೫. ನರಸಿಂಹಾಚಾರ್ ಡಿ.ಎಲ್., 'ಪಂಪರಾಮಾಯಣ ಸಂಗ್ರಹ', ಪುಟ, ಮುನ್ನುಡಿ ಭಾಗ.

೧೬. ಬಸವನಾಳ ಶಿ.ಶಿ, 'ಬಸವಣ್ಣನವರ ಷಟಸ್ಥಲಗಳು', ಪುಟ-V.

೧೭. ಅದೇ, ಪುಟ-V.

೧೮. ಶ್ರೀನಿವಾಸಮೂರ್ತಿ ಎಂ.ಆರ್., 'ವಚನಧರ್ಮಸಾರ', ಪುಟ-I

೧೯. ಅದೇ, ಪುಟ-I

೨೦. ಬಿ.ಎಂ.ಶ್ರೀ., 'ಇಂಗ್ಲಿಷ್ ಗೀತಗಳು', ಪುಟ-I.

೨೧. ಅದೇ, ಪುಟ-II

೨೨. ಗಿರಡ್ಡಿ ಗೋವಿಂದರಾಜ, 'ಹಿಡಿಯದ ಹಾದಿ', ಪುಟ-೪೨.

೨೩. ಗೋಪಾಲಕೃಷ್ಣ ಅಡಿಗರು 'ನಡೆದು ಬಂದ ದಾರಿ', ಪುಟ, ಮುನ್ನುಡಿ ಭಾಗ.

೨೪. ಅದೇ, ಪುಟ, ಮುನ್ನುಡಿ ಭಾಗ.

೨೫. ಬರಗೂರು ರಾಮಚಂದ್ರಪ್ಪ, 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ', ಪುಟ-೧೮.

೨೬. ರಾಮಲಿಂಗಪ್ಪ ಟಿ. ಬೇಗೂರು, 'ಮಾರ್ಗಾಂತರ', ಪುಟ-೭೭.

೨೭ ದೇ.ಜ.ಗೌ, 'ಮುನ್ನುಡಿ ರಂಗೋಲಿ', ಪುಟ, ಮುನ್ನುಡಿ ಭಾಗ.

ಅಧ್ಯಾಯ ನಾಲ್ಕು

# ಮುನ್ನುಡಿ ಸಾಹಿತ್ಯ: ಸಾಹಿತ್ಯ ಪಂಥಗಳ ತಾತ್ವಿಕ ನೆಲೆಗಳು

## ಅಧ್ಯಾಯ ನಾಲ್ಕು

## ಮುನ್ನುಡಿ ಸಾಹಿತ್ಯ: ಸಾಹಿತ್ಯ ಪಂಥಗಳ ತಾತ್ವಿಕ ನೆಲೆಗಳು

ಕನ್ನಡ ಸಾಹಿತ್ಯ ಚಿಂತನೆಯ ಸ್ವರೂಪದಲ್ಲಿ ಮುನ್ನುಡಿಗಳು ವೈಚಾರಿಕ ನೆಲೆಯಾಗಿ ಗುರುತಿಸಿಕೊಂಡಿವೆ. ಮುನ್ನುಡಿಯು ಸಾಹಿತ್ಯ ಪ್ರಕಾರವೆಂದು ಹೇಳುವಷ್ಟು ವಿಸ್ತೃತವಾಗಿ ಬೆಳೆದಿದೆ. ಪ್ರಸ್ತುತವಾಗಿ ಪ್ರತಿಯೊಂದು ಕೃತಿಗೂ ಮುನ್ನುಡಿ ಅನಿವಾರ್ಯವಾಗಿವೆ. ಮುನ್ನುಡಿಗಳು ಪಾಶ್ಚಾತ್ಯ ನೆರಳಿನಲ್ಲಿ ಬೆಳೆದರೂ ಕನ್ನಡ ಸಾಹಿತ್ಯದಲ್ಲಿ ಬಹುಬೇಗನೇ ತನ್ನ ಛಾಪನ್ನು ಮೂಡಿಸಿಕೊಂಡವು. ಇದಕ್ಕೆ ಕಾರಣ ಸಂಶೋಧನೆಯಲ್ಲಾದ ಬೆಳವಣಿಗೆ ಹಾಗೂ ಪಾಶ್ಚಿಮಾತ್ಯರ ಸಂಶೋಧನೆಯಿಂದ ಹಳಗನ್ನಡ ಕೃತಿಗಳ ಸಂಪಾದನೆಯ ಕಾರ್ಯದಿಂದ, ಮುನ್ನುಡಿಯಲ್ಲಿ ಹಳಗನ್ನಡ ಕೃತಿಗಳ ಚರ್ಚೆ ನಡೆದವು. ಆಗ ಮುನ್ನುಡಿಗಳು ಮುನ್ನೆಲೆಗೆ ಬಂದವು. ಇದರಿಂದ ಹೊಸ ಹೊಸ ಸಂಶೋಧನೆಗಳು, ವಾದ–ವಾಗ್ವಾದಗಳಿಂದ ಸಾಹಿತ್ಯ, ಸಂಸ್ಕೃತಿ, ಇತಿಹಾಸ ಕುತೂಹಲಕಾರಿಯಾಗಿ, ಪಾಶಾತ್ಯ ಅಧ್ಯಯನ ಮಾದರಿಗಳಾಗಿ, ಕನ್ನಡ ಸಾಹಿತ್ಯ ಒಳಗೊಂಡಂತೆ ಗ್ರಂಥಸಂಪಾದನೆ, ಶಾಸನ, ಹಸ್ತಪ್ರತಿಗಳು ಇತ್ಯಾದಿ ಅಂಶಗಳನ್ನು ಒಳಗೊಂಡಿದ್ದರಿಂದ ಮೊದಲ ಬರವಣಿಗೆಯ ಮುನ್ನುಡಿಗಳಾಗಿ ಬಹುಬೇಗನೆ ಕನ್ನಡ ಸಾಹಿತ್ಯದಲ್ಲಿ ಅಸ್ತಿತ್ವಗೊಂಡವು. ಮೊದಲಿಗೆ ಎಫ್.ಕಿಟೆಲ್ ಅವರ ಸಂಪಾದನಾ ಕೃತಿ ನಾಗವರ್ಮನ 'ಛಂಧೋಂಬುಧಿ' ಕೃತಿಯ ಮುನ್ನುಡಿಯು ಪ್ರಮುಖ ಮಾದರಿಯಲ್ಲಿಯೇ ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಯ ಸಂಸ್ಕೃತಿ ಬೆಳೆಯಿತು.

ಕನ್ನಡ ಸಾಹಿತ್ಯದ ನವೋದಯ ಕಾಲಕ್ಕೆ ಮುನ್ನುಡಿಗಳು ಮಹತ್ವದ ಚಿಂತನೆಯಾಗಿ ಬಿ.ಎಂ.ಶ್ರೀ., ಕುವೆಂಪು, ಮಾಸ್ತಿ, ದ.ರಾ.ಬೇಂದ್ರೆ, ಡಿ.ವಿ.ಜಿ ಅನೇಕರಿಂದ ಗುಣಗ್ರಹಣವಾದ ಹಾಗೂ ವಿಮರ್ಶಾ ವಿವೇಚನೆಯನ್ನು ಸೃಷ್ಟಿಸಿವೆ. ಹಾಗೆಯೇ ನವೋದಯದವರ ಚಿಂತನೆಯಲ್ಲಿ ಮುನ್ನುಡಿ ಕೃತಿಯ ಪರಿಚಯಾತ್ಮಕ ಹಾಗೂ ವಿಮರ್ಶಾತ್ಮಕ ಬರವಣಿಗೆ ಕ್ರಮವಾಗಿದೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಪ್ರಗತಿಶೀಲ ಸಾಹಿತ್ಯದ ಸಂದರ್ಭದಲ್ಲಿ ಮುನ್ನುಡಿಗಳು ಅಷ್ಟೇನೂ ಹೆಚ್ಚಿನ ಬರವಣಿಗೆಯಾಗಿ ಬಂದಿಲ್ಲ. ಏಕೆಂದರೆ ಆ ಸಂದರ್ಭದಲ್ಲಿ ಬರವಣಿಗೆ ಎಂಬುದು ವೃತ್ತಿಯಾಗಿತ್ತು. ಅಲ್ಲಿ ವಿಮರ್ಶೆಗೆ ಅವಕಾಶ ಕಡಿಮೆಯಾಗಿದೆ. ಆದರೂ ಮುನ್ನುಡಿಗಳು ಅ.ನ.ಕೃ., ನಿರಂಜನ, ಬಸವರಾಜ ಕಟ್ಟಿಮನಿ ಅವರ ಕಾದಂಬರಿಗಳಿಗೆ ಮುನ್ನುಡಿ ಬರವಣಿಗೆಯಾಗಿ ಬಂದಿವೆ. ಹೀಗೆಯೇ ಪ್ರಗತಿಶೀಲ ಸಾಹಿತ್ಯದಲ್ಲಿ ಮುನ್ನುಡಿಗಳು ರೂಪಿತಗೊಂಡಿವೆ.

ನವ್ಯ, ದಲಿತ ಮತ್ತು ಬಂಡಾಯ ಕಾಲದ ಸಾಹಿತ್ಯದಲ್ಲಿ ಮುನ್ನುಡಿಗಳು ಅತ್ಯಂತ ದೊಡ್ಡ ಮಟ್ಟದಲ್ಲಿ ಕೃತಿಗಳಲ್ಲಿ ಕಾಣಿಸಿಕೊಂಡಿವೆ. ಏಕೆಂದರೆ ನವ್ಯ ಸಾಹಿತ್ಯ ಕಾಲಕ್ಕೆ ಸ್ವಾತಂತ್ರ್ಯದ ಹಂಬಲದಿಂದ ನಿರಾಸೆಯಿಂದ ಹೊರಬಂದ ಜನರು ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ರಂಗಗಳಲ್ಲಿ ಪಲ್ಲಟಗೊಂಡಿದ್ದರಿಂದ ಒಟ್ಟಾರೆಯಾಗಿ ಸಾಂಸ್ಕೃತಿಕವಾದದ ನೆಲೆಯಲ್ಲಿ ಅನೇಕ ಕೃತಿಗಳು ಹೊರಬಂದವು. ಆ ಸಂದರ್ಭದಲ್ಲಿ ಯಾವುದೇ ಕೃತಿ ಪ್ರಕಟಣೆಯ ನಂತರ ಮುಖ್ಯವಾಗಿ ಮುನ್ನುಡಿ ಭಾಗದಲ್ಲಿ ಕೃತಿಯ ವಸ್ತು, ಭಾಷೆ, ಚಿಂತನೆ, ವಿಶ್ಲೇಷಣೆಗೆ ಹೆಚ್ಚು ಒತ್ತು ಕೊಡಲಾಯಿತು. ಹಾಗಾಗಿ ಮುನ್ನುಡಿ ಕ್ಷೇತ್ರ ಮತ್ತಷ್ಟು ಓದುವ ವಲಯವನ್ನು ರೂಪುಗೊಳ್ಳುವ ರೀತಿಯಲ್ಲಿಯೇ ಹೊಸ ನೆಲೆಯಾಗಿ ಮೊಳಕೆಯೊಡೆಯುವ, ಸ್ವಾತಂತ್ರ್ಯದ ಕಾಲದಲ್ಲಿ ಕೃತಿಯ ಹೆಚ್ಚಿನ ವಿಶ್ಲೇಷಣೆಗೆ ಮುನ್ನುಡಿಗಳು ಸಾರಾಂಶ, ಪರಿಚಯಾತ್ಮಕ ಬರವಣಿಗೆಯಾಗಿ ಆ ಕೃತಿಯ ಭಾಗದಲ್ಲಿ ವ್ಯಕ್ತಗೊಳ್ಳುತ್ತಿದ್ದವು.

ಈ ಹಿನ್ನೆಲೆಯಿಂದ ಸಮಾಜ ಪರಿವರ್ತನೆಯ ನೆಲೆಯಲ್ಲಿ ತಮ್ಮ ವ್ಯಕ್ತಿ ನೆಲೆಯಾಗಿ ಮುನ್ನುಡಿಯಲ್ಲಿ ಗುರುತಿಸಿಕೊಳ್ಳುವ ಹಂಬಲ ಹೊಂದಿತ್ತು. ಏಕೆಂದರೆ ಸ್ವಾತಂತ್ರ್ಯದ ಹಂಗು ಹಾಗೂ ಎರಡನೇ ಮಹಾಯುದ್ಧದ ಜಾಗತಿಕವಾಗಿ, ಆರ್ಥಿಕ ನಷ್ಟದ ಫಲವಾಗಿ ವ್ಯಕ್ತಿ ನೆಲೆಯಾಗಿ ಸಾಹಿತ್ಯದ ಹರವು ಪಡೆದುಕೊಂಡಿದೆ. ಹೀಗಾಗಿ ಕೃತಿ ಬರವಣಿಗೆಯಾಗಿ ಹೊರಬರತೊಡಗಿದಾಗ ಅತಿ ಹೆಚ್ಚಾಗಿ ಮುನ್ನುಡಿಯಲ್ಲಿಯೇ ಅನೇಕ ಅಂಶಗಳನ್ನು ಚರ್ಚಿಸಲಾಯಿತು. ಇದಕ್ಕೆ ನವ್ಯ ಕಾಲಘಟ್ಟವು ಪ್ರಮುಖವಾಗಿದೆ. ಅಂದು ಹೊಸ ಸಂವೇದನೆ ಹಂಬಲ ಹೊಂದಿದವರು ಅಡಿಗರ ಕಾವ್ಯಗಳಿಗೆ ಬರೆದ ಮುನ್ನುಡಿಗಳು ಅತ್ಯಂತ ಪ್ರಮುಖವಾಗಿವೆ. 'ಭೂಮಿಗೀತ'ದ ಮುನ್ನುಡಿ, ಅಬಚೂರಿನ ಪೋಸ್ಟಾಫೀಸು ಕೃತಿಯ 'ಹೊಸದಿಗಂತದೆಡೆಗೆ' ಮುನ್ನುಡಿ ಇತ್ಯಾದಿಯಾಗಿವೆ. ಇದರಿಂದ ಸಾಮಾಜಿಕ ಸಂವೇದನೆಯ ಜೊತೆಗೆ ವ್ಯಕ್ತಿಯ ಹಿನ್ನೆಲೆಯನ್ನು ಹೊಂದಿವೆ. ಹಿಂದಿನ ನವೋದಯದವರ ಸಾಹಿತ್ಯವನ್ನು ಒರೆಗಲ್ಲಿಗೆ ಹಚ್ಚುವ, ತಿದ್ದುವುದರ ಜೊತೆಗೆ ಜಾಗತಿಕ ಮಟ್ಟದ ಪರಿಕಲ್ಪನೆಗಳು ಹುಟ್ಟತೊಡಗಿದವು. ಇದರ ಜೊತೆಗೆ ಚಳುವಳಿಯಾತ್ಮಕ ಸಂವೇದನೆಗಳು ಒಡಮೂಡಿದವು. ಸರಕಾರದ ನೀತಿ-ನಿಯಮಗಳ ವಿರುದ್ಧ ಹಾಗೂ ಶೋಷಣೆ ಮತ್ತು ದಮನಕ್ಕೊಳಗಾದವರ ಪರವಾಗಿ ಸಾಮಾಜಿಕ ಸಂವೇದನೆ ಜೊತೆಗೆ ಹಲವು ವಿನ್ಯಾಸದ ಬರವಣಿಗೆಯನ್ನು ರೂಪಿಸಿ ತತ್ವ ಸಿದ್ಧಾಂತದ ಜೊತೆಗೆ ಲೋಹಿಯಾ, ಗಾಂಧಿ, ಅಂಬೇಡ್ಕರ್ ಇತರ ನೇತಾರರ ಸಾಮಾಜಿಕ ಪರಿವರ್ತನೆಯಂತಹ ಸಿದ್ಧಾಂತಗಳನ್ನು ಪರಿಭಾವಿಸುತ್ತಿದ್ದುದು ದಲಿತ ಬಂಡಾಯದ ಧ್ವನಿಯಾಗಿದೆ. ಹೀಗೆಯೇ ಮಹಿಳಾ ಸಂವೇದನೆಯ ಕೂಗು ಅವರ ಚಿಂತನೆ, ನಿಲುವು, ಚಳುವಳಿಯಾತ್ಮಕವಾಗಿ ಬರವಣಿಗೆಯಲ್ಲಿ ಬೆರೆತುಕೊಂಡಿತು. ಇಂತಹ ಅಂಶಗಳು ಮುನ್ನುಡಿ ಭಾಗದಲ್ಲಿ ವ್ಯಕ್ತಗೊಂಡಿವೆ.

### ೪.೧. ನವೋದಯ ಸಾಹಿತ್ಯ ಸಂದರ್ಭದ ಮುನ್ನುಡಿಗಳು

ಕನ್ನಡ ಸಾಹಿತ್ಯ ಪರಂಪರೆಯನ್ನು ಅಧ್ಯಯನ ಮಾಡಹೊರಟಾಗ ಹೆಚ್ಚಾಗಿ ನವೋದಯ ಕಾಲವು ಮುಂಚೂಣಿಗೆ ಬರುತ್ತದೆ. ಏಕೆಂದರೆ ಪಾಶ್ಚಾತ್ಯರ ಸಿದ್ಧಾಂತಗಳು, ನಮ್ಮ ಸ್ಥಳೀಯ

ಸಿದ್ಧಾಂತಗಳು ನವೋದಯ ಚಿಂತನೆಯಲ್ಲಿ ಬೆರೆತುಕೊಂಡಿವೆ. ಇವು ಪ್ರಭಾವಬೀರುವ ಮೂಲಕ ವಿಭಿನ್ನ ಚಿಂತನೆಯಲ್ಲಿ ತೊಡಗಿರುವ ನಮ್ಮ ನವೋದಯ ಬರಹಗಾರರನ್ನು ಕಾಣುತ್ತೇವೆ. ಪಾಶ್ಚಾತ್ಯರ ಸಂವೇದನೆ ಜೊತೆಗೆ ಭಾರತೀಯ ಕಾವ್ಯಮೀಮಾಂಸೆಯ ಸಂವೇದನೆ ಈ ಎರಡೂ ಮಾದರಿಯ ನೆಲೆಗಳಲ್ಲಿ ನವೋದಯ ಕಾಲದಲ್ಲಿ ನಡೆದಿವೆ. ಜೊತೆಗೆ ಪ್ರಸ್ತುತದವರೆಗೆ ಕಾಲಕಾಲಕ್ಕೆ ಸಾಮಾಜಿಕ ಸಂವೇದನೆಗಳು ಬದಲಾವಣೆಯಾಗಿವೆ. ಇಲ್ಲಿ ಪ್ರಮುಖವಾಗಿ ನವೋದಯ ಲೇಖಕರಲ್ಲಿ ಕೆಲವರನ್ನು ಒಳಗೊಂಡಂತೆ ಪಾಶ್ಚಾತ್ಯರಿಂದ ನೇರವಾಗಿ ಎರವಲು ಸಾಹಿತ್ಯವನ್ನು ಪಡೆದಿದ್ದಾರೆ. ಇದಕ್ಕೆ ಬಿ.ಎಂ.ಶ್ರೀ.ಯವರ 'ಇಂಗ್ಲಿಷ್ ಗೀತಗಳು' ಪ್ರಮುಖವಾಗಿದೆ. ಇದಕ್ಕೆ ಬರೆದ ಮುನ್ನುಡಿಯು ಕೂಡ ಅಷ್ಟೇ ಪ್ರಮುಖವಾಗಿದೆ. ಇದನ್ನು ಕನ್ನಡ ಸಾಹಿತ್ಯದ ನವೋದಯ ಕಾಲ ಎಂದು ಹೇಳುತ್ತಾರೆ. ಇದರ ಪೂರ್ವದಲ್ಲಿ ಕನ್ನಡ ಸಾಹಿತ್ಯ ಸಿದ್ಧಾಂತವು ಅವತರಣಿಕೆಯಾಗಿತ್ತು. ಅದು ಪ್ರಾಸಬದ್ಧ ಶೈಲಿಯಾಗಿತ್ತು. ಇದು ಜನಸಾಮಾನ್ಯರಿಗೆ ಅರ್ಥವಾಗದ ರೀತಿಯಲ್ಲಿ ಅಂದು ಹಳಗನ್ನಡ ಕಾವ್ಯಗಳನ್ನು ಒಳಗೊಂಡಿದ್ದವು. ಇದನ್ನು ಮುರಿದು ಹೊಸನೆಲೆಯ ಮಾದರಿಯಲ್ಲಿ ಹೊಸದರ ಬರವಣಿಗೆಯಾಗಿ ಬಿ.ಎಂ.ಶ್ರೀ.ಯವರು 'ಇಂಗ್ಲಿಷ್ ಗೀತಗಳ'ನ್ನು ಹೊರತಂದರು. ಇದರಲ್ಲಿ ಕನ್ನಡತ್ವ ಮತ್ತು ಪಾಶ್ಚಿಮಾತ್ಯರ ನಿಲುವುಗಳನ್ನು ಒಳಗೊಂಡಂತೆ 'ಕಾಣಿಕೆ' ಕವನವನ್ನು ಗಮನಿಸಬಹುದು.

> "ಇವಳ ಸೊಬಗನವಳು ತೊಟ್ಟು
> ನೋಡ ಬಯಸಿದೆ
> ಅವಳ ತೊಡಿಗೆ ಇವಳಿಗಿಟ್ಟು
> ಹಾಡ ಬಯಸಿದೆ"[೧]

ಇದರಿಂದ ಭಾಷೆ, ಶೈಲಿ, ರಚನೆ. ಛಂದಸ್ಸು ಹೊಸ ಸಂವೇದನೆಯಿಂದ ಹೊಸ ಕವಿಗಳಿಗೆ ಸವಿಭೋಜನದಂತಾಯಿತು. ಇಂಗ್ಲಿಷ್ ಗೀತಗಳ ಮುನ್ನುಡಿ ಭಾಗದಲ್ಲಿ ತೀ.ನಂ.ಶ್ರೀ. ಅವರು ಹೇಳುವ ಹಾಗೆ "ಬಿ.ಎಂ.ಶ್ರೀಕಂಠಯ್ಯನವರು ಇಂಗ್ಲಿಷ್ ಗೀತಗಳನ್ನು ರಚಿಸಿ ಕನ್ನಡದ ಕಾವ್ಯಸಂಪತ್ತನ್ನು ಬೆಳೆಸುವುದರ ಜೊತೆಗೆ ಹೊಸಗನ್ನಡದ ಕವಿಕುಲವನ್ನು ಬೆಳೆಸಿದರು"[೨] ಇಲ್ಲಿ ಇಂಗ್ಲಿಷ್ ಗೀತಗಳನ್ನು ಕನ್ನಡದ ಜೊತೆಗೆ ಸಮೀಕರಿಸುವುದರ ಮೂಲಕ ಕನ್ನಡದ ಹಿರಿಮೆ ಒಂದು ಕಡೆಯಾದರೆ, ಇನ್ನೊಂದು ಕಡೆ ಕನ್ನಡ ಸಾಹಿತ್ಯದ ಮೂಲ ಪರಂಪರೆಯನ್ನು ಕಸಿ ಮಾಡುವುದು ಮತ್ತೊಂದು ಕಡೆಯಾಗಿದೆ. ಈ ಇಂಗ್ಲಿಷ್ ಗೀತಗಳು ಅನುವಾದಗೊಂಡ ನಂತರ ಸಂಪ್ರದಾಯವಾದಿ ಹಿನ್ನೆಲೆಯ ವಿದ್ವಾಂಸರು ಪ್ರತಿರೋಧಗಳನ್ನು ಒಡ್ಡಿದರು. ಆದರೆ ಆ ಸಂಪ್ರದಾಯದ ಭಾಷೆ, ಶೈಲಿಯನ್ನು ಒಪ್ಪದಿರುವ ಜನಸಾಮಾನ್ಯರು ಇಂಗ್ಲಿಷ್ ಗೀತಗಳನ್ನು ಒಪ್ಪುತ್ತಾರೆ. ಆಗ ಕನ್ನಡ ಸಾಹಿತ್ಯ ಹೊಸ ಸಂಪ್ರದಾಯದ ದಾರಿಯನ್ನು ಹಿಡಿಯಿತು. ಇದರಿಂದ ಬರವಣಿಗೆಯ ಕ್ರಮ, ಶೈಲಿಯಲ್ಲಿಯೂ ಬದಲಾವಣೆಯಾಯಿತು. ಅಂದಿನ ಬ್ರಿಟಿಷರು ತಮ್ಮ ಆಡಳಿತದ ಮೂಲಕ ಪ್ರಗತಿ ಕಾಣಲಿದ್ದರು. ಹಾಗೆಯೇ ವಸಾಹತುಶಾಹಿಯ ನೆಲೆಯಿಂದ ಹಲವಾರು ರೀತಿಯಲ್ಲಿ ತಮ್ಮ ಸಿದ್ಧಾಂತವನ್ನು

ಸ್ಥಳೀಯ ಆಡಳಿತದ ಮೂಲಕ ಜನತೆಯಲ್ಲಿ ತಮ್ಮ ಪಾಶ್ಚಾತ್ಯ ಸಂಸ್ಕೃತಿಯನ್ನು, ಸಾಹಿತ್ಯವನ್ನು ಓದುಗರಿಗೆ ತಿಳಿಯಪಡಿಸಿದರು. ಇದರ ಬೆನ್ನಲ್ಲೇ ಇಂಗ್ಲಿಷ್ ಗೀತಗಳು ಅನುವಾದದಿಂದ ಹೊಸ ಹೊಸ ಪ್ರಭಾವಗಳ ಮೂಲಕ ಸಾಹಿತ್ಯದ ಓದುಗರು ಹೊಸತನವನ್ನು ಹಂಬಲಿಸಿದರು. ಆಗ ಪ್ರಪಂಚದ ಪ್ರಮುಖ ಸಾಹಿತ್ಯ ಪಂಥಗಳು ಕೃತಿಗಳ ಒಳಗೆ ನಿಲುವುಗಳಾಗಿ ಭಾಷಾಂತರ ಕಾರ್ಯ ಚುರುಕುಗೊಂಡಂತೆ ಕನ್ನಡ ಸಾಹಿತ್ಯದಲ್ಲಿ ಬಿ.ಎಂ.ಶ್ರೀ.ಯಂತಹ ಹಲವು ಲೇಖಕರು ಅನುವಾದದ ಜೊತೆಗೆ ತಮ್ಮ ಸಿದ್ಧಾಂತವನ್ನು ರೂಪಿಸಿಕೊಂಡರು.

"ಹೊಸಕಾಲದ ಕವಿಗಳ ಮೇಲೆ ಈ ಗುರುಗಳ ವರ್ಚಸ್ಸು ಹೇಗೆ ಪ್ರತ್ಯಕ್ಷವಾಗಿಯೂ ಮತ್ತು ಪರೋಕ್ಷವಾಗಿಯೂ ಬಿದ್ದಿತು. ಅವರು ತೆರೆದ ಮಾರ್ಗದಲ್ಲಿ ಕನ್ನಡ ಕವಿತೆ ಹೇಗೆ ನೆರೆಗೊಂಡು ಹರಿಯಿತು ಎಂಬುದನ್ನು ವಿವೇಚಿಸಲು ಈಗಾಗಲೇ ನಿರೀಕ್ಷೆಗೆ ಮೀರಿ ಬೆಳೆದಿರುವ ಈ ಮುನ್ನುಡಿಯಲ್ಲಿ ಸ್ಥಳವಿಲ್ಲ"[3] ಎಂದು ತೀ.ನಂ.ಶ್ರೀ.ಯವರು ಇಂಗ್ಲಿಷ್ ಗೀತಗಳ ಕೃತಿಯ ಮುನ್ನುಡಿ ಭಾಗದಲ್ಲಿ ಹೇಳುತ್ತಾರೆ. ಬಿ.ಎಂ.ಶ್ರೀ.ಯವರು ತಮ್ಮ ಸಮಕಾಲೀನ ಯುವ ಪೀಳಿಗೆಗೆ ಮಹಾನ್ ವ್ಯಕ್ತಿಯಾದರೆ ತಮ್ಮ ಸಮಕಾಲೀನ ಹಿರಿಯ ಮತ್ತು ವಾರಿಗೆಯರಿಗೆ, ಸಂಪ್ರದಾಯಸ್ಥ ಮನಸ್ಥಿತಿಯನ್ನು ಹೊಂದಿದವರಿಗೆ ಇರುಸು ಮುರುಸಾಗುತ್ತದೆ. ಏಕೆಂದರೆ ಪ್ರಾಸಬದ್ಧವಾದ ಕನ್ನಡ ಬರವಣಿಗೆ ಪರಂಪರೆಯನ್ನು ಮುರಿದು ಹೊಸತದ ಬರವಣಿಗೆ ಭಾಷೆ, ಶೈಲಿಯಲ್ಲಾದ ವರ್ಚಸ್ಸಾಗಿದೆ. ಪಾಶ್ಚಾತ್ಯ ಸಿದ್ಧಾಂತದ ಶೈಲಿಯಲ್ಲಿ ಕನ್ನಡದ ಕೆಲವು ಲೇಖಕರಿಗೆ ಒಗ್ಗದಿರುವುದು ಹಾಗೂ ರಂ.ಶ್ರೀ.ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯ ಕೃತಿಯಲ್ಲಿ ಕವಿಗಳ ಪಟ್ಟಿಯನ್ನು ನೋಡಿದರೆ ಜೈನ, ಬ್ರಾಹ್ಮಣ ಮತ್ತು ವೀರಶೈವ ಕವಿಗಳ ಪ್ರಾಬಲ್ಯ ಇರುವ ಪಟ್ಟಿಯಾಗಿದೆ. ಆದರೆ ಸಾಮಾನ್ಯ ಜನರ ಕೆಲವು ಇತರೆ ಸಮುದಾಯದ ಕನ್ನಡ ಸಾಹಿತ್ಯ ಚರಿತ್ರೆಯ ಕೃತಿಯ ಕವಿಗಳ ಪಟ್ಟಿಯಲ್ಲಿ ಹೆಸರುಗಳು ಕಂಡುಬರುವುದಿಲ್ಲ. ಇಲ್ಲಿಯ ಉದ್ದೇಶ ಪ್ರಾಚಿನ ಕಾಲದಿಂದ ಇಂಗ್ಲಿಷ್ ಗೀತಗಳು ಅನುವಾದದ ತನಕ ಜನಸಾಮಾನ್ಯರಿಗೆ ಅಷ್ಟೇನೂ ಸಾಹಿತ್ಯದ ಓದು, ಬರವಣಿಗೆ ಇಲ್ಲದಿರುವುದು. ಅಲ್ಲಿ ಉನ್ನತ ವರ್ಗದ ಸಮುದಾಯಗಳ ಪ್ರಾಬಲ್ಯವಿದೆ. ಆದ್ದರಿಂದ ಪ್ರಾಸಬದ್ಧ ಬರವಣಿಗೆ ಸಾಮಾನ್ಯರಿಗೆ ಅರ್ಥವಾಗದಿರುವುದು ಕಂಡುಬರುತ್ತದೆ. ಇದರಿಂದ ಇಂಗ್ಲಿಷ್ ಗೀತಗಳನ್ನು ಸಂಪ್ರದಾಯಬದ್ಧ ಮನಸ್ಥಿತಿಯುಳ್ಳವರು ವಿರೋಧಿಸಿದ್ದಾರೆ. ಆದುದರಿಂದ ಪುರೋಹಿತಶಾಹಿ ಸಂಸ್ಕೃತಿಯ ಭಾಷೆ, ಸಾಹಿತ್ಯ, ಬರವಣಿಗೆ ಜನಸಾಮಾನ್ಯರ ಮೇಲೆ ಹೇರಲಾಗಿತ್ತೇ ಅಥವಾ ಜನಸಾಮಾವ್ಯರ ಮೌಖಿಕ ಸಾಹಿತ್ಯ ಪರಂಪರೆಯಲ್ಲಿ ಪುರೋಹಿತಶಾಹಿ ಚಿಂತನೆಗಳು ಲಗ್ಗೆ ಇಟ್ಟಿರಬಹುದೇ ಎಂಬಂತಹ ಪ್ರಶ್ನೆಗಳು ಮೂಡುತ್ತವೆ. ಅದಕ್ಕಾಗಿ ಇಂಗ್ಲಿಷ್ ಗೀತಗಳು ಬಹು ಬೇಗನೇ ಅಂದಿನ ಜನಸಾಮಾನ್ಯರ ಮನಸೂರೆಗೊಂಡವು. ಹಾಗೆಯೇ ಸರಳ ಶೈಲಿಯ ಸಜ್ಜನಿಕೆಯಾಗಿ ಎಲ್ಲರನ್ನೂ ಒಳಗೊಂಡು ಕವಿತೆ, ಪಠ್ಯ, ಓದು, ಬರವಣಿಗೆಯಾಗಿ ಕ್ರಮಿಸಿತು.

ಈ ಕೃತಿಯ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಹಲವಾರು ರೀತಿಯಲ್ಲಿ ಚರ್ಚೆಗೊಳಪಟ್ಟಿತ್ತು. ಅಂದು ಪ್ರಾಸದ ಬಳಕೆಯ ಅಥವಾ ಬಿಡುವ ವಿಚಾರವಾಗಿ ಪಂಜೆ ಮಂಗೇಶರಾಯರು,

ಎಸ್.ಜಿ.ನರಸಿಂಹಾಚಾರ್, ಗೋವಿಂದ ಪೈ ಇತ್ಯಾದಿಯವರು ಪ್ರಾಸದ ಬಗ್ಗೆ ವಾಗ್ವಾದವನ್ನು ಸೃಷ್ಟಿ ಮಾಡಿದ್ದರು. ಇನ್ನೊಂದು ಕಡೆ ವಸಾಹತುಧೋರಣೆಯ ವಿಚಾರವಾಗಿ ಸಮಾಜದಲ್ಲಿರುವ ಅಸ್ಥಿರತೆಯ ವಿಚಾರವಾಗಿಯೂ ಚರ್ಚೆಗೊಳಪಟ್ಟಿತು. ಈ ಕೃತಿಯ ಅನುವಾದದಿಂದ ಇದಕ್ಕೆ ಧೀರ್ಘ ಮುನ್ನುಡಿಯಲ್ಲಿ ಒಂದು ರೂಪ ಕೊಡಲಾಗಿತ್ತು. ಅದು ಪ್ರಾಸ ಬಿಟ್ಟು ಆಧುನಿಕತೆ ಎಂಬ ಹೊಸತನದ ಪರಿಕಲ್ಪನೆಯ ತಿರುವನ್ನು ಪಡೆದುಕೊಂಡಿತು. ಇದರಿಂದ ಎರಡು ಸಂಸ್ಕೃತಿಯ ಸಮ್ಮಿಲನತೆಯನ್ನು ಸಾಂಸ್ಕೃತಿಕವಾಗಿ ಗುರುತಿಸಿಕೊಳ್ಳಲಾಗಿದೆ. ಈ ಎಲ್ಲಾ ಹಿನ್ನೆಲೆಯಿಂದ ಗೋವಿಂದ ಪೈ ಅವರು ಹೇಳುವ ಹಾಗೆ "೧೯೧೧ನೆಯ ಏಪ್ರಿಲ್ ತಿಂಗಳಲ್ಲಿ ನಾನು ಸುಮಾರು ಒಂದು ತಿಂಗಳು ಬಡೋದಾರಾಜ್ಯದ ನವಸಾರಿ ಎಂಬಲ್ಲಿದ್ದೆ. ಆಗ್ಗೆ ಒಂದು ಮುಂಜಾನೆ ಮಾಳಿಗೆಯಲ್ಲಿ ಶತಪದಗೆಯ್ಯುತ್ತಿರುವಾಗ ಹಠತ್ತಾಗಿ ಆಗೋದು ಹೋಗೋದು ದೇವರಿಚ್ಛೆ, ಹೊಡೋದು ಬಿತ್ತೋದು ನನ್ನ ಇಚ್ಛೆ, ಇನ್ನು ಮೀನಾ ಮೇಷ ನೋಡದೆ ಪ್ರಾಸವನೀಗಲೇ ತೊರೆದು ಬಿಡುವುದೆ ನಿಶ್ಚಯಂ"[೪] ಎಂದು ಹೇಳುತ್ತಾರೆ. ಹೀಗೆ ಪಂಜೆ ಮಂಗೇಶರಾಯರು ಪ್ರಾಸವನ್ನು ತ್ಯಜಿಸುತ್ತಾರೆ. ಏಕೆ ಪ್ರಾಸವನ್ನು ಬಿಟ್ಟರು ಎನ್ನುವುದು ಪ್ರಶ್ನೆ? ಏಕೆಂದರೆ ಈ ದೊಡ್ಡ ವಿದ್ವಾಂಸರು ವಸಾಹತು ಚಿಂತನೆ, ಧೋರಣೆ, ಪ್ರಭಾವ, ಹೊಸ ಹೊಸ ಸಂಶೋಧನೆಗಳು, ಇವುಗಳಿಂದ ಸಾಮಾಜಿಕ ಸಂವೇದನೆ ರೂಪಿತಗೊಂಡಿದೆ, ಇದರ ಪ್ರತಿಫಲವೇ ಇಂಗ್ಲಿಷ್ ಗೀತಗಳು. ಅದಕ್ಕಾಗಿ ಪ್ರಾಸ ಬಿಟ್ಟಿರಬಹುದು. ಇದರಿಂದ ಚಿಕ್ಕದೇವರಾಯನ ಕಾಲಕ್ಕೆ ಕಾವ್ಯ ಬರೆಯುವುದು ನಿಂತುಹೋಯಿತು. ಹೇಗೆಂದರೆ ಮುದ್ದಣನ "ಪದ್ಯಂ ವದ್ಯಂ, ಗದ್ಯಂ ಹೃದ್ಯಂ" ಎಂದು ಹೇಳಿದ್ದಾನೆ. ಅದು ಹಳಗನ್ನಡ ಗದ್ಯವಾಗಿದ್ದರಿಂದ ಇವುಗಳ ಮಧ್ಯೆ ನಾಟಕಗಳು ಅತಿ ಹೆಚ್ಚಾಗಿ ಮೂಡಿಬಂದವು. ಹೀಗೆಯೇ ಜನರ ಒಲವಿಗೆ ದೃಶ್ಯಮಾಧ್ಯಮವು ಪರಿಣಾಮಕಾರಿಯಾಯಿತು. ಕೆಲವು ವರ್ಷಗಳ ನಂತರ ಪಾಶ್ಚಿಮಾತ್ಯರ ಓರಿಯಂಟಲ್ ಅಧ್ಯಯನದ ಪರಿಣಾಮದಿಂದ ಹಾಗೂ ಬಿ.ಎಂ.ಶ್ರೀ.ಯವರ ಇಂಗ್ಲಿಷ್ ಗೀತಗಳಿಂದ ಕನ್ನಡ ವಲಯದಲ್ಲಿ ಹೊಸ ಮಾರ್ಗ ಹುಟ್ಟಿಕೊಂಡಿತು. ಇದರಿಂದ ಸಾಮಾನ್ಯನಿಗೂ ಕವಿತೆಯ ಓದು, ಬರಹ ಎಲ್ಲವೂ ಸರಳಗೊಂಡಿತು. "ಇಂಗ್ಲಿಷ್‌ನ ಸಂಪರ್ಕದಿಂದ ಕನ್ನಡ ಸಾಹಿತ್ಯವನ್ನು ಕಸಿ ಮಾಡಿ ಬೆಳೆಸುವುದು ಹೇಗೆ ಎಂದು ಆಲೋಚಿಸುತ್ತಿದ್ದರಂತೆ"[೫] ಎಂದು ತೀ.ನಂ.ಶ್ರೀ.ಯವರು ಬಿ.ಎಂ.ಶ್ರೀ.ಯವರ ಕುರಿತು ಹೇಳುತ್ತಾರೆ. ಬಿ.ಎಂ.ಶ್ರೀ.ಯವರು ಏಕೆ ಈ ಆಲೋಚನೆಯನ್ನು ಮಾಡುತ್ತಿದ್ದರು ಎನ್ನುವುದಕ್ಕೆ ೧೯೧೧ರಲ್ಲಿ ಧಾರವಾಡದಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಉಪನ್ಯಾಸದಲ್ಲಿ ನಿಖರವಾಗಿ ಅವರ ಆಲೋಚನೆ ಗೊತ್ತಾಗುತ್ತದೆ. ಅದು ಸಾಮಾನ್ಯರ ಅಂತರ್‌ದೃಷ್ಟಿಯಿಂದ ಸಂಪೂರ್ಣವಾಗಿ ಪಂಡಿತ ಕಾವ್ಯವನ್ನು ಬಿಟ್ಟು ಸಾಮಾನ್ಯರಿಗೆ ತಿಳಿಯುವಂತೆ "ಕನ್ನಡದ ಪ್ರಾಚೀನ ಕಾವ್ಯಗಳ ಗುಣವನ್ನು ಗ್ರಹಿಸಿ ಅವುಗಳ ನ್ಯೂನತೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ"[೬] ಎಂದು ತಿಳಿಯುತ್ತದೆ. ಇದಕ್ಕೆ ಇಂಗ್ಲಿಷ್ ಗೀತಗಳ ಕನ್ನಡದ 'ಕಾಣಿಕೆ' ಕವನದ ಸಾಲುಗಳನ್ನು ಗಮನಿಸಬಹುದು. ಕನ್ನಡ ಸಾಹಿತ್ಯ ಇಂಗ್ಲಿಷ್ ಸಾಹಿತ್ಯದ ಸಂಸ್ಕೃತಿಯನ್ನು ಒಟ್ಟುಗೂಡಿಸುವ ಕೆಲಸ ನಡೆದಿದೆ. ಈ ಮುನ್ನುಡಿಯಲ್ಲಿ ಇನ್ನೊಂದು ಅಂಶ ಚರ್ಚಿಸುದಾದರೆ ಪಂಪನ ಭಾಷೆ, ಸಾಹಿತ್ಯ ರಚನೆ ಮತ್ತು

ರನ್ನನ ಭಾಷೆ, ಸಾಹಿತ್ಯ ರಚನೆ ಹೀಗೆ ಕುಮಾರವ್ಯಾಸ, ಮುದ್ದಣ ಇವರೆಲ್ಲರ ಸಾಹಿತ್ಯ, ಭಾಷಿಕ ರಚನೆಗೂ, ಬಿ.ಎಂ.ಶ್ರೀಯವರ ಭಾಷೆ, ಸಾಹಿತ್ಯ ರಚನೆ ಬೇರೆ ಬೇರೆಯಾಗಿದೆ. ಸಾಹಿತ್ಯ ಆಯಾ ಕಾಲಘಟ್ಟದಲ್ಲಿ ವಸ್ತು ಒಂದಾದರೂ ಚಿಂತನೆಗಳು ಹೊಸತನ ಕಂಡಿವೆ. ಸಹೃದಯದ ಸಮೂಹದಲ್ಲಿ ಹೊಸ ಹಂಬಲ ಹೊಸತನ ಮೂಡುವುದು ಸಹಜವಾಗಿದೆ. ಹಳೇಬೇರು ಹೊಸಚಿಗುರು ಬೆಳೆಸುವ ವಿಧಾನ ಬೇರೆಯಾಗಿದೆ. ಇದರಿಂದ ಬಿ.ಎಂ.ಶ್ರೀಯವರ ಸಮಕಾಲೀನರು ಹೊಸಪ್ರಜ್ಞೆಯ ಶಿಸ್ತಿನ ಮೂಲಕ ಹಳೆಯದನ್ನು ರೂಢಿಸಿಕೊಳ್ಳುತ್ತಾ ಹೊಸಬಗೆಯಲ್ಲಿ ಬರವಣಿಗೆಯನ್ನು ಮಾಡಿದರು. ಇಲ್ಲಿ ಕಾಳಿದಾಸ, ಪಂಪ, ರನ್ನ ವಚನಕಾರರು ಕುಮಾರವ್ಯಾಸ, ಮತ್ತು ಕೆಲವು ಪಾಶ್ಚಾತ್ಯ ಲೇಖಕರನ್ನು ಕನ್ನಡ ಲೇಖಕರು ಅನುಕರಿಸಿದರು. ಜೊತೆಗೆ ತಮ್ಮ ಸಿದ್ಧಾಂತವನ್ನು ರೂಪಿಸಿಕೊಂಡರು. ಜಾನಪದ ಅಂಶಗಳನ್ನು ರಾಷ್ಟ್ರೀಯ ಪ್ರಜ್ಞೆ, ಪರಿಸರಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ನಾಡುನುಡಿಯ ಪ್ರಜ್ಞೆ, ಸಮುದಾಯದ ಪ್ರಜ್ಞೆ ಇಂತಹ ಅಂಶಗಳ ಮೂಲಕ ತಮ್ಮ ತತ್ವವನ್ನು ಹಲವು ಬರವಣಿಗೆಗಳಾಗಿ ಪ್ರಸ್ತುತಪಡಿಸಿದರು.

ಬಿ.ಎಂ.ಶ್ರೀ.ಯವರು ಕುವೆಂಪು ಅವರ ಕೊಳಲು ಕವನಸಂಕಲನಕ್ಕೆ ಮುನ್ನುಡಿ ಬರೆಯುತ್ತಾ "ಕನ್ನಡ ಕಾವ್ಯದ ಹೊಲವನ್ನು ಹೊಸ ರೀತಿಯಲ್ಲಿ ಬಿತ್ತಿ ಬೆಳೆ ಮಾಡಬೇಕೆಂದು ಪ್ರಯತ್ನ ಪಡುತ್ತಿರುವವರಲ್ಲಿ ಶ್ರೀ ಪುಟ್ಟಪ್ಪನವರ ಸಾಧನೆ, ಸ್ತುತ್ಯರ್ಹವಾದುದು"[೭] ಎಂದು ಹೇಳುತ್ತಾರೆ. ಕುವೆಂಪು ಅವರು ಕೂಡ ಸಾಮಾಜಿಕ ಪ್ರಜ್ಞೆಯಿಂದ ಜನಸಮೂಹಕ್ಕೆ ಮುಟ್ಟಿಸುವ ತವಕದಲ್ಲಿ ಹೊಸ ಹೊಸ ಚಿಂತನೆಯಿಂದ ಹೊಸ ಪದ ರಚನೆ ಸರಳ ಶೈಲಿಯಲ್ಲಿ ಕುವೆಂಪು ಅವರ ಕವನಗಳು ವ್ಯಕ್ತಗೊಂಡಿವೆ. ಇವರಲ್ಲಿ ವರ್ಡ್ಸ್‌ವರ್ತ್ ಪ್ರಭಾವವಿದ್ದರೂ ಸ್ಥಳೀಯ ಪರಿಸರದ ಜೊತೆಗೆ ಕುವೆಂಪು ಅವರು ಗುದ್ದಾಟ ಮಾಡಿದ್ದಾರೆ.

> "ಕಾಡಿನ ಕೊಳಲಿದು ಕಾಡ ಕವಿಯಾನಾ
> ನಾಡಿನ ಜನರೊಲಿದಾಲಿಪುದು"[೮]

ಕುವೆಂಪು ಅವರು ಕೂಡ ಬಿ.ಎಂ.ಶ್ರೀ.ಯವರ ಹಾದಿಯಲ್ಲಿದ್ದರೂ ಕನ್ನಡದ ತತ್ವವನ್ನು ಕಾವ್ಯಮೀಮಾಂಸೆಯನ್ನು ಕಟ್ಟುವುದಕ್ಕೆ ಮುಂದಾದರು ಎಂದು ಹೇಳಬಹುದು. ಏಕೆಂದರೆ ಹಳಗನ್ನಡ ವಸ್ತುವನ್ನು ತೆಗೆದುಕೊಂಡು ಹೊಸನೆಲೆಯಲ್ಲಿ ರೂಪಿಸಿದರು. ಅದು ಪುರಾಣದ ವಸ್ತು ವಿಷಯವನ್ನು ಇನ್ನಷ್ಟು ಹತ್ತಿರ ಮಾಡಿದರು. ನಾಟಕ, ಕವಿತೆ, ಕಾದಂಬರಿ, ವಿಮರ್ಶೆಯಂತಹ ಚಿಂತನೆಗಳ ಬರಹಗಳು ಒದಗಿವೆ. ಜೊತೆಗೆ ಹಳಗನ್ನಡ ಕಾವ್ಯಗಳ ವಸ್ತುವನ್ನು ಪುನರ್ ಮೌಲ್ಯಕ್ಕೊಳಪಡಿಸುತ್ತಾ ಅಲ್ಲಿಯ ಮೌಲ್ಯವನ್ನು ಎತ್ತಿಹಿಡಿದಿದ್ದಾರೆ. ಹೀಗೆಯೇ ಇತರೆ ಬರಹಗಾರರು ಇದೇ ಮಾದರಿಯಲ್ಲಿ ಕಂಡುಕೊಂಡಿದ್ದಾರೆ. ಬಿ.ಎಂ.ಶ್ರೀ.ಯವರ 'ಅಶ್ವತ್ಥಾಮನ್' ನಾಟಕ, ಕುವೆಂಪು ಅವರ 'ಜಲಗಾರ', 'ಸ್ಮಶಾನ ಕುರುಕ್ಷೇತ್ರ', 'ಯಮನ ಸೋಲು', 'ಶೂದ್ರ ತಪಸ್ವಿ' ಇನ್ನೂ ಅನೇಕ ಕೃತಿಗಳು ಹೊಸ ಚಿಂತನೆಯ ವಸ್ತುಗಳಾಗಿವೆ.

ಹಳಗನ್ನಡ ಕೃತಿಗಳನ್ನು ಪುನರ್‌ಮೌಲ್ಯಕ್ಕೊಳಪಡಿಸುವುದು, ಸಂಪಾದನೆ ಮಾಡುವುದು ಒಂದು ಕ್ರಮವಾದರೆ ಮತ್ತೆ ಮತ್ತೆ ವಿಮರ್ಶೆ ಪ್ರತಿಕ್ರಿಯೆಯಲ್ಲಿ ಮಾಡುವ ಕ್ರಮ ಇನ್ನೊಂದು ರೀತಿಯಲ್ಲಿ ಕಾಣುತ್ತದೆ. ಹಾಗಾಗಿ ಬಿ.ಎಂ.ಶ್ರೀ.ಯವರು ರನ್ನ ಕವಿ ಪ್ರಶಸ್ತಿಗೆ ಬರೆದ ಮುನ್ನುಡಿಯಲ್ಲಿ "ಕನ್ನಡ ಕಾವ್ಯ ರಾಶಿಯನ್ನು ಹೊರಕ್ಕೆ ತಂದು ಹೆಮ್ಮೆ ಪಟ್ಟದಾಯಿತು, ಈಗ ಬೇಕಾಗಿರುವುದು ಅದರ ಯೋಗ್ಯತೆಯನ್ನು ಗೊತ್ತು ಮಾಡುವ ವಿಮರ್ಶೆ, ಜೊಳ್ಳನ್ನು ತೂರಿ ಕಾಳನ್ನು ತುಂಬಿಕೊಳ್ಳಬೇಕಾಗಿದೆ" ಎಂದು ದೇಳುತ್ತಾರೆ. ಭಾರತೀಯರು ಮತ್ತು ಪಾಶ್ಚಿಮಾತ್ಯರು ತಮ್ಮ ಸಿದ್ಧಾಂತಗಳ ಮೂಲಕ ಹಳಗನ್ನಡ ಕೃತಿಗಳ ಸಂಪಾದನೆ ಮಾಡಿದರು. ಇದರಿಂದ ಕನ್ನಡ ಕಾವ್ಯಪರಂಪರೆ ಹಳಗನ್ನಡ ಕೃತಿಗಳಿಂದ ಪ್ರಮುಖ ಸಂಗತಿಗಳು ಹೊರಬಂದವು. ಈಗ ಕೃತಿಯ ವಸ್ತುವನ್ನು ವಿಮರ್ಶಾ ಮಾನದಂಡದಲ್ಲಿ ಅಳೆಯಲು ಅದರ ಯೋಗ್ಯತೆಯನ್ನು ಸಮಾಜಕ್ಕೆ ಮುಟ್ಟಿಸಬೇಕಾಗಿದೆ. ಇದೇ ಮಾದರಿಯನ್ನು ಡಿ.ವಿ.ಜಿ., ಕುವೆಂಪು, ದ.ರಾ.ಬೇಂದ್ರೆ, ಮಾಸ್ತಿ ಇತರರು ಕೈಗೊಂಡರು. ಹಳಗನ್ನಡ ಕೃತಿಗಳನ್ನು ಓದುವುದು ಪುನಃ ಅದೇ ವಸ್ತುವನ್ನು ರಚನೆ ಮಾಡುವುದರಿಂದ ಹೊಸ ಹೊಸ ರೀತಿಯಲ್ಲಿ ಶುದ್ಧವಾದ ಕಲಾ ಮಾರ್ಗಗಳಾಗಿ ನಮ್ಮ ಸಾಹಿತ್ಯದ ತಿರುಳನ್ನು ತಮ್ಮ ತಮ್ಮ ರಸಪ್ರಜ್ಞೆಗೆ ಅನುಗುಣವಾದ ದೃಷ್ಟಿಕೋನದಿಂದ ಕನ್ನಡದ ಪೂರ್ವದ ಸಾಹಿತ್ಯವನ್ನು ಪರಿಶೀಲನೆ ಮಾಡುವುದರಿಂದ ಬೆಲೆ ಕಟ್ಟಿದಂತಾಗುತ್ತದೆ. ನಮ್ಮ ಕಾವ್ಯ ಪರಂಪರೆಯಲ್ಲಿ ನಿಜವಾದ ಕವಿಗಳು ಯಾರು? ಅವರ ತಾತ್ವಿಕ ಚಿಂತನೆ ಯಾವುದಾಗಿತ್ತು? ಅಂತಹ ನಿಜವಾದ ಕವಿಗಳಲ್ಲಿ ಪ್ರಧಾನರು ಯಾರು? ಅವರ ಸತ್ವ ಯಾರ ಹಿತಾಸಕ್ತಿ ಹೊಂದಿದೆ? ಕವಿಗಳಲ್ಲಿ ತಾರತಮ್ಯಗಳು ಒಳಗೊಂಡಿವೆಯೇ? ಅವರ ಸಾಹಿತ್ಯ ಚಿಂತನೆ ಆ ಕಾಲದಲ್ಲಿ ಜನರ ಕುರಿತು ಪುಷ್ಟಿ ನೀಡಿತ್ತೇ? ಅಥವಾ ಜನರನ್ನು ಮೆಚ್ಚಿಸುವುದಾಗಿತ್ತೇ? ಒಟ್ಟಿನಲ್ಲಿ ನಮ್ಮವರ ಸಾಹಿತ್ಯದ ಗುಣಗಳು ಯಾವುವು? ಅವರ ನ್ಯೂನ್ಯತೆಗಳೇನು? ಜನಗಳಿಗೆ ಮತ್ತು ಸಮಾಜಕ್ಕೆ ಹಾಗೂ ಸಾಹಿತ್ಯಕ್ಕೆ ಇರುವ ಸಂಬಂದಗಳೇನು? ಎಂಬ ಅಂಶಗಳನ್ನು ಸಮಕಾಲೀನಲ್ಲಿ ಚಿಂತಿಸಬೇಕಾಗಿದೆ. ಹಾಗಾಗಿ ನವೋದಯದವರು ಹಳಗನ್ನಡ ಕೃತಿಗಳನ್ನು ಪುನರ್‌ಚಿಂತನೆಯಿಂದ ಸಾಹಿತ್ಯ ಪ್ರಕಾರವಾಗಿ ನಾಟಕ, ಕಾದಂಬರಿ, ಕತೆ, ವಿಮರ್ಶೆ ಮಾದರಿಯಲ್ಲಿ ಚಿಂತಿಸಿದ್ದಾರೆ.

ಕುವೆಂಪು ಅವರು ಪುರಾಣ ಕಥನಗಳನ್ನು ತೆಗೆದುಕೊಂಡು 'ಶೂದ್ರ ತಪಸ್ವಿ' ನಾಟಕ ಬರೆದರು. ಅದಕ್ಕೆ ಮುನ್ನುಡಿ ಬರೆಯುತ್ತಾ ಹೀಗೆ ಹೇಳುತ್ತಾರೆ. "ಶೂದ್ರ ತಪಸ್ವಿಯಲ್ಲಿ ಶಂಭೂಕನ ಕತೆಯ ಸಾಮಗ್ರಿ ಹೊಸ ರೀತಿಯಿಂದ ದೃಶ್ಯ ವಸ್ತುವಾಗಿದೆ. ಈ ನಾಟಕ ಆಡುವ ದೃಷ್ಟಿಯಿಂದ ನಿಷ್ಪ್ರಯೋಜಕ ಅದರ ಚಿತ್ರಗಳ ಬೃಹತ್ತನ್ನು, ಮಹತ್ತನ್ನು ಹೊರಗಡೆಯ ಅಲ್ಪ ವೇದಿಕೆಯ ಮೇಲೆ ಕೃತಕ ಅಭಿನಯದಿಂದ ಪ್ರದರ್ಶಿಸುವುದು ಅಸಾಧ್ಯ. ಆದ್ದರಿಂದ ಕಲ್ಪನಾ ತಪಸ್ಸಾಧ್ಯವಾದ ಮನೋರಂಗಭೂಮಿಯಲ್ಲಿಯ ಅದನ್ನು ಸೃಷ್ಟಿಸಿ ದೃಷ್ಟಿಸಬೇಕು. ದೃಶ್ಯ ರೂಪಿಯಾದರೂ ಅದು ಕಾವ್ಯಾತ್ಮಕವಾದುದು. ದೃಶ್ಯರೂಪಧಾರಣೆ ಮಾಡಿದ ಮಾತ್ರಕ್ಕೆ ಕಾವ್ಯವು ಟಿಕೀಟಿನ ಆಡಳಿತಕ್ಕೆ ಒಳಗಾಗಬೇಕೆಂಬ ದುರಾಗ್ರಹ ಹಳೆಯ ಪ್ರಯೋಜನದ ಒಂದು ನಿಷ್ಪ್ರಯೋಜಕವೂ ಅವಶೇಷಾತ್ಮಕವೂ

ಆಗಿರುವ ಮನಸ್ಥಿತಿ ಎಂದೇ ಹೇಳಬೇಕಾಗುತ್ತದೆ"[೧೦] ಎಂದು ಹೇಳುತ್ತಾರೆ. ಇಲ್ಲಿ ಶಂಭೂಕ ಪುರಾಣದಲ್ಲಿ ಸಾಮಾನ್ಯನಾದರೂ ಶಂಭೂಕನ ವಸ್ತುವನ್ನು ಕುವೆಂಪು ಅವರು ಸವಿಸ್ತಾರವಾಗಿ ವಿವರಿಸಿದ್ದಾರೆ. ಶಂಭೂಕನು ಶೂದ್ರನಾಗಿದ್ದಾನೆ. ಅವನು ತಪಸ್ಸು ಕುಳಿತುಕೊಂಡಿದ್ದಾನೆ. ಇದರಿಂದ ಪುರೋಹಿತಶಾಹಿಗೆ ಸಹಿಸಿಕೊಳ್ಳಲಾರದ ಮನಸ್ಥಿತಿಯಿದೆ. ಅದಕ್ಕಾಗಿ ಶೂದ್ರನಾದ ಶಂಭೂಕ ತಪಸ್ಸಿಗೆ ಕುಳಿತುಕೊಂಡಿದ್ದರಿಂದ ಇವನ ಮೇಲೆ ಅಪವಾದ ಹೊರಿಸಲಾಗುತ್ತದೆ. ಬ್ರಾಹ್ಮಣ ಮಗನು ಸತ್ತನೆಂದು ಕೊಲೆ ಆರೋಪವನ್ನು ಅವನ ಮೇಲೆ ಮಾಡಲಾಗಿದೆ. ಇದರಿಂದ ರಾಮನು ಶಂಭೂಕನ ಹುಡುಕುತ್ತಾ ಎಲ್ಲಾ ದಿಕ್ಕು ದೆಸೆಗಳನ್ನು ಹುಡುಕಿ ದಕ್ಷಿಣಕ್ಕೆ ಬರುತ್ತಾನೆ. 'ಶಂಭೂಕನನ್ನು ಕಂಡು ನೀನು ಯಾವ ಜಾತಿಯಲ್ಲಿ ಹುಟ್ಟಿದವನು?' ಎಂದು ಕೇಳಿದಾಗ ಶಂಭೂಕ ನಾನು ಶೂದ್ರನೆಂದು ಹೇಳುತ್ತಾನೆ. ರಾಮನು ಯಾವುದನ್ನೂ ಯೋಚಿಸದೆ ಶಂಭೂಕನ ರುಂಡವನ್ನು ಕಡಿದುಹಾಕುತ್ತಾನೆ. ಇದರಿಂದ ಪುರೋಹಿತಶಾಹಿ, ವೈದಿಕಶಾಹಿ ಮನಸ್ಥಿತಿಯ ಚಿಂತನೆಗಳಿಂದ ಶಂಭೂಕನನ್ನು ಕೊಂದ ರಾಮ ಪುರೋಹಿತಶಾಹಿಗೆ ದೊಡ್ಡ ವ್ಯಕ್ತಿಯಾಗಿ ಕಾಣುತ್ತಾನೆ. ಆದರೆ ಪ್ರಗತಿಪರ ಚಿಂತನೆಯಲ್ಲಿ ರಾಮ ದೊಡ್ಡ ಆರೋಪಿಯಾಗುತ್ತಾನೆ. ಇದರ ಹಿನ್ನೆಲೆಯಿಂದ ಪುರೋಹಿತಶಾಹಿ ನೆಲೆಗಳು ರಾಮನ ಮೇಲೆ ಆರೋಪ ಬರದಂತೆ ನೋಡಿಕೊಳ್ಳಲಾಗಿದೆ. ಅದು ಹೇಗೆಂದರೆ "ಶಂಭೂಕನ ಮೃತಶರೀರದಿಂದ ಒಬ್ಬ ಗಂಧರ್ವನು ಮೈದೂರಿ ರಾಮನಿಗೆ ತನ್ನ ಕೃತಜ್ಞತೆಯನ್ನು ನಿವೇದಿಸಿ ತಾನೊಂದು ಶಾಪದಿಂದ ಶೂದ್ರನಾಗಿ ಹುಟ್ಟಿ ತಪಸ್ಸು ಮಾಡುತ್ತಿದ್ದುದಾಗಿಯೂ, ರಾಮನ ಖಡ್ಗದ ಹತಿಯಿಂದಲೇ ಶಾಪ ವಿಮೋಚನೆಯಾದುದಾಗಿ ತಿಳಿಸಿ ಮರಣ ಸಂಭವಿಸಿದರೂ ಅದು ಶ್ರೇಯಸ್ಕರ ಎಂಬ ಮಹಾಕಾವ್ಯವನ್ನು ಹೇಳುತ್ತಾನೆ"[೧೧] ಶೂದ್ರ ತಪಸ್ವಿಯ ಮುನ್ನುಡಿಯಲ್ಲಿ ಕುವೆಂಪು ಅವರು ಹೇಳುತ್ತಾರೆ. ರಾಮನನ್ನು ಉನ್ನತ ಶ್ರೇಯಸ್ಕರ ಎಂದು ಹೇಳಲಾಗುತ್ತಿದೆ. ಹಾಗಾದರೆ ಆ ಶಾಪದಿಂದ ಗಂಧರ್ವರಿಗೆ ಶೂದ್ರರ ಶರೀರವೇ ಬೇಕಾಗಿತ್ತೆ? ಬ್ರಾಹ್ಮಣ ಅಥವಾ ಬೇರೆ ಸಮುದಾಯದ ಶರೀರ ಇರಲಿಲ್ಲವೇ? ಶಂಭೂಕ ದಕ್ಷಿಣದಲ್ಲಿದ್ದಾನೆ ಎನ್ನುವುದಾದರೂ ಹೇಗೆ? ಇದರಿಂದ ಪುರೋಹಿತಶಾಹಿ ಚಿಂತನೆ ಹೇಗೆಂದರೆ ಶೂದ್ರರು ಋಷಿಮುನಿಗಳಾಗಬಾರದು, ತಪಸ್ಸಿಗೆ ತೊಡಗಬಾರದು ಅವರು ಸೇವೆಗಳಿಗೆ ಮಾತ್ರ ತೊಡಗಬೇಕು ಎಂಬ ನಿಲುವಾಗಿದೆ. ಒಂದು ವೇಳೆ ಶೂದ್ರರು ತಪಸ್ಸು ಎಂಬಂತಹದ್ದರಲ್ಲಿ ತೊಡಗಿದರೆ ಶಂಭೂಕನಿಗೆ ಆದಂತಹ ಶಿಕ್ಷೆ ರಾಮನಂತಹವರ ಮೂಲಕ ನಡೆಯುತ್ತಿದೆ ಎಂಬ ಸಂದೇಶ ಇಂತಹ ಮಹಾಕಾವ್ಯಗಳ ಮೂಲಕ ನಡೆದಿರಬಹುದು. ಹಾಗೆಯೇ ರಾಮನ ದೃಷ್ಟಿಯಲ್ಲಿ ದಕ್ಷಿಣ ದಿಕ್ಕಿನಲ್ಲಿ ಶಂಭೂಕನಿದ್ದಾನೆ ಎಂದರೆ ಅಲ್ಲಿ ದಕ್ಷಿಣ ಭಾರತದಲ್ಲಿ ದ್ರಾವಿಡ ಆದಿವಾಸಿಗಳಿದ್ದಾರೆ. ಅಂದರೆ ಅತಿ ಹೆಚ್ಚಾಗಿ ಶೂದ್ರ, ದಲಿತ, ಬುಡಕಟ್ಟು ವರ್ಗದವರು ಇರುವುದರಿಂದ ಪುರೋಹಿತಶಾಹಿ ಚಿಂತನೆ ಹೇಗೆ ಎನ್ನುವುದನ್ನು ನಾವು ಸೂಕ್ಷ್ಮವಾಗಿ ಗ್ರಹಿಸಬೇಕಾಗಿದೆ. ಶೂದ್ರರು ಶೂದ್ರರಾಗೇ ಇರಬೇಕು, ಆಗ ಉನ್ನತ ವರ್ಗಗಳಿಗೆ ಶ್ರೇಯಸ್ಕರವಾದುದು ಮತ್ತು ಅಸ್ತಿತ್ವವಿರುವುದು. ಒಂದು ವೇಳೆ ಶೂದ್ರರು ಋಷಿಮುನಿಗಳಾದರೆ, ಬ್ರಾಹ್ಮಣತ್ವ ಹೊಂದಿದರೆ ಪುರೋಹಿತಶಾಹಿಗೆ ಬೆಲೆಯೇ ಇಲ್ಲ ಎಂಬುದು ಮೂಲಭೂತವಾದಿಗಳ ಗ್ರಹಿಕೆಯಾಗಿದೆ.

ಕುವೆಂಪು ಅವರು 'ಶೂದ್ರತಪಸ್ವಿ'ಯ ಮುನ್ನುಡಿಯಲ್ಲಿ ಹೇಳುವ ಹಾಗೆ "ಅಲ್ಪವೇದಿಕೆಯ ಮೇಲೆ ಕೃತಕ ಅಭಿನಯದಿಂದ ಪ್ರದರ್ಶಿಸುವುದು ಅಸಾಧ್ಯ"[೨] ಎನ್ನುವ ಮಾತು ಪುರೋಹಿತಶಾಹಿ ಹುಟ್ಟಿಸಿದ ಕೆಲವು ವಿಚಾರಗಳನ್ನು ಅಭಿನಯದ ಮೂಲಕ ಹೇಳಲು ಆಗದು. ಅಲ್ಲಿ ಮನರಂಜನೆ ದೃಷ್ಟಿಯಿಂದ ಮಾಧ್ಯಮವಿದೆ. ಹಾಗಾಗಿ ಕಾವ್ಯಾತ್ಮಕವಾಗಿ ಓದುಗರ ಮುಂದೆ ಬರವಣಿಗೆಯ ರೂಪವಾಗಿ ಅಂತರಂಗಕ್ಕೆ ಮುಟ್ಟಿಸುವಂತೆ ಮಾಡಬೇಕಾಗಿದೆ. ಏಕೆಂದರೆ ಮೂಲ ಮಹಾಕಾವ್ಯದ ಘಟನೆಗಳನ್ನು ಸಮಾಜಕ್ಕೆ ಒಳ್ಳೆಯ ವಿಷಯ, ಚಿಂತನೆಯ ವಸ್ತುವನ್ನು ಕಾವ್ಯದಲ್ಲಿ ನೀಡಿದ್ದಾರೆ. ಆದ್ದರಿಂದ ಸಮುದಾಯಕ್ಕೂ ಮತ್ತು ಎಲ್ಲರಿಗೂ ಉಪಯುಕ್ತವಾದುದಾಗಿದೆ. ಆದರೆ ಪುರೋಹಿತಶಾಹಿ ವೈದಿಕಶಾಹಿಯ ಹುನ್ನಾರದಿಂದ ಮಹಾಕಾವ್ಯಗಳನ್ನು ತಿರುಚುವ ಕ್ರಿಯೆ ಕಾಲ ಕಾಲಕ್ಕೆ ನಡೆದಿರಬಹುದು. ಉದಾಹರಣೆಗಾಗಿ ಕೂಟಶಾಸನಗಳನ್ನು ಗಮನಿಸಬಹುದು. ಹಾಗೆಯೇ ಧಾರ್ಮಿಕವಾಗಿ ಧರ್ಮಗ್ರಂಥಗಳು ಕೂಡ ಒಳ್ಳೆಯ ಸಾಮಾಜಿಕ ಸೌಹಾರ್ದತೆಯ ಸಂದೇಶ ನೀಡಿವೆ. ಆದರೆ ಆಯಾ ಧರ್ಮದವರು ವೈದಿಕಶಾಹಿಯ ನೆಲೆಯಿಂದ ಧರ್ಮಗಳ ಮಧ್ಯೆ ಶ್ರೇಷ್ಠತೆಗೋಸ್ಕರ ಜನರಲ್ಲಿ ವೈರುಧ್ಯವನ್ನು ತಂದಿಟ್ಟಿವೆಯೆಂದು ನಾವು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ.

ಇದರಿಂದ ಪಾಶ್ಚಿಮಾತ್ಯರು ಹಳಗನ್ನಡ ಹಸ್ತಪ್ರತಿಗಳು ಸಂಪಾದನೆ ಮಾಡಿದರು. ಅದನ್ನು ದೇಶಿ ವಿದ್ವಾಂಸರು ಮತ್ತೆ ಮತ್ತೆ ಸಂಸ್ಕರಿಸಿದರು. ಅದು ಸಾರಾಂಶಪ್ರಧಾನವಾಗಿ, ಮಾಹಿತಿ ಪ್ರಧಾನವಾಗಿ ಜನರಲ್ಲಿ ಉಳಿದುಕೊಂಡಿವೆ. ಆದರೆ ನವೋದಯ ಕಾಲಕ್ಕೆ ಪುರೋಹಿತಶಾಹಿಯ ಚಿಂತನೆಯನ್ನು ಎಳೆ ಎಳೆಯಾಗಿ ಬಿಡಿಸಿ ವಿಶ್ಲೇಷಿಸಿದ್ದನ್ನು ಗಮನಿಸಬಹುದು. ಕುವೆಂಪು ಅವರ 'ಬೆರಳ್ಗೆ ಕೊರಳ್', 'ಸ್ಮಶಾನ ಕುರುಕ್ಷೇತ್ರಂ', 'ಶೂದ್ರ ತಪಸ್ವಿ' ಇತರರು ಬರೆದ ನಾಟಕಗಳು ಬರವಣಿಗೆಗಳನ್ನು ಗಮನಿಸುತ್ತೇವೆ. ಇವುಗಳಲ್ಲಿ ಪುರಾಣ ವಸ್ತುವಾದರೂ ಸಮಕಾಲೀನ ಚಿಂತನೆಗೊಳಗಾಗಿವೆ. ಇಂತಹ ಕೃತಿಗಳನ್ನು ಓದುಗರು ಯಾವುದೋ ಪ್ರಚೋದಿತ ಹೇಳಿಕೆಯಿಂದ ಅಥವಾ ಪೂರ್ವಾಗ್ರಹಗಳಿಂದ ಓದಬಾರದು. ಹೃದಯಸ್ಪರ್ಶಿಯಿಂದ ಸಾಮಾಜಿಕ ಸಂವೇದನೆಯಿಂದ ಓದಬೇಕಾಗಿದೆ. ಜೊಳ್ಳನ್ನು ತೂರಿ ಕಾಳನ್ನು ಚೀಲದಲ್ಲಿ ತುಂಬುವ ರೈತರ ಶ್ರಮದ ಪರಿಕಲ್ಪನೆಯನ್ನು ಕಾವ್ಯಗಳ ಮೂಲಕ ಅರ್ಥ ಮಾಡಿಕೊಳ್ಳಬೇಕಾಗಿದೆ.

ಪಂಪ ಏಕೆ ಮತ್ತೆ ಮತ್ತೆ ಪ್ರಸ್ತುತವಾಗುತ್ತಾನೆಂದರೆ ವ್ಯಾಸ ಮುನಿಯ 'ವ್ಯಾಸಭಾರತ'ವನ್ನು ಪರಿಶೀಲನೆಗೆ ಒಳಪಡಿಸಿ ತನ್ನ ಸಮಕಾಲೀನಕ್ಕೆ ಪಂಪ ಒಳಪಡಿಸಿದ್ದಾನೆ. ಇದರಿಂದ ಕಾಲಾಂತರ ದಿನಗಳಲ್ಲಿ ಮನುಷ್ಯನ ವೈರುಧ್ಯಗಳನ್ನು ಹಲವು ನೆಲೆಗಳಾಗಿ ಹಿಡಿಯಬಹುದು. ಪಂಪ ಹೇಳುವ 'ಮನುಷ್ಯಜಾತಿ ತಾನೊಂದೆ ವಲಂ' ಎಂದು ಕರ್ಣನ ಮೂಲಕ 'ಛಲಂ ಕುಲಂ ಗುಣಂ ಕುಲಂ' ಎಂದು ಹೇಳಿಸಿದ. ಏಕೆಂದರೆ ತನ್ನ ಆಸ್ಥಾನದಲ್ಲಿ ನಡೆಯುವ ಜಾತಿಕೃತ್ಯಗಳು ಬ್ರಾಹ್ಮಣರಿಗೂ ಮತ್ತು ಜೈನರಿಗೂ ನಡುವೆ ಮುಸುಕಿನ ಗುದ್ದಾಟಗಳು ನಡೆದಿವೆ. ಅದಕ್ಕಾಗಿ ಪಂಪ ತನ್ನ ರಾಜ ಅರಿಕೇಸರಿಯನ್ನು ಅರ್ಜುನನ ಜೊತೆಗೆ ಸಮೀಕರಿಸಿ 'ವಿಕ್ರಮಾರ್ಜುನ ವಿಜಯ' ಕೃತಿಯನ್ನು ಬರೆದಿದ್ದಾನೆ. ಇಲ್ಲಿ ಪಂಪನ ಕಾವ್ಯದಲ್ಲಿ ವೈರುಧ್ಯಗಳು ಕಂಡುಬರುವುದಿಲ್ಲ. ಹಾಗೆಯೇ ವಿಮರ್ಶಕರು

ಕೂಡ ತಕರಾರು ಎತ್ತುವುದಿಲ್ಲ. ಆದರೆ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಇದು ನಡೆದ ಘಟನೆ ಪಂಪನ ಕಾಲಘಟ್ಟದಲ್ಲಾಗಿತ್ತು. ಇಂದು ನಾವು ಪಂಪನನ್ನು ಹಲವು ನೆಲೆಗಳಲ್ಲಿ ಓದುವುದು ಮತ್ತು ಗ್ರಹಿಸುವುದು ಸಾಹಿತ್ಯಾಭ್ಯಾಸಿಗಳಿಗೆ ಬಿಟ್ಟ ವಿಚಾರವಾಗಿದೆ. ಇದೇ ರೀತಿಯಾಗಿ ರನ್ನನು ಕೂಡ ಗದಾಯುದ್ಧದಲ್ಲಿ ಪಂಪನ ಕಾವ್ಯಗಳನ್ನು ಸಿಂಹಾವಲೋಕನ ಕ್ರಮದಲ್ಲಿ ಸಮರ್ಥಿಸಿಕೊಂಡಿದ್ದಾನೆ. ಲಕ್ಷ್ಮೀಶ, ಕುಮಾರವ್ಯಾಸ ಪಂಪನನ್ನು ಸಮರ್ಥಿಸಿಕೊಂಡಿರುವುದು ಕಂಡುಬರುವುದಿಲ್ಲ. ಕುಮಾರವ್ಯಾಸನು ನೇರವಾಗಿ ವ್ಯಾಸಮುನಿಯ ಮತ್ತು ಮಹಾಭಾರತದ ಕತೆಯನ್ನು ಆಧರಿಸಿ ಕೃಷ್ಣನನ್ನು ಸಮರ್ಥಿಸಿಕೊಂಡಿದ್ದಾನೆ. ಇದಕ್ಕೆ ಕುವೆಂಪು ಅವರು 'ಕರ್ಣಾಟ ಭಾರತ ಕಥಾಮಂಜರಿ'ಯ ಸಂಪಾದಕರಾಗಿ ಮುನ್ನುಡಿ ಬರೆಯುತ್ತಾ "ವೈಷ್ಣವ ಭಕ್ತಿ ರೂಪದಲ್ಲಿ ಪುನರುತ್ಥಾನವಾದ ಆ ರಸಸ್ಫೂರ್ತಿ ಕುಮಾರವ್ಯಾಸ ಗದುಗಿನ ನಾರಾಯಣಪ್ಪನ ಮಹಾಕೃತಿಯಲ್ಲಿ ತನ್ನ ಉಯಚ್ಚುಂಬಿಯಾದ ಬೃಹತ್ ಗೋಪುರವನ್ನು ಕಂಡಿರಿಸಿಕೊಂಡಿದೆ."[೧೩] ವೈಷ್ಣವ ದೇವರ ಆರಾಧಕರಾಗಿ ಅದರ ಭಕ್ತಿಯನ್ನು ಪ್ರಚುರಪಡಿಸಿದ್ದಲ್ಲದೇ ಸಮರ್ಥಿಸಿಕೊಂಡಿದ್ದಾನೆ. ಅದು ರಸಯುಕ್ತವಾದ ಭಕ್ತಿಯಿಂದ ಎಂದು ಹೇಳಬಹುದು. ಆದರೆ ನಾರಾಯಣಪ್ಪನ ಜಾತಿ, ಕಾಲ ಯಾವುದು ಎಂಬುದರ ಬಗ್ಗೆ ನಿಖರವಾದ ಮಾಹಿತಿ ಇಲ್ಲ. ಆದರೆ ಪುರೋಹಿತಶಾಹಿ ವರ್ಗ ನಾರಾಯಣಪ್ಪನನ್ನು ಮೇಲ್ವರ್ಗಕ್ಕೆ ಕಟ್ಟಿಹಾಕಿವೆ ಎಂದು ಅನಿಸುತ್ತದೆ. "ಆತ ದೊಡ್ಡ ಕವಿ ಮಹತ್ವದಿಂದಲ್ಲ, ಕವಿತ್ವದಿಂದ ನಮಗೆ ನಮ್ಮ ಈ ದಿವ್ಯ ಕವಿ ನಮ್ಮವನು, ಕನ್ನಡಿಗನು ಕನ್ನಡಿಗರ ಕುಲವನ್ನು ಒಂದಾಗಿ ಬೆಸೆಯುವವನು"[೧೪] ಎಂದು ಕುವೆಂಪು ಅವರು ಈ ಕೃತಿಯ ಮುನ್ನುಡಿಯಲ್ಲಿ ಹೇಳುತ್ತಾರೆ. ಈಗಿರುವಾಗ ಆತ ರೂಪಕಗಳ ಮೂಲಕ ಸಮಾಜವನ್ನು ತಿದ್ದಬಲ್ಲವನಾಗಿದ್ದವನು, ಅವನಿಗೆ ಮನೆ ಮತ ಏನು ಇರಲಿಲ್ಲ, ಆದರೆ ವೈಷ್ಣವ ದೇವರ ವೀರನಾರಾಯಣನ ಪರಮಭಕ್ತ. ತಾನು ಹಾಡಿದನೆಂದರೆ ಜನರು ಕಿವಿಗೊಟ್ಟು ಕೇಳಬೇಕು. ಗಮಕಶೈಲಿ ಶಿರೋಮಣಿಯಾಗಿದ್ದವನು. ಜಾತಿ, ಮತ, ಧರ್ಮ ಎನ್ನದೇ ತನ್ನ ಭಕ್ತಿಯ ಮೂಲಕ ವಿಶ್ವವನ್ನು ಕಂಡವನಾಗಿದ್ದನು. ಆದರೆ ಪುರೋಹಿತಶಾಹಿಯ ಚಿಂತನೆಗಳು ಬೇರೆ ರೀತಿಯಾಗಿಯೇ ಗುರುತಿಸಿವೆ ಎಂದು ಹೇಳಬಹುದು. ಅದು ವಸಾಹತುಶಾಹಿ ಕಾಲಘಟ್ಟದ ಸಂದರ್ಭದಲ್ಲಿ ಇನ್ನು ಬೇರೆ ಬೇರೆ ನೆಲೆಯಾಗಿ ರೂಪಿಸಿಕೊಂಡಿರಬಹುದು. ಆದರೆ ಕುವೆಂಪು ಅವರು ಕರ್ಣಾಟ ಭಾರತ ಕಥಾಮಂಜರಿ ಕೃತಿಯಾಗಿ ಸಂಪಾದನೆ ಮಾಡಿ ಅದಕ್ಕೆ ದೀರ್ಘ ಮುನ್ನುಡಿ ಬರೆದು ಕುಮಾರವ್ಯಾಸ ಭಾರತ ಕೃತಿಯನ್ನು ಪಂಪ, ಕುಮಾರವ್ಯಾಸರನ್ನು ಸಮರ್ಥಿಸಿಕೊಳ್ಳುತ್ತಾ ಪಂಪ, ಕುಮಾರವ್ಯಾಸ ಕೃತಿಗಳನ್ನು ನೋಡುವ ದೃಷ್ಟಿಕೋನವನ್ನು ಜನರಲ್ಲಿ ಮೂಡಿಸಿದ್ದಾರೆ. ಹಾಗಾಗಿ ನಾವು ಪಂಪ, ರನ್ನ, ಜನ್ನ, ಕುಮಾರವ್ಯಾಸರ ಕೃತಿಗಳನ್ನು ಪರಿಶೀಲಿಸಿ ಪ್ರಶ್ನೆ ಮಾಡಿಕೊಳ್ಳುತ್ತಾ ಅವರ ಕೃತಿಗಳು ನಮ್ಮ ಸಮಕಾಲೀನ ಸಂದರ್ಭಕ್ಕೆ ಹೇಗೆ ವ್ಯಕ್ತಗೊಂಡಿವೆ ಹಾಗೂ ಅದರ ಚಿಂತನೆ, ತತ್ವ, ನ್ಯೂನತೆಗಳನ್ನು ಗ್ರಹಿಸಬೇಕಾಗಿದೆ. ಆದರೆ ಸಾಹಿತ್ಯದ ವ್ಯಕ್ತಿಯನ್ನು ಒಂದು ಸಮುದಾಯಕ್ಕೆ ಮೀಸಲಿಡಲಾಗುವ ಪ್ರಕ್ರಿಯೆ ನಡೆಯುತ್ತಿವೆ. ಇಲ್ಲಿ ವ್ಯಕ್ತಿ, ಕೃತಿಕಾರರು ಮುಖ್ಯವಲ್ಲ, ಕೃತಿಕಾರನ ಕೃತಿಯ ತತ್ವ ಮುಖ್ಯವಾಗುತ್ತದೆ.

ಜನಪದ ಸಾಹಿತ್ಯ ಮತ್ತು ಸಾಮಾನ್ಯ ಜನರ ಸಾಹಿತ್ಯವನ್ನು ಗಮನಿಸಿದರೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದ ರಂ.ಶ್ರೀ.ಮುಗಳಿಯವರ ಪ್ರಕಾರ ಸಾಮಾನ್ಯರ ಸಾಹಿತ್ಯವನ್ನು ಗೌಣವಾಗಿಸಿದ್ದಾರೆ. ಆದರೆ ಜನರ ಮಧ್ಯೆ ಹುಟ್ಟಿದ ಜನಪದ ಸಾಹಿತ್ಯ ಪ್ರಸ್ತುತದವರೆಗೂ ಒಂದಲ್ಲ ಒಂದು ಸ್ವರೂಪದಲ್ಲಿ ದಾಟಿ ಹಾಡು, ಜನಪದ ಸೊಗಡು, ಭಾಷೆ ಒಂದು ಚಿಂತನೆಯಾಗಿ ಮಾರ್ಪಾಡಾಗಿದೆ. 'ಗರತಿಯ ಹಾಡು' ಕೃತಿಗೆ ಬಿ.ಎಂ.ಶ್ರೀ.ಯವರು ಮುನ್ನುಡಿ ಬರೆಯುತ್ತಾ "ಜನವಾಣಿ ಬೇರು ಕವಿವಾಣಿ ಹೂ"[೧೫] ಎಂದಿದ್ದಾರೆ. ಇಲ್ಲಿ ಭಾಷೆಯಿದ್ದು, ಅರಿವು ಇರದೇ ತಮ್ಮ ಅನುಕೂಲಕ್ಕೆ ಸಂತೋಷಕ್ಕಾಗಿ ತಮ್ಮ ಸಂವೇದನೆಗಳಿಂದ ಯಾವುದೇ ಪ್ರಭಾವವಿರದೇ ಕಾಡುಜನರು ಕೃಷಿಕರು, ಹೆಂಗಸರು, ಮಕ್ಕಳು ಇವರಿಗೆ ಶಾಸ್ತ್ರಕಾವ್ಯಗಳು ಗೊತ್ತಿಲ್ಲದೇ ಇರುವ ಜನಸಾಮಾನ್ಯರಲ್ಲಿ ಎಲ್ಲರೂ ಹಾಡುವ ಜನವಾಣಿ ಬೇರು ಎಲ್ಲರ ಮನದಲ್ಲಿ ಹರ್ಷವನ್ನು ಹುಟ್ಟಿಸಿ ಸಮಯ ಸಿಕ್ಕಾಗ ತಮ್ಮ ಅರಿವಿನ ಪ್ರಜ್ಞೆಯಲ್ಲಿ ಹಾಡುವುದು ಕವಿವಾಣಿ ಹೂವಾಗಿದೆ.

ಆದರೆ ಗರತಿಯ ಹಾಡುಗಳನ್ನು ಪಂಡಿತವರ್ಗಗಳು ಹೇಗೆ ಹ್ಯಾಕ್ ಮಾಡುತ್ತವೆಂದರೆ ಗರತಿಯ ಹಾಡುಗಳು ಸಂಸ್ಕೃತಜನ್ಯವಾದ ದೇವತಾವಾಣಿಯಾಗಿವೆ. ಜೊತೆಗೆ ಪಂಡಿತರ ಮೂಲವಾಗಿವೆ ಎನ್ನುವುದು ಪುರೋಹಿತಶಾಹಿಯ ಚಿಂತನೆಯಾಗಿದೆ. "ಶಾಸ್ತ್ರಬಲದಿಂದಲೂ, ಸಂಸ್ಕೃತ ಪ್ರತಿಭೆಯಿಂದಲೂ ರಚಿತವಾದ ಪ್ರೌಢಸಾಹಿತ್ಯವೇ ಸಾಹಿತ್ಯವೆಂದು, ಹಳ್ಳಿಗಳಲ್ಲಿಯೂ, ಬೀದಿಗಳಲ್ಲಿಯೂ, ಮನೆಗಳಲ್ಲಿಯೂ ಜನಸಾಮಾನ್ಯರೂ ಹಾಡಿಕೊಳ್ಳುವ ಹಾಡುಗಳು ಸಾಹಿತ್ಯವಲ್ಲವೆಂದು ಇಂತಹ ಪಂಡಿತರ ಭಾವನೆ. ಆ ಬಳಿಕ ಸರಸ್ವತಿ ಪ್ರಸಾದವಿಲ್ಲದ ಬರಿಯ ದುರಾಸೆಯ ದುಷ್ಕವಿಗಳಲ್ಲಿ ತಲೆದೋರುವುದು ಅದರ ಆಭಾಸ. ಕಟ್ಟಕಡೆಗೆ ಕಾಣಿಸಿಕೊಂಡು ಜನಗಳು ಹಾಡಿನಲಿಯುತ್ತಿರುವ ಬಡ ಹಾಡಂತು ಕವಿತ್ವವೇ ಅಲ್ಲ"[೧೬] ಎಂದು ಬಿ.ಎಂ.ಶ್ರೀ.ಯವರು ಹೇಳುತ್ತಾರೆ. ಆದರೆ 'ಬಿ.ಎಂ.ಶ್ರೀ.ಯವರು ಇದನ್ನು ಒಪ್ಪುವುದಿಲ್ಲ' ಗರತಿಯ ಹಾಡುಗಳನ್ನು ಪುರೋಹಿತಶಾಹಿಗಳು ಸಹಿಸಿಕೊಳ್ಳದಿದ್ದಕ್ಕಾಗಿ ಈ ತರವಾಗಿ ಆರೋಪ ಮಾಡಲಾಗಿದೆ. ಶ್ರೀಯವರು ವಿರೋಧವಾಗಿ ಹೇಳಿದ್ದಾರೆ. 'ಜನವಾಣಿ ಬೇರು ಕವಿವಾಣಿ ಹೂ' ಎಂದು ಹೇಳಿದ್ದು, ವೈದಿಕಶಾಹಿಗೆ ಒಂದು ರೀತಿಯಲ್ಲಿ ಟಾಂಗ್ ನೀಡಿದ್ದಾರೆ. ನಾವು ಅರ್ಥ ಮಾಡಿಕೊಳ್ಳಬೇಕಾದುದು ಜನಪದದಿಂದ ಬಂದ ಹಿನ್ನೆಲೆಯನ್ನು ಪರಿಶೀಲಿಸಿದರೆ ಮೊದಲು ಹುಟ್ಟಿದ್ದು ಗರತಿಯ ಹಾಡುಗಳ ಪ್ರಭೇದಗಳಾಗಿವೆ. ಅದು ಕಾಡುಜನರು, ಕೃಷಿಕರು, ಹಳ್ಳಿಗರು ಯಾವುದನ್ನು ಪ್ರೇರಣೆ, ಪ್ರಭಾವವಿಲ್ಲದೇ ಹಿಂದಿನಿಂದ ಬಂದ ಹಾಡನ್ನು ತಲೆಮಾರಿನಿಂದ ತಲೆಮಾರಿಗೆ ಹೇಳುವುದು, ಜೊತೆಗೆ ಹಳೆಯ ಹಾಡುಗಳ ಜೊತೆಗೆ ತಮ್ಮ ಸಮಕಾಲೀನರ ಜೊತೆಗೆ ಮಿಲನವಾಗಿ ಹೊಸ ಸಂವೇದನೆಯಾಗಿ ಹೊಸಹಾಡನ್ನು ಕಟ್ಟಬಲ್ಲವರಾಗಿದ್ದರು. ಅವರಿಗೆ ಅಕ್ಷರಜ್ಞಾನವಿಲ್ಲದಿದ್ದರೂ ಛಂದಸ್ಸು ಅವರಲ್ಲಿ ಸಹಜವಾಗಿದೆ. ಬೌದ್ಧಿಕ ಲೋಕದಲ್ಲಿ ಕವಿತ್ವವೂ ಶಾಸ್ತ್ರವೂ ಇಲ್ಲದ ಸ್ಥಿತಿಯಲ್ಲಿ ಹಳ್ಳಿ ಹಳ್ಳಿಗಳಲ್ಲಿ ಗರತಿಯರ ಹಾಡುಗಳು ಮಿಂಚುತ್ತಿದ್ದವು. ಇವುಗಳ ಜೊತೆಗೆ ಇನ್ನಿತರ ಹಾಡುಗಳ ಪ್ರಭೇದಗಳು ಇವೆ. ಅವು ಹಾಡುಗಬ್ಬವಾಗಿ ಪರಿವರ್ತನೆಗೊಂಡಿವೆ.

ಹಬ್ಬ ಹುಣ್ಣಿಮೆ, ಸುಖ ದುಃಖಗಳಲ್ಲಿಯೂ ತಮ್ಮ ಸಂಭ್ರಮಗಳಲ್ಲಿ ರಸಚಿತ್ತವಾಗಿ ಕುಣಿಯುವುದರ ಮೂಲಕ ವ್ಯಕ್ತಪಡಿಸುತ್ತಿದ್ದರು.

"ತೋಟಕ್ಕ ಹೋದಣ್ಣ ಊಟಕ್ಕ ಬರಲಿಲ್ಲ
ತೋಟದ ಹೂವ ತಲೆತುಂಬಾ! ಇಟಗೊಂಡು
ಊಟದ್ದಂಬಲ ಮರೆತಾನ![೧೭]

ಎಂದು ಖುಷಿಯಾಗಿ ಹಾಡುತ್ತಿದ್ದರು. ದ.ರಾ.ಬೇಂದ್ರೆ ಅವರಿಗೆ ಜನಪದ ಹಾಡುಗಳೇ ಪ್ರೇರಣೆಯಾಗಿವೆ. ಏಕೆಂದರೆ ಅವರ ಸೃಜನಶೀಲ ಸಾಹಿತ್ಯ ಜನಪದ ಅಂಶಗಳ ಪ್ರಭಾವದಿಂದ ರೂಪಗೊಂಡಿದೆ. ಗರತಿಯ ಹಾಡು ಕೃತಿಯ ಮುನ್ನುಡಿಯಲ್ಲಿ ಬೇಂದ್ರೆಯವರು "ಜೀವನವು ಅರ್ಥಸೃಷ್ಟಿ ಸಾಹಿತ್ಯವು ಶಬ್ದಸೃಷ್ಟಿ"[೧೮] ಎಂದು ಹೇಳುತ್ತಾರೆ. ಗರತಿಯ ಹಾಡು ಹುಟ್ಟುವುದು ಜೀವನದ ಅನುಭವದಿಂದ. ಕೃಷಿಕರು, ಬುಡಕಟ್ಟು ಜನಗಳು ತಮ್ಮ ಆರಾಧ್ಯ ನೆಲ ಸಂಸ್ಕೃತಿಯ ದೇವರ ಮೂಲವನ್ನು ಆದರ್ಶವಾಗಿಟ್ಟುಕೊಂಡು ಜೀವನದ ಅರ್ಥವನ್ನು ಸೃಷ್ಟಿಸಿಕೊಂಡಿರುತ್ತಾರೆ. ಆ ಮೂಲಕ ತಮ್ಮ ಸಂಭ್ರಮಕ್ಕಾಗಿ ತಮ್ಮ ಹಟ್ಟಿಗಳಲ್ಲಿ, ಜಾತ್ರೆ, ಹಬ್ಬಗಳಲ್ಲಿ, ತಾವು ಬೆಳೆದ ರಾಶಿ ಮಾಡುವ ಸಂದರ್ಭದಲ್ಲಿ ತಮ್ಮ ಸೃಜನಶೀಲತೆಯ ಸಂವೇದನೆಯ ಮೂಲಕ ಹಾಡುತ್ತಾರೆ. ಇದಕ್ಕೆ ಓದುಗರು, ಸಾಹಿತ್ಯ ಅಭ್ಯಾಸಿಗಳು ಹಲವು ವ್ಯಾಖ್ಯಾನಳನ್ನು ನೀಡಿದ್ದಾರೆ.

ಬಿ.ಎಂ.ಶ್ರೀ. ಅವರು ಕೂಡ ಇದೇ ಕೃತಿಯ ಗರತಿಯ ಹಾಡು ಮುನ್ನುಡಿಯಲ್ಲಿ 'ಹಳ್ಳಿ ಹಾಡುಗಳು ಸಂಸ್ಕೃತಜನ್ಯ ಎಂದು ಪುರೋಹಿತಶಾಹಿಗಳು ಆರೋಪಿಸಿದ್ದಾರೆ' ಎಂದು ಹೇಳುತ್ತಾರೆ ಹಳ್ಳಿಯ ಬದುಕು, ಸಂಸ್ಕೃತಿ ಮೂಲದಿಂದ ಸಾಂಸ್ಕೃತಿಕ ಜೀವನ ಕ್ರಮವಿದೆ. ಹಾಗಾದರೆ ಹಳ್ಳಿಯ ಹಾಡು ಅವರು ಬದುಕುತ್ತಿರುವ ಸ್ವಂತಿಕೆಯಲ್ಲವೇ ಎಂಬ ಪ್ರಶ್ನೆ ಮೂಡುತ್ತದೆ. ಹಳ್ಳಿಯ ಹಾಡುಗಳು ತಮ್ಮದೇ ಆದ ಸಂವೇದನೆಯಿಂದ ಬಂದಿವೆ. ಆದರೆ ಪ್ರಸ್ತುತವಾಗಿ ಹಳ್ಳಿಯ ಹಾಡುಗಳಲ್ಲಿ ಜನಪದ ಸೊಗಡು ಕಡಿಮೆ ಆಗಿರಬಹುದು. ಇದು ವಸಾಹತುಶಾಹಿ, ಜಾಗತೀಕರಣದ ಪ್ರಭಾವವಾಗಿದೆ. ಯಾವುದೇ ರೀತಿಯಲ್ಲಿ ನಮ್ಮ ಮೂಲ ಸಂಸ್ಕೃತಿಯನ್ನು ಬಿಟ್ಟು ಕೊಡಬಾರದು ಎನ್ನುವುದು ಈ ಗರತಿಯ ಹಾಡು ಕೃತಿಯ ಮುನ್ನುಡಿಯ ಮೂಲ ಉದ್ದೇಶವಾಗಿದೆ.

**ಕನ್ನಡ ಸಾಹಿತ್ಯ ಮೀಮಾಂಸೆ ಕಟ್ಟುವಲ್ಲಿ ಮುನ್ನುಡಿಗಳು**

ಕನ್ನಡ ಸಾಹಿತ್ಯವನ್ನು ಪಾಶ್ಚಿಮಾತ್ಯರು ಸಂಶೋಧನೆ ಮಾಡಿದ್ದಾರೆ. ಜೊತೆಗೆ ದೇಶಿ ವಿದ್ವಾಂಸರು ಸಂಶೋಧನೆ ಮಾಡಿದ್ದಾರೆ. ಆದರೆ ಕನ್ನಡ ಸಾಹಿತ್ಯಕ್ಕೆ ಚರಿತ್ರೆಯಾಗಲೀ, ಕಾವ್ಯಮೀಮಾಂಸೆಯಾಗಲಿ ಗುರುತಿಸುವಲ್ಲಿ ಕಷ್ಟಸಾಧ್ಯವಾಗಿದೆ. ಏಕೆಂದರೆ ೧೯-೨೦ನೇ ಶತಮಾನದ ಸಂದರ್ಭದಲ್ಲಿ ವಸಾಹತುಶಾಹಿ ಹಿನ್ನೆಲೆಯಿಂದ ಕನ್ನಡ ಸಾಹಿತ್ಯದಂತಹ ಕ್ಷೇತ್ರಗಳಲ್ಲಿ ಪರಂಪರೆ, ಚರಿತ್ರೆ, ಮೀಮಾಂಸೆ ಕಟ್ಟುವುದಕ್ಕೆ ಹಲವು ನೆಲೆಯಲ್ಲಿ ಪಲ್ಲಟಗಳಾಗಿವೆ. ಹಾಗೂ ಅನ್ಯ ಸಾಹಿತ್ಯಕ್ಕೆ ಪ್ರಭಾವಕ್ಕೊಳಗಾಗಿವೆ. ಇವುಗಳ ಜೊತೆಗೆ ಮುನ್ನುಡಿಗಳು ಪ್ರಮುಖವಾಗಿವೆ. ಕನ್ನಡ ಸಾಹಿತ್ಯ

ಪರಂಪರೆಗೆ ಬಂದಾಗ ಬಿ.ಎಂ.ಶ್ರೀ. ಮತ್ತು ಸೇಡಿಯಾಪು ಕೃಷ್ಣಭಟ್ಟರು ಹಾಗೂ ಇನ್ನಿತರರು ಹಲವು ಭಿನ್ನ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಅದು ಕನ್ನಡ ಸಾಹಿತ್ಯ ಪರಂಪರೆ ಮೀಮಾಂಸೆ ಕಟ್ಟುವುದಕ್ಕೆ ಪಾಶ್ಚಾತ್ಯ, ದೇಸಿ, ಬಂಗಾಳಿ, ಮರಾಠಿ, ಜಾನಪದ, ವ್ಯಕ್ತಿಯ ಪ್ರತಿಭೆಗಳು ಹೀಗೆ ಹಲವು ನೆಲೆಗಳಲ್ಲಿ ಕನ್ನಡ ಸಾಹಿತ್ಯ ಪರಂಪರೆ ಅಥವಾ ಮೀಮಾಂಸೆ ಕಟ್ಟುವುದಕ್ಕೆ ಬಿ.ಎಂ.ಶ್ರೀ., ಸೇಡಿಯಾಪು ಕೃಷ್ಣಭಟ್ಟರು ಚಿಂತನೆಯಲ್ಲಿ ಮುಖ್ಯರಾಗುತ್ತಾರೆ. ಹೀಗೆಯೇ ಒಂದು ಪಾಶ್ಚಾತ್ಯ ಪ್ರಭಾವದ ಬರಹಗಳು ಒಂದು ಕಡೆ ಬಂದರೆ, ಇನ್ನೊಂದು ತರವಾಗಿ ಕನ್ನಡ ಸಾಹಿತ್ಯದ ಸಂಪ್ರದಾಯದ ಬರಹಗಳು ಬಂದಿವೆ ಹಾಗೂ ಜನಪದ ಬರಹಗಳು, ಮೌಖಿಕ ಸಾಹಿತ್ಯದ ಚಿಂತನೆಗಳಿವೆ. ಈ ನೆಲೆಯಿಂದ ಮೀಮಾಂಸೆ ಕಟ್ಟುವುದಕ್ಕೆ ದ್ವಂದ್ವಗಳಾಗಿ ಕಾಡಿರಬಹುದು. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯದ ಪರಂಪರೆಯಾತ್ಮಕ ಅಂಶಗಳಲ್ಲಿ ಕನ್ನಡ ಸಾಹಿತ್ಯ ಮೀಮಾಂಸೆ ಕಟ್ಟುವ ಕೆಲಸ ನಡೆಯುತ್ತಿದೆ.

ಕನ್ನಡ ಸಾಹಿತ್ಯದ ಮೂಲದಿಂದ ಮೀಮಾಂಸೆ ಕಟ್ಟಬೇಕು ಅಥವಾ ಪ್ರೇರಣೆ, ಪ್ರಭಾವವನ್ನು ಕನ್ನಡ ಸಾಹಿತ್ಯ ಮೀಮಾಂಸೆಯಂತಹ ಬರಹಗಳ ಮೂಲಕ ಗುರುತಿಸಬೇಕು ಎಂಬ ದ್ವಂದ್ವಗಳು ಕಾಡಿವೆ. ಈಗಾಗಲೇ ಸಂಸ್ಕೃತ ಮೀಮಾಂಸೆಯಿಂದ ತೀ.ನಂ.ಶ್ರೀ.ಯವರ ಭಾರತೀಯ ಕಾವ್ಯಮೀಮಾಂಸೆ ಕೃತಿಯ ಮೂಲಕ ಕನ್ನಡ ಸಾಹಿತ್ಯ ಮೀಮಾಂಸೆ ಗುರುತಿಸಿಕೊಳ್ಳಬೇಕು ಎಂಬ ಚರ್ಚೆಗಳು ನಡೆದಿವೆ. ಆದರೆ ಸಂಸ್ಕೃತಜನ್ಯವಾದಂತಹ ಕನ್ನಡ ಮೀಮಾಂಸೆಯನ್ನು ಈಗಾಗಲೇ ನಮ್ಮಲ್ಲಿ ಗ್ರಹಿಸಿಕೊಳ್ಳಲಾಗಿದೆ. ಕನ್ನಡ ಸಾಹಿತ್ಯ ಓದುಗರು, ಸಂಶೋಧನೆ ತೊಡಗಿರುವವರು, ವಿಮರ್ಶಾತ್ಮಕವಾದ ಚಿಂತನೆಯ ಬರವಣಿಗೆ ಮಾಡುವವರು, ತತ್ವ ಸಿದ್ಧಾಂತದಂತಹ ಮೀಮಾಂಸೆಯನ್ನು ತಿಳಿದಿರಬೇಕಾಗಿದೆ. ಕವಿರಾಜಮಾರ್ಗದಿಂದ ಪಂಪ, ರನ್ನ, ಕುಮಾರವ್ಯಾಸ, ಮುದ್ದಣ, ಬಿ.ಎಂ.ಶ್ರೀ., ಕುವೆಂಪು, ತೀ.ನಂ.ಶ್ರೀ., ಡಿ.ವಿ.ಜಿ., ಮಾಸ್ತಿ, ಬೇಂದ್ರೆ, ಶಿವರಾಮ ಕಾರಂತ, ತೇಜಸ್ವಿ, ಅನಂತಮೂರ್ತಿ, ಪಿ.ಲಂಕೇಶ್, ಚಂದ್ರಶೇಖರ ಕಂಬಾರ, ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಕೆ.ವಿ.ನಾರಾಯಣ ಮುಂತಾದವರ ತನಕ ಒಂದು ತತ್ವ ಸಿದ್ಧಾಂತದಂತಹ ಮಾದರಿಗಳು ಸಾಹಿತ್ಯದಲ್ಲಿ ರಚನೆಯಾಗಿದೆ. ಆದರೆ ಇತ್ತೀಚಿನ ಸಾಹಿತ್ಯ ರಚನೆಗಳಲ್ಲಿ ತತ್ವ ಸಿದ್ಧಾಂತಗಳು ಕಡಿಮೆ. ಏಕೆಂದರೆ ಬರಹಗಳು ಏನು ಹೇಳುತ್ತಿವೆ ಎಂಬುದು ಮುಖ್ಯ. ಅಂದಂದಿನ ಸಮಸ್ಯೆಗಳು ಸಾಹಿತ್ಯದಲ್ಲಿ ಎದುರಾಗುತ್ತಿವೆ. ಆದರೆ ಹಿಂದಿನ ಸಾಹಿತ್ಯದ ಮಾದರಿಗಳನ್ನು ಇಟ್ಟುಕೊಂಡು ಪ್ರಸ್ತುತ ಚಿಂತನೆಯಲ್ಲಿ ತೊಡಗಿರುವುದು, ಸಾಹಿತ್ಯದ ರಚನೋತ್ತರವಾದದ ಚಿಂತನೆ ಮುಖ್ಯವಾಗಿದೆ. ಹಾಗಾಗಿ ಮೀಮಾಂಸೆ ಕಟ್ಟುವುದಕ್ಕೆ ಎದುರಾಗಿರಬಹುದು. ಹಾಗೆಯೇ ಸಾಹಿತ್ಯ ಮಿಮಾಂಸೆ ಕಟ್ಟುವುದು ಹೇಗೆಂಬುದು ಪ್ರಶ್ನೆಯಾಗುತ್ತದೆ. ಕನ್ನಡ ಸಾಹಿತ್ಯದ ಮುನ್ನುಡಿಗಳ ಮೂಲಕ ಮೀಮಾಂಸೆ ಕಟ್ಟುವುದಕ್ಕೆ ಸಾಧ್ಯತೆಯಿದೆ. ಹೇಗೆಂದರೆ ಎಂಬತ್ತರ ದಶಕದ ಮುನ್ನುಡಿಗಳಿಗೆ ಅವರ ಹಿಂದಿನ ಹಿರಿಯ ತಲೆಮಾರಿನವರು ಅಥವಾ ತಮ್ಮ ಸಮಕಾಲೀನರ ಕೃತಿಗಳಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಆದ್ದರಿಂದ ಮೀಮಾಂಸೆಯ ಚಿಂತನೆಗಳೆಂದು ಕನ್ನಡ ಚಿಂತನೆಗಳಾಗಿ ಗುರುತಿಸಬಹುದು. ನವೋದಯ ಸಂದರ್ಭದಲ್ಲಿ ಸಂಸ್ಕೃತದ ಪ್ರಭಾವ ಹೆಚ್ಚಾಗಿರುವುದು ಅದರಿಂದ ಬಿಡಿಸಿಕೊಳ್ಳಲು ಹೆಣಗಾಡಿದ್ದೇವೆ. ಆದರೆ ಸಮಕಾಲೀನರಲ್ಲಿ ಸಂಸ್ಕೃತ

ಪ್ರಭಾವ ಕಡಿಮೆ ಇದ್ದರೂ ಸಾಮಾಜಿಕ ಸಂವೇದನೆಯ ಕೆಚ್ಚು ಹೆಚ್ಚಿದೆ. ಹಾಗೆಯೇ ನವೋದಯ ಸಂದರ್ಭದ ಮೀಮಾಂಸೆಯನ್ನು ಮುನ್ನುಡಿಗಳಲ್ಲಿ ಕಟ್ಟಲು ಆಧಾರಗಳು ನಮಗೆ ಒದಗುತ್ತವೆ. ನವೋದಯ ಪೀಳಿಗೆಯಿಂದ ಸಾಹಿತ್ಯದ ಚಿಂತನೆಯಲ್ಲಾದ ಮೀಮಾಂಸೆಯ ಅಂಶಗಳನ್ನು ಹಿಡಿದು ಮೀಮಾಂಸೆಯನ್ನು ಕಟ್ಟುವುದು ಸರಳವಾಗುತ್ತದೆ.

ತೀ.ನಂ.ಶ್ರೀ.ಯವರ 'ಭಾರತೀಯ ಕಾವ್ಯಮೀಮಾಂಸೆ'ಯ ಕೃತಿಯ ಮುನ್ನುಡಿಯಲ್ಲಿ "ಇದುವರೆಗೂ ಕನ್ನಡ ಸಾಹಿತ್ಯದಲ್ಲಿ ಮೂಡಿಬರುವ ಕಾವ್ಯಮೀಮಾಂಸೆಯು ಏನಿದ್ದರೂ ಅದೆಲ್ಲಾ ಸಂಸ್ಕೃತದ ಪಡಿನೆಳಲಂತಿದೆ. ಮುಂದೆ ಬರುವ ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆಯು ಪಾಶ್ಚಾತ್ಯ ಪಡಿನೆಳಲಾದರೆ ಅದಕ್ಕಿಂತಲೂ ಅಪಾಯಕರವಾಗುತ್ತದೆ. ಏಕೆಂದರೆ ತನ್ನತನವನ್ನು ಕಳೆದುಕೊಳ್ಳುವ ಸಂಭವವಿರುವುದರಿಂದ ನಮ್ಮ ಮುಂದಿನ ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆಗಳು ಪಾಶ್ಚಾತ್ಯ ಮತ್ತು ಭಾರತೀಯ ಕಾವ್ಯಮೀಮಾಂಸೆಗಳಿಂದ ಮಾತ್ರವಲ್ಲದೇ ತತ್ವಶಾಸ್ತ್ರ, ಯೋಗಜ್ಞಾನ, ಸೌಂದರ್ಯ ಮೀಮಾಂಸೆ ಮತ್ತು ಮನಃಶಾಸ್ತ್ರ ಇವುಗಳಿಂದಲೂ ಬೆಳಕು ಪಡೆದು ಧೀರವಾಗಿ ಸ್ವತಂತ್ರವಾಗಿ ಪೂರ್ಣದೃಷ್ಟಿಯ ಕಡೆಗೆ ಮುನ್ನಡೆಯಬೇಕಾಗುತ್ತದೆ"[೧೯] ಎಂದು ಕುವೆಂಪು ಅವರು ಹೇಳುತ್ತಾರೆ. ಈ ಹೇಳಿಕೆಯ ಹಿನ್ನೆಲೆಯಿಂದ ನಮ್ಮ ಕನ್ನಡ ಸಾಹಿತ್ಯ ಪರಂಪರೆ ನವೋದಯದವರೆಗೆ ಸಂಸ್ಕೃತದ ನೆರಳಿನಲ್ಲಿ ನಡೆದಿದೆ ಎಂದು ಹೇಳಬಹುದು. ಹಾಗೆಯೇ ಪಾಶ್ಚಿಮಾತ್ಯರ ಸಾಹಿತ್ಯವು ಕೂಡ ಸಂಸ್ಕೃತಕ್ಕಿಂತ ಅಪಾಯಕಾರಿಯಾದುದು. ಕುವೆಂಪು ಅವರು ೬೭ ವರ್ಷಗಳ ಹಿಂದೆಯೇ ಹೇಳಿದ್ದಾರೆ. ಆದರೆ ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಕಾಲದ ಸಾಹಿತ್ಯದ ಚಿಂತನೆಗಳಲ್ಲಿ ಪಲ್ಲಟಗೊಂಡಿವೆ. ಪಾಶ್ಚಾತ್ಯರ ಸಿದ್ಧಾಂತಗಳು ಕನ್ನಡದಲ್ಲಿ ಹೊಕ್ಕಿವೆ. ಇದರ ಮಾದರಿಗಳು ಕೂಡ ಕನ್ನಡ ಸಾಹಿತ್ಯ, ಸಂಸ್ಕೃತಿ ನೆಲವನ್ನು ಬೇರೆ ರೀತಿಯಲ್ಲಿ ಬಿತ್ತನೆ ಮಾಡಲಾಗಿದೆ. ಏಕೆಂದರೆ ನವೋದಯ ಕಾಲದಿಂದ ನವ್ಯದ ಕಾಲದವರೆಗೂ ಸ್ವಾತಂತ್ರ್ಯದ ಚಳುವಳಿಗಳು, ನಾಡುನುಡಿಯ ಬಗ್ಗೆ ರಾಷ್ಟ್ರೀಯತೆ, ಭಾಷೆಯ ಬಗ್ಗೆ, ಕನ್ನಡತ್ವದ ಬದುಕಿಗಾಗಿ, ಅನೇಕ ರೀತಿಯಲ್ಲಿ ಸಾಹಿತ್ಯಕವಾಗಿ ಚಿಂತನೆಗಳು ನವೋದಯ ಮತ್ತು ನವೋದಯ ಪೂರ್ವದಲ್ಲಿ ಚರ್ಚೆಗಳು ಇತ್ಯಾದಿ ವಿಷಯವಾಗಿ ಮರುವಿಮರ್ಶೆಯಲ್ಲಿ ತೊಡಗಿರುವುದು ಮುನ್ನುಡಿಗಳಲ್ಲಿ ನಡೆದಿವೆ. ಇದು ಮೀಮಾಂಸೆ ಕಟ್ಟುವ ಪರಿಕಲ್ಪನೆಯಾಗಿದೆ. ಇದರ ಜೊತೆಗೆ ಸೃಜನಶೀಲ ಸಾಹಿತ್ಯದ ಚಿಂತನೆಯ ಬರವಣಿಗೆಯ ಕ್ರಮಗಳು, ವಸಾಹತುಶಾಹಿ ಚಿಂತನೆಗಳ ಕುರಿತು ಕನ್ನಡದ ಸಾಹಿತ್ಯದಲ್ಲಿ ಚರ್ಚೆಗಳಾಗಿವೆ. ಹೀಗೆಯೇ ಹಲವಾರು ಸೈದ್ಧಾಂತಿಕವಾದ ವಾಗ್ವಾದಗಳು ನಡೆದಿವೆ. ಉದಾಹರಣೆಗೆ ಕುವೆಂಪು ಅವರು ಭಾರತೀಯ ಕಾವ್ಯಮೀಮಾಂಸೆಯ ಮುನ್ನುಡಿಯಲ್ಲಿ ಚರ್ಚೆ ಮಾಡಿರುವುದು ಹಾಗೂ ಅನಂತಮೂರ್ತಿ ಮತ್ತು ತೇಜಸ್ವಿಯವರ ವಾಗ್ವಾದದ ಚರ್ಚೆಗಳನ್ನು ಗಮನಿಸಬಹುದು. ಇವೆಲ್ಲದರ ನಡುವೆ ಕನ್ನಡದ ಚಿಂತನೆ, ಭಾಷೆಯ ಚಿಂತನೆಗಳು ನಡೆದಿರುವುದು ಒಂದು ಕಡೆಯಾಗಿದೆ. ಏಕೆಂದರೆ ಭಾರತದ ಪರಿಕಲ್ಪನೆಯಲ್ಲಿ ಸಂಸ್ಕೃತದ ಪ್ರಾಬಲ್ಯ ಮೆರೆದಿತ್ತು. ಇದನ್ನು ಕನ್ನಡದಲ್ಲಿ ಅನುಕರಿಸಿ ಸಂಸ್ಕೃತದ ಪಡಿನೆಳಲನ್ನು ಬಿಡಲು ಸಾಧ್ಯವಾಗಿದೆ. ಹಾಗಾಗಿ ಇದಕ್ಕೆ ಪರ್ಯಾಯವಾದ

ಕನ್ನಡದ ಚಿಂತನೆಗಳು ನಡೆದಿವೆ. ಅಲ್ಲಲ್ಲಿ ಕನ್ನಡದ ಹಳಗನ್ನಡ ಸಾಹಿತ್ಯ ಕೃತಿಗಳಿಗೆ ಬರೆದ ಮುನ್ನುಡಿಗಳು ಸಾಹಿತ್ಯದ ನೆಲೆಯಿಂದ ಮೀಮಾಂಸೆ ಕಟ್ಟುವುದಕ್ಕೆ ಪ್ರಯತ್ನಿಸಿವೆ. "ಕುವೆಂಪು ಅವರಿಗೆ ಕನ್ನಡೇತರ ಸಾಹಿತ್ಯಕ ಸಂದರ್ಭವನ್ನು ಆಧರಿಸಿ ಹುಟ್ಟುವ ಕಾವ್ಯಮೀಮಾಂಸೆಗಳ ಅಪಾಯದ ಬಗ್ಗೆ ಅರಿವಿತ್ತು. ಪಡಿನೆಳಲು ತನ್ನತನವನ್ನು ಕಳೆದುಕೊಳ್ಳುವ ಸಂಭವ ಎಂಬ ಮಾತುಗಳಲ್ಲಿ ಈ ಅರಿವು ವ್ಯಕ್ತವಾಗುತ್ತಿವೆ. ಈ ಅಪಾಯದಿಂದ ಪಾರಾಗಿ ಧೀರವಾಗಿ ಸ್ವತಂತ್ರವಾಗಿ ಮುನ್ನಡೆಯುವ ಹಾದಿಯನ್ನು ಸಹ ಅವರು ಸೂಚಿಸಿದ್ದಾರೆ. ಆ ಹಾದಿಯೆಂದರೆ ಕಾವ್ಯಮೀಮಾಂಸೆಯನ್ನು ಕೇವಲ ಸಾಹಿತ್ಯಕವಾಗುವುದರಿಂದ ತಪ್ಪಿಸಲು ಅದಕ್ಕೆ ತತ್ವಶಾಸ್ತ್ರ, ಯೋಗಜ್ಞಾನ, ಸೌಂದರ್ಯಮೀಮಾಂಸೆಗಳ ಸಹವಾಸ ಏರ್ಪಡಿಸುವುದು, ಇಷ್ಟಾದರೂ ಕನ್ನಡ ಸಾಹಿತ್ಯದ ಅಧ್ಯಾಪಕರು ಕಾವ್ಯಮೀಮಾಂಸಕರಾಗಿದ್ದ ಕುವೆಂಪು ಅವರಿಗೆ ಮೀಮಾಂಸಕರಾಗಿ ಸಂಸ್ಕೃತ ಕಾವ್ಯಮೀಮಾಂಸೆಯ ಪರಿಕಲ್ಪನೆಗಳಿಂದ ಸಂಪೂರ್ಣವಾಗಿ ಬಿಡಿಸಿಕೊಳ್ಳಲು ಆಗಲಿಲ್ಲ. ಆದರೆ ಸ್ವತಃ ಪ್ರತಿಭಾವಂತ ಲೇಖಕರಾಗಿದ್ದ ಅವರ ಕೃತಿಗಳು ನಿಜವಾದ ಪರ್ಯಾಯವಾದ ಸಾಹಿತ್ಯ ಮೀಮಾಂಸೆಯನ್ನು ಹುಟ್ಟಿಸಿದವು"[೨೦] ಎಂದು ರಹಮತ್ ತರೀಕೆರೆಯವರು ಹೇಳುತ್ತಾರೆ. ಈ ಹಿನ್ನೆಲೆಯಿಂದ ಹಳಗನ್ನಡಕ್ಕೆ ಸಂಸ್ಕೃತ ಪ್ರಭಾವ ಆಗಿದೆ. ಹಳಗನ್ನಡ ಸಂಸ್ಕೃತದಿಂದ, ಸಂಸ್ಕೃತ ಮಿಶ್ರಿತವಾದ ಕನ್ನಡದಲ್ಲಿ ಉನ್ನತ ಪಂಡಿತವರ್ಗಗಳು ಮಾತ್ರ ಸಂಸ್ಕೃತವನ್ನು ಅರಗಿಸಿಕೊಂಡಿವೆ. ಇದೇ ಮುಂದುವರಿದು ಪಾಶ್ಚಾತ್ಯರ ಪ್ರಭಾವದಿಂದ ಇಂಗ್ಲಿಷ್ ಕಲಿಕೆಯ ಚಿಂತನೆಗಳು ಮತ್ತು ಸಂಸ್ಕೃತ ಪಂಡಿತ ವರ್ಗಗಳಿಗೆ ಪ್ರಭಾವವಾಗುತ್ತದೆ. ಇದೇ ಮುಂದುವರೆದು ಕೆಲವು ಉನ್ನತ ವರ್ಗಗಳಿಗೆ ಕಲಿಕೆಯಲ್ಲಿ ಜಾತಿಗಳ ಮಿಸಲಾತಿ ರಾಜಕಾರಣವಾಗಿ ಇಂದಿನ ದಿನಗಳಲ್ಲಿ ಪರಿಣಮಿಸಿದೆ. ಸಂಸ್ಕೃತದ ಮೂಲ ಭಾಷೆ, ಸಾಹಿತ್ಯ ಚಿಂತನೆಯಲ್ಲಿ ಕೆಳವರ್ಗಗಳ ಮೇಲೆ ಸಂಸ್ಕೃತ ಇತ್ಯಾದಿಯನ್ನು ಹೇರಲಾಗಿದೆ. ಕೆಳವರ್ಗಗಳ ಭಾಷೆಗಳು ಮತ್ತು ಜನಪದ ಹಾಡುಗಳು ಧಾರ್ಮಿಕವಾಗಿ ಸಂಸ್ಕೃತ ಮಂತ್ರ ಪದಗಳು ಇನ್ನಿತರ ಕ್ಷೇತ್ರಗಳ ಜನಾಂಗಗಳ ಮೇಲೆ ಪ್ರಭಾವ ಬೀರಿದೆ. ಇದರ ಮಧ್ಯೆ ಪಾಶ್ಚಿಮಾತ್ಯ ಆಡಳಿತ, ಇಂಗ್ಲಿಷ್ ಕಲಿಕೆ, ಭಾಷೆ ಹೀಗೆ ಸಾಮಾಜಿಕವಾಗಿ ಪ್ರಭಾವ ಬೀರಿವೆ. ಇವುಗಳ ಮಧ್ಯೆ ಕೆಳವರ್ಗಗಳು ತಮ್ಮ ಜೀವನದ ಕ್ರಮವನ್ನೇ ಬಿಟ್ಟುಕೊಟ್ಟಿಲ್ಲ ಎಂಬುದನ್ನು ಗಮನಿಸಬಹುದಾಗಿದೆ. ಆಚರಣೆ, ಭಾಷೆ, ಮೂಢನಂಬಿಕೆಯಿಂದ ಕೂಡಿದ ಅನೇಕ ಜನವರ್ಗಗಳು ಮತ್ತು ಕಾಡುಮೇಡುಗಳಲ್ಲಿ ಬದುಕುವ ಜನರಲ್ಲಿ ಅಚ್ಚಳಿಯದೇ ಉಳಿದಿರುವ ಸಂಸ್ಕೃತಿ, ಭಾಷೆ, ಸಾಹಿತ್ಯವನ್ನು ಯಾವ ಮೀಮಾಂಸೆಯೆಂದು ಗುರುತಿಸಬಹುದು. ಸಂಸ್ಕೃತಜನ್ಯವಾದ ಕನ್ನಡ ಹೊಂದಿದೆ ಎಂದು ಹೇಳಲಾಗಿದೆ. ಇದರ ಮಧ್ಯೆ ಪಾಶ್ಚಿಮಾತ್ಯರ ಸಾಹಿತ್ಯವೂ ಇದೆ. ಹಾಗಾದರೆ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಅನನ್ಯತೆಗೆ ಧಕ್ಕೆ ತಂದಿಲ್ಲವೇ? ಇದರ ನಿಲುವೇನು? ನಾವು ಈ ಎರಡರ ನೆಲೆಯ ಮಿಮಾಂಸೆಯನ್ನು ಪಕ್ಕಾ ಸ್ಥಳೀಯ ಭಾಷೆಯಲ್ಲಿ ಸಂಸ್ಕೃತಿ, ಸಾಹಿತ್ಯ, ಜನಪದ ಸಂವೇದನೆಯ ಮೀಮಾಂಸೆಯನ್ನು ಕಟ್ಟಬೇಕಾಗಿದೆ. ಇದೇ ರೀತಿಯಾಗಿ ಕುವೆಂಪು, ಬಿ.ಎಂ.ಶ್ರೀ.ಯವರ ನಿಲುವು ಆಗಿತ್ತು.

ಹಾಗಾಗಿ ಸಂಸ್ಕೃತಕ್ಕಿಂತ ಪಾಶ್ಚಿಮಾತ್ಯರ ಪ್ರಭಾವಗಳನ್ನು ಕನ್ನಡದಲ್ಲಿ ಬೆಳೆಸುವ ಕ್ರಮಗಳು ರೂಪಿಸಿಕೊಂಡಿವೆ. ಕುವೆಂಪು ಅವರು ಹೇಳುವ ಹಾಗೆಯೇ "ಹೊಸ ಬೆಳಕಿನಲ್ಲಿ ಹಳೆ ತತ್ವಗಳು ತಮ್ಮ ನಿಗೂಢ ರಹಸ್ಯಗಳನ್ನೆಲ್ಲಾ ಬಿಚ್ಚಿಕೊಟ್ಟು ನಮ್ಮನ್ನು ಹೊಸ ಹೊಸ ರಸಾನುಭವಗಳಿಗೂ ಹೊಸ ಹೊಸ ತುಷ್ಟಿ ಪುಷ್ಟಿಗಳಿಗೂ ಕೊಂಡೊಯ್ಯಬಹುದು"[೨೧] ಎಂದು ಭಾರತೀಯ ಕಾವ್ಯಮೀಮಾಂಸೆಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಕನ್ನಡ ಮೀಮಾಂಸೆ ಕಟ್ಟುವುದಕ್ಕೆ ಕಾಲ ಕಾಲಕ್ಕೆ ಬದಲಾದ ಸಾಹಿತ್ಯ ಚಿಂತನೆ ಮುಖ್ಯವಾಗಿದೆ. ನವೋದಯ ಕಾಲದಲ್ಲಿ ಹಳಗನ್ನಡ ಸಾಹಿತ್ಯದ ಮರುಚಿಂತನೆ ಸ್ವರಚಿತ ಸಾಹಿತ್ಯ ಚಿಂತನೆಯಿಂದಾಗಿ ಹಾಗೂ ಕುವೆಂಪು, ಬಿ.ಎಂ.ಶ್ರೀ., ದ.ರಾ.ಬೇಂದ್ರೆ, ಮಾಸ್ತಿ, ಡಿ.ವಿ.ಜಿ., ಕಾರಂತ, ಗೋವಿಂದ ಪೈ ಇತ್ಯಾದಿಯವರು ಹಳಗನ್ನಡದ ಪುರಾಣದ ವಸ್ತುವನ್ನು ಕನ್ನಡ ಆಯಾ ಕಾಲಘಟ್ಟದಲ್ಲಿ ವಾಸ್ತವ ಚಿಂತನೆಯಾಗಿ ಚಾರಿತ್ರಿಕವಾಗಿ ಕತೆ, ಕಾದಂಬರಿ, ಕಾವ್ಯ, ನಾಟಕಗಳ ಮೂಲಕ ಮರುವಿಮರ್ಶೆಯಾಗಿ ಒಳಗೊಂಡಿವೆ. 'ಜಲಗಾರ', 'ಸ್ಮಶಾನ ಕುರುಕ್ಷೇತ್ರಂ', 'ಅಶ್ವತ್ಥಾಮನ್', 'ಶಿವರಾತ್ರಿ', 'ಸಿರಿಸಂಪಿಗೆ', 'ಮಹಾಚೈತ್ರ', 'ಸಂಕ್ರಾಂತಿ', 'ತಲೆದಂಡ', 'ಏಕಲವ್ಯ', 'ಭೀಮಾಲಾಪ' ಹೀಗೆ ಇತ್ಯಾದಿ ನಾಟಕಗಳು ಹೊಸ ನೆಲೆಗಟ್ಟಿನ ವಾಗ್ವಾದಗಳನ್ನು ಸೃಷ್ಟಿಸಿವೆ. ಹೀಗೆಯೇ ಇವು ರಸಾನುಭವದಿಂದ ಕೂಡಿದ್ದವುಗಳಾಗಿವೆ ಹಾಗೂ ಕುತೂಹಲಕಾರಿಯಾಗಿಯೂ ಇವೆ. ಈ ಕೃತಿಗಳಿಂದ ಕನ್ನಡ ಮಿಮಾಂಸೆ ಕಟ್ಟಿಕೊಳ್ಳುವುದಕ್ಕೆ ಸಾಧ್ಯತೆ ಇದೆ. ಹಳಗನ್ನಡ ಕೃತಿಗಳ ಮುನ್ನುಡಿಗಳು ಇತರೆ ಕೃತಿಗಳ ಮುನ್ನುಡಿಗಳಲ್ಲಿ ನಡೆದ ಚರ್ಚೆ, ವಾಗ್ವಾದಗಳು ಇವು ಮೊದಲ ವಿಮರ್ಶೆಗಳಾಗಿವೆ. ಹಾಗಾಗಿ ಮೀಮಾಂಸಾತ್ಮಕ ಅಂಶಗಳನ್ನು ಗುರುತಿಸುತ್ತೇವೆ. ನವೋದಯ ಕಾಲದ ಚಿಂತನೆ ಬರಹಗಳಿಂದ ಪ್ರಗತಿಶೀಲ ಸಾಹಿತ್ಯದಲ್ಲಿ ಸಿದ್ಧಾಂತಗಳು ಬೇರೆ ಪ್ರಭಾವದಿಂದ ಕೂಡಿಕೊಂಡಿವೆ. ಇಲ್ಲಿ ಸ್ಥಳೀಯ ದೇಸಿ ಚಿಂತನೆಯನ್ನು ಒಳಗೊಂಡಿದೆ. ನವ್ಯದಲ್ಲಿಯೂ ಕೂಡ ಪ್ರಾಚೀನ ಕಾಲದ ವಸ್ತು, ಪುರಾಣ ವಿಮರ್ಶಾ ಮಾದರಿಯಾಗಿ ಬಳಸಿಕೊಂಡಿದ್ದಾರೆ. ಎ.ಕೆ.ರಾಮಾನುಜನ್ ಅವರ ಸಿರಿಯಜ್ಜಿ ಸಂಕಥನಗಳು, ಮುನ್ನೂರು ರಾಮಾಯಣಗಳು ಎನ್ನುವ ಪ್ರಬಂಧಗಳಾಗಿ ವಿಮರ್ಶಾ ಮಾನದಂಡಗಳಾಗಿ ಪರಿಗಣಿಸಿ ಅದರ ಮಹತ್ವವನ್ನು ತಿಳಿಯಪಡಿಸಲಾಗಿದೆ. ಇಲ್ಲಿಯೂ ಕೂಡ ಕಾವ್ಯಮೀಮಾಂಸೆಯ ನೆಲೆಗಳನ್ನು ಗುರುತಿಸಬಹುದು. ಜೊತೆಗೆ ದಲಿತ ಮತ್ತು ಬಂಡಾಯ ಕಾಲದ ವಾಸ್ತವ ಸಂಗತಿಗಳನ್ನಿಟ್ಟುಕೊಂಡು ಸಮಾಜದಲ್ಲಿ ನಡೆಯುವ ಪ್ರಕ್ರಿಯೆಗಳ ಕುರಿತಂತೆ ಬರಹಗಳನ್ನು ಪರಿಗಣಿಸಲಾಗುವುದು. ಕುವೆಂಪು ಅವರು ಹೇಳುವ ಹಾಗೆ ಪಾಶ್ಚಾತ್ಯದ ಪಡಿನೆಳಲಾದರೆ ಕನ್ನಡ ಸಾಹಿತ್ಯ ಅಪಾಯದ ಸ್ಥಿತಿಯನ್ನು ಅನುಭವಿಸುತ್ತದೆ ಎನ್ನುವ ಸಂಗತಿ ಇಲ್ಲ, ಎನ್ನುವುದಕ್ಕೆ ಮೇಲಿನ ಅಂಶಗಳ ಮೂಲಕ ಕನ್ನಡ ಸಾಹಿತ್ಯ ಮೀಮಾಂಸೆ, ಪರಂಪರೆಯನ್ನು ಕಟ್ಟಿಕೊಳ್ಳಬಹುದು. ಪಾಶ್ಚಾತ್ಯ ವಸಾಹತುಶಾಹಿಯ, ಸಂಸ್ಕೃತ ಪ್ರಭಾವಗಳು ಇತ್ತೀಚಿನ ಸಾಹಿತ್ಯದಲ್ಲಿ ನಮ್ಮ ಕಣ್ಣಿಗೆ ಮಸುಕು ಮಸುಕಾಗಿ ಕಾಣಬಹುದು. ಆದರೆ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕವಾಗಿ ಎಲ್ಲಾ ರಂಗಗಳಲ್ಲಿ ಸಾಹಿತ್ಯ ಆಶಯದಂತೆ ಏಕರೂಪತೆ ಹೊಂದಿದ್ದರೆ ಖಂಡಿತವಾಗಿಯೂ ಕನ್ನಡ ಸಾಹಿತ್ಯ ಮೀಮಾಂಸೆಯನ್ನು ಕಟ್ಟಲಾಗುತ್ತದೆ. ಇನ್ನೊಂದು ತೆರನಾದ ಕನ್ನಡದ್ದೇ ಆದ ಹಿಂದಿನ

ಪರಂಪರೆಯಿಂದ ವಚನ ಸಾಹಿತ್ಯದ ಮೌಲ್ಯಗಳು, ತತ್ವಪದ ಸಾಹಿತ್ಯ, ಸ್ವರ ವಚನ, ದಾಸರ ಪದಗಳು, ಮೊಹರಂ ಪದಗಳು, ಗರತಿಯ ಹಾಡುಗಳು, ಜನಪದ ಹಾಡುಗಳು, ಲಾವಣಿಗಳು, ಸೂಫಿಗಳ ಚಾರಿತ್ರಿಕತೆ, ಸಿದ್ಧರು, ಜೋಗಿಗಳು, ನಾಥ ಪರಂಪರೆ, ಕಾಳಮುಖ, ಕಾಪಾಲಿಕರು ಇವುಗಳ ನೆಲೆಯಲ್ಲಿ ಹಾಗೂ ಈಗಾಗಲೇ ಚರ್ಚಿಸಿದಂತೆ ಈ ಸಂಸ್ಕೃತಿಯ ಪರಂಪರೆಯಿಂದ ಕನ್ನಡ ಸಾಹಿತ್ಯ ಮೀಮಾಂಸೆಯನ್ನು ಕಟ್ಟಲಾಗುತ್ತದೆ.

ಕನ್ನಡ ಸಾಹಿತ್ಯ ಮೀಮಾಂಸೆಯನ್ನು ಕಟ್ಟುವುದಕ್ಕೆ ಏನು ಅಡೆತಡೆಗಳು ಎದುರಾಗಿವೆ ನವೋದಯ ಕಾಲದಲ್ಲಿಯೇ ಕುವೆಂಪು, ಬೇಂದ್ರೆ ಅವರ ಸಾಹಿತ್ಯದಲ್ಲಿ ಗುರುತಿಸಿದ್ದಾರೆ. ಇದೇ ಮುಂದುವರಿದು ನವೋದಯ ಕಾಲದಿಂದ ಪ್ರಸ್ತುತ ಕಾಲದವರೆಗೂ ಪ್ರಯತ್ನಗಳು ನಡೆದಿವೆ ಹಾಗೂ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟುವುದಕ್ಕೆ ದ್ವಂದ್ವಗಳಾಗಿ ಕಾಡಿವೆ. ಇರಲಿ, ಆದರೆ ಓದುಗರಲ್ಲಿ ಸಾಹಿತ್ಯಕ ಪ್ರಜ್ಞೆ ಇದ್ದರೆ ಸಾಕು. ಆದರೆ ಸಾಹಿತ್ಯಪ್ರಜ್ಞೆ ಕನ್ನಡದ್ದೇ ಆದ ಚಿಂತನಾ ಮಾದರಿಯನ್ನು ವರ್ತಮಾನದ ಎಚ್ಚರಿಕೆಯ ಮೂಲಕ ಅರ್ಥ ಮಾಡಿಕೊಳ್ಳಬೇಕಾಗಿದೆ. ನಾಡಿನ ತಳ ಸಮುದಾಯಗಳ, ನೊಂದವರ, ಅಕ್ಷರ ಜ್ಞಾನ ಇಲ್ಲದವರ ಪರವಾದ ಧ್ವನಿಯಾಗಿ ಬರಹದ ಮೂಲಕ ಕನ್ನಡ ಸಾಹಿತ್ಯ ಮೀಮಾಂಸೆಯನ್ನು ಕಟ್ಟುವ ಮೂಲಕವಾಗಿ ನಡೆಯಬೇಕಾಗಿದೆ.

ಕನ್ನಡ ಸಾಹಿತ್ಯದಲ್ಲಿ ಕಾವ್ಯಕೇಂದ್ರಿತವಾದ ಮೀಮಾಂಸೆಯಾಗಿ ಮತ್ತು ಕಥಾಮಾದರಿಯ ಮೀಮಾಂಸೆಯಾಗಿ ಇವೆರಡರ ನೆಲೆಗನ್ನು ಕಟ್ಟುವುದಾಗಿದೆ. ಹಾಗೆಯೇ ಮುಖ್ಯವಾಗಿ ಸಾಹಿತ್ಯದ ಅನೇಕ ಕೃತಿಗಳ ಮುನ್ನುಡಿಗಳು ಒಳಸುಳಿವುಗಳನ್ನು ಬಿಟ್ಟುಕೊಡುತ್ತವೆ. ಹಾಗಾಗಿ ಕನ್ನಡ ಸಾಹಿತ್ಯ ಹಳಗನ್ನಡ ಕೃತಿಗಳಿಗೆ ಬರೆದ ಮುನ್ನುಡಿಗಳು, ಕುವೆಂಪು ಅವರು ಭಾರತೀಯ ಕಾವ್ಯಮೀಮಾಂಸೆಗೆ ಬರೆದ ಮುನ್ನುಡಿ, ಕನ್ನಡ ಸಾಹಿತ್ಯದ ಚಿಂತನೆಗೆ ಎಚ್ಚರಿಕೆಯ ಘಂಟೆಯಾಗಿದೆ. ಹಾಗಾಗಿ ಕನ್ನಡ ಮೀಮಾಂಸೆಯನ್ನು ಕನ್ನಡದ ನೆಲೆಯಾಗಿ ನಾವು ಬೇರೆ ಬೇರೆ ದೃಷ್ಟಿಕೋನದಿಂದ ನೋಡಬೇಕಾಗಿದೆ ಮತ್ತು ಗ್ರಹಿಸಬೇಕಾಗಿದೆ.

## ನವೋದಯ ಸಾಹಿತ್ಯದ ಮುನ್ನುಡಿಗಳಲ್ಲಿ ದೇಸಿತನದ ನೆಲೆಗಳು

ಕನ್ನಡ ಸಾಹಿತ್ಯದ ಚಿಂತನೆಯನ್ನು ಕವಿರಾಜಮಾರ್ಗಕಾರನಿಂದ ಮೊದಲುಗೊಂಡು ಪ್ರಸ್ತುತ ಕಾಲದವರೆಗೂ ಕನ್ನಡ ಸಾಹಿತ್ಯ ಚಿಂತನೆ ಹಲವಾರು ಪಲ್ಲಟಗಳು, ಆಯಾಮಗಳನ್ನು ಪಡೆದುಕೊಂಡಿದೆ. ಸಾಹಿತ್ಯದ ಪಂಥಗಳಾದ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಕಾಲದಲ್ಲಿ ಚಿಂತನೆಗಳು ಸಾಂಸ್ಕೃತಿಕವಾದ ಚಹರೆಗಳಾಗಿವೆ. ಸಾಮಾಜಿಕ ವಿಧಾನವನ್ನು ತಮ್ಮದೇ ಆದ ವಿಧಾನಗಳನ್ನು ಅನುಸರಿಸಿವೆ. ಇವುಗಳಲ್ಲಿ ಮುಖ್ಯವಾಗಿ ಯುರೋಪಿಯನ್ನರು ಪಾಶ್ಚಾತ್ಯ ಸಿದ್ಧಾಂತದಿಂದ ಕನ್ನಡದ ಚಿಂತನೆಯ ಸ್ವರೂಪವನ್ನು ಕನ್ನಡದ ಕೃತಿಗಳನ್ನು ಸಂಪಾದನೆ ಮಾಡುವುದರ ಮೂಲಕ ಹದಗೊಳಿಸಿದ್ದಾರೆ. ಆದರೆ ಕನ್ನಡದ ಕವಿಗಳು, ಬರಹಗಾರರು ಪಾಶ್ಚಾತ್ಯದ ಸಿದ್ಧಾಂತಗಳ ಮೂಲಕ ಅದರ ಜೊತೆಗೆ ಹಳಗನ್ನಡ ಕೃತಿಗಳ ದೇಸಿತನದ ಚಿಂತನೆಯ ನೆಲೆಗಳನ್ನು ಕಂಡುಕೊಂಡಿದ್ದಾರೆ.

ಇಲ್ಲಿ ಮುಖ್ಯವಾಗಿ ಜನಸಾಮಾನ್ಯರ ದೃಷ್ಟಿಯಿಂದ ಸಾಹಿತ್ಯ ಓದುಗರಿಗಾಗಿ ದೇಸಿತನವನ್ನು ಪಾಶ್ಚಾತ್ಯದ ಮೂಲಕ ಅಥವಾ ದೇಸಿತನದಿಂದ ಪಾಶ್ಚಾತ್ಯತನವನ್ನು ಸಮೀಕರಿಸಿ ಅದರದೇ ಆದ ವಿಧಾನವನ್ನು ನವೋದಯ ಕಾಲಘಟ್ಟದಲ್ಲಿ ಗಮನಿಸಬಹುದು. ಬೇಂದ್ರೆ, ಕುವೆಂಪು, ಬಿ.ಎಂ.ಶ್ರೀ., ಮಾಸ್ತಿ ಇನ್ನಿತರರಲ್ಲಿ ಹಳಗನ್ನಡ ಕಾವ್ಯದ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಹಾಗೆಯೇ ಬೇಂದ್ರೆ ಅವರ ಕಾವ್ಯದಲ್ಲಿ ಹೆಚ್ಚಾಗಿ ದೇಸಿತನವನ್ನು ಕಾಣಬಹುದು. ಬೇಂದ್ರೆಯವರ 'ಗರಿ' ಸಂಕಲನದ ಮುನ್ನುಡಿಯಲ್ಲಿ "ಈ ಕವನಗಳ ಒಳಗಿನ ಭಾಷಾ ಶೈಲಿಯ ಬಗೆಗೆ ಒಂದು ಮಾತು. ಇಲ್ಲಿ ತುಂಗಭದ್ರೆಯ ಉತ್ತರ ಪಥದ ದೇಸಿಯ ಮಾರ್ಗವನ್ನು ಹುಡುಕುವ ಹಾಗೆ ಹುಟ್ಟಿರುವ ಕುರುಹಿದೆ. ಹುಡುಕುವುದಕ್ಕೆ ಹೊಯ್ದಾಡುವುದರಿಂದಲೇ ಹಾದಿ ತಾನೆ ಹುಟ್ಟುವುದು. ಪಂಡಿತ ಪಾಮರ, ಬಡವ ಬಲ್ಲಿದ, ನಾಗರಿಕ ನಾಡಾಡಿ ಎಂಬ ಭೇದವನ್ನೆಲ್ಲಗಳೆದು ಕನ್ನಡ ಜೀವಾಳವು ಕನ್ನಡಿಗರಿಗಾಗಿ ಕನ್ನಡಿಸಲು ಪಡಬೇಕಾಗಿದೆ. ಹಾದಿ ಬಹಳ ಸುತ್ತು ಸುತ್ತು ಅನಿಸಬಹುದಾದರೂ ಎಲ್ಲವನ್ನು ಸುತ್ತದೇ ಗತಿಯಿಲ್ಲ. ದೇಸಿಯ ಶಬ್ದಗಳು ಸಿದ್ಧವಾಗಬೇಕು. ಗಮಕಿಗಳು ಹಾಡಿ ತೋರಿಸಬೇಕು"[೨೨] ಎಂದು ಬೇಂದ್ರೆಯವರು ಹೇಳುತ್ತಾರೆ. ಅವರ ಕಾವ್ಯದ ಮೂಲಕ ಭಾಷೆಯ ಒಳಗಡೆ ದೇಸಿತನದ ಒಳನೋಟಗಳನ್ನು ತೋರಿಸಿದ್ದಾರೆ. ಈ ಮುನ್ನುಡಿಯ ಮೂಲಕ ಉತ್ತರ ಕರ್ನಾಟಕದ ದೇಸಿಯ ಸೊಗಡು ಗುರುತಿಸಿದ್ದಾರೆ. ಈ ಮುನ್ನುಡಿಯ ಸಂದರ್ಭದಲ್ಲಿ ಬೇಂದ್ರೆಯವರನ್ನು ಪಾಶ್ಚಾತ್ಯರ ಪ್ರಭಾವ ಒಳಗೊಂಡಿತ್ತೆ? ಅಥವಾ ಅವರು ಕನ್ನಡದ ದೇಸಿತನವನ್ನು ಕನ್ನಡ ನಾಡಿನಲ್ಲಿ ಹುಡುಕುವ ಪ್ರಯತ್ನ ಮಾಡಿದ್ದಾರೆ. ಅಲ್ಲಿಯ ದೇಸಿಯರು ಯಾರು? ಬಡವ ಶ್ರೀಮಂತ ಎಂಬುದು ಇಲ್ಲ. ಅದರಲ್ಲಿರುವುದು ದೇಸಿತನದ ಹಾಡುಗಬ್ಬ. ಜನಪದ ಸೊಗಡು ಅಡಗಿ ಕುಂತಿದೆ. ಅದನ್ನು ಹಿಡಿಯುವ ಕೆಲಸ ಸಾಹಿತ್ಯಾಭ್ಯಾಸಿಗಳು ಮಾಡಬೇಕಾಗಿದೆ. "ಮೈಸೂರು, ಧಾರವಾಡ, ಮಂಗಳೂರು ಎಂಬ ಭೇದವಡಗಿ ಹಳ್ಳಿ ಹಳ್ಳಿಗಳಲ್ಲಿಯೂ ಹೆಣ್ಣು-ಗಂಡು ಎಲ್ಲರೂ ಒಂದೇ ಕನ್ನಡವನ್ನು ಆಡಬೇಕು"[೨೩] ಎಂದು ಹೇಳುತ್ತಾರೆ. ಕನ್ನಡದ ದೇಸಿತನವನ್ನು ಕನ್ನಡ ಮನೆಯಲ್ಲಿ ಹುಡುಕಬೇಕು ಮತ್ತು ನಮ್ಮ ಉಸಿರಾಗಬೇಕು. ಯಾವುದೇ ಭೇದ, ಕೆಡುಕು ಇಲ್ಲದೇ ಎಲ್ಲರೂ ಒಂದೇ ಎಂಬ ಭಾವನೆ ಕನ್ನಡಿಗರಲ್ಲಿ ಇರಬೇಕು ಎಂದು ಬೇಂದ್ರೆಯವರು ವ್ಯಕ್ತಪಡಿಸಿದ್ದಾರೆ. ಬೇಂದ್ರೆಯವರು ಗರತಿಯ ಹಾಡು ಕೃತಿಯ ಮುನ್ನುಡಿಯಲ್ಲಿಯೂ ಕೂಡ ಜನಪದ ಹಾಡು, ಜನರ ದೇಸಿ, ಭಾಷೆಯ ಶೈಲಿ, ವೈಭವ ಕುರಿತು ಮಾತನಾಡುತ್ತಾ "ಹೆಣ್ಣುಮಕ್ಕಳ ಹಾಡುಗಳನ್ನು ಅವರ ಕೊರಳ ಕೊಳಲಿನಿಂದ ಕೇಳುವುದರಲ್ಲಿ ಒಂದು ಸೊಗಸಿದೆ. ಒಂದು ಜೀವನದಾಯಕ ಶಕ್ತಿಯಿದೆ. ನವನಾಗರಿಕತೆಯು ನೂತನ ಶಿಕ್ಷಣ ಸಂಪ್ರದಾಯವು ಏನೋ ಒಂದೊಂದು ಹಳೆಯ ಹಾಡಿನ ಸಂಪ್ರದಾಯವನ್ನು ಬೀಳುಗಳೆಯುತ್ತಿದೆ. ಕನ್ನಡ ಕವನ ತುಂಗೆಯ ತವರೂರು ಈ ಹಾಡುಗಳು"[೨೪] ಎಂದು ಹೇಳುತ್ತಾರೆ. ಏಕೆಂದರೆ ಹೆಣ್ಣಿನ ಸ್ವಭಾವಸಿದ್ಧವಾದ ಉದಾರ ಹೃದಯದಿಂದ, ತಮ್ಮ ಸಂಸ್ಕಾರದಿಂದ ಬಂದ ಹಾಡುಗಳಿವು. ಅಂದಿನ ಮನೆ ಮನೆಯ ಗರತಿಯ ಹಾಡುಗಳು ಹೊಳೆ ಉಕ್ಕಿ ಹರಿಯುತ್ತಿದ್ದವು. ಆದರೆ ಪ್ರಸ್ತುತವಾಗಿ ಬರೀ ಧಾರಾವಾಹಿಗಳು ಮನೆ ಮನೆಯಲ್ಲಿ ಉಕ್ಕುತ್ತಿವೆ.

ಜನರ ಜೀವನಶೈಲಿ ಬದಲಾವಣೆಗಳು, ಖಾಸಗಿತನ, ಜಾಗತೀಕರಣದ ಪ್ರಭಾವಗಳು ಇಲ್ಲಿ ಕಂಡುಬರುತ್ತವೆ.

ಕುವೆಂಪು ಅವರಲ್ಲಿ ಕೂಡ ದೇಸಿತನವನ್ನು ಗುರುತಿಸಲು ಅವರು ಮಾಡಿದ ಮುಖ್ಯ ಕೆಲಸ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ' ಕೃತಿಯ ಮುನ್ನುಡಿಯಲ್ಲಿ ಕುಮಾರವ್ಯಾಸನ ದೇಸಿತನದ ಜೊತೆಗೆ ಜಾನಪದ ಸೊಗಡನ್ನು, ಜನರ ಬದುಕಿನ ಬವಣೆಗಳನ್ನು ವಿಶ್ಲೇಷಿಸುತ್ತಾರೆ. "ಕನ್ನಡ ಕಾವ್ಯ ಸೃಷ್ಟಿಯ ಕಾಮನಬಿಲ್ಲಿನಲ್ಲಿ ಈತನ ನೆಲೆ ನಟ್ಟನಡು, ನೆತ್ತಿಯ ಮುಡಿ, ಹಳೆಯ ಹೊಸ ಕನ್ನಡದ ತಲೆಯ ಕಿರೀಟ, ಹಳ್ಳಿ ಹಳ್ಳಿಯಲ್ಲಿ ಅಂದು ಇಂದು ಗಮಕ ಶಿರೋಮಣಿಗಳಿಂದ ನಾಡು ನಾಡೇ ಮುಳುಗಿ ರೋಮಾಂಚನಗೊಳಿಸುವಂತೆ ರಸವನ್ನು"[೨೫] ಎಂದು ಹೇಳುತ್ತಾರೆ. ಬಿ.ಎಂ.ಶ್ರೀ.ಯವರು ಕೂಡ ಕುವೆಂಪು ಅವರ ಕಾವ್ಯವನ್ನು ಕುರಿತು "ಇವರ ತಿರುಳುಗನ್ನಡದ ನುಡಿಗಳು ಇಂಪಾದ ಹೊಸ ಹೊಸ ಮುದ್ದು ಪದ್ಯಗಳು ಸರಳ ಶೈಲಿ ಬಾವೋದ್ರೇಕ, ಗೀತಪ್ರವಾಹ ಇವುಗಳ ಹೊಡೆತದಲ್ಲಿ ಏನಾದರೂ ತಪ್ಪುಗಳು ಒಂದು ವೇಳೆ ಬಂದಿದ್ದರೂ ಅವು ಕಾಣದಂತೆ ಮುಚ್ಚಿಹೋಗುವುವು. ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ ಒಂದು ತಪ್ಪಿಲ್ಲದಿದ್ದರೂ ಜೀವವಿಲ್ಲದ ಕಾವ್ಯ ಕಾವ್ಯವೇ ಅಲ್ಲ. ಪುಟ್ಟಪ್ಪನವರ ಉತ್ತಮ ಕವನಗಳಲ್ಲಿ ಈ ಜೀವವಿದೆ, ಆತ್ಮವಿದೆ ಇರುವುದರಿಂದ ಅಮೃತ ತತ್ವದ ಸಾರವಿದೆ"[೨೬] ಎಂದು ಹೇಳುತ್ತಾರೆ. ಕುವೆಂಪು ಅವರ ಕಾವ್ಯದ ಭಾಷೆ ಯಾವ ನೆಲೆಯಲ್ಲಿ ರಚಿತವಾಗಿದೆ ಎನ್ನುವುದು ಖಚಿತವಾಗಿರುವುದು ಸಾಹಿತ್ಯಲೋಕಕ್ಕೆ ಗೊತ್ತಿರುವ ವಿಷಯ. ಆದರೆ ಅವರಲ್ಲಿ ದೇಸಿತನದ ಛಾಯೆ ಅವರ ಸಾಹಿತ್ಯದಲ್ಲೂ ಅಡಗಿದೆ ಎಂದು ಹೇಳುತ್ತೇವೆ.

ಕುವೆಂಪು ಅವರಿಗಿಂತ ದ.ರಾ.ಬೇಂದ್ರೆಯವರು ಹೆಚ್ಚಾಗಿ ದೇಸಿತನ ಅವರ ಸಾಹಿತ್ಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. 'ಬೆಂದ್ರೆ ಕಾವ್ಯ' ಕೃತಿಯ ಮುನ್ನುಡಿಯಲ್ಲಿ ಜಿ.ಎಸ್.ಆಮೂರ ಪ್ರಸ್ತುತಪಡಿಸುತ್ತಾ ಕೆಲವರ ಹೇಳಿಕೆಯನ್ನು ಉಲ್ಲೇಖಪಡಿಸುತ್ತಾ "ಬೇಂದ್ರೆಯವರ ತಾತ್ವಿಕತೆ, ಕಾವ್ಯ, ಧರ್ಮಗಳು ಕನ್ನಡ ಕವಿಗಳಿಗಿಂತ ಯಾವ ರೀತಿಯಲ್ಲೂ ಭಿನ್ನವಾಗಿಲ್ಲ ಎಂದು ಚಂದ್ರಶೇಖರ ಕಂಬಾರರು ತಿಳಿಸುತ್ತಾರೆ. ಆದರೆ ಕನ್ನಡ ಸಂಪ್ರದಾಯದ ಸಹಜ ಫಲ ಎಂದು ಕರೆದಿದ್ದಾರೆ. ಲೌಕಿಕ ಅಲೌಕಿಕ ತತ್ವ, ಮಾರ್ಗ ದೇಸಿಕಲ್ಪನೆ, ರಸಿಕ ಸಂಪ್ರದಾಯ ಕನ್ನಡ ಕಾವ್ಯ ಪರಂಪರೆಯ ಈ ಮೂರು ಲಕ್ಷಣಗಳನ್ನು ಕಂಬಾರರು ಬೇಂದ್ರೆಯವರಲ್ಲಿ ಗುರುತಿಸಿದ್ದಾರೆ"[೨೭] ಎಂದು ಜಿ.ಎಸ್.ಆಮೂರರು ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಬೇಂದ್ರೆಯವರಲ್ಲಿ ಎಷ್ಟೊಂದು ದೇಸಿತನದ ಚಿಂತನೆಗಳು ಆವರಿಸಿಕೊಂಡಿದ್ದವು ಎನ್ನುವುದು ಮೇಲಿನ ಮುಖ್ಯ ಸಂಗತಿಯಿಂದ ಕನ್ನಡದ ಎಲ್ಲ ಲೇಖಕರಲ್ಲಿ ಬೇಂದ್ರೆಯವರ ಕುರಿತ ಅಭಿಪ್ರಾಯದಲ್ಲಿ ಬೇಂದ್ರೆಯವರ ಸಹಜ ಒಲವು ದೇಸಿ ಪರಂಪರೆಯತ್ತ ಹರಿಯಿತು ಎಂದು ಹೇಳಲಾಗುತ್ತದೆ. ಬೇಂದ್ರೆಯವರಲ್ಲಿ ಬರುವ ದೇಸಿ ಭಾಷೆ ಎಂದರೆ ಅದು ಆಡುನುಡಿಯೇ ಹೊರತು ಜನಪದ ಭಾಷೆಯಲ್ಲಿಯೇ ಎಂಬುದನ್ನು ಅರಿಯಬೇಕಾಗಿದೆ. ನಾದಲೀಲೆಗೆ ಬರೆದ ಮುನ್ನುಡಿಯಲ್ಲಿ ಮಾಸ್ತಿಯವರು ಬೇಂದ್ರೆಯವರ ಕಾವ್ಯ ವಿಮರ್ಶೆಯನ್ನು ಹೊಸ ನೆಲೆಯಲ್ಲಿ

ತೋರಿಸಿಕೊಟ್ಟಿದ್ದಾರೆ. ಏಕೆಂದರೆ ಬೇಂದ್ರೆಯವರ ಮನೋಧರ್ಮ ಕವಿಯ ಮನೋಧರ್ಮವೆಂದು ಖಚಿತವಾಗಿ ಗುರುತಿಸಿದ್ದಲ್ಲದೇ ಭಾವ, ಭಾಷೆ, ಶೈಲಿ, ರೀತಿ ಈ ಎಲ್ಲವನ್ನು ಮಾಸ್ತಿಯವರು ಗುರುತಿಸಿದ್ದಾರೆ. ಬೇಂದ್ರೆ ಕಾವ್ಯದ ನಿಜವಾದ ಶೈಲಿಯು ಭಾವದಲ್ಲಿದೆ ಎಂದು ಹೇಳುತ್ತಾ ಅವರ ಬೆಳಗು ಕವಿತೆಯ

"ಗಿಡಗಂಟೆಗಳ ಕೊರಳೊಳಗಿನಿಂದ
ಹಕ್ಕಿಗಳಾ ಹಾಡು
ಹೊರಟಿತು ಹಕ್ಕಿಗಳಾ ಹಾಡು"

ಈ ಸಾಲುಗಳಿಂದ ಗ್ರಹಿಸುವುದಾದರೆ ಬೇಂದ್ರೆಯವರ ಕಾವ್ಯ, ಪ್ರಕೃತಿಯ ಜೊತೆಜೊತೆಗೆ ಹೊಸ ಸಂಧಾನ ಮಾಡಿಕೊಳ್ಳುತ್ತಾ ಪ್ರಾದೇಶಿಕ ಭಾಷೆಯನ್ನು ಪ್ರತಿಬಿಂಬಿಸುತ್ತದೆ.

ಒಟ್ಟಾರೆಯಾಗಿ ನವೋದಯ ಸಾಹಿತ್ಯದ ಮುನ್ನುಡಿಗಳಲ್ಲಿ ವ್ಯಕ್ತಗೊಂಡಂತೆ ಪಾಶ್ಚಾತ್ಯ ಸಾಹಿತ್ಯವನ್ನು ಅಪ್ಪಿಕೊಂಡಿತ್ತು. ಆದರೆ ಗಟ್ಟಿಯಾಗಿ ಪಾಶ್ಚಾತ್ಯ ಸಂಸ್ಕೃತಿಯನ್ನು ಅಪ್ಪಿಕೊಳ್ಳಲಿಲ್ಲ ಎಂಬುದನ್ನು ಮರೆಯಬಾರದು. ನವೋದಯದ ಮುನ್ನುಡಿಗಳು ಸಂಪ್ರದಾಯದ ನೆಲೆಯಲ್ಲಿ ಹೊಸತನವನ್ನು ರೂಪಿಸಿಕೊಂಡಿವೆ. ದೇಸೀಯತೆಗೆ ಒತ್ತು ಕೊಟ್ಟಿದೆ. ಪ್ರಕೃತಿ, ಸೌಂದರ್ಯ, ಪ್ರೀತಿ ಇಂತಹ ನೆಲೆಗಳಿಂದ ಮನುಷ್ಯನ ಮನೋಧರ್ಮಕ್ಕೆ ಬದುಕನ್ನು ಅರಿಯುವ ರೀತಿಗೆ ಸಂಬಂಧಪಟ್ಟ ಸಂಗತಿಗಳು ಕಂಡುಬರುತ್ತವೆ. ವಸಾಹತುಶಾಹಿ ಹಾಗೂ ಪುರೋಹಿತಶಾಹಿ ಇಂತಹ ಸಂಗತಿಗಳನ್ನು ದೂರ ಇಡಲು ಪ್ರಯತ್ನಿಸಿದೆ. ಶೂದ್ರ ತಪಸ್ವಿ ಕೃತಿಯ ಮುನ್ನುಡಿ ಮತ್ತು ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ ಮುನ್ನುಡಿಯಲ್ಲಿ ಈ ವಿಚಾರ ವ್ಯಕ್ತಗೊಂಡಿದೆ. ಶಿವರಾಮ ಕಾರಂತರ ಮೂಕಜ್ಜಿಯ ಕನಸುಗಳು ಕಾದಂಬರಿಯಲ್ಲಿ ಸಂಪ್ರದಾಯದ ಸಮರ್ಥನೆ ಮತ್ತು ನಿರಾಕರಣೆಯನ್ನು ನಾಯಕಿಯ(ಅಜ್ಜಿಯ ಪಾತ್ರದಿಂದ) ಮೂಲಕ ನಿರೂಪಿಸಲಾಗಿದೆ. "ಸಾಂಪ್ರದಾಯಿಕತೆಯಿಂದ ಹದಗೆಟ್ಟಿದ ಮನಸ್ಸುಗಳನ್ನು ತುಸು ತುಸುವಾಗಿ ಕಾಯಿಸಿ ಕರಗಿಸುವ ಕೆಲಸ ಅವಳದ್ದು"[೨೮] ಎಂದು ಹೇಳಲಾಗುತ್ತದೆ. ಸಂಪ್ರದಾಯದಿಂದ ಹದಗೆಟ್ಟವರಾರು? ಸಂಪ್ರದಾಯವನ್ನು ಬಿಟ್ಟು ಇರುವವರಾರು? ಎಂಬುದು ಪ್ರಶ್ನೆ. ಹಾಗಾಗಿ ಸಾಂಪ್ರದಾಯಿಕವಾಗಿ ಇದ್ದವರು ಅದರಿಂದ ಹೊರಬರುತ್ತಾರೆ. ಹಾಗೆಯೇ ಅವರಲ್ಲಿರುವ ಕಲ್ಮಶವನ್ನು ಅಜ್ಜಿ ಕಿತ್ತೊಗೆಯಲು ಪ್ರಯತ್ನಿಸುತ್ತಾಳೆ. ಇದೇ ಕಾದಂಬರಿಯಲ್ಲಿ ಸುಬ್ಬರಾಯ ಸಂಪ್ರದಾಯವನ್ನು ಮೀರುತ್ತಾನೆ. ಇದರಿಂದ ಜನರ ಪ್ರಭಾವಗಳಿಂದ ಕೂಡಿದ ಸಂಗತಿಗಳು ಎಷ್ಟಿವೆ. ಈ ಸಂಗತಿಯನ್ನು ಮೀರುವ ಸಂದರ್ಭಗಳಿವೆ. ಆದ್ದರಿಂದ ಈ ಕಾದಂಬರಿಯಲ್ಲಿ ಮೂಕಜ್ಜಿಯ ಪಾತ್ರದ ಮೂಲಕ ಜನರಲ್ಲಿ ಪರಂಪರೆಯಿಂದ ಪಡೆದು ಬಂದ ಕಲ್ಪನಾವಿಲಾಸಗಳನ್ನು ಮೂಕಜ್ಜಿ ತನ್ನ ಕಲ್ಪನಾವಿಲಾಸದಿಂದ ಕೆದಕಿ ನೋಡಿದ್ದಾಳೆ. ಇದರಿಂದ ಜನರಲ್ಲಿ ಅವರವರ ಕಲ್ಪನೆಯಿಂದ ಎಷ್ಟೋ ವರ್ಷಗಳಿಂದ ಭವ್ಯವಾದ ಸಂಪ್ರದಾಯ, ಸಂಸ್ಕೃತಿ ಹೊಂದಿರುವರು ಇದ್ದಾರೆ. ಹಾಗಾಗಿ ಹಿರಿಯರು ಹೇಳಿದ್ದೇ ಸತ್ಯವೆನಿಸುತ್ತದೆ. ಇದರಿಂದ ಸಂಪ್ರದಾಯವು ಕಲ್ಪನೆಗೆ

ಮೀರಿದ್ದಾಗಿದೆ. "ಮೂಕಜ್ಜಿ ಮೌನದಿಂದ ಹಿರಿಯರಾಡಿದ ಒಂದೊಂದು ಸೊಲ್ಲು ಅಕ್ಷರ ಸಹ ಸತ್ಯವೆಂದು ತಿಳಿದು ನಂಬಿ ಬಂದರೂ ಸಾವಿರ ಜನರು ಸಾವಿರ ಬಗೆಗಳಿಂದ ಹರಿಸಿದ ಈ ಕಲ್ಪನೆ ವಿಲಾಸಗಳು ಪರಸ್ಪರ ಘರ್ಷಣೆಗೆ ಕಾರಣವಾದುದು ಉಂಟು"[೨೮] ಎಂದು ಹೇಳಲಾಗಿದೆ. ಇಲ್ಲಿ ಸಂಪ್ರದಾಯ, ಸಂಸ್ಕೃತಿ ಕಾಲದ ವರ್ತಮಾನದಲ್ಲಿ ಬದಲಾವಣೆಗೊಳ್ಳುತ್ತವೆ. ಹಾಗಾಗಿ ನಮ್ಮ ಸಂಸ್ಕೃತಿ, ಸಂಪ್ರದಾಯಗಳು ವಾಸ್ತವದಲ್ಲಿ ಅವುಗಳ ಕಲ್ಪನೆಗಳಲ್ಲಿ ತಿರುಗಾಡುತ್ತಾ ಹೋಗುತ್ತವೆ.

ಈ ತೆರನಾದ ನವೋದಯ ಸಾಹಿತ್ಯದ ರಚನೆಗಳಲ್ಲಿ ಮತ್ತು ಮುನ್ನುಡಿಗಳಲ್ಲಿ ವ್ಯಕ್ತಗೊಂಡಿವೆ. ಕಾಲಘಟ್ಟದಲ್ಲಿ ಸಂಪ್ರದಾಯವನ್ನು ಮುರಿದು ಕಟ್ಟುವ ಪರಿಯೂ ಇದೆ. ಹೀಗೆಯೇ ಯಾವ ಸಂಪ್ರದಾಯವು ಮನುಷ್ಯನಲ್ಲಿ ಉಳಿದಿವೆ ಎಂಬ ಚಿಂತನೆಯೂ ಉಳಿದುಕೊಂಡಿದೆ. ಮುನ್ನುಡಿಗಳಲ್ಲಿ ಪ್ರಕೃತಿ, ದೇಸಿಯತೆ, ಜನಪದ ಚಿಂತನೆ, ವಸಾಹತುಶಾಹಿ ಮತ್ತು ಪುರೋಹಿತಶಾಹಿ ರೂಪಿಸಿದ ಜಡತ್ವವನ್ನು ಪ್ರಶ್ನಿಸಿದೆ ಎಂದು ಹೇಳಲಾಗುತ್ತದೆ.

### ೪.೨. ಪ್ರಗತಿಶೀಲ ಸಾಹಿತ್ಯ ಸಂದರ್ಭದ ಮುನ್ನುಡಿಗಳು

ಪ್ರಗತಿಶೀಲ ಸಾಹಿತ್ಯದ ಚಿಂತನೆಗಳಲ್ಲಿ ಸಮಾಜವನ್ನು ಅರಿತು ನಿರಂತರ ಬದಲಾವಣೆಯಾಗಬೇಕೆಂಬ ಪ್ರಕ್ರಿಯೆಯನ್ನು ಒಳಗೊಂಡಿದೆ. ಸಮಾಜ ಬದಲಾದಂತೆ ಸಾಹಿತ್ಯವು ಬದಲಾಗುವುದು ಅನಿವಾರ್ಯ. ಈ ಬದಲಾವಣೆಯ ಪ್ರಕ್ರಿಯೆಯು ಅತೃಪ್ತಿ ಹಾಗೂ ಪ್ರತಿಭಟನೆಯ ಹಿನ್ನೆಲೆಯಲ್ಲಿ ನಡೆದಿರುತ್ತದೆ. ಸಾಹಿತ್ಯ ಇದನ್ನು ಕಾಲಕಾಲಕ್ಕೆ ಪ್ರತಿಬಿಂಬಿಸುತ್ತಲೇ ಇರುತ್ತದೆ. ಯಾವುದೇ ದೇಶದ ಪ್ರತಿಭಟನೆಯ ಸ್ವರೂಪ ನಮ್ಮ ದೇಶದಲ್ಲಿಯೂ ಅದೇ ಸ್ವರೂಪ ಹೊಂದಿರುತ್ತದೆ. ಹಾಗೆಯೇ ಸ್ಥಳೀಯ ಸಮಾಜಕ್ಕೆ ಬೆಂಗಾವಲು ರೀತಿಯಲ್ಲಿ ಪ್ರತಿಕ್ರಿಯೆ ನೀಡುತ್ತದೆ. ಅದು ಭಾಷೆಯ ರಚನೆಯ ಒಳಗಡೆ ನಡೆಯುವ ಸೈದ್ಧಾಂತಿಕವಾದದ ಹಿನ್ನೆಲೆಯಲ್ಲಿ ಚಿಂತನೆ ನಡೆಸಿದೆ. ಹಾಗಾಗಿ ಕನ್ನಡ ಪ್ರಗತಿಶೀಲ ಸಾಹಿತ್ಯವು ತನ್ನ ಹಿಂದಿನ ನವೋದಯ ಸಾಹಿತ್ಯಕ್ಕೆ ಪ್ರತಿಭಟನೆಯ ಕೂಗು ಹಾಕಿದೆ. ನವೋದಯದ ಸಾಮ್ರಾಜ್ಯಶಾಹಿ, ವಸಾಹತುಶಾಹಿಗೆ ಸೆಡ್ಡು ಹೊಡೆದು ಪರಂಪರೆಯ ಅರಿತು ಇವುಗಳಲ್ಲಿರುವ ಡೊಂಕುತನವನ್ನು ತಿದ್ದುವುದು ಪ್ರಗತಿಶೀಲರ ನಿಲುವಾಗಿತ್ತು. ಆದರೆ ಪ್ರಗತಿಶೀಲ ಸಾಹಿತ್ಯ ಬಂಡವಾಳಶಾಹಿ, ಅಧಿಕಾರಶಾಹಿ ಮತ್ತು ಭೂ ಮಾಲೀಕರ ಪಟ್ಟಭದ್ರಹಿತಾಸಕ್ತಿಗಳ ವಿರುದ್ಧ ಪ್ರತಿಭಟನೆಗೆ ಮುನ್ನುಡಿಯಾಗಿ ಕ್ರಿಯಾಶೀಲವಾಗಿದೆ.

### ಪ್ರಗತಿಶೀಲ ಸಾಹಿತ್ಯದಲ್ಲಿ ಮುನ್ನುಡಿಗಳ ತಾತ್ವಿಕ ಚಿಂತನೆ

ಪ್ರಗತಿಶೀಲ ಸಾಹಿತ್ಯ ಪಂಥದಲ್ಲಿ ಅನೇಕ ಮಹಾಕೃತಿಗಳು ಬಂದಿವೆ. ಆದರೆ ಮುನ್ನುಡಿಗಳು ಬಂದಿರುವುದು ಕಡಿಮೆ. ಏಕೆಂದರೆ ತಮ್ಮ ಕೃತಿಗಳಿಗೆ ತಾವೇ ಬರೆದುಕೊಂಡಿರುವ ಮುನ್ನುಡಿಗಳನ್ನು ಗಮನಿಸಬಹುದು. ನವೋದಯ ಸಂದರ್ಭದಲ್ಲಿ ಮುನ್ನುಡಿಗಳು ಹೆಚ್ಚಾಗಿ ಬಂದಿವೆ. ಅಲ್ಲಿ ಸಾಹಿತ್ಯಕ ಚಿಂತನೆ ಮೆಲುಕು ಹಾಕಿದೆ. ಹಾಗೆಯೇ ಮುನ್ನುಡಿಗಳು ಗಂಭೀರವಾದ ಚಿಂತನೆಗಳಾಗಿವೆ. ದಲಿತ-ಬಂಡಾಯ ಮತ್ತು ಪ್ರಸ್ತುತ ಸಂದರ್ಭದಲ್ಲಿ ಮುನ್ನುಡಿ ಬರೆಯುವುದು ರಾಜಕಾರಣವಾಗಿ ಮುಲಾಜಿಗೆ

ಅನುಸರಿಸುವುದು ನೋಡಬಹುದು. ಆದರೆ ಪ್ರಗತಿಶೀಲ ಸಾಹಿತಿಗಳು ಮುನ್ನುಡಿ ಬರೆದಿದ್ದು ಕಡಿಮೆ. ಯಾವುದೇ ಮುಲಾಜಿಗೆ ಒಳಗಾಗದೇ ನೇರ, ದಿಟ್ಟ, ನಿರಂತರ ಎಂಬ ನಿಲುವನ್ನು ಹೊಂದಿದ್ದರು. ಹಾಗಾಗಿ ಅನೇಕ ಕತೆ, ಕಾದಂಬರಿಗಳನ್ನು ವೃತ್ತಿ ಬರಹಗಳಾಗಿ ರೂಪಿಸಿಕೊಂಡಿದ್ದರು.

ಅ.ನ.ಕೃ. ಅವರು ಪ್ರಗತಿಶೀಲ ಸಾಹಿತ್ಯ ಎಂಬ ಪ್ರಬಂಧಕ್ಕೆ ಮುನ್ನುಡಿ ಬರೆಯುತ್ತಾ "ಪ್ರಗತಿಶೀಲ ಸಾಹಿತ್ಯದ ಗುರಿ ಕೇವಲ ಸಾಮಾಜಿಕವಾದ ಸಾಹಿತ್ಯವನ್ನು ನಿರ್ಮಾಣ ಮಾಡುವುದೇ ಅಲ್ಲ. ಸಾಹಿತ್ಯದಲ್ಲಿ ನೈಸರ್ಗಿಕತೆಯು ಇರಬೇಕು. ಅಜೇಯ ಶಕ್ತಿಯು ಇರಬೇಕು. ಅದು ನಮ್ಮ ಜನತೆಯ ಸಂಸ್ಕೃತಿ, ಆಸೆ, ಆಶಯ, ಸುಖ ದುಃಖಗಳ ಕನ್ನಡಿಯಾಗಿರಬೇಕು. ಸಾಹಿತಿ ಜನತೆಯ ಮಾರ್ಗದರ್ಶಕನಾಗಿರಬೇಕು. ತನ್ನ ಬಾಳಿನಿಂದ, ಭಾವನೆಯಿಂದ, ವಿಚಾರದಿಂದ ಈ ಉದ್ದೇಶದಿಂದ ಹೊರಗೆ ನಿಂತ ಸಾಹಿತ್ಯ ಸತ್ತ ಸಾಹಿತ್ಯ"[೨೦] ಎಂದು ಹೇಳುತ್ತಾರೆ. ಇವರ ಮಾತುಗಳಿಂದ ಪ್ರಗತಿಶೀಲ ಸಾಹಿತ್ಯದ ಮುಖ್ಯ ಉದ್ದೇಶ, ಗುರಿಗಳೇನು ಎಂಬುದನ್ನು ಸಾಬೀತುಪಡಿಸಲು ಈ ಮುನ್ನುಡಿಯಿಂದ ತಿಳಿಯಬಹುದಾಗಿದೆ.

ಅ.ನ.ಕೃ. ಅವರ ಮಾತಿನಿಂದ ನಾವು ಗ್ರಹಿಸುವುದಾದರೆ ಸಾಹಿತ್ಯದಿಂದ ಪ್ರಗತಿಶೀಲರು ಸಮಾಜಮುಖಿಯಾಗಿ ಮಾರ್ಕ್ಸ್, ಲೆನಿನ್ ಅವರ ಪ್ರತಿಫಲ ನಮ್ಮಲ್ಲಿ ಮೂಡಿಸಿಕೊಳ್ಳಬಹುದಾಗಿದೆ. ದುರ್ಬಲರು, ಶೋಷಿತರು, ಶ್ರಮಜೀವಿಗಳು ಮತ್ತು ದಲಿತರ ಪರವಾಗಿ ಮುಖವಾಣಿಯಾಗಬೇಕಾಗಿದೆ. ಆದರೆ ನವೋದಯದವರ ಚಿಂತನೆ ಸಮಾಜಮುಖಿಯಾದರೂ, ಭಾವನಾಜೀವಿಯಾಗಿ ರಸದಿಂದ ರಮಣಿಯವಾದ ಸಾಹಿತ್ಯ, ಹೂವು, ಮೊಗ್ಗು, ಚಿಗುರು, ಬಳ್ಳಿ, ಚಂದ್ರ, ಸೂರ್ಯೋದಯ, ಸೂರ್ಯಾಸ್ತ, ತಾರೆ, ಇಬ್ಬನಿ, ಪ್ರೀತಿ, ಪ್ರಣಯ ಇನ್ನೂ ಮುಂತಾದ ರೋಮ್ಯಾಂಟಿಕ್ ಬದುಕಿನ ಸೊಗಸಿಗೆ ಹೆಚ್ಚು ಒತ್ತು ಕೊಟ್ಟಿದ್ದರು. ಆದರೆ ಪ್ರಗತಿಶೀಲರು ಈ ಯಾವುದಕ್ಕೂ ಅವಕಾಶ ಕೊಡದೇ ತನ್ನ ಸಿದ್ಧಾಂತದ ಮೂಲಕ ಸಾಮಾಜಿಕ ಸಂವೇದನೆಯಿಂದ ಪ್ರಗತಿಯತ್ತ ಹೆಜ್ಜೆ ಹಾಕುತ್ತಾ ತನ್ನ ನಿಲುವು ಸಮಾಜಕ್ಕೆ ಮೀಸಲಾಗಿ, ಪ್ರತಿಕ್ರಿಯೆಯ ಚಳುವಳಿಯಾಗಿ, ಸೂಕ್ಷ್ಮ ಸಂವೇದನೆಯಾಗಿ ಪ್ರತಿಭಟಿಸುತ್ತಿದೆ. ನವೋದಯ ಸಂಪ್ರದಾಯದ ಚಿಂತನೆಯಲ್ಲಿ ದೇವರ ಮೇಲೆ ನಂಬಿಕೆ ಇಟ್ಟಿದ್ದನ್ನು ವಿರೋಧಿಸಿ ಪ್ರಗತಿಶೀಲರು ಅದರ ಲೋಪದೋಷಗಳನ್ನು, ಪಂಡಿತ ವರ್ಗದ ಅಂಕುಡೊಂಕುಗಳನ್ನು ತಿದ್ದುವ ಕೆಲಸ ನಡೆಸಿದರು. ಆದರೆ ನವೋದಯದವರು ಸಾಮ್ರಾಜ್ಯಶಾಹಿ, ವಸಾಹತುಶಾಹಿ ವಿರುದ್ಧ ಧ್ವನಿ ಎತ್ತಿದೆ. ಬೀದಿಗಿಳಿದು ಹೋರಾಟ ಮಾಡಲಿಲ್ಲ. ಪ್ರಗತಿಶೀಲರು ದೇವರು, ನಂಬಿಕೆ, ಆಚರಣೆ, ಮೌಢ್ಯತೆ ವಿರುದ್ಧ ತೆಳುವಾದ ರೀತಿಯಲ್ಲಿ ವಿರೋಧಿಸಿದವರು. ಸಾಮ್ರಾಜ್ಯಶಾಹಿ, ವಸಾಹತುಶಾಹಿ ವಿರುದ್ಧ ಬಂಡೆದ್ದು ಬೀದಿಗಿಳಿದು ಹೋರಾಟ ಮಾಡಿದರು.

ಬಿ.ಎಂ.ಶ್ರೀ.ಯವರು ಎಸ್.ಪಿ.ಅಣ್ಣಯ್ಯನವರ 'ಗುಡಿಸಲ ಗುರು' ಕವನಸಂಕಲನದ ಮುನ್ನುಡಿಯಲ್ಲಿ "ವಿಧಿವಿಲಾಸದಿಂದ ನೂರೈವತ್ತು ವರ್ಷಗಳಿಂದೀಚೆಗೆ ಕೆಲವಾಗಿ ಕೆಟ್ಟಿರುವ ನಮ್ಮ ಹಳ್ಳಿಗಳ ಎಲ್ಲಾ ಬಗೆಯ ಕೊಳಕು ಕೊರತೆಗಳು ಮಾಯವಾಗಿ ಹಳ್ಳಿಗಳು ದೊಡ್ಡ ಬದುಕು ಬದುಕಿದರೆ ನಾಡಿಗೆ

ನಾಡೇ ಬಾಳೀತು ಬೆಳಗೀತು"[೩೧] ಎಂದು ಹೇಳುತ್ತಾರೆ. ಈ ಮಾತಿನ ಹಿನ್ನೆಲೆಯಲ್ಲಿ ಸಂಸ್ಕೃತಿ, ವಲಸೆ, ವಸಾಹತುಶಾಹಿಯ ಮನೋಧೋರಣೆಯಿಂದ ಆಕರ್ಷಣೆಗೆ ಒಳಗಾಗಿರಬಹುದು. ಹಾಗಾಗಿ ನಗರಸಂಸ್ಕೃತಿಯ ಬದುಕು ಒತ್ತಡದ, ಸ್ವಾರ್ಥದ ಬದುಕು ಎಂದು ಹೇಳಿರಬಹುದು. ಅದಕ್ಕಾಗಿ ಪ್ರಗತಿಶೀಲರು ಬದುಕಿನ ಪ್ರಶ್ನೆ ಇಟ್ಟುಕೊಂಡು ದುಡಿಯುವ ವರ್ಗಕ್ಕೆ ಪ್ರಾಧಾನ್ಯ ಕೊಟ್ಟಿದ್ದಾರೆ. ನಗರದಂತಹ ಅಥವಾ ರಾಜಕೀಯದಂತಹ ವ್ಯವಸ್ಥೆಯನ್ನು ವೇಶ್ಯಾಸಮಸ್ಯೆಯೆಂದು ಪ್ರಗತಿಶೀಲರು ಪ್ರಶ್ನೆ ಮಾಡುತ್ತಾರೆ. ಅ.ನ.ಕೃ. ಅವರು "ವೇಶ್ಯಾಸಮಸ್ಯೆಯನ್ನು ಕುರಿತು ವಿಸ್ತಾರವಾಗಿ ನಾನು ಬರೆಯುತ್ತಿರುವ ಕಾರಣವನ್ನು ತಿಳಿಸಲಿಚ್ಛಿಸುತ್ತೇನೆ. ಸುಲಿಗೆ, ದಬ್ಬಾಳಿಕೆ, ಎಲ್ಲಿ ಯಾವ ಸ್ವರೂಪದಲ್ಲಿ ಕಂಡುಬಂದರೂ ಅದನ್ನು ಎದುರಿಸಬೇಕಾದುದು ಕ್ರಿಯಾಶೀಲವಾದ, ಮಾನವ ಪ್ರೇಮಿಯಾದ ಸತ್ಯ ಸಾಧಕನಾದ ಲೇಖಕನ ಕರ್ತವ್ಯ. ವ್ಯಕ್ತಿ ಸಮಾಜವನ್ನು ಸುಲಿಯುವುದು, ಸಮಾಜ ವ್ಯಕ್ತಿಯನ್ನು ಸುಲಿಯುವುದು ಒಂದೇ ಪ್ರಮಾಣದ ದೋಷಗಳೆನಿಸಿಕೊಳ್ಳುತ್ತದೆ. ಹಾಗೆಯೇ ಗಂಡು ಹೆಣ್ಣನ್ನು ಸುಲಿಯುವುದಾಗಲೀ, ಹೆಣ್ಣು ಗಂಡನ್ನು ಸುಲಿಯುವುದಾಗಲೀ ಮಹಾ ಅಪರಾಧ. ವೇಶ್ಯಾ ಸಮಸ್ಯೆಯಲ್ಲಿ ನನಗೆ ಕಂಡುಬರುವುದು ಗಂಡಿನ ಅನಂತ ಅವಿಶ್ರಾಂತ ಅಬಾಧಿತ ಸುಲಿಗೆಯ ಚಿಹ್ನೆ"[೩೨] ಎಂದು ಅ.ನ.ಕೃ. ಅವರು 'ಸಂಜೆಗತ್ತಲು' ಮುನ್ನುಡಿಯಲ್ಲಿ ಹೇಳುತ್ತಾರೆ.

ಏಕೆಂದರೆ ಅ.ನ.ಕೃ. ಅವರು ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು ಈ ಮೂರು ಕಾದಂಬರಿಗಳು ಸಮಾಜದ ನಿಗೂಢ ರಹಸ್ಯಗಳನ್ನು ತಿಳಿಸುತ್ತವೆ. ಅಂದರೆ ಹಲವಾರು ದೃಷ್ಟಿಕೋನಗಳಲ್ಲಿ ಈ ಕಾದಂಬರಿಗಳನ್ನು ಗ್ರಹಿಸಬೇಕಾಗಿದೆ. ಅ.ನ.ಕೃ. ಅವರ ಬರಹದ ವಸ್ತು ವೇಶ್ಯೆಯರಾದರು, ವೇಶ್ಯೆಯ ಮನೆಯ ಒಡತಿ ಹಾಗೂ ಪುರುಷರ ಹಿನ್ನೆಲೆಯಿಂದ ಆರ್ಥಿಕತೆ, ಸಾಮಾಜಿಕತೆಯನ್ನು ಗುರುತಿಸುವುದು. ಹಿಂದುಳಿದ ಅಮಾಯಕರು, ಹೆಣ್ಣುಮಕ್ಕಳು ಮತ್ತು ಶೋಷಣೆಯಂತಹ ದಬ್ಬಾಳಿಕೆಗಳು ನಡೆದಿವೆ. ವೇಶ್ಯೆಯರು ಯಾರು? ವೇಶ್ಯೆಯರನ್ನಾಗಿ ಯಾರು ಮಾಡುತ್ತಾರೆ? ವೇಶ್ಯೆಯರ ಹತ್ತಿರ ಯಾರು ಬರುತ್ತಾರೆ? ವೇಶ್ಯೆಯರ ಸಮಸ್ಯೆಗಳೇನು? ಎಂಬುದು ಮುಖ್ಯವಾಗಿದೆ. ಹೆಣ್ಣು ಹೆಣ್ಣಿನ ನಡುವೆ ನಡೆಯುವ ಶೋಷಣೆ ಹಾಗೂ ರಾಜಕಾರಣಿಗಳು, ಅಧಿಕಾರಿಗಳು, ಮಾಡುವ ಅನಾಚಾರದ ಕೆಲಸಗಳು, ಕುಮ್ಮಕ್ಕುಗಳು ಕಂಡುಬರುತ್ತವೆ. ಈ ಎಲ್ಲವುಗಳನ್ನು ಅ.ನ.ಕೃ. ಅವರು ಸಾಮಾಜಿಕ ವ್ಯವಸ್ಥೆಯನ್ನು ವೇಶ್ಯಾಸಮಸ್ಯೆಯಾಗಿ ಗುರುತಿಸಿದ್ದಾರೆ. ಇಲ್ಲಿ ಅಮಾಯಕರು ಆಳಾಗುತ್ತಿದ್ದಾರೆ ಏನೋ?, ಅವರಿಗೆ ಸೌಲಭ್ಯಗಳು ಇಲ್ಲ, ಪ್ರಶ್ನೆ ಮಾಡಿದರೆ ಇಲ್ಲ ಸಲ್ಲದ ನಿಯಮಗಳು ಮಾಡುವುದು ಕಂಡುಬರುತ್ತವೆ. ಇದು ದೇಶದ ಸ್ವಾತಂತ್ರ್ಯ ಪಡೆಯುವ ಸಂದರ್ಭ ಹಾಗೂ ಪ್ರಸ್ತುವಾಗಿಯೂ ಕಂಡುಬರುತ್ತಿದೆ.

ಆದರೆ ಅ.ನ.ಕೃ ಅವರು ವೇಶ್ಯಾ ಸಮಸ್ಯೆಯನ್ನಾಗಿ ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ. ಕಾರಣಗಳನ್ನು ಈಗಾಗಲೇ ಹೇಳಲಾಗಿದೆ. ಆದರೆ ಪ್ರಸ್ತುತ ದಿನಗಳಲ್ಲಿ ವೇಶ್ಯಾಪದ್ಧತಿ ಸಮಸ್ಯೆಯನ್ನು ಮುಂಬೈನ ಕಾಮಾಟಿಪುರ ನಗರ, ಬಳ್ಳಾರಿಯ ಡಿ.ಸಿ.ನಗರ, ಇದೇ ರೀತಿಯಾಗಿ ಹಿಂದಿನಿಂದ ಬಂದ ದೇವದಾಸಿ ಪದ್ಧತಿಯಂತಹವು ಇನ್ನೂ ಜೀವಂತವಾಗಿವೆ. ಅಂದರೆ ಈ ವ್ಯವಸ್ಥೆಯನ್ನು

ಯಾರು ಮಾಡಿದ್ದಾರೆ ಎನ್ನುವುದು ಮುಖ್ಯ. ಮುಂಬೈನ ಉದ್ಯಮಿಗಳು, ಅಧಿಕಾರಿಗಳು, ರಾಜಕಾರಣಿಗಳು ಇದನ್ನು ಬಳಸಿಕೊಳ್ಳುವ ಕೇಂದ್ರಗಳಾಗಿವೆ. ಹಾಗೆಯೇ ಹಳ್ಳಿಗಳಲ್ಲಿ ದೇವದಾಸಿ ಪದ್ಧತಿ ಇದೆ. ಎಂದರೆ ಅಲ್ಲಿ ಹಣವಂತರು, ಮೇಲುಜಾತಿಗಳು, ಒಳಜಾತಿಗಳು, ಒಳಪಡಿಸಿಕೊಂಡ ಪಾರಮ್ಯವಿದೆ. ಹೀಗಿರುವಾಗ ಜ್ವಲಂತ ಸಮಸ್ಯೆಯಾಗಿ ಪರಿಹಾರ ಕಂಡುಕೊಳ್ಳುವುದರಲ್ಲಿಯೇ ನಡೆದಿವೆ. ಹಾಗಾಗಿ ಅ.ನ.ಕೃ. ಅವರ ಕಾದಂಬರಿಗಳ ಮೂಲಕ ಇಂತಹ ಸಮಸ್ಯೆಗಳನ್ನು ಕುರಿತು ಪ್ರಶ್ನೆ ಮಾಡಿದ್ದಾರೆ. ವೇಶ್ಯಾ ವೃತ್ತಿಯ ಹಿಂದೆ ಸಾಮಾಜಿಕ ವ್ಯವಸ್ಥೆಯ ವಿವಿಧ ಮುಖಗಳನ್ನು ತೋರಿಸುವ ಉದ್ದೇಶದಿಂದ ನಗ್ನಸತ್ಯದಂತಹ ಕಾದಂಬರಿಗಳಲ್ಲಿ ಸಮಸ್ಯೆಯಾಗಿ ಆರ್ಥಿಕ ಮುಖವನ್ನು ಪ್ರಧಾನವನ್ನಾಗಿಟ್ಟುಕೊಂಡು ಉಳಿದ ಸಮಸ್ಯೆಗಳ ಮೇಲೆ ಬೆಳಕನ್ನು ತೋರಿಸುವ ನಿಟ್ಟಿನಲ್ಲಿ ಮನುಷ್ಯರ ಮನೋವ್ಯಾಪಾರದ ತಿರುಳನ್ನು ತೊರಿಸಿದ್ದಾರೆ. ಇಲ್ಲಿ ದಲಿತ ಮತ್ತು ಅಲ್ಪಸಂಖ್ಯಾತರ ಸಂಬಂಧಿಸಿದಂತೆ ಅನೇಕ ಪ್ರಶ್ನೆಗಳು ಭಾರತದಲ್ಲಿ ಉದ್ಭವಗೊಂಡಿವೆ. ಆದರೆ ಈ ವಿಷಯಗಳನ್ನು ಕುರಿತಂತೆ ಹೇಳಿರುವ ಅ.ನ.ಕೃ. ಅವರ ಕಾದಂಬರಿಗಳಿಗೆ ಅಂದಿನ ದಿನಗಳಲ್ಲಿ ಪತ್ರಿಕೆಗಳಲ್ಲಿ ಅಪಸ್ವರದ ಚರ್ಚೆಗಳು ನಡೆದಿವೆ. ಆದರೆ ಇದು ಈ ಸಂದರ್ಭದಲ್ಲಿ ಬೇಕಾಗಿಲ್ಲ. ಇಲ್ಲಿ ಮುಖ್ಯವಾಗಿ ಜನರ ಪರಿಸ್ಥಿತಿ, ಸಂವೇದನೆಯನ್ನು ತಿಳಿಯುವುದು. ಮಗು ಹುಟ್ಟಿ ಹಸಿವಿನಿಂದ ತಾಯಿಯ ಎದೆ ಹಾಲು ಬೇಡುತ್ತಿದೆ. ಆದರೆ ತಾಯಿಯ ಎದೆಯಲ್ಲಿ ಹಾಲು ಇಲ್ಲ. ಇಲ್ಲಿ ಆ ಮಗುವನ್ನು ಸುಮ್ಮನಾಗಿಸಲು ತಾಯಿ ಬೊಟ್ಟು ಚೀಪಿಸುತ್ತಾಳೆ. ನಾವು ಅರ್ಥ ಮಾಡಿಕೊಳ್ಳಬೇಕಾದುದು ಆರ್ಥಿಕ ಸಮಸ್ಯೆಯನ್ನು ಹಾಗೂ ಸೌಲಭ್ಯದಿಂದ ವಂಚಿತರಾಗಿರುವವರನ್ನು, ಸಮಾಜದಲ್ಲಿ ಯಾರು ಹಿಂದುಳಿದ್ದಾರೆ? ಏಕೆ ಹಿಂದುಳಿದಿದ್ದಾರೆ? ಯಾರು ಹಿಂದುಳಿಸಿದ್ದಾರೆ ಎಂಬುದನ್ನು ನಾವು ಖಂಡಿಸಬೇಕಾಗಿದೆ. ಹಾಗಾಗಿ ಪ್ರಗತಿಶೀಲರು ಬೀದಿಗಿಳಿದು ಹೋರಾಟ, ಪ್ರತಿಭಟನೆ ಮಾಡಿದರು. ನವೋದಯದವರ ತರಹ ಆದರ್ಶವಾದಿ, ಭಾವಜೀವಿಗಳಾಗಿ ಬದುಕಲಿಲ್ಲ. ಪ್ರಗತಿಶೀಲರು 'ಮಾಡು ಇಲ್ಲವೇ ಮಡಿ' ಎಂಬಂತಹ ಸಿದ್ಧಾಂತವನ್ನು ಪಾಲಿಸಿದರು.

### ಪ್ರಗತಿಶೀಲ ಸಾಹಿತ್ಯದ ಮುನ್ನುಡಿಗಳಲ್ಲಿ ಹೊಸ ಸಂವೇದನೆಯ ಪಲ್ಲಟಗಳು

ಪ್ರಗತಿಶೀಲರು ನವೋದಯದ ನಿಲುವನ್ನು ಒಪ್ಪದೇ ತಮ್ಮದೆ ಆದ ಸಿದ್ಧಾಂತವನ್ನು ರೂಪಿಸಿಕೊಂಡಿದ್ದರು. ಹಾಗೆಯೇ ವಾಸ್ತವದ ಚಿಂತನೆಗಳಿಂದ ಕೂಡಿದ್ದರು. ಆದರೆ ನವೋದಯದವರು ಆಶಾದಾಯಕವಾಗಿದ್ದರೆ ಪ್ರಗತಿಶೀಲರು ವಾಸ್ತವದ ನೆರಳಿನಲ್ಲಿ ಇದ್ದವರು. ಇದರಿಂದ ಅಂದಿನ ಮಹಾಯುದ್ಧದ ಪ್ರಸಂಗಗಳು, ಪರಿಣಾಮಗಳು ನಮ್ಮ ದೇಶದ ಮೇಲೆಯೂ ಆಗಿತ್ತು. ಆಗ ಕನ್ನಡ ಸಾಹಿತ್ಯ ಚಿಂತನೆಯಲ್ಲಿ ಹೆಚ್ಚಾಗಿ ಕಾದಂಬರಿಗಳು ಪ್ರಗತಿಶೀಲರ ಕಾಲದಲ್ಲಿ ಬಂದವು. ಅವುಗಳ ವಸ್ತು, ವಸಾಹತುಶಾಹಿ ಧೊರಣೆ, ಪುರೋಹಿತಶಾಹಿ, ಜಮೀನ್ದಾರಿಯಂತಹವರ ಅಂಕುಡೊಂಕುಗಳನ್ನು ತಿದ್ದುವ ಬರವಣಿಗೆಯ ವಸ್ತುಗಳಾಗಿವೆ. ಇದಕ್ಕೆ ನಿರಂಜನರ ಚಿರಸ್ಮರಣೆ, ಅ.ನ.ಕೃ. ಅವರ ಕಾದಂಬರಿಗಳು, ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು ಇತ್ಯಾದಿಯಾಗಿವೆ. ಇಲ್ಲಿ ಆರ್ಥಿಕ

ಒತ್ತಡದಲ್ಲಿ ಬದುಕುವ ಜನರ ಪರವಾದ ನಿಲುವು ತಾಳಿದ್ದರು. ಆದರೆ ರಾಜಕಾರಣದಲ್ಲಿ ಸರ್ವಾಧಿಕಾರಿತನ ಹೊಂದಿರುವ ವಸಾಹತುಶಾಹಿಗಳಿಗೆ ಭಾರತದಲ್ಲಿ ಅವಕಾಶ ಕೊಡಬಾರದು ಹಾಗೂ ಉತ್ಪಾದಕತೆಗೆ ಅವಕಾಶ ಕೊಡಬಾರದು ಎಂಬ ಧ್ವನಿ ಎತ್ತಲಾಗಿತ್ತು. ನಮ್ಮ ರಾಜಕೀಯ ನಾಯಕರು ಅಭಿವೃದ್ಧಿ ಎಂಬ ಗುಮ್ಮದಿಂದ ಜನರನ್ನು ದಿಕ್ಕು ತಪ್ಪಿಸುವ ಕೆಲಸ ಮಾಡುತ್ತಾರೆ. ಇದು ಈಗಲೂ ನಡೆಯುತ್ತಿದೆ. ಅಂದು ಪ್ರಗತಿಶಿಲರು ಬ್ರಿಟಿಷರ ವಿರುದ್ಧ ಬಂಡೆದಿದ್ದರೆ ಇಂದು ಜನಪರ ಚಳುವಳಿಗಾಗಿ ಸರಕಾರದ ವಿರುದ್ಧ ಹೋರಾಟ ಮಾಡುವ ಸ್ಥಿತಿ ಎದುರುಗೊಂಡಿದೆ. ಹೀಗಾಗಿ ಪ್ರಗತಿಶೀಲರು ಅಂದು ಹೊಸ ಸಂವೇದನೆಯನ್ನು ಪಲ್ಲಟಗೊಳಿಸಿದ್ದರು.

ಅ.ನ.ಕೃ. ಅವರು 'ಸಂಜೆಗತ್ತಲು' ಕಾದಂಬರಿಯ ಮುನ್ನುಡಿಯಲ್ಲಿ ಭಾರತವನ್ನು ಕುರಿತು "ಭಾರತಕ್ಕೆ ಬೇಕಾದುದು ಸಾಮ್ಯವಾದದ ತಳಹದಿಯ ಮೇಲೆ ಕಟ್ಟಲ್ಪಟ್ಟಿರುವ ರಾಜ್ಯ ಘಟನೆ, ಈ ದೇಶದ ಪ್ರಜೆಯಾದ ಪ್ರತಿಯೊಂದು ವ್ಯಕ್ತಿಗೂ ಅನ್ನ, ವಸತಿ, ವಿವಾಹ, ಶಿಕ್ಷಣ, ಸೌಕರ್ಯಗಳು ಬೇಕು. ಆದರೆ ಸಂತುಷ್ಟ ಭಾರತ ನಿರ್ಮಾಣಕ್ಕೆ ನಾವು ಚೀನಾ, ರಷ್ಯಾ, ಅಮೆರಿಕ ದೇಶಗಳ ಮೊರೆ ಹೊಕ್ಕು ಅವರ ಎಂಜಲುಗೂಳಿಗೆ ಕೈ ನೀಡಿದರೆ ನಮ್ಮ ಸ್ವಾತಂತ್ರ್ಯವನ್ನು ನೀಗಿಕೊಂಡು ಮತ್ತೆ ಪರಕೀಯರ ಪದತಲದಲ್ಲಿ ಕೊಳೆಯಬೇಕಾಗುತ್ತದೆ"[೩೩] ಎಂದು ಹೇಳುತ್ತಾರೆ. ಈ ಮಾತು ೧೯೪೦-೫೦ರ ದಶಕದಲ್ಲಿ ಹೇಳಿದೆ. ಆದರೆ ಭಾರತದಲ್ಲಿ ಬದಲಾವಣೆಯ ಗಾಳಿ ಇನ್ನೂ ಬೀಸಿಲ್ಲ. ಮತ್ತೆ ಬೇರೆ ದೇಶದ ಎಂಜಲುಗೂಳಿಗಾಗಿ, ಎಂದರೆ ಅಭಿವೃದ್ಧಿ ದೃಷ್ಟಿಯಿಂದ ಇನ್ನೂ ಹೋರಾಟ ಮಾಡುವ ಅನಿವಾರ್ಯ ಜನರಲ್ಲಿ ಮೂಡಿದೆ. ಭಾರತದಲ್ಲಿ ಚೀನಾ, ಅಮೆರಿಕ ಇನ್ನೂ ಹಲವು ದೇಶಗಳು ಅಭಿವೃದ್ಧಿಯ ತಂತ್ರಗಳನ್ನು ನಿರ್ಮಿಸಿಕೊಂಡು, ಜೊತೆಗೆ ಭಾರತಕ್ಕೆ ಸಾಲ ಸೂಲ ನೀಡಿವೆ. ಅಂದರೆ ಭಾರತವನ್ನು ತಮ್ಮ ಕೈವಶ ಮಾಡಿಕೊಂಡಿರುವ ಬಗೆ ಹೀಗೆಯೇ ಭಾರತ ಸ್ವತಂತ್ರಗೊಂಡ ನಂತರ ದೇಶದಲ್ಲಿ ಮೂಲ ಸೌಕರ್ಯಗಳು ಈ ದೇಶದ ಜನಗಳಿಗೆ ಒದಗಿಸುವುದು ಮುಖ್ಯವಾಗಿತ್ತು. ಆದರೆ ನೆಹರೂ ಸರ್ಕಾರದ ಸರ್ವಾಧಿಕಾರಿ ಧೋರಣೆಯಿಂದ ಬೇರೆ ದೇಶದ ಮೊರೆ ಹೋಗಿ, ದೇಶ ಅಭಿವೃದ್ಧಿ ಆಗಬೇಕು ಎಂಬ ನಿಲುವಿನಿಂದ ಭಾರತದಲ್ಲಿ ಬಂಡವಾಳ ಹೂಡುವುದು ಪ್ರಮುಖ ಎಂಬ ಅಂಶದ ಮೂಲಕ ಬಂಡವಾಳಶಾಹಿಗಳಿಗೆ ಅವಕಾಶ ಮಾಡಿಕೊಟ್ಟಿದೆ. ಭಾರತದಲ್ಲಿ ಶಿಕ್ಷಣ, ಉದ್ಯೋಗ, ಆಹಾರ, ವಸತಿ, ಮೂಲಭೂತ ಸೌಕರ್ಯಗಳನ್ನು ಸಾಮಾನ್ಯವಾಗಿ ಈಡೇರಿಸಲು ಪ್ರಯತ್ನಿಸಿಲ್ಲದಿರುವುದು ನೆಹರೂ ಸರ್ಕಾರದ ಹೊಣೆಯಾಗಿದೆ. ಗಾಂಧೀಜಿಯವರು 'ದೇಶದ ಬೆನ್ನೆಲುಬು ರೈತ' ಎಂದು ಹೇಳಿದ್ದರು. ಆದರೆ ನೆಹರೂ ಸರ್ಕಾರ ಕೃಷಿಗೆ ಅಷ್ಟೇನೂ ಒತ್ತು ಕೊಟ್ಟಿಲ್ಲದಿರುವುದು ೫೦-೬೦ರ ದಶಕದಲ್ಲಿ ಕಂಡುಬರುತ್ತದೆ.

ನೆಹರೂ ಅವರು ಭಾರತ ಸ್ವತಂತ್ರಗೊಂಡ ನಂತರ ಒತ್ತುಕೊಟ್ಟಿದ್ದು ಶ್ರೀಮಂತರ ರಕ್ಷಣೆ ಮತ್ತು ಭದ್ರತೆಗಾಗಿ. ಬ್ರಿಟಿಷರು ತಮಗಾಗಿ ಮಾಡಿಕೊಂಡಿರುವ ಅಭಿವೃದ್ಧಿ ಕೆಲಸಗಳನ್ನು ನೆಹರೂ ಮುಂದುವರಿಸಿದರು. ಹಾಗೆಯೇ ಬೇರೆ ಬೇರೆ ದೇಶದ ನಾಯಕರುಗಳಿಗೆ ಮನ್ನಣೆ ಕೊಟ್ಟಿದ್ದರು.

ಹಾಗಾಗಿ ಭಾರತದಲ್ಲಿ ಇನ್ನೂ ಸಮಸ್ಯೆಯ ಸವಾಲುಗಳು ದುರಂತವಾಗಿ ಕಾಡುತ್ತಿವೆ. ಸ್ವಾರ್ಥ ರಾಜಕಾರಣದಿಂದ ತಮ್ಮ ಮುಂದಿನ ಪೀಳಿಗೆಗಾಗಿ ರಾಜಕೀಯದಲ್ಲಿ ಉಳಿಯುವುದಕ್ಕಾಗಿ ತಮಗೆ ಬೇಕಾದಂತಹ ನಿಲುವುಗಳನ್ನು ಪ್ರತಿಪಾದಿಸುತ್ತಾ ಜಾರಿಗೆ ತಂದಿವೆ. ಇಂದಿನ ಸರ್ಕಾರಗಳು ಕೂಡ ತಮಗೆ ಬೇಕಾದುದನ್ನು ದೇಶದಲ್ಲಿ ಮುನ್ನೆಲೆಗೆ ತರುತ್ತಿವೆ. ಅವರ ಅಜೆಂಡಾಗಳಿಂದ ಸಾಮಾನ್ಯ ಜನರ ಮೇಲೆ ಬಲವಂತವಾಗಿ ಹೇರಲಾಗುತ್ತಿದೆ. ಸಾಮಾಜಿಕವಾಗಿ, ಸಾಮಾನ್ಯವಾಗಿ ಬದುಕುತ್ತಿರುವ ಜನಗಳ ಮೇಲೆ ಆಹಾರ, ನೀರು, ಪ್ರಾದೇಶಿಕ, ಸಂಸ್ಕೃತಿ, ಜಾತಿ ಮತ್ತು ಆರ್ಥಿಕ ಇವೆಲ್ಲವುಗಳ ಮೇಲೆ ಅಜೆಂಡವನ್ನು ಸಾಧಿಸುತ್ತಿರುವುದು ಎಷ್ಟು ಸರಿಯೋ, ಅಷ್ಟೇ ತಪ್ಪು ಕೂಡ ಆಗಿದೆ. ಸಾಮಾಜಿಕವಾಗಿ, ಆಡಳಿತಾತ್ಮಕವಾಗಿ, ಶೈಕ್ಷಣಿಕವಾಗಿ ಒಳಗೊಂಡಿದೆ. ಅಂದು ನೆಹರೂ ಸರ್ಕಾರದ ನಿಲುವಿಗಿಂತ, ಇಂದಿನ ಸರ್ಕಾರಗಳು ಅಜ್ಞನ ರೀತಿಯಲ್ಲಿ ಆಡಳಿತವನ್ನು ನಡೆಸಿವೆ. ಆದರೆ ಮೂಲಭೂತವಾಗಿ ಸಮಸ್ಯೆಗಳನ್ನು ಬಗೆಹರಿಸದೆ ಸಮಸ್ಯೆಗಳನ್ನು ಸೃಷ್ಟಿಸುವಂತಹ ಹುನ್ನಾರಗಳು ನಡೆದಿವೆ. ಹೀಗಾಗಿ ರೈತರ ಸಾವು-ನೋವುಗಳು ಹಳ್ಳಿಯ ಸಮಸ್ಯೆಗಳು, ಕೃಷಿಯ ಬೇಡಿಕೆಯಲ್ಲಿ ನಿಯಮಾವಳಿಗಳಿಲ್ಲ. ಬಡತನದಿಂದ ನರಳುವ ಕುಟುಂಬಗಳು ಎಷ್ಟೋ ಇವೆ. ಆಹಾರ, ನೀರು, ಸೌಲಭ್ಯವಂಚಿತರಾಗಿಯೂ ಇದ್ದಾರೆ. ಸರ್ಕಾರಗಳು ಹಿಂದಿನಿಂದ ಇಂದಿನವರೆಗೆ ಸಾಮಾನ್ಯ ಜನರಿಗೆ ಮಣ್ಣೆರಚುವ ಕೆಲಸದ ಜೊತೆಗೆ ಆಶಾವಾದ ಭಾವನೆಯನ್ನು ಮೂಡಿಸುವ ಕೆಲಸ ರಾಜ್ಯ, ಕೇಂದ್ರ ಸರ್ಕಾರಗಳು ಇಲ್ಲಿಯವರೆಗೂ ನಡೆಸಿಕೊಂಡು ಬಂದಿವೆ.

ಅ.ನ.ಕೃ. ಅವರು ನೆಹರೂ ಸರ್ಕಾರಕ್ಕೆ ಬಹಿರಂಗವಾಗಿ ಭಾರತದ ಮೂಲ ಸಮಸ್ಯೆಗಳಿಗೆ ಆದ್ಯತೆ ಕೊಡಿ ಎಂದು ಹೇಳುತ್ತಿದ್ದರು. ಇವರು ಹೇಳುತ್ತಾ "ಅಮೆರಿಕಾ ಹಿಮ್ಮಡಿಯಲ್ಲಿ ಭಾರತವನ್ನು ಕೆಡವಬೇಕೆಂದು ಭಾರತದ ಬಂಡವಾಳಿಗರು ಪ್ರಯತ್ನಿಸುತ್ತಿರುವಂತೆ ರಷ್ಯಾದ ಹಿಮ್ಮಡಿಯ ಕೆಳಗೆ ಭಾರತವನ್ನು ಹಾಕಬೇಕೆಂದು ಭಾರತದ ಕಮ್ಯೂನಿಸ್ಟರು ಪ್ರಯತ್ನಿಸುತ್ತಿದ್ದಾರೆ. ಈ ಎರಡು ದುಷ್ಟ ಶಕ್ತಿಯನ್ನು ಎದುರಿಸಬೇಕಾದುದು ಭಾರತದ ಸತ್ಪ್ರಜೆಯ ಪವಿತ್ರ ಕರ್ತವ್ಯ"[೩೪] ಎಂದು ಹೇಳುತ್ತಾರೆ. ಅ.ನ.ಕೃ. ಅವರು ಭಾರತದ ಯಾವುದೇ ಸಿದ್ಧಾಂತವನ್ನು ನಂಬುತ್ತಿರಲಿಲ್ಲ ಮತ್ತು ಮೊರೆ ಹೋಗುತ್ತಿರಲಿಲ್ಲ. ಆದರೆ ಭಾರತವನ್ನು ಮುಂದಿನ ದಿನಗಳಲ್ಲಿ ಯಾರ ಕೈವಶವಾದರೆ ನಮಗೆ ಸದುಪಯೋಗವಿದೆ ಎಂಬ ಹಿನ್ನೆಲೆಯಿಂದ ಭಾರತವನ್ನು ಬಂಡವಾಳಶಾಹಿಗಳು ಮಾಡುವ ತಂತ್ರಗಳು, ಭಾರತವನ್ನು ತಮ್ಮ ಹಿತದೃಷ್ಟಿಯಲ್ಲಿ ಬಳಸಿಕೊಳ್ಳುವ ಪ್ರವೃತ್ತಿ ನಡೆದಿದೆ ಎಂಬುದು ಅ.ನ.ಕೃ. ಅವರ ಚಿಂತನೆಯಾಗಿದೆ. ಇದರಿಂದ ಬಂಡವಾಳದ ವಿಷಯ ಪ್ರಸ್ತಾಪ, ಒಪ್ಪಂದಗಳು ಏರ್ಪಡಿಸುವುದು ಇನ್ನೊಂದು ರಾಜಕಾರಣವಾಗಿದೆ. ಪ್ರಸ್ತುತ ದಿನಗಳಲ್ಲಿ ಭಾರತದಲ್ಲಿ ಹೆಚ್ಚಾಗಿ ಅಮೆರಿಕಾದಂತಹ ಅನೇಕ ದೇಶಗಳ ಕಂಪನಿಗಳು ಕಂಡುಬರುತ್ತವೆ. ಅ.ನ.ಕೃ ಅವರು ಪ್ರತಿಪಾದಿಸುವಂತೆ ಕಮ್ಯೂನಿಸ್ಟರು ಭಾರತವನ್ನು ರಷ್ಯಾದ ಅಡಿಯಲ್ಲಿ ಇಡಲು ಏಕೆ ಪ್ರಯತ್ನಿಸುತ್ತಾರೆ. ಅಂದರೆ ಅಮೆರಿಕ

ಎಲ್ಲಾ ದೇಶದ ಮೇಲೆ ಹಿಡತ ಸಾಧಿಸುತ್ತಿದೆ. ಹಾಗೆಯೇ ಎಲ್ಲಾ ದೇಶದ ಪ್ರಧಾನವಾದ ವಿಶ್ವಸಂಸ್ಥೆಯ ಅಂಗಸಂಸ್ಥೆಗಳು ಅಮೆರಿಕದ ಅಡಿಯಲ್ಲಿವೆ. ಹಾಗಾಗಿ ಅಮೆರಿಕದ ಬುದ್ಧಿ ತನ್ನ ಸ್ವಾರ್ಥಕ್ಕಾಗಿ, ತನ್ನ ದೇಶದ ಹಿತಕ್ಕಾಗಿ ಏನೂ ಬೇಕಾದರೂ ಮಾಡಲು ಸಿದ್ಧವಿದೆ. ಹೀಗೆ ರಷ್ಯಾ ಅಮೆರಿಕಕ್ಕೆ ಸೆಡ್ಡು ಹೊಡೆಯುವ ತಾಕತ್ತು, ತಂತ್ರಜ್ಞಾನವನ್ನು ಹೊಂದಿದೆ. ಅಮೆರಿಕದಷ್ಟು ಸ್ವಾರ್ಥಬುದ್ಧಿ ಹೊಂದಿಲ್ಲದಿರುವುದು, ಹಾಗೆಯೇ ಬೇರೆ ಬೇರೆ ದೇಶದ ಮೇಲೆ ಹಗೆತನ ಸಾಧಿಸುವುದಿಲ್ಲ. ಹಾಗಾಗಿ ರಷ್ಯಾದ ಜೊತೆಗೆ ಮೈತ್ರಿ ಸಂಬಂದ ಒಳ್ಳೆಯದು ಎಂದು ಕಮ್ಯೂನಿಸ್ಟರು ಪ್ರತಿಪಾದಿಸಿದರು. ಅಂತಹವರಲ್ಲಿ ಹಿಂದಿನಿಂದಲೂ ಟಿಪ್ಪು ಸುಲ್ತಾನ್, ಸುಭಾಸ್‌ಚಂದ್ರ ಭೋಸ್, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಅತಿ ಹೆಚ್ಚಾಗಿ ರಷ್ಯಾದ ಜೊತೆಗೆ ಸಂಬಂಧ ಉಳ್ಳವರಾಗಿದ್ದರು. ಆದರೆ ಅ.ನ.ಕೃ. ಅವರು ಇದನ್ನು ಒಪ್ಪುತ್ತಿರಲಿಲ್ಲ. ಆದರೆ ಬಂಡವಾಳರಿಗೆ ಅವಕಾಶ ಕೊಡದೇ ನಮ್ಮ ದೇಶದ್ದು ನಮ್ಮ ದೇಶದಲ್ಲಿಯೇ ಆಗಬೇಕೆಂಬುದು ಅವರ ನಿಲುವಾಗಿತ್ತು.

ಅ.ನ.ಕೃ. ಅವರ ಪ್ರಗತಿಶೀಲ ಸಭೆಗಳಲ್ಲಿ ಮಾಡಿದ ಭಾಷಣಗಳು, ದಲಿತ ಶೋಷಿತರ ಪರವಾದ ಧ್ವನಿಯಾಗಿದ್ದರಿಂದ ಸುಭಾಸ್‌ಚಂದ್ರ ಭೋಸ್, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಇವರಲ್ಲಿ ಪ್ರಗತಿಶೀಲ ಚಿಂತನೆ ಹೊಂದಿದ್ದರು ಎನ್ನಬಹುದು. ಏಕೆಂದರೆ ಭಾರತದ ಸಂವಿಧಾನದ ಪರಿಕಲ್ಪನೆಗಳು ಪ್ರಗತಿಶೀಲ ಸಾಹಿತ್ಯದ ನಿಲುವುಗಳಾವೆ. ಆದರೆ ಪ್ರಸ್ತುತವಾಗಿ ಈ ನಿಲುವುಗಳು ಬಂಡವಾಳಶಾಹಿಗಳ ಕೈವಶವಾಗಿದೆಯೆನೋ ಅನಿಸುತ್ತದೆ. ಜೊತೆಗೆ ಬಂಡವಾಳಶಾಹಿಗಳು ಮಾಡುವ ಕುತಂತ್ರದಿಂದ ದೇಶದ ಅಭಿವೃದ್ಧಿ ಸೂಚ್ಯಂಕದಲ್ಲಿ ಭರ್ತಿಗೊಂಡಿರುತ್ತದೆ. ವಾಸ್ತವದಲ್ಲಿ ಅದು ಬರೀ ನೆಪವಾಗಿರುತ್ತದೆ. ನಾವುಗಳು ಸೂಚ್ಯಂಕದ ಮೂಲಕ ದೇಶದ ಅಭಿವೃದ್ಧಿಯನ್ನು ಅಳೆಯುತ್ತೇವೆ ಮತ್ತು ದಾಖಲೆ ಮಾಡಿರುತ್ತೇವೆ. ಆದರೆ ನಿಜ ಸ್ಥಿತಿಯ ಅಭಿವೃದ್ಧಿ ಪ್ರಮಾಣ ಕಡಿಮೆಯಿರುತ್ತದೆ. ಇದು ನಮ್ಮ ದೇಶದ ದುಸ್ಥಿತಿಯಾಗಿರುತ್ತದೆ. ಹಾಗಾಗಿ ಮಾರ್ಕ್ಸವಾದಿಗಳಂತಹವರು ದೇಶ ದೇಶಗಳಲ್ಲಿ ಹೋರಾಟ ಮಾಡುತ್ತಿರುವುದು ಕಂಡುಬರುತ್ತದೆ. ಹೀಗೆ ಜನರಲ್ಲಿ ಜಾಗೃತ ಮನೋಭಾವವನ್ನು ಬೆಳೆಸುತ್ತಿರುವುದು. ಇದೇ ರೀತಿಯಾಗಿ ನಿರಂಜನರ ಚಿರಸ್ಮರಣೆ ಕಾದಂಬರಿಯ ಮುನ್ನುಡಿಯಲ್ಲಿ ತಮ್ಮ ನಿಲುವನ್ನು "ಇನ್ನು ಶಿಕ್ಷಣ ಸಾಕು ನನ್ನ ಲೇಖನಿಯನ್ನು ಅವಲಂಬಿಸಿ ನಾನು ಬದುಕಬೇಕು ನನ್ನ ಬಾಳನ್ನು ರೂಪಿಸಬೇಕು"[೩೫] ಎಂದು ಹೇಳುತ್ತಾರೆ. ಅವರ ಹಿಂದಿನ ಹಠದಿಂದ ಶಿವರಾಯ ಆಗಿದ್ದವರು ನಿರಂಜನರಾದರು. ಅವರಲ್ಲಿ ಅಡಗಿದ್ದ ಸೂಕ್ತವಾದ ನಿಲುವು ಹೋರಾಟ, ಚಳುವಳಿ ಸಮಾಜದಲ್ಲಿ ಕಮ್ಯೂನಿಸ್ಟರಾಗಿದ್ದರು. ಸರ್ಕಾರಗಳ ನೀತಿ ನಿಯಮಗಳ ವಿರುದ್ಧ ಹೋರಾಟ ಮಾಡುತ್ತಿದ್ದರು. ಸರ್ಕಾರದ ಸುಳ್ಳು ಭರವಸೆ, ಪೊಲೀಸರ ಗೂಂಡಾಗಿರಿಯನ್ನು ವಿರೋಧಿಸುತ್ತಿದ್ದರು. ಅವರಲ್ಲಿ ಹೋರಾಟ ಪಕ್ವತೆಗೊಂಡಿದ್ದು ಅವರ ಸೈದ್ಧಾಂತಿಕ ತಾಕಲಾಟಗಳಿವೆ. ಜೀವನದ ಹಲವು ಮಗ್ಗಲುಗಳಿಂದ ಕಯ್ಯೂರಿನ ನ್ಯಾಯಕ್ಕಾಗಿ ಹೋರಾಟದಿಂದ ಸಮಾಜದ ಒಳನೋಟಗಳನ್ನು

ಅರಿತರು. ಇವರಿಗೆ ಪ್ರಗತಿಶಿಲ ಸಾಹಿತ್ಯ ವೇದಿಕೆಯಾಯಿತು. ಅವರು ಪ್ರಗತಿಪರವಾದ ಬರಹದ ಮೂಲಕ ಮುಂಚೂಣಿಗೆ ಬಂದರು.

ನಿರಂಜನರ 'ಮೃತ್ಯುಂಜಯ' ಕಾದಂಬರಿಯ ವಸ್ತುವನ್ನು ಗಮನಿಸಿದರೆ ಅದು ೪೫೦೦ ವರ್ಷಗಳ ಹಿಂದಿನದ್ದಾಗಿದೆ. ಆದರೆ ನಿರಂಜನರು ವಾಸ್ತವದಲ್ಲಿ ಮೃತ್ಯುಂಜಯ ಕತೆಯಾಗಿ ೧೯೫೦ರ ದಶಕದ ವಸ್ತುವನ್ನಾಗಿಸಿದ್ದಾರೆ. ನಾವು ಓದುಗರು ಗ್ರಹಿಸುವುದಾದರೆ ೧೯೭೦-೮೦ರ ದಶಕದಂತೆ ಕಂಡುಬರುತ್ತದೆ. ಮೃತ್ಯುಂಜಯ ಕತೆ ಸತ್ತ ಪೆರೋಗಳಿಗಾಗಿ, ಘೋರಿ ನಿರ್ಮಾಣಕ್ಕಾಗಿ ಈಜಿಪ್ತಿನ ಚರಿತ್ರೆಯಲ್ಲಿ ಬಹುಜನ ಸಮುದಾಯದವರು ಗುಲಾಮಜೀವನ ನಡೆಸುತ್ತಿದ್ದ ಕಾಲವಾಗಿತ್ತು. ಆಗ ನಡೆದ ಬಂಡಾಯ ಮಾನವ ನಾಗರಿಕತೆಯ ಏಳ್ಗೆಗಾಗಿ ಇತಿಹಾಸದಲ್ಲಿಯೇ ಹೋರಾಟದ ಮನೋಭಾವ ಮೊದಲುಗೊಂಡಿತು. ಹಾಗಾಗಿ ನಿರಂಜನರು ಈ ಕತೆಯನ್ನು ಪ್ರಸ್ತುತ ಕಾಲಕ್ಕೆ ಅನುಸರಿಸಿಕೊಂಡಿದ್ದಾರೆ. ನಿರಂಜನರು ಕಂಡುಕೊಂಡಂತೆ ಸ್ಥಳೀಯ ಪುರೋಹಿತಶಾಹಿಗಳು, ರಾಜರು, ಗೌಡ, ಕುಲಕರ್ಣಿ, ಪಾಟೀಲ ಊರಿನ ಮುಖ್ಯಸ್ಥರು ಜನರನ್ನು ಗುಲಾಮಪದ್ಧತಿಗೆ ನೂಕಿ ತಮ್ಮ ಅನುಕೂಲಕ್ಕಾಗಿ ಜನರಿಂದ ಜನರಿಗಾಗಿ ಆಳಲ್ಪಟ್ಟಿದ್ದರು. ಹೀಗೆ ಜನರ ಶೋಷಣೆ, ದಬ್ಬಾಳಿಕೆ, ತೆರಿಗೆ ಹಾಕುವುದು, ಅತ್ಯಾಚಾರ, ಅನಾಚಾರ, ಜೀತಪದ್ಧತಿ ಇವು ನಮ್ಮ ದೇಶದಲ್ಲಿ ಚರಿತ್ರೆಯಾಗಿ ದಾಖಲೆಯಾಗಿವೆ. ಇಂತಹ ಸಂಗತಿಗಳು ಪ್ರಸ್ತುತವೂ ನಡೆಯುತ್ತಿವೆ. ಆದರೆ ಮೃತ್ಯುಂಜಯ ಕತೆ ಕೆಲವು ಸಂಗತಿಗಳು ಈಜಿಪ್ತಿನ ಪೆರೋ ರಾಜಕೀಯ ಆಡಳಿತಕ್ಕೂ ಮೇಲೆ ಹೇಳಿದಂತೆ ನಮ್ಮ ದೇಶದ ರಾಜಕೀಯ ಆಡಳಿತಕ್ಕೂ ಏನು ವ್ಯತ್ಯಾಸ ಕಂಡುಬರುವುದಿಲ್ಲ ಎನ್ನುವುದು ಈ ಕಾದಂಬರಿಯ ವಸ್ತುವಾಗಿದೆ.

ಹಾಗಾಗಿ ಆ ಕಾಲಾವಧಿಯಿಂದ ಇಲ್ಲಿಯವರೆಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಬದುಕನ್ನು ಅರಿಯಲು ಸಾಮಾನ್ಯ ಜನರು ಶ್ರಮಿಸುತ್ತಿದ್ದಾರೆ. ಮೃತ್ಯುಂಜಯ ಕಾದಂಬರಿಯ ಮುನ್ನುಡಿಯಲ್ಲಿ "ನಾಗರಿಕತೆ ಬೆಳೆಯುವುದು ಸಮಾಜದ ಆಂತರಿಕ ತಾಕಲಾಟ, ಘರ್ಷಣೆಗಳ ಮೂಲಕ ಎಂಬುದು ನನ್ನ ನಂಬುಗೆ. ನಿನ್ನೆ ಇವತ್ತು ಸಂಬಂಧ ಅವಿಭಾಜ್ಯ. ಈ ದೃಷ್ಟಿಯಲ್ಲಿ ಮೃತ್ಯುಂಜಯ"[೩] ಎಂದು ಹೇಳುತ್ತಾರೆ. ಹೀಗಾಗಿ ನಿರಂಜನರ ಮಾತನ್ನು ಕನ್ನಡ ಸಾಹಿತ್ಯ ಮತ್ತು ಚರಿತ್ರೆಯನ್ನು ಹಿನ್ನೆಲೆಯಲ್ಲಿ ಅನುಲಕ್ಷಿಸುವುದಾದರೆ ಭಾರತೀಯ ಇತಿಹಾಸದಲ್ಲಿ ನಾಗರಿಕತೆಯ ಮನೆತನಗಳು ಆಳ್ವಿಕೆಗೆ ಒಳಪಟ್ಟಿವೆ. ಆದರೆ ಅಲ್ಲಿಯ ಸಮಾಜದ ಏಕತೆಗಾಗಿ ಹೋರಾಟ ಅಥವಾ ತಮ್ಮ ರಾಜ್ಯದ ವಿಸ್ತರಣೆಗಾಗಿ ಆಗಿರಬಹುದು ಹಾಗೂ ತಮ್ಮ ವರ್ಚಸ್ಸಿಗಾಗಿ ಹೆಣ್ಣು-ಹೊನ್ನು-ಮಣ್ಣು ಈ ಮೂರಕ್ಕಾಗಿ ಹೋರಾಟ ಮಾಡಿವೆ. ಇಲ್ಲಿ ಮೃತ್ಯುಂಜಯ ಕಾದಂಬರಿಯಲ್ಲಿ ಯಾರೋ ಒಬ್ಬರಿಗೋಸ್ಕರ ಅಂದಿನ ರಾಜರು ಸಾಮಾನ್ಯ ಜನರು, ಸಮಾಜವನ್ನು ಪಣಕ್ಕಿಡಲಾಗುತ್ತಿತ್ತು. ಹೀಗೆಯೆ ಅದರ ಕಾಲ ಗತಿಸಿದಂತೆಯೇ ಹಲವಾರು ಪಲ್ಲಟಗಳಾಗಿ ಸಾಂಸ್ಕೃತಿಕ ಚಹರೆಗಳಾಗಿ ಹೋಗಿವೆ. ಇದರಲ್ಲಿ ಇನ್ನೊಂದು ತರನಾದ ಚರಿತ್ರೆಯ ಚಹರೆಯನ್ನು ಗುರುತಿಸಿಕೊಳ್ಳಬಹುದು. ತಮ್ಮ ರಾಜನ ವಿರುದ್ಧ ಹೋರಾಟ, ಬಂಡಾಯ ಮಾಡುವುದನ್ನು ಕಾಣುತ್ತೇವೆ. ಏಕೆಂದರೆ ರಾಜನ

ಕುತಂತ್ರಗಳು ಜನರ ಮೇಲೆ ದಬ್ಬಾಳಿಕೆ ಮಾಡಿದರೆ ಆಗ ಜನರು ತಮ್ಮ ಸ್ವಾಸ್ಥ್ಯ ಬದುಕಿಗಾಗಿ ಹೋರಾಟಗಳು, ಪ್ರತಿಭಟನೆಗಳು ನಡೆದಿವೆ. ಹಾಗೆಯೇ ಮೇಲು-ಕೀಳು ಎಂಬ ಭಾವನೆಗಳು ಮತ್ತು ಅಧಿಕಾರಕ್ಕಾಗಿ, ಅಭಿವೃದ್ಧಿಗಾಗಿ ಮುಸುಕಿನ ಗುದ್ದಾಟಗಳು ನಡೆದಿವೆ. ಇದನ್ನು ಸಮಕಾಲೀನದಲ್ಲಿಯೂ ಗುರುತಿಸಿಕೊಳ್ಳಬಹುದು. ಅಂದು ರಾಜನ ಆಳ್ವಿಕೆಯಲ್ಲಿ ಆಡಳಿತ ನಡೆಸಿದರೆ ಇಂದು ಸಂವಿಧಾನ, ಕಾನೂನಿನ ಮೂಲಕ ಅಧಿಕಾರ ನಡೆಸಲಾಗುತ್ತದೆ. ಅಂದು ರಾಜನ ಮಧ್ಯಸ್ಥಿಕೆಯವರು ಜನರನ್ನು ಶೋಷಣೆ, ದಬ್ಬಾಳಿಕೆಗೆ ಒಳಪಡಿಸಿದರೆ ಇಂದು ಎಲ್ಲ ರೀತಿಯ ಸರ್ಕಾರದ ವ್ಯವಸ್ಥೆಯಿಂದ ಬಂಡವಾಳಶಾಹಿಗಳು ಆರ್ಥಿಕ ಶೋಷಣೆ, ದಬ್ಬಾಳಿಕೆ ನಡೆಸಲಾಗುತ್ತಿದೆ. ಇಲ್ಲಿ ವ್ಯತ್ಯಾಸ ಕಂಡುಬರುವುದು ಕಾಲ ಮತ್ತು ಸ್ಥಳಗಳಲ್ಲಿ ಅಷ್ಟೇ.

ಈ ಕಾದಂಬರಿಯ ಉದ್ದೇಶ ಈ ಮುನ್ನುಡಿಯಲ್ಲಿ ನಿರಂಜನರು ಹೇಳುತ್ತ "ಸಮಾಜದ ವ್ಯವಸ್ಥೆಯಲ್ಲಿ, ಸ್ಥಿತಿಗತಿಗಳಲ್ಲಿ ಅದು ಯಾವ ದೇಶದಲ್ಲಿಯೇ ಇರಲಿ, ಯಾವ ಭೂಖಂಡದಲ್ಲೇ ಇರಲಿ ಜನ ಸಿಡಿದೇಳುವುದು ನಿಶ್ಚಯ. ಕ್ರೌರ್ಯ, ಮರ್ದನಗಳಿಗೆ ಇದಿರಾಗಿ ನ್ಯಾಯಕ್ಕೋಸ್ಕರ ಒಳ್ಳೆಯ ಬದುಕಿಗೋಸ್ಕರ ಜನ ನಡೆಸುವ ಹೋರಾಟಕ್ಕೆ ಸಾವಿಲ್ಲ."[೩೭] ಈ ನಿಲುವಿಗೆ ಪ್ರಗತಿಶೀಲ ಸಾಹಿತ್ಯ ಕೊಡುಗೆಯಾಗಿ ಕಾಣುತ್ತದೆ. ಇದನ್ನು ಅನುಸರಿಸಿದ ೮೦ರ ದಶಕದ ದಲಿತ ಮತ್ತು ಬಂಡಾಯ ಸಾಹಿತ್ಯ ಇದರ ನೆರಳನ್ನು ಅನುಸರಿಸಿದೆ ಎಂದು ಹೇಳಬಹುದು. ಏಕೆಂದರೆ ದಲಿತ-ಬಂಡಾಯ ಬದುಕಿಗೋಸ್ಕರ, ಸಮಾನತೆಗೋಸ್ಕರ ಹೋರಾಟವನ್ನು ಅಳವಡಿಸಿಕೊಂಡಿತು.

**ಪ್ರಗತಿಶೀಲ ಸಾಹಿತ್ಯದ ಐತಿಹಾಸಿಕ ಕಾದಂಬರಿಗಳ ಮುನ್ನುಡಿಗಳಲ್ಲಿ ಹೋರಾಟದ ಪ್ರಜ್ಞೆ**

ಪ್ರಗತಿಶೀಲರು ಐತಿಹಾಸಿಕ ವಸ್ತು ವಿಷಯದ ಆಧಾರಿತವಾಗಿ ಕತೆ, ಕಾದಂಬರಿಗಳು ಸಾಮಾಜಿಕ ಸಂವೇದನೆಯಾಗಿ ಜನರಿಗೆ ಹೋರಾಟ, ಚಳುವಳಿಯನ್ನು ಮೂಡಿಸಿದ್ದಾರೆ. ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳನ್ನು ಹೆಚ್ಚಾಗಿ ಬರೆದವರು. ಮುಖ್ಯವಾಗಿ ಹೋರಾಟ, ಬಂಡಾಯ ಚಳುವಳಿ, ಸಂಗ್ರಾಮದಂತಹ ವಿಷಯ ವಸ್ತುವನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ. ಪ್ರಗತಿಶೀಲ ಸಾಹಿತ್ಯ ಐತಿಹಾಸಿಕ ಕಾದಂಬರಿಗಳಲ್ಲಿ "ಸತ್ಯವನ್ನು ಹೇಳಬೇಕು ಆದರೆ ಹೇಳುವ ಸತ್ಯವನ್ನು ಪ್ರಿಯವಾಗಿ ಹೇಳಲೇಬೇಕೆನ್ನುವುದು ಸಂಪ್ರದಾಯದ ಮಾತು. ಸತ್ಯ ಘೋರವಾಗಿದ್ದಲ್ಲಿ ಅದು ಅಪ್ರಿಯವಾದರೂ ಹೇಳಲೇಬೇಕೆನ್ನುವುದು ಪ್ರಗತಿಶೀಲರ ವಾದ."[೩೮] ಇದು ಅವರ ಕಾದಂಬರಿಯಲ್ಲಿ ವ್ಯಕ್ತಗೊಂಡ ನಿಲುವಾಗಿದೆ. ಇವರು ನವೋದಯದವರಿಗಿಂತ ಭಿನ್ನರಾಗಿ ಕಾಣುತ್ತಾರೆ. ಪ್ರಗತಿಶೀಲ ಸಾಹಿತ್ಯ ಐತಿಹಾಸಿಕ ವಸ್ತುವಿನಲ್ಲಿ ಬ್ರಿಟಿಷರ ವಿರುದ್ಧ ಎದ್ದ ದಂಗೆಗಳು, ಚಳುವಳಿಗಳನ್ನು ಬಹುಮುಖ್ಯವಾಗಿ ಕೇಂದ್ರೀಕರಿಸಲಾಗಿದೆ. ೧೯೪೦ರಲ್ಲಿ ಆಸುಪಾಸಿನಲ್ಲಿ ಜನರು ಕಾದಂಬರಿಗಳನ್ನು ಓದುವುದು ಹೆಚ್ಚಾಗಿ ಕಂಡುಬರುತ್ತದೆ. ಇದರಿಂದ ಭಾರತದ ಸ್ವಾತಂತ್ರ್ಯ ಸಂಗ್ರಾಮದಂತಹ ವಿಷಯಗಳು ಬ್ರಿಟಿಷರ ಚಲನ ವಲನ, ಆಡಳಿತ, ದೇಶೀಯ ರಾಜರನ್ನು ತಮ್ಮ ಮೋಸದ ಬಲೆಯಲ್ಲಿ ಹೇಗೆ ಬಳಸಿಕೊಂಡರು ಎನ್ನುವುದನ್ನು ಪ್ರಗತಿಶೀಲರು ಗುರುತಿಸಿದ್ದಾರೆ. ಇಲ್ಲಿ ಇತಿಹಾಸ

ಕೃತಿಗಳು ಮತ್ತು ಐತಿಹಾಸಿಕ ಕಾದಂಬರಿಗಳಿಗೂ ಇರುವ ಭಿನ್ನತೆಯನ್ನು ಅರಿಯಬೇಕಾಗುತ್ತದೆ. ಈ ಹಿನ್ನೆಲೆಯಿಂದ ಜನರಲ್ಲಿ ಚಳುವಳಿ, ಬಂಡಾಯ, ಪ್ರತಿಭಟನೆ ನಡೆಯಬೇಕಾದ ಅಂಶಗಳ ಬಗ್ಗೆ ಹೆಚ್ಚು ಒತ್ತು ಕೊಡಲಾಗಿದೆ. ಬ್ರಿಟಿಷರು ತಮ್ಮ ವಸಾಹತು ಕೇಂದ್ರಗಳಿಂದ, ಆಡಳಿತದ ಹಿನ್ನೆಲೆಯಿಂದ ಭಾರತದ ಸಂಪತ್ತನ್ನು ನಿರಂತರವಾಗಿ ಲೂಟಿ ಮಾಡಿದ್ದಾರೆ. ಇದಲ್ಲದೇ ನಮ್ಮ ದೇಶದ ಎಷ್ಟೋ ಕುಟುಂಬಗಳನ್ನು ಜೀತಕ್ಕೆ ಒಳಪಡಿಸಿಕೊಂಡಿವೆ. ಇಲ್ಲಿಯ ದೇಶೀಯ ರಾಜರುಗಳ ಕುಮ್ಮಕ್ಕು ಕಂಡುಬರುತ್ತದೆ. ಇದಕ್ಕೆ ಉದಾಹರಣೆ ನಿರಂಜನರ ಚಿರಸ್ಮರಣೆ. ಇಂತಹ ವಿಷಯಗಳ ಕುರಿತು ಕಾದಂಬರಿಗಳಲ್ಲಿ ವ್ಯಕ್ತಗೊಂಡಿದೆ. ಅ.ನ.ಕೃ. ಅವರ 'ವೀರರಾಣಿ ಕಿತ್ತೂರು ಚನ್ನಮ್ಮ', ಬಸವರಾಜ ಕಟ್ಟೀಮನಿ ಅವರ 'ನರಗುಂದ ಬಂಡಾಯ', 'ಸ್ವಾತಂತ್ರದೆಡೆಗೆ', ನಿರಂಜನರ 'ಚಿರಸ್ಮರಣೆ', 'ಮೃತ್ಯುಂಜಯ' ಹಾಗೂ ತ.ರಾ.ಸು. ಅವರ 'ದುರ್ಗಾಸ್ತಮಾನ' ಹೀಗೆ ಅನೇಕ ಕಾದಂಬರಿಗಳನ್ನು ನೋಡುತ್ತೇವೆ.

ಈ ಹಿನ್ನೆಲೆಯಿಂದ ಐತಿಹಾಸಿಕ ಕಾದಂಬರಿಗಳ ರಚನೆ ಹೇಗೆ ಬರವಣಿಗೆಯಲ್ಲಿ ತೊಡಗಿಸಿಕೊಳ್ಳಬೇಕು ಎನ್ನುವುದು ಪ್ರಗತಿಶೀಲರ ಕಾದಂಬರಿಗಳ ನಿದರ್ಶನಗಳಾಗಿವೆ. "ನಮ್ಮ ದೇಶವಿನ್ನೂ ಸ್ವಾತಂತ್ರ್ಯವಾಗಿರಲಿಲ್ಲ. ನಮ್ಮ ಕೈಗಳಿಗೆ ದಾಸ್ಯದ ಬೇಡಿ ಬಿಗಿದಿದ್ದ, ಹಾಗೆ ನಮ್ಮ ಸಾಹಿತ್ಯಕ್ಕೂ ಹಲವಾರು ಸಂಕೋಲೆಗಳು ಬಿಗಿದಿದ್ದವು. ಗುಲಾಮಗಿರಿಯ ಸರಪಣಿಯನ್ನು ಮುರಿದೊಗೆದು ಸ್ವಾತಂತ್ರ್ಯದೆಡೆಗೆ ಸಾಗಬೇಕು"[೫] ಎಂದು 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯ ಮುನ್ನುಡಿಯಲ್ಲಿ ಬಸವರಾಜ ಕಟ್ಟೀಮನಿಯವರು ಹೇಳುತ್ತಾರೆ. ಬಸವರಾಜ ಕಟ್ಟೀಮನಿ ಅವರು ಸ್ವಾತಂತ್ರ್ಯದೆಡೆಗೆ ಕಾದಂಬರಿಯಲ್ಲಿ ಒಬ್ಬ ಯುವಕನ ಮೂಲಕ ಬ್ರಿಟಿಷರ ವಿರುದ್ಧ ಹೋರಾಟ ಮಾಡುವ ಉದ್ದೇಶವಿದೆ. ಕಟ್ಟೀಮನಿಯವರು ಯುವಕರನ್ನು ಇಲ್ಲಿ ಕೇಂದ್ರೀಕರಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಭಾರತದಲ್ಲಿ ಯುವಕರಿಂದ ಭಾರತಕ್ಕೆ ಸ್ವಾತಂತ್ರ್ಯ ಲಭಿಸಬೇಕಾಗಿದೆ ಎಂಬುದು ಅವರ ಉದ್ದೇಶ. ಈ ಸ್ವಾತಂತ್ರ್ಯದೆಡೆಗೆ ಕಾದಂಬರಿಯ ಮೂಲಕ ವ್ಯಕ್ತಗೊಂಡಂತೆ ಬ್ರಿಟಿಷರ ವಿರುದ್ಧ 'ಮುರ್ದಾಬಾದ್' ಎಂದು ಈ ಕಾದಂಬರಿಯಲ್ಲಿ ಉಲ್ಲೇಖಿಸಿ ಕೂಗಿಸಲಾಗಿದೆ. ಈ ತೆರನಾದ ಚಹರೆಗಳು ಭಗತ್‌ಸಿಂಗ್, ಸುಖ್‌ದೇವ, ರಾಜ್‌ಗುರು ಇನ್ನಿತರರನ್ನು ಸ್ವಾತಂತ್ರ್ಯ ಸಂದರ್ಭದ ಸನ್ನಿವೇಶವನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಯುವಕರ ಪಡೆಯನ್ನು ರೊಚ್ಚಿಗೇಳಿಸುವ ಚಳುವಳಿ, ಪ್ರತಿಭಟನೆಗೆ ಧುಮುಕುವ ಪ್ರವೃತ್ತಿ ಪ್ರಗತಿಶೀಲರ ಮತ್ತು ಪ್ರಗತಿಶೀಲ ಸಾಹಿತ್ಯದ ಮನೋಭಾವವಾಗಿತ್ತು. ನಿರಂಜನರ ಜೀವನವನ್ನೊಳಗೊಂಡ ಚಿರಸ್ಮರಣೆ ಕಾದಂಬರಿಯು ಕೂಡ ಕಯ್ಯೂರಿನ ರೈತರಿಗಾಗಿ ಹೋರಾಟ ಮಾಡಿದ್ದು, ನಿರಂಜನರು ಶಾಲಾ ಕಾಲೇಜು ಕಲಿಯುವ ಯುವಕನಾಗಿದ್ದ ಎಂಬುದನ್ನು ತಿಳಿಯಬಹುದು. ಅವರ ಮೃತ್ಯುಂಜಯ ಕಾದಂಬರಿ ಐತಿಹಾಸಿಕ ವಸ್ತುವನ್ನು ಚಳುವಳಿ, ಪ್ರತಿಭಟನೆಯ ಸ್ವರೂಪವಾಗಿ ಸಮಾಜದಲ್ಲಿ ನಡೆಯುವ ದಬ್ಬಾಳಿಕೆಯ ವಿರುದ್ಧ ಧ್ವನಿ ಎತ್ತುವ ವಸ್ತುವಾಗಿ ಕನ್ನಡೀಕರಿಸಲಾಗಿದೆ. ಮೃತ್ಯುಂಜಯ ಕಾದಂಬರಿಯ ಮುಖ್ಯ ವಸ್ತು ಈಜಿಪ್ತಿನ ಬಹುಜನ ಸಮುದಾಯವನ್ನು ಗುಲಾಮಜೀವನಕ್ಕೆ ತೊಡಗಿಸಿ ಕಾಲವಾಗಿತ್ತು. ಆಗ ನಡೆದ ಬಂಡಾಯ ಮಾನವ ನಾಗರಿಕತೆಯ ಇತಿಹಾಸದಲ್ಲೇ

ಪ್ರಪ್ರಥಮವಾದುದು. ಇದರ ಹಿನ್ನೆಲೆಯಿಂದ ಪ್ರಗತಿಶೀಲರು ಐತಿಹಾಸಿಕ ವಸ್ತುವನ್ನು ಆಧರಿಸಿ ತಮ್ಮ ಕಾಲಘಟ್ಟಕ್ಕೆ ಅನುಗುಣವಾಗಿ ಬ್ರಿಟಿಷರ ವಿರುದ್ಧ ವಸಾಹತುಶಾಹಿಗಳ ವಿರುದ್ಧ, ಸಾಮ್ರಾಜ್ಯಶಾಹಿಗಳ ವಿರುದ್ಧ, ವಾಸ್ತವವನ್ನು ಐತಿಹಾಸಿಕ ವಸ್ತುಗಳ ಬರವಣಿಗೆಯಾಗಿ ಜನರಲ್ಲಿ ಜಾಗೃತ ಮನಸ್ಥಿತಿಯನ್ನಾಗಿ ಮೂಡಿಸಿದ್ದಾರೆ.

ಪಾಶ್ಚಾತ್ಯ ಸಾಹಿತ್ಯದ ಮತ್ತು ಚರಿತ್ರೆಯ ಧೋರಣೆಗಳು, ವಿಶ್ವ ಸಾಹಿತ್ಯದ ಐತಿಹಾಸಿಕ ವಸ್ತು ವಿಷಯಗಳು ಭಾರತೀಯರಲ್ಲಿ ಉನ್ನತವಾಗಿವೆ ಎಂದು ಹೇಳಿಕೊಡಲಾಗಿತ್ತು. ಜೊತೆಗೆ ಜನರನ್ನು ಪ್ರತಿನಿಧಿಸುವ ಸಾಹಿತ್ಯ ಮತ್ತು ಚರಿತ್ರೆಗಳನ್ನು ಭಾರತೀಯರಿಗೆ ಹೇಳಿಕೊಡಲಿಲ್ಲ. ಆದರೆ ಭಾರತೀಯ ಸಾಹಿತ್ಯ ಮತ್ತು ಚರಿತ್ರೆಯನ್ನು ಪಾಶ್ಚಾತ್ಯ ಅಧ್ಯಯನಗಳು ಮುನ್ನೆಲೆಗೆ ತಂದವು. ಭಾರತೀಯ ಜನರಲ್ಲಿ ಅದನ್ನು ಹೆಚ್ಚು ಹೆಚ್ಚು ತಿಳಿಸಿಕೊಡುವಲ್ಲಿ ಬ್ರಿಟಿಷ್ ಅಧಿಕಾರಿಗಳು ಮುಂದಾಗಲಿಲ್ಲ. ಆದರೆ ಪುರೋಹಿತಶಾಹಿಯ ಚರಿತ್ರೆಯನ್ನು ಮುನ್ನೆಲೆಗೆ ತರಲಾಯಿತು. ಸಾಹಿತ್ಯ ಮತ್ತು ಚರಿತ್ರೆ ಕಾಲ ಗತಿಸಿದಂತೆ ತಿರುಚಿ ಬರೆಯಲಾಗಿದೆ ಎಂಬ ಗುಮಾನಿ ಇದೆ. ಆದರೆ ಸಾಹಿತ್ಯವು ಇತಿಹಾಸವನ್ನು ಸರಿಯಾಗಿ ವಿಶ್ಲೇಷಣೆಗೆ ಒಳಪಡಿಸಿದೆ. ನಿರಂಜನರು ಅದನ್ನು ಕುರಿತು "ಪ್ರಾಚೀನ ಕಾಲದಲ್ಲಿಯೂ ದಾಯಾದಿ ನಾಗರಿಕತೆಗಳೇ, ವಿಶ್ವದ ಎಲ್ಲಾ ಜನರು ಸಹೋದರ ಸಂಬಂಧಿಗಳೇ ಮೃತ್ಯುಂಜಯದಲ್ಲಿರುವುದು ಆಧುನಿಕ ಮಾನವರ ಪೂರ್ವಜರ ಕತೆ. ಅದು ನಮಗೆ ಪರಕೀಯವಲ್ಲ"[೪೦] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ವಿಶ್ವ ಚರಿತ್ರೆ ಮತ್ತು ಭಾರತೀಯ ಚರಿತ್ರೆಯ ಪರಿಪೂರ್ಣತೆ ಕಂಡುಬರುವುದು ಕಡಿಮೆ. ಆದರೆ ಸಾಹಿತ್ಯ ಕೃತಿಗಳ ಮೂಲಕ ವಸ್ತು ವಿಶ್ಲೇಷಣೆಯಾಗಿ ನಿಜಚರಿತ್ರೆಯಾಗಿ ನಮ್ಮ ಮುಂದೆ ಒದಗುತ್ತದೆ.

ಅ.ನ.ಕೃ. ಅವರು 'ವೀರರಾಣಿ ಕಿತ್ತೂರು ಚೆನ್ನಮ್ಮ' ಕಾದಂಬರಿಯ ಮುನ್ನುಡಿಯಲ್ಲಿ "ಕಿತ್ತೂರಿನ ಸ್ವಾತಂತ್ರ್ಯ ಸಮರ ಯಾವ ಜಾತಿ, ಮತ, ಜನಾಂಗದ ಸಮರವೂ ಆಗಿರಲಿಲ್ಲ. ಇಡೀ ಕಿತ್ತೂರೇ ಏಕದೇಹ, ಏಕಾತ್ಮವಾಗಿ ನಿಂತು ಈ ಮಹಾಸಂಗ್ರಾಮವನ್ನು ನಡೆಸಿತು"[೪೧] ಎಂದು ಹೇಳುತ್ತಾರೆ. ಇಲ್ಲಿ ಬ್ರಿಟಿಷರ ವಿರುದ್ಧ ತಮ್ಮ ಅಸ್ತಿತ್ವಕ್ಕಾಗಿ, ದೇಶದ ಹಿತಕ್ಕಾಗಿ, ತಮ್ಮ ಸಂಸ್ಕೃತಿ ಮತ್ತು ನೆಲೆಯನ್ನು ಕಂಡುಕೊಳ್ಳುವುದಕ್ಕಾಗಿ ಸಮೂಹ ಹೋರಾಟ ಮಾಡಲಾಗಿದೆ. ಆದರೆ ಬ್ರಿಟಿಷರು ಭಾರತದಲ್ಲಿ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದ್ದರು. ಅದಕ್ಕೆ ಸಾಥ್ ನೀಡಿದವರು ಪುರೋಹಿತಶಾಹಿಗಳು ಎಂಬುದನ್ನು ಮನಗಾಣಬೇಕಾಗಿದೆ. ಹಾಗೆಯೇ ಜಾತಿ, ಮತ, ಎನ್ನುವ ವಿಷದ ಬೀಜ ಬಿತ್ತಲಾಗಿತ್ತು. ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡ ನಂತರ ಅನೇಕ ಬ್ರಿಟೀಷರ ವಿರುದ್ಧ ಇದ್ದ ದಾಖಲೆಗಳನ್ನು ನಾಶಪಡಿಸಿ ಬ್ರಿಟಿಷರು ಮಾಡಿದ ಅಭಿವೃದ್ಧಿ ಕಾರ್ಯಗಳನ್ನು ಮುಂದಿನ ದಿನಗಳಲ್ಲಿ ಶ್ಲಾಘಿಸಲಾಯಿತು. ಕಿತ್ತೂರು ಒಂದೇ ಅಲ್ಲ, ಮೈಸೂರು ಸಂಸ್ಥಾನ ಒಳಗೊಂಡಂತೆ ದೇಶದ ಅನೇಕ ಸಂಸ್ಥಾನಗಳ ಮೂಲದಾಖಲೆಗಳನ್ನು ನಾಶಪಡಿಸಲಾಗಿದೆ. ಆದರೆ ಬ್ರಿಟಿಷರ ಅಧಿಕಾರದ ಅಭಿವೃದ್ಧಿ ಕಾರ್ಯಗಳನ್ನು ಉನ್ನತೀಕರಿಸಿ ಭಾರತ ಸ್ವಾತಂತ್ರ್ಯಗೊಂಡ ನಂತರ

ನಮ್ಮ ಸಂವಿಧಾನದಲ್ಲಿ ಯಥಾವತ್ತಾಗಿ ಬಳಸಿಕೊಳ್ಳಲಾಗಿದೆ. ಉದಾಹರಣೆಗೆ ಮೆಕಾಲೆ ಶಿಕ್ಷಣ ಪದ್ಧತಿ. ಈ ಹಿನ್ನೆಲೆಯಿಂದ ಅನೇಕ ವಿಷಯಗಳನ್ನು ಕನ್ನಡದ ಐತಿಹಾಸಿಕ ಕಾದಂಬರಿಗಳು ಅನಾವರಣಗೊಳಿಸಿವೆ.

ಭಾರತದಲ್ಲಿ ೧೮೫೭ರಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮ ವಿಷಯ ಎಲ್ಲರಿಗೂ ಗೊತ್ತಿದೆ. ಆಗ ಆಂಗ್ಲರ ಆಳ್ವಿಕೆಯನ್ನು ಕಿತ್ತೊಗೆಯಲು ಉತ್ತರ ಭಾರತದಲ್ಲಿ ಸಂಘಟಿತ ಸ್ವರೂಪದಲ್ಲಿ ಹೋರಾಟ ನಡೆಯಿತು. ಆದರೆ ದಕ್ಷಿಣ ಭಾರತದಲ್ಲಿ ಆಂಗ್ಲರ ಆಳ್ವಿಕೆಯ ವಿರುದ್ಧ ಹೋರಾಟ ನಡೆಯಲಿಲ್ಲ. ಆದರೆ ಕಂಪನಿ ಸರ್ಕಾರವನ್ನು ಕೆಲದಿನಗಳ ಮಟ್ಟಿಗಾದರೂ ನಡುಗಿಸುವ ಚಿಕ್ಕ ಪುಟ್ಟ ಬಂಡಾಯ, ಚಳುವಳಿಗಳು ನಮ್ಮ ಕರ್ನಾಟಕದಲ್ಲಿ ಕೂಡ ನಡೆದಿವೆ. ಇಲ್ಲಿ ಬ್ರಿಟಿಷರು ತಮ್ಮ ಹಿತಕ್ಕಾಗಿ ನಮ್ಮ ನಮ್ಮಲ್ಲಿ ವೈರುಧ್ಯಗಳನ್ನು ಸೃಷ್ಟಿಸಿ ಬಂಡಾಯ ಮಾಡಿಸಿದ ಘಟನೆಗಳಿವೆ. ಇದಕ್ಕೆ ನರಗುಂದ ಬಂಡಾಯವನ್ನು ಗಮನಿಸಬಹುದು. ಬಸವರಾಜ ಕಟ್ಟೀಮನಿಯವರು ಹೇಳುವ ಹಾಗೆ "ನರಗುಂದದ ಹೊರಗೆ ನಡೆದ ಸಮರಕ್ಕಿಂತ ನರಗುಂದದ ಒಳಗೆ ಬೇರೆ ಬೇರೆ ವರ್ಗಗಳ ನಡುವೆ ನಡೆದ ಸಮರವೇ ಆ ರಾಜ್ಯದ ಪತನಕ್ಕೆ ಕಾರಣವಾಯಿತೆಂಬುದೊಂದು ಐತಿಹಾಸಿಕ ಸತ್ಯ"[೨] ಎಂದು ಹೇಳುತ್ತಾರೆ. ಈ ಕಾದಂಬರಿಯಲ್ಲಿ ಭಾಸ್ಕರರಾಯನಿಗೆ ದತ್ತು ಸ್ವೀಕಾರ ಕೊಡದ ಬ್ರಿಟಿಷರ ವಿರುದ್ಧ ನರಗುಂದದ ಜನರು ಬಂಡಾಯವೇಳುತ್ತಾರೆ. ಹಾಗೆಯೇ ರಾಜಮನೆತನದ ಇನ್ನುಳಿದ ಸಂಬಂಧಿಗಳಿಗೆ ಭಾಸ್ಕರರಾಯ ದತ್ತು ಸ್ವೀಕಾರ ಪಡೆದರೆ ನಮಗೆ ಅಧಿಕಾರ ಸಿಗುವುದಿಲ್ಲ ಎಂಬ ಆಮಿಷತನದಿಂದ ಒಳ ಒಳಗೆ ಸೇಡು ತೀರಿಸಿಕೊಳ್ಳುತ್ತಾರೆ. ಆಗ ನರಗುಂದದ ಜನರನ್ನು ಬ್ರಿಟಿಷರು ಬಗ್ಗು ಬಡಿದು ಆಂಗ್ಲರ ಆಳ್ವಿಕೆಗೆ ಅಧೀನವಾಗುತ್ತದೆ. ಈ ತರನಾದ ದುಸ್ಥಿತಿ ನರಗುಂದ ಅಷ್ಟೇ ಅಲ್ಲ. ಭಾರತದ ಐನೂರಕ್ಕೂ ಹೆಚ್ಚು ಸಂಸ್ಥಾನಗಳು ಬ್ರಿಟಿಷರ ಕೈವಶವಾಗಿರುವುದು ಹೀಗೆ.

ಪ್ರಗತಿಶೀಲ ಸಾಹಿತ್ಯದ ಚರಿತ್ರೆಯ ವಿಷಯಗಳು ಬಂಡಾಯದ ಹಿನ್ನೆಲೆಯಲ್ಲಿ ಸಮಾಜಪರವಾದ, ನ್ಯಾಯಪರವಾದ ನೆಲೆಯಲ್ಲಿ ರಚನೆಗೊಂಡಿವೆ. ಅಂದಿನ ಚಾರಿತ್ರಿಕ ವಸ್ತು ಇಂದು ಬೇರೆ ಬೇರೆ ಸ್ವರೂಪ ಪಡೆದುಕೊಂಡಿದೆ. ಅಂದು ದೇಶದ ಸ್ವಾತಂತ್ರ್ಯಕ್ಕೋಸ್ಕರ ಹೋರಾಟ ಮಾಡಿದರು. ಭಗತ್‌ಸಿಂಗ್, ರಾಜ್‌ಗುರು, ಸುಖ್‌ದೇವ, ಗಾಂಧೀಜಿ, ಅಂಬೇಡ್ಕರ್ ಇನ್ನೂ ಅನೇಕರು ಭಾರತಕ್ಕೆ ಸ್ವಾತಂತ್ರ್ಯ ಬೇಕು ಎಂದು ಹೋರಾಟ ಮಾಡಿದರು. ಆದರೆ ಇಂದು ಭಾರತ ದೇಶದೊಳಗೆ ಸ್ವಾತಂತ್ರ್ಯ ಬೇಕು ಎಂದು ಹೋರಾಟ ಮಾಡುವ ಸ್ಥಿತಿ ಬಂದಿದೆ. ಉದಾಹರಣೆಗೆ "ರೋಹಿತ್ ವೇಮುಲ ಪ್ರಕರಣ, ವಿಚಾರವಾದಿಗಳ ಹತ್ಯೆ" ಇವುಗಳನ್ನು ಗಮನಿಸಬಹುದು. ಭಾರತದಲ್ಲಿ ಹೊಸ ಆಯಾಮದ ಸ್ವಾತಂತ್ರ್ಯ ಚಳುವಳಿ ಪ್ರಾರಂಭವಾಗಿದೆ. ಹೀಗಾಗಿ ಪ್ರಗತಿಶೀಲರ ಸಾಹಿತ್ಯದ ಸ್ವರೂಪ ಯಾವುದನ್ನೇ ದಾಖಲಿಸಿದರೂ ಸಮಾಜವಾದ, ಮಾರ್ಕ್ಸ್‌ವಾದ ಹಾಗೂ ಉದಾರ ಮಾನವೀಯವಾದದ ಹಿನ್ನೆಲೆಯಿಂದ ಸೈದ್ಧಾಂತಿಕ ಚಿಂತನೆಗಳು, ನವವಾದದ ಚಿಂತನೆಗಳಿಂದ ಹೊಸ ಬೆಳಕಿನ ಕಡೆಗೆ ರೂಪಿಸಿ ಸೃಜನಶೀಲ ಹೊಸ ಮನೋಭೂಮಿಕೆಯಾಗಿ ಗುರುತಿಸಿಕೊಳ್ಳಬೇಕಾಗಿದೆ.

ಅ.ನ.ಕೃ. ಅವರು ಹೇಳುತ್ತಾ "ಜೀವನ ಹಸನಾಗಬೇಕು, ಬಾಳು ಸಹ್ಯವಾಗಬೇಕು, ಮಾನವರಿಗೆ ಅವನ ನಿಜಾತ್ಮ ಅರಿವಾಗಬೇಕೆಂದೇ ಎಲ್ಲಾ ಪ್ರಗತಿಶೀಲ ಸಾಹಿತಿಗಳ ಬಯಕೆ"[೬೩] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಪ್ರತಿಯೊಬ್ಬ ಲೇಖಕನಿಗೂ ಸಾಹಿತಿಗೂ ಸಮಾಜದ ಸಂವೇದನೆಯನ್ನು ಗಂಭೀರವಾಗಿ ಚಿಂತಿಸುವ ಹೊಸ ಸಮಸ್ಯೆಯ ಸವಾಲುಗಳನ್ನು ಎದುರಿಸಬೇಕಾಗಿದೆ. ಬಸವರಾಜ ಕಟ್ಟೀಮನಿ ಅವರು ಹೇಳುವ ಹಾಗೆ "ವಾಸ್ತವ ಪರಿಸ್ಥಿತಿಗೆ ಕಣ್ಣು ಕಿವಿ ತೆರೆದಿಟ್ಟು ಒಳ್ಳೆಯ ಬದುಕಿಗಾಗಿ ಹೋರಾಡುತ್ತಿರುವ ಜನತೆಗೆ ಸ್ಫೂರ್ತಿ ನೀಡುವಂತಹ ಕೃತಿಗಳನ್ನು ರಚಿಸುವುದೇ ಪ್ರಗತಿಶೀಲತೆ"[೬೪] ಎಂದಿದ್ದಾರೆ. ಈ ಸಂಗತಿಯಿಂದ ಸಮಾಜದ ಎಲ್ಲಾ ಜನರು ಜಾಗೃತ ಸಂವೇದನೆಯನ್ನು ಒಳಗೊಂಡಿರಬೇಕಾಗುತ್ತದೆ. ಇಲ್ಲಿಯ ಸಾಹಿತಿಗಳು, ಲೇಖಕರು, ಚಿಂತಕರು ಸಮಾಜದಲ್ಲಿ ನಡೆಯುವ ವರ್ಗವೈಷಮ್ಯ ದೀನ-ದಲಿತರ ಶೋಷಣೆ, ಮಹಿಳೆಯರ ಮೇಲೆ ನಡೆಯುವ ಶೋಷಣೆ, ರೈತರ ಸಂಕಷ್ಟಗಳು, ಆರ್ಥಿಕ ಅಸಮತೋಲನ, ಅಸಮಾನತೆ ಈ ಎಲ್ಲವನ್ನು ಹೋಗಲಾಡಿಸುವುದಕ್ಕೆ ಮುಖ್ಯವಾಗಿ ಸಮಾಜಮುಖಿಯಾಗಿ ಸಮಾನತೆ, ಸೋದರತೆ, ಸೌಹಾರ್ದತೆಯಾಗಿ ಮಾನವೀಯ ನೆಲೆಯಲ್ಲಿ ಅರಿತುಕೊಳ್ಳಬೇಕಾಗಿದೆ ಅಥವಾ ಗುರುತಿಸಿಕೊಳ್ಳಬೇಕಾಗಿದೆ.

ಕನ್ನಡ ಪ್ರಗತಿಶೀಲರು ಸಮಾಜಕ್ಕೆ ಹೊಸ ಸಂವೇದನೆಯ ಬಿರುಗಾಳಿಯನ್ನು ಎಬ್ಬಿಸಿದರು. ಹಾಗೆ ಚಳುವಳಿಯಾತ್ಮಕ ಅಂಶಗಳನ್ನು ಕಾದಂಬರಿಯಲ್ಲಿ ರಚಿಸಿದರು. ಓದುಗರಿಗೆ ಹೊಚ್ಚ ಹೊಸದೆಂದು ಧ್ವನಿಸುವಂತಹ ಅನುಭವಗಳು ಸಾಹಿತ್ಯದೊಳಕ್ಕೆ ಪ್ರವೇಶ ಪಡೆದದ್ದು ಇವರ ಕಾಲದಲ್ಲಿ ಎಂದು ಹೇಳಬಹುದು. ಸಾಹಿತ್ಯದ ಭಾಷೆಗೆ ಒಂದು ಬಗೆಯ ಗಟ್ಟಿ ಧ್ವನಿ ಬಂದಿತು. ವಿಶ್ವದ ಬೇರೆ ಬೇರೆ ದೇಶಗಳ ಲೇಖಕರ ವಿಚಾರಧಾರೆಗಳನ್ನು ಪ್ರಗತಿಶೀಲರು ಕನ್ನಡ ಭಾಷೆಯೊಳಗೆ ಬಳಸಿಕೊಂಡರು. ಪ್ರಗತಿಶೀಲ ಸಾಹಿತ್ಯ ಸಂದರ್ಭದಲ್ಲಿ ಹಲವಾರು ಚಿಂತನೆಗಳು, ಸಿದ್ಧಾಂತಗಳು, ಅವರು ಮಾಡಿದ ಆಂದೋಲನಗಳು ಮುಂದುವರಿದಂತೆಯೇ ೮೦ರ ದಶಕದಲ್ಲಿ ಬೇರೆ ಸ್ವರೂಪ ಪಡೆದುಕೊಂಡಿತು. ಏಕೆಂದರೆ ಭಾರತ ದೇಶ ಸ್ವಾತಂತ್ರ್ಯವನ್ನು ಪಡೆದುಕೊಳ್ಳಬೇಕು ಎಂಬ ಉದ್ದೇಶದಿಂದ ಬಲವಾದ ಹೋರಾಟಗಳು ಅಂದು ನಡೆದವು. ಆದರೆ ೮೦ರ ದಶಕದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದೆ, ಆದರೆ ಯಾರಿಗೆ ಸಿಕ್ಕಿದೆ ಎಂಬುದು ಪ್ರಶ್ನೆಯಾಗಿತ್ತು. ಆದರೂ ಪ್ರಸ್ತುತ ದಿನಕ್ಕಿಂತಲೂ ಭಾರತದಲ್ಲಿ ಸಾಮಾನ್ಯ ಜನತೆಗೆ ಸ್ವಾತಂತ್ರ್ಯ ಬೇಕಾಗಿದೆ. ಅದು ಆಜಾದಿ ಬೇಕಾಗಿದೆ, ನ್ಯಾಯ ಬೇಕಾಗಿದೆ ಎಂಬುದು ಬಲವಾದ ಕೂಗಾಗಿ ಹೊಸ ಸಮಾಜಕ್ಕಾಗಿ ಹೋರಾಟ, ಚಳುವಳಿ ಮಾಡುವ ಅನಿವಾರ್ಯವನ್ನು ಒಳಗೊಳ್ಳಬೇಕಾಗಿದೆ. ಏಕೆಂದರೆ ರಾಜಕೀಯ ಪಕ್ಷಗಳು ಅಧಿಕಾರಕ್ಕೆ ಬರುವ ಮುನ್ನ ತಮ್ಮ ಪ್ರಣಾಳಿಕೆಗಳಲ್ಲಿ ಸಮಾನತೆ, ಸಮಾಜದ ಕನಸಿಗಾಗಿ ಅಭಿವೃದ್ಧಿಪರ ಎಂದು ಘೋಷಣೆ ಮಾಡುತ್ತಾರೆ. ಆದರೆ ಅಧಿಕಾರಕ್ಕೆ ಬಂದ ನಂತರ ತಮ್ಮ ಪ್ರಣಾಳಿಕೆಗಳು ಬದಲಾವಣೆಯಾಗಿ ತಮ್ಮ ಅಧಿಕಾರ, ಸರ್ವಾಧಿಕಾರತನದ ನಿಲುವು ಹೊಂದುತ್ತವೆ. ಇನ್ನೊಂದು ಜನರಿಗೆ ಭರವಸೆಯನ್ನು ನೀಡಿ ಅದನ್ನು ಈಡೇರಿಸುವಲ್ಲಿ ಎಡವುತ್ತವೆ. ಇದಕ್ಕೆ ಕಾರಣ ವಸಾಹತುಶಾಹಿಗಳು, ಬಂಡವಾಳಶಾಹಿಗಳು ಜನರಿಗೆ ಒಂದು ರೀತಿಯಲ್ಲಿ ರಾಜಕಾರಣಿಗಳ ಕುಮ್ಮಕ್ಕಿನಿಂದ ಜನರನ್ನು ಅಡ್ಡದಾರಿಗೆ ಎಳೆಯುವ

ಕೆಲಸ ಮಾಡುತ್ತವೆ. ಹಾಗಾಗಿ ಪ್ರಗತಿಶೀಲರು ನಮಗೆ ಪ್ರಸ್ತುತ ಎನಿಸುತ್ತಾರೆ ಮತ್ತು ನಮ್ಮ ಸಮಾಜದ ಜನರಿಗೆ ಪ್ರಮುಖರಾಗುತ್ತಾರೆ.

### ೪.೩. ನವ್ಯ ಸಾಹಿತ್ಯ ಸಂದರ್ಭದ ಮುನ್ನುಡಿಗಳು

ಯಾವುದೇ ಸಾಹಿತ್ಯದ ಚಿಂತನೆ ಬರವಣಿಗೆಯಲ್ಲಿ ಕಾಲಕಾಲಕ್ಕೆ ಬದಲವಣೆಗೊಳ್ಳುತ್ತಾ ಸಮಾಜದ ಚಲನಶೀಲತೆಗೆ ಆರೋಗ್ಯಕರ ಪ್ರತಿಕ್ರಿಯೆ ನೀಡುತ್ತಾ ಸಾಗುತ್ತದೆ. ಇದರಿಂದ ರೂಪಿತವಾದ ಸಾಹಿತ್ಯವು ಕೂಡ ಆಗಾಗ ಸ್ಥಿತ್ಯಂತರಗೊಳ್ಳುತ್ತಾ ಮಾನವನ ಬದುಕಿನ ಸ್ಥಿತಿಯು ಭಾಷೆಯ ಜೊತೆ ಜೊತೆಗೆ ನಡೆಯುತ್ತದೆ. ಹೀಗೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪ್ರಾಚೀನ ಕನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡದ ಪ್ರತಿಕ್ರಿಯೆಯಾಗಿ ಮುನ್ನುಡಿಗಳು ಒಡಮೂಡಿಸಿವೆ. ಇವು ಸಾಹಿತ್ಯ ಚಿಂತನೆಯ ರವಾನೆ ಹಲವು ಸ್ತರಗಳನ್ನು ಹೊಂದಿವೆ. ಆಧುನಿಕ ಕನ್ನಡ ಪ್ರಾಚೀನ ಸಾಹಿತ್ಯದ ಪರಂಪರೆಯ ತಳಹದಿಯ ನೆಲೆ ಹೊಂದಿದ್ದರೂ ಇಲ್ಲಿ ಮುಖ್ಯವಾಗಿ ಸಿದ್ಧಾಂತಗಳು, ತತ್ವಗಳು ಭಾಷೆಯ ಪದರಚನೆಗಳು ಮುಖ್ಯವಾಗಿವೆ. ಇವು ಪೂರ್ವ, ಪಶ್ಚಿಮ ಜೀವನದೃಷ್ಟಿಯ ಸಾಹಿತ್ಯಕ ಸಂವೇದನೆಯನ್ನು ಹೊಂದಿವೆ. ಬದುಕಿನ ಸೃಜನಶೀಲ ಸೈದ್ಧಾಂತಿಕ ಮೌಲ್ಯಗಳಾಗಿ ಸಮಾಜದ ಫಲಿತವಾಗಿವೆ. ನವೋದಯ, ಪ್ರಗತಿಶೀಲ ಸಾಹಿತ್ಯದ ಚಳುವಳಿ ಸಿದ್ಧಾಂತಗಳಾಗಿ ನವ್ಯದ ಸಾಹಿತ್ಯವು ಚಳುವಳಿಯಾತ್ಮಕ ಪ್ರತಿಕ್ರಿಯೆಯಾಗಿ ತನ್ನ ಸಿದ್ಧಾಂತವನ್ನು ಪಾಶ್ಚಿಮಾತ್ಯರ ಅನುಕರಣೆಯಿಂದ, ಮನೋವೈಜ್ಞಾನಿಕ ವಿಚಾರಗಳಿಂದ, ಅಸ್ತಿತ್ವವಾದ, ತನ್ನತನದ ಹುಡುಕಾಟದ ಹಂಬಲದಿಂದ ಬದುಕಿನ ಸ್ಥಿತ್ಯಂತರವಾದ ನೆಲೆ ಹೊಂದಿದೆ. ಮಾರ್ಕ್ಸ್‌ವಾದ, ಲೋಹಿಯಾವಾದ ಇನ್ನೂ ಅನೇಕ ತತ್ವಗಳಿಂದ ಪಾಶ್ಚಿಮಾತ್ಯದ ಸಾಹಿತ್ಯವನ್ನು ಪ್ರವೇಶಿಸುವ ಮೂಲಕ ಸಾಹಿತ್ಯ ಬದುಕಿಗೂ ಒಂದು ಹೊಸ ಆಯಾಮವನ್ನು ತಂದುಕೊಟ್ಟವು. ಈ ಹಿನ್ನೆಲೆಯಲ್ಲಿ ಮೂಡಿದ ನವ್ಯ ಸಾಹಿತ್ಯವು ಒಂದು "ವಿಶಿಷ್ಟ ಸಂವೇದನೆ, ವಿಶಿಷ್ಟವಾದ ಜೀವನ ಧೋರಣೆ, ವಿಶಿಷ್ಟ ರೂಪಗಳು, ವಿಶಿಷ್ಟ ಸೃಷ್ಟಿ ಪ್ರಕ್ರಿಯೆ ಆಗಿದ್ದು ಇವೆಲ್ಲದರ ಪರಸ್ಪರ ಸಂಬಂಧದಿಂದ ಹುಟ್ಟಿದ ವಿಶಿಷ್ಟ ನವ್ಯ ಸಾಹಿತ್ಯ"[೪೫] ಎಂದು ಹೇಳಲಾಗಿದೆ. ಹೀಗಾಗಿ ಇದರ ಪ್ರಭಾವ ಭಾರತೀಯ ಮತ್ತು ಕನ್ನಡ ಸಾಹಿತ್ಯದಲ್ಲಿ ಉಂಟಾದ ಸೃಷ್ಟಿಯ ಸ್ಥಿತಿಯನ್ನು ನವ್ಯ ಸಾಹಿತ್ಯ ಎಂದು ಹೇಳುತ್ತೇವೆ.

ನವ್ಯ ಸಾಹಿತ್ಯದ ಪೂರ್ವದ ಎರಡು ಕಾಲಘಟ್ಟಗಳು ಆಶಯಾತ್ಮಕ, ಭಾವನಾತ್ಮಕ ನಿಸರ್ಗಪ್ರಿಯತೆ, ಆಧ್ಯಾತ್ಮಕ್ಕೆ ಒಲವು ನೀಡಿತು. ಇದು ಮುಂದುವರಿದು ಪ್ರಗತಿಶೀಲರಲ್ಲಿ ನವೋದಯದವರ ಕುರಿತು ಬೇರೆಯದೆ ನಿಲುವು ತಾಳಿತು. ಅವರಲ್ಲಿ ಬದುಕಿನ ಪ್ರಶ್ನೆ ಇಟ್ಟುಕೊಂಡು ಸಾಮಾಜಿಕ ಸಮಸ್ಯೆಗಳಿಗೆ ಪ್ರತಿಕ್ರಿಯಿಸುತ್ತಾ ಸಾಮ್ರಾಜ್ಯಶಾಹಿ, ಬಂಡವಾಳಶಾಹಿಯ ದೌರ್ಜನ್ಯದ ವಿರುದ್ಧ ಹೋರಾಟ ಮಾಡಿದರು. ತದನಂತರ ೧೯೫೦ರ ದಶಕದಲ್ಲಿ ನವ್ಯ ಸಾಹಿತ್ಯ ಕಾಲಘಟ್ಟವು ಆರಂಭಗೊಂಡಿತು. ಇದು ನವೋದಯ ಹಾಗೂ ಪ್ರಗತಿಶೀಲರ ಕೆಲವು ನಿಲುವುಗಳನ್ನು ಹೊಂದಿತು. ಅಡಿಗರ ಕವನ ಸಂಕಲನ 'ನಡೆದು ಬಂದ ದಾರಿ' ಕೃತಿಯಿಂದ ಬೇರೆಯದೇ ಆಯಾಮ ನವ್ಯರಲ್ಲಿ ಒಳಗೊಂಡಿದೆ.

ಆದರೆ ಸಾಹಿತ್ಯ ಕಾಲಕಾಲಕ್ಕೆ ಬದಲಾವಣೆ ಹೊಂದುವ ಕ್ರಿಯೆಯಾಗಿದೆ. ನವ್ಯ ಕಾಲಘಟ್ಟವು ಮುಖ್ಯವಾಗಿ ಎರಡನೇ ಮಹಾಯುದ್ಧ ಮುಗಿದ ನಂತರ ಉತ್ತುಂಗದಲ್ಲಿತ್ತು. ಈ ಮಹಾಯುದ್ಧದಿಂದ ಇಡೀ ಜಗತ್ತಿನಾದ್ಯಂತ ಆರ್ಥಿಕ ಹೊಡೆತ ಬಿದ್ದಿತು. ಇದರ ಪರಿಣಾಮ ಮೂರನೇ ರಾಷ್ಟ್ರಗಳ ಮೇಲೆ ಆಯಿತು. ಇದಾದ ನಂತರ ಫ್ರೆಂಚ್, ಇಂಗ್ಲೆಂಡ್, ಯುರೋಪ್ ದೇಶಗಳಲ್ಲಿ ಅರಾಜಕತೆ ಸಂಭವಿಸಿತು. ಜನತೆಯಲ್ಲಿ ಅಸಹಾಯಕತೆ ಸೃಷ್ಟಿಯಾಗಿ ಜನರ ಬದುಕಿನಲ್ಲಿ ಅನಾಥಪ್ರಜ್ಞೆ, ಪರಕೀಯತೆ, ಸಿನಿಕತನ, ಮುಂತಾದ ಆಧುನಿಕ ಬದುಕಿನ ಒತ್ತಡಗಳ ಎದುರಾಗುತ್ತವೆ. ಆಗ ಯುರೋಪ್ ದೇಶಗಳು ಚೇತರಿಕೆಗಾಗಿ ಅಭಿವೃದ್ಧಿಯ ಕಾರ್ಯಗಳು ಜನರ ಬದುಕಿಗೆ ಪ್ರಮುಖವೆನಿಸುತ್ತವೆ. ಕೆಲವು ದೇಶಗಳಲ್ಲಿ ಹಿಡಿತ ಸಾಧಿಸಿದ ಯುರೋಪ್ ದೇಶಗಳು ಅಲ್ಲಿಯ ವಸಾಹತು ಕೇಂದ್ರಗಳಾಗಿ ಬಂಡವಾಳ ಹೂಡುವ ಪ್ರಕ್ರಿಯೆ ನಡೆಯುತ್ತದೆ.

ಇದೇ ಸಂದರ್ಭದಲ್ಲಿ ಭಾರತವನ್ನು ಆಳುತ್ತಿದ್ದ ಇಂಗ್ಲೆಂಡ್ ದೇಶ ಭಾರತಕ್ಕೆ ಸ್ವಾತಂತ್ರ್ಯ ಕೊಡಬೇಕು ಎನ್ನುವಾಗ ಕೆಲವು ಷರತ್ತುಗಳನ್ನು ನೀಡಿ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುತ್ತದೆ. ಇಲ್ಲಿಯ ಇಂಗ್ಲೆಂಡ್ ದೇಶದ ತಂತ್ರ ಏನಾಗಿತ್ತೆಂದರೆ ಇಡೀ ಜಗತ್ತಿನಲ್ಲಿ ಹೆಚ್ಚು ಹೆಚ್ಚು ಬಂಡವಾಳ ಹೂಡುವ ದೇಶವೆಂದರೆ ಇಂಗ್ಲೆಂಡ್ ಆಗಿದೆ. ಜೊತೆಗೆ ಅದರ ಸ್ನೇಹಿತ ಸದಸ್ಯ ರಾಷ್ಟ್ರಗಳಾದ ಅಮೆರಿಕ, ಫ್ರಾನ್ಸ್, ಕೆನಡಾ ಇನ್ನೂ ಕೆಲವು ಯುರೋಪ್ ದೇಶಗಳ ಒಳಗೊಂಡಿವೆ. ಇವುಗಳಲ್ಲಿ ಅಮೆರಿಕ ಗುಂಡು ಮದ್ದುಗಳಲ್ಲಿ ಮುಂದೆ ಇದ್ದರೆ, ಇಂಗ್ಲೆಂಡ್ ಬಂಡವಾಳ ಹೂಡುವುದರಲ್ಲಿ ಮುಂದೆ ಇದೆ. ಉಳಿದವುಗಳು ಹೀಗೆಯೇ ಇವೆ. ಹಾಗಾಗಿ ಏಷ್ಯಾಖಂಡದ ದೇಶಗಳು ಇನ್ನೂ ಅಭಿವೃದ್ಧಿ ಹೊಂದುವ ರಾಷ್ಟ್ರಗಳಾಗಿವೆ. ಆದರೆ ಯುರೋಪ್ ದೇಶಗಳಲ್ಲಿ ಅಮೆರಿಕ, ಇಂಗ್ಲೆಂಡ್ ಬಲಿಷ್ಠ ರಾಷ್ಟ್ರವಾಗಿದೆ. ಹೀಗಾಗಿ ಜಗತ್ತಿನ ಎಲ್ಲಾ ದೇಶದ ಜುಟ್ಟು ವಿಶ್ವಸಂಸ್ಥೆಯ ಕೈಯಲ್ಲಿದೆ. ಆದರೆ ವಿಶ್ವಸಂಸ್ಥೆಯ ಜುಟ್ಟು ಯುರೋಪ್ ದೇಶಗಳ ಕೈಯಲ್ಲಿದೆ. ಇಲ್ಲಿ ಮುಖ್ಯವಾಗಿ ಚರ್ಚಿಸಬೇಕಾಗಿದ್ದು ನವ್ಯತೆಯನ್ನು. ಯುರೋಪ್ ದೇಶದಲ್ಲಿ ಎರಡನೇ ಮಹಾಯುದ್ಧದ ಪರಿಣಾಮಗಳಿಂದಾದ ಕೆಲವು ಸಾಹಿತಿಗಳು ತಮ್ಮ ಸಿದ್ಧಾಂತಗಳಿಂದ ಕಾವ್ಯ, ಕತೆ, ಕಾದಂಬರಿ, ಪ್ರಬಂಧ ಮೂಲಕ ಜನತೆಯಲ್ಲಿ ಅಡಗಿರುವ ಜಡತ್ವವನ್ನು ತೊಲಗಿಸಲು ಪ್ರಯತ್ನಿಸುತ್ತಾರೆ. ಅಂಥವರಲ್ಲಿ ಎಜ್ರಾ ಫೌಂಡ್, ಟಿ.ಎಸ್.ಎಲಿಯಟ್, ಆಲ್ಬರ್ಟ್ ಕಮು, ಫ್ರಾನ್ಜ್ ಕಾಫ್ಕಾ, ಸಾರ್ತ್ರೆ, ರಿಚರ್ಡ್ಸ್, ಲಿವೀಸ್ ಮುಂತಾದವರು ಸಾಹಿತ್ಯದ ಇತರೆ ಪ್ರಕಾರಗಳಿಂದ ಸೃಜನಾತ್ಮಕ ಬರವಣಿಗೆಗೆ ತೊಡಗುತ್ತಾರೆ.

ಭಾರತದ ಸಂದರ್ಭದಲ್ಲಿ ನವ್ಯತೆಯ ಸವಾಲುಗಳು ಬೇರೆಯಾದ್ದವು ಅಂದರೆ ಮೇಲೆ ಹೇಳಿದಂತೆ ಬ್ರಿಟಿಷ್ ಸರ್ಕಾರ ಭಾರತಕ್ಕೆ ಪೂರ್ಣ ಸ್ವರಾಜ್ಯದ ಸ್ವಾತಂತ್ರ್ಯವನ್ನು ೧೯೪೭ರಲ್ಲಿ ಕೊಡುತ್ತದೆ. ಆಗ ಬ್ರಿಟಿಷರಲ್ಲಿ ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಿದರೆ ನಮಗೆ ಅಸ್ತಿತ್ವವೇ ಇಲ್ಲ ಎನ್ನುವುದಾಗುತ್ತದೆ. ಹಾಗಾಗಿ ಷರತ್ತಿನಿಂದ ಭಾರತದಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಬಂಡವಾಳ ಹೂಡಲು ಅವಕಾಶ ಮಾಡಿಕೊಡಬೇಕು ಮತ್ತು ನಮ್ಮ ದೇಶಕ್ಕೆ ಯಾವುದೇ ರೀತಿಯ ಸಹಾಯವನ್ನು ನೀಡಬೇಕು ಹಾಗೂ ನಮ್ಮ ದೇಶದಿಂದ ಸಹಾಯವಿರುತ್ತದೆ, ಪರಸ್ಪರ ದೇಶಗಳ ನಡುವೆ ವಿಚಾರ

ವಿನಿಮಯ ಮಾಡುವುದು, ಇನ್ನೂ ಅನೇಕ ಸಾಂಸ್ಕೃತಿಕ ಕಾರಣಗಳನ್ನು ಒಳಗೊಂಡಿವೆ. ಆಗ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದೆ. ಇದೇ ಸಂದರ್ಭದಲ್ಲಿ ಮಹಾಯುದ್ಧದ ಪರಿಣಾಮಗಳನ್ನು ಯುರೋಪ್ ದೇಶಗಳು ಎದುರಿಸುತ್ತಿದ್ದವು. ಇದೇ ರೀತಿಯಲ್ಲಿ ಭಾರತದಲ್ಲಿಯೂ ಮಹಾಯುದ್ಧದ ಹಲವು ಪರಿಣಾಮಗಳಿವೆ. ಬ್ರಿಟಿಷರು ಭಾರತ ದೇಶ ಬಿಟ್ಟು ಹೋದ ನಂತರ ಭಾರತದಲ್ಲಿ ಆಸ್ತಿ ಪಾಸ್ತಿ ಭೂಮಿ ಯಾರ ಕೈವಶವಾಯಿತು ಎಂದರೆ ಬ್ರಿಟಿಷರ ಆಡಳಿತದಲ್ಲಿದ್ದ ಮೇಲ್ವರ್ಗಗಳ ಕೈವಶವಾಯಿತು. ದೇಶದ ಅಧಿಕಾರ ಮೇಲ್ವರ್ಗಗಳ ಪರವಾಯಿತು. ಗೌಡ, ಕುಲಕರ್ಣಿ, ಪಾಟೀಲ, ಶಾನುಭೋಗ, ಹಣವಂತ ವರ್ಗಗಳು ದೇಶದ ಅಧಿಕಾರದ ಚುಕ್ಕಾಣಿಯನ್ನು ಹಿಡಿದವು. ಆದರೆ ಭಾರತದಲ್ಲಿ ಆಡಳಿತ ಬ್ರಿಟಿಷರ ಆದೇಶದಂತೆ ಕೆಲವು ವರ್ಷಗಳು ನಡೆಯಿತು. ಇದೇ ಸಮಯವನ್ನು ಬಳಸಿಕೊಂಡು ದೇಶದಲ್ಲಿ ಬಂಡವಾಳಶಾಹಿಗಳು ಕೈಗಾರೀಕರಣವನ್ನು ಪ್ರಾರಂಭಿಸಿದರು. ಜೊತೆಗೆ ಇದರ ಮಧ್ಯೆ ಪುರೋಹಿತಶಾಹಿ ಆಡಂಬರದಿಂದ, ದೇಶದ ಸ್ಥಿತಿ ಮತ್ತೆ ಬ್ರಿಟಿಷರ ಆಡಳಿತಕ್ಕಿಂತ ಸ್ವತಂತ್ರ ಭಾರತದ ಆಡಳಿತವು ಅಧೋಗತಿಗಿಳಿಯಿತು. ಆಗ ದೇಶದ ಸಾಮಾನ್ಯ ಜನತೆ, ದಲಿತರು, ಮಹಿಳೆಯರ ಸ್ಥಿತಿ ಹೇಗಿತ್ತು? ಹಾಗೆಯೇ ಮೇಲ್ವರ್ಗಗಳಿಂದ ದಬ್ಬಾಳಿಕೆ, ಶೋಷಣೆ, ಅತ್ಯಾಚಾರ, ಗುಲಾಮಪದ್ಧತಿ, ಅಧಿಕಾರಿಗಳ ದಬ್ಬಾಳಿಕೆ, ರಾಜಕಾರಣಿಗಳ ಕುರುಡುತನ ಇದರಿಂದ ನೆಹರೂ ಸರ್ಕಾರ ಭಾರತೀಯ ಜನರ ಸ್ಥಿತಿಗತಿಗಳನ್ನು ನೋಡದೆ ಬೇರೆ ಬೇರೆ ದೇಶಗಳ ಜೊತೆಗೆ ಕೈಗಾರೀಕರಣ, ಬಂಡವಾಳಶಾಹಿಗೆ ಅನುಕೂಲ ಮಾಡಿಕೊಟ್ಟಿತು. ಇದರಿಂದ ಹಲವು ಪರಿಣಮಗಳಾದವು. ಇದರ ಸ್ಥಿತಿಯನ್ನು ಪ್ರಗತಿಶೀಲರು ಮನಗಂಡಿದ್ದರು.

ಕನ್ನಡದ ನವ್ಯದವರು ತಮ್ಮ ಕಾಲಘಟ್ಟದ ಪರಿಣಾಮಗಳನ್ನು ಯುರೋಪ್ ದೇಶದ ಲೇಖಕರ, ಕವಿಗಳ, ಕಾದಂಬರಿಕಾರರ ಸಿದ್ಧಾಂತಗಳ ಹಿನ್ನೆಲೆಯಿಂದ ಕನ್ನಡದಲ್ಲಿ ಪ್ರಯೋಗಿಸಿದ್ದನ್ನು ಕೆಲವರು ವಿರೋಧಿಸಿದರು. ಕೆಲವರು ತಮ್ಮ ಸ್ಥಳೀಯ ಮತ್ತು ಹಿಂದಿನ ಪರಂಪರೆಯಿಂದ ಸಮಕಾಲೀನ ಸಾಮಾಜಿಕ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದರು. ಕೆಲವರು ಪಾಶ್ಚಿಮಾತ್ಯ ದೇಶಗಳ ಸಿದ್ಧಾಂತ ಪ್ರಭಾವಗಳಿಂದ ತಮ್ಮ ಸಾಹಿತ್ಯವನ್ನು ರೂಪಿಸಿಕೊಂಡರು. ಕೆಲವರು ಕಾಮಕೇಂದ್ರಿತ ನವ್ಯವನ್ನು ರೂಪಿಸಿಕೊಂಡರು. ಇನ್ನೂ ಕೆಲವರು ಸಾಮಾಜಿಕ ಕೇಂದ್ರಿತ ನವ್ಯವನ್ನು ರೂಪಿಸಿಕೊಂಡರು ಹಾಗೂ ಜನಪದ ಕೇಂದ್ರಿತ ನವ್ಯವನ್ನು ರೂಪಿಸಿಕೊಂಡರು. ಇವೆಲ್ಲವನ್ನು ಗಮನಿಸಿದರೆ ಇದು ನವ್ಯ ಕಾಲಘಟ್ಟವೇ ಎಂದೆನಿಸಬಹುದು. ಆದರೆ ಎಲ್ಲದರಲ್ಲಿಯೂ ನವ್ಯತೆ ಕಂಡುಬರುತ್ತದೆ. ಅದು ಅವರವರ ತತ್ವ ಸಿದ್ಧಾಂತಗಳಿಂದ, ಭಾಷೆಗಳಿಂದ ನವ್ಯತೆಯು ಕನ್ನಡದ ಸಾಹಿತ್ಯದಲ್ಲಿ ಅನಾವರಣಗೊಂಡಿದೆ.

### ಮುನ್ನುಡಿ ಸಾಹಿತ್ಯದಲ್ಲಿ ನವ್ಯತೆಯ ತಾತ್ವಿಕ ನೆಲೆಗಳು

ನವ್ಯ ಸಾಹಿತ್ಯ ಹುಟ್ಟುವ ಮೊದಲು ಪಾಶ್ಚಾತ್ಯರ ಪ್ರಭಾವ ಕಡಿಮೆ ಇತ್ತು. ಆದರೆ ಕೆಲವು ನವ್ಯದವರು ನವೋದಯ, ಪ್ರಗತಿಶೀಲ ನೆಲೆಯ ಚಿಂತನೆಯಲ್ಲಿ ತೊಡಗಿದ್ದರು ಎಂಬುದನ್ನು

ಮರೆಯಲಾಗದು. ಅಡಿಗರು ಮೊದಲು 'ಭಾವತರಂಗ' ಕವನಸಂಕಲನದಲ್ಲಿ ನವೋದಯದ ನಿಲುವನ್ನು ಹೊಂದಿದರೆ, 'ಕಟ್ಟುವೆವು ನಾವು' ಕವನ ಸಂಕಲನದಲ್ಲಿ ಪ್ರಗತಿಶೀಲ ನಿಲುವು ಇದೆ. ಹೀಗೆ ಯು.ಆರ್.ಅನಂತಮೂರ್ತಿಯವರನ್ನು ಕೂಡ ಬೇಂದ್ರೆ ಅವರು ಪ್ರಭಾವಿಸಿದ್ದರೆ, ಚಂದ್ರಶೇಖರ ಕಂಬಾರರಲ್ಲಿ ಜನಪದ ಕೇಂದ್ರಿತವಾದ ನಿಲುವಿದೆ. ಯಾವಾಗ ಅಡಿಗರು 'ನಡೆದು ಬಂದ ದಾರಿ' ಕೃತಿ ಪ್ರಕಟಣೆ ಆದ ನಂತರ ಈ ನವ್ಯತೆಯ ಚಿಂತನೆ ಒಳಗೊಳ್ಳುತ್ತದೆ. ಆಗ ಭಾಷೆ, ಪದಗಳ ರಚನೆ, ರೂಪಕ, ಪ್ರತಿಮೆಗಳು ಹೆಚ್ಚು ಹೆಚ್ಚು ಹೊಸದಾಗಿ ರಚಿಸುವುದರ ಮೂಲಕ ಜನರಿಗೆ ನವ್ಯತೆಯನ್ನು ತೋರಿಸಿಕೊಟ್ಟರು. ಈ ತೆರನಲ್ಲಿ ಅಡಿಗರು ಮತ್ತು ಕಂಬಾರರು ಮುಖ್ಯರಾಗಿದ್ದಾರೆ.

ಬೇಂದ್ರೆಯವರು ಅಡಿಗರ 'ಭಾವತರಂಗ' ಕವನಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ನವ್ಯ ಸಾಹಿತ್ಯವನ್ನು ಉದ್ದೇಶಿಸಿ ಹೇಳಿದ ಮಾತು "ನಾನು ಕವಿತೆಗಳನ್ನು ಬರೆಯಲು ಪ್ರಾರಂಭಿಸಿದಾಗ ಇದ್ದ ಶೈಲಿಯ ಪ್ರಾಯೋಗಿಕತೆ ಇಂದಿನ ಕನ್ನಡದಲ್ಲಿ ಅಷ್ಟರ ಮಟ್ಟಿಗೆ ಇಲ್ಲ. ಒಂದು ಬಗೆಯ ಶುದ್ಧ ಶೈಲಿಯಿಂದ ನವ ಕವಿಗಳು ಹೊರಡುತ್ತಾರೆ. ಗೆಳೆಯ ಗೋಪಾಲಕೃಷ್ಣರಿಗೆ ಅವರ ವಯಸ್ಸಿಗಿದ್ದ ಶೈಲಿಯ ಪಾಕ ನನಗೆ ಆ ವಯಸ್ಸಿಗೆ ಇರಲಿಲ್ಲ. ಆದರೆ ಆ ಕಾಲಕ್ಕೆ ಇದ್ದ ನಾವೀನ್ಯದ ಅನುಕೂಲ ಈಗಿನವರಿಗೆ ಇಲ್ಲ"[೬೭] ಎಂದು ಹೇಳುತ್ತಾರೆ. ಬೇಂದ್ರೆಯವರು ತಮ್ಮ ಅನುಭದ ಜೊತೆಗೆ ಕಾಲಘಟ್ಟದ ಸಾಹಿತ್ಯ ರಚನೆ, ಭಾಷೆ ಪ್ರಭಾವಗಳ ಕುರಿತು ಹೇಳುತ್ತಾರೆ. ಬೇಂದ್ರೆಯವರು ಒಂದು ಬಗೆಯ ಸಿದ್ಧಶೈಲಿಯನ್ನು ಅನುಸರಿಸುತ್ತಾರೆ. ಹಾಗಾಗಿ ನವ್ಯದವರು ನವ್ಯತೆಯ ಪರಿಕಲ್ಪನೆಯಿಂದ ಸಾಮಾಜಿಕ, ರಾಜಕೀಯ, ಜಾನಪದ ಹೀಗೆ ಹಲವು ಭಿನ್ನ ಆಯಾಮಗಳ ಮೂಲಕ ನವ್ಯತೆಯನ್ನು ಕಟ್ಟಿಕೊಂಡಿರಬಹುದು. ಹಾಗೆಯೇ ಅಡಿಗರು ರೂಪಕ ಪ್ರತಿಮೆಗಳಿಂದ ಕಾವ್ಯ ಬರೆಯುತ್ತಿದ್ದರು. ಆದರೂ ಅದು ಯಾರಿಗೂ ಅರ್ಥವಾಗದ ಸ್ಥಿತಿ ಒದಗಿತ್ತು. ಹಾಗೆಯೇ ನವ್ಯರಲ್ಲಿ ಅಡಿಗರು ಪ್ರಮುಖರೆನಿಸುತ್ತಾರೆ. ಅದು ಹೇಗೆಂದರೆ ಅಡಿಗರಲ್ಲಿ ಸಾಮಾಜಿಕ ಪ್ರಜ್ಞೆಯಿಂದ ನೇರವಾಗಿ ಜನರಲ್ಲಿ ಭಾಷೆಯ ರೂಪಕದ ಜೊತೆಗೆ ಸಾಮಾಜಿಕ, ರಾಜಕೀಯ, ಧಾರ್ಮಿಕವಾಗಿ ಕಾವ್ಯಗಳಲ್ಲಿ ಜನರನ್ನು ಉದ್ದೇಶಿಸಿ ಒಂದು ಸಂವೇದನೆಯನ್ನು ಹುಟ್ಟಿಸಿದ್ದರು. ಇವರ ಪೂರ್ವದಲ್ಲಿ ಗೋಕಾಕರು ಪ್ರಮುಖರಾಗಿದ್ದರು. ಆದರೆ ನವ್ಯತೆಯನ್ನು ಹೆಚ್ಚು ಅರಗಿಸಿಕೊಂಡಿದ್ದವರು ಅಡಿಗರಾಗಿದ್ದರು.

ಅಡಿಗರನ್ನು ಕುರಿತಂತೆ ಅವರ ಸಾಹಿತ್ಯ ಬ್ರಾಹ್ಮಣಿಕಲ್ ಆದ ರಾಜಕಾರಣ ಹೊಂದಿತ್ತು. ಅದು ಪರಂಪರೆ, ಸಂಪ್ರದಾಯದ ನೆಲೆ ಹೊಂದಿದ್ದವು. ಇದು ಅವರ ಸಮಕಾಲೀನಲ್ಲಿ ಕೆಲವರನ್ನು ಕಾಡಿತ್ತು. ತದನಂತರ 'ನಡೆದುಬಂದ ದಾರಿ' ಕವನ ಸಂಕಲನದ ನಂತರ ಅವರ ನಿಲುವು ಬೇರೆ ರೀತಿಯಿಂದ ಸಾಮಾಜಿಕ ಚಿಂತನೆ ಮತ್ತು ವಿಶ್ವಾಸಾರ್ಹವಾದ ನೆಲೆ ಹೊಂದಿತ್ತು. 'ನಡೆದುಬಂದ ದಾರಿ' ಕವನ ಸಂಕಲನದ ಮುನ್ನುಡಿಯಲ್ಲಿ "ಆಧುನಿಕ ಕನ್ನಡ ಕಾವ್ಯದಲ್ಲಿ ಒಂದು ಘಟ್ಟ ಕಳೆದು ಈಗ ಇನ್ನೊಂದು ಘಟ್ಟ ಮೊದಲಾಗುತ್ತಿದೆ. ಕಾವ್ಯ ರೂಪದಲ್ಲಿ ಬದಲಾವಣೆ ಆಗಬೇಕಾದ ಕಾಲ ಆಗಲೇ ಬಂದು ಬಿಟ್ಟಿದೆ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕ ಇದ್ದ ವಾತಾವರಣ ಈಗ

ಸಮೂಲ ಪರಿವರ್ತನೆಗೊಂಡಿದೆ. ಸ್ವಾತಂತ್ರ್ಯ ಸಂಗ್ರಾಮದ ಉತ್ಸಾಹ, ಉದ್ವೇಗ, ಆದರ್ಶಪರವಶತೆಯ ಹಾರಾಟ ಮುಗಿದು ಈಗ ನಮ್ಮ ಮನಸ್ಸು ಮತ್ತೆ ಹಳ್ಳ ಕೊಳ್ಳಗಳಲ್ಲಿ ತುಂಬಿಕೊಂಡಿದೆ. ತಳದಲ್ಲಿ ಕೂತಿದ್ದ ಕೊಳೆ ಕಸ ರಾಡಿಯೆಲ್ಲಾ ಈಗ ಮೇಲೆದ್ದು ಬಂದು ಕನ್ನಡಿಯಂತಹ ನೀರು ಕಲಕಿದೆ. ಹೊಸ ಆದರ್ಶಕ್ಕಾಗಿ ಹೊಸ ಕಣಸಿಗಾಗಿ ದೇಶದ ಮನಸ್ಸು ಹಸಿದು ಕಾಯುತ್ತಿದೆ. ಇಂತಹ ವಾತಾವರಣ ಸುತ್ತಮುತ್ತಲು ಇರುವಾಗ ಜೀವನಾವಲಂಬಿಯಾದ ಕಾವ್ಯವು ಪರಿವರ್ತನೆಗೊಳ್ಳವುದು ಸಹಜ. ಗಾಂಧಿಯುಗದಲ್ಲಿ ಬರೆದ ರೀತಿಯಲ್ಲೇ ಇನ್ನೂ ಬರೆದರೆ ಬಹುಶಃ ಅದು ಕಾವ್ಯ ಆಭಾಸವಾಗುತ್ತದೆ"[೪೭] ಎಂದು ಅಡಿಗರು ಹೇಳುತ್ತಾರೆ. ಈ ಹಿನ್ನೆಲೆಯಿಂದ ನವೋದಯ ಸಾಹಿತ್ಯವನ್ನು ಸಂಪೂರ್ಣವಾಗಿ ಮೀರಿದ್ದು ಹಾಗೂ ಗಾಂಧೀಜಿಯ ಚಿಂತನೆಗಳನ್ನು ಮೀರಲಾಗಿದೆ ಎಂದು ಹೇಳಲಾಗಿದೆ. ಇದರ ಪ್ರಭಾವದಿಂದ ನವ್ಯತೆಯ ಲೇಖಕರು ಪ್ರಭಾವಿಸಿಕೊಂಡರು.

"ನಡೆದು ಬಂದ ದಾರಿ ಕಡೆಗೆ
ತಿರುಗಿಸಬೇಡ
ಕಣ್ಣ
ಹೊರಳಿಸಬೇಡ"[೪೮]

ಅಡಿಗರು ಈ ತರನಾದ ಕವಿತೆಗಳನ್ನು ಬರೆದರು. ಎಷ್ಟೋ ನವ್ಯ ಕವಿಗಳು ಇದೇ ರೀತಿಯಲ್ಲಿ ಬರೆದರು. ಇಲ್ಲಿ ನವೋದಯದ ರಸ ಸಂಪ್ರದಾಯವನ್ನು ಮೀರಿ, ಜೊತೆಗೆ ಹಳೆ ಸಂಪ್ರದಾಯವನ್ನು ಮೀರಿ, ಹೊಸ ಸಂಪ್ರದಾಯದ ಜೊತೆಗೆ ಭಾಷೆ, ಶಿಲ್ಪ, ಬಂಧ, ವಸ್ತು ವಿಷಯದಲ್ಲಿ ನಿರೂಪಿಸಿದರು. ನವ್ಯ ಸಾಹಿತ್ಯ ವ್ಯಕ್ತಿನೆಲೆಯಿಂದ ಕೆಲವು ದ್ವಂದ್ವಗಳಿದ್ದವು. ಏಕೆಂದರೆ ನವ್ಯತೆ ವ್ಯಕ್ತಿನೆಲೆ ಹೊಂದಿದೆ ಎಂದು ಹೇಳಬಹುದು. ಈ ಕಾರಣಕ್ಕಾಗಿ ಅಡಿಗರು 'ಸಮಗ್ರ ಕಾವ್ಯ'ಕ್ಕೆ ಮುನ್ನುಡಿ ಬರೆಯುತ್ತಾ "ನನ್ನ ನಿಜವಾದ ಧರ್ಮ ಯಾವುದು, ಯಾವುದನ್ನು ಕೈಗೊಂಡು ನನ್ನ ಸರ್ವಸ್ವವನ್ನು ಪ್ರಯೋಗಿಸಿದರೆ ಕೃತಾರ್ಥನಾಗಬಹುದು ಎನ್ನುವ ಯೋಚನೆ ಹುಟ್ಟಿ ಕ್ರಮೇಣ ಅದು ಕಾವ್ಯದ ಮೂಲಕ ಎಂದು ನಿರ್ಧರಿಸಿದ್ದು ನನ್ನ ವಿಶಿಷ್ಟ ಮನೋಧರ್ಮದ ಸಂದರ್ಭದಲ್ಲಿ ನನ್ನ ಶಕ್ತಿಯ ತಕ್ಕ ಮಟ್ಟಿನ ಅರಿವು ನನ್ನಲ್ಲಿ ಮೂಡಿದ್ದರಿಂದ ಕಾವ್ಯದ ರಚನೆಯ ಮೂಲಕವೇ ಜನ್ಮ ಸಾಫಲ್ಯ ಕಾಣಲು ನನಗೆ ಸಾಧ್ಯ ಎಂಬ ತೀರ್ಮಾನಕ್ಕೆ ಬಂದೆ. ಅತ್ಯಂತ ಗಂಭೀರವಾಗಿ ಸದುದ್ದೇಶದಿಂದ ಆತ್ಮಸಾಕ್ಷಿಗನುಗುಣವಾಗಿ ಕಾವ್ಯ ರಚಿಸಬೇಕೆಂದು ನಿರ್ಧರಿಸಿದೆ"[೪೯] ಎಂದು ಹೇಳುತ್ತಾರೆ. ಅವರ ನವ್ಯತೆಯ ಸಂಕಲ್ಪ, ಕಾವ್ಯದ ಬಲ, ಅಚಲವಾದ ಶ್ರದ್ಧೆ, ಕಾವ್ಯದ ಸಾಧನೆ ಅವರನ್ನು ಮತ್ತೆ ಮತ್ತೆ ಪುನರಾವರ್ತಿಸಿದ ಹೊಸ ಕಾವ್ಯಸಂಪ್ರದಾಯವನ್ನು ಹುಟ್ಟುಹಾಕಿತು. ಅದು ಒಂದೊಂದು ಸಾರಿ ನವ್ಯದವರಲ್ಲಿ ಕೆಲವರ ಕಾವ್ಯ ಕಾವ್ಯವೇ ಅಲ್ಲ ಎಂಬ ತೀರ್ಮಾನಕ್ಕೆ ಬರುತ್ತಿದ್ದರು. ಹಾಗೆಯೇ ಸಮರ್ಥಿಸಿಕೊಳ್ಳುತ್ತಿದ್ದರು. ನವ್ಯದವರಲ್ಲಿ ಅಡಿಗರು ಹೊಸ ಹೊಸ ಪದಗಳ ಮೂಲಕ ಹೊಸ ಭಾಷೆಯ ಅರ್ಥಗಳನ್ನು ಬರೆದರು. ಅವರ ಕಾವ್ಯ ಮಾನವಕೇಂದ್ರಿತ ಸ್ವರೂಪದ್ದು. ಅಡಿಗರ

ದೃಷ್ಟಿಕೋನದಲ್ಲಿ ಕಾವ್ಯವು ಮುಖ್ಯವಾಗಿ ಅನುಭವದ ಅಭಿವ್ಯಕ್ತಿ ಕಲ್ಪನೆ, ಚಿಂತನೆ, ಭಾವನೆಗಳು ಕಾವ್ಯದಲ್ಲಿರಬೇಕಾಗಿದೆ. ಹಾಗಾಗಿ ಕಾಲಕ್ಕೆ ತಕ್ಕಂತೆ ಕಾವ್ಯ ಹೊಸ ತರಹ ಬಯಸುತ್ತಿದೆ. ಆದರೆ ರಸ ಸಂಪ್ರದಾಯವನ್ನಲ್ಲ ಎಂದು ಅವರ ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಹಾಗಾಗಿ 'ನಡೆದುಬಂದ ದಾರಿ'ಯ ಮುನ್ನುಡಿಯಲ್ಲಿ "ಪ್ರತಿಯೊಂದು ಭಾವವು ಅನುಭವವು ಅತಿ ಸರಳವಾಗಿ ಸತ್ಯದಿಂದ ದೂರ ದೂರ ಹೋಗುತ್ತಿದೆ. ಇಂತಹ ಕಾಲದಲ್ಲಿ ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯದಲ್ಲಿ ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು, ಈ ಜಗತ್ತನ್ನು ಬಿಟ್ಟು ಕಾವ್ಯ ಬದುಕಲಾರದು ಎಂಬುದನ್ನು ಮತ್ತೆ ಕವಿಗಳು ಅರಿಯಬೇಕಾಗುತ್ತದೆ"[೫೦] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಅನುಭವವೆಂದರೆ ಈ ಜಗತ್ತಿನಲ್ಲಿ ನಡೆಯುವ ನಮ್ಮ ಸುತ್ತಮುತ್ತಲಿನ ಕಾಡುವ ವಸ್ತುಗಳಾಗಿವೆ. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ನಂತರ ಏನಾಯಿತು? ನೆಹರೂ ಆಡಳಿತದಲ್ಲಿ ದೇಶದ ಜನರ ಸ್ಥಿತಿಗತಿಯನ್ನು ಅರ್ಥ ಮಾಡಿಕೊಳ್ಳದೇ ಕೈಗಾರೀಕರಣ ಮತ್ತು ವಸಾಹತುಶಾಹಿಗೆ ಬೆನ್ನೆಲುಬಾಗಿ ನಿಂತರು. ಇದರಿಂದ ಜನರು ಶಿಕ್ಷಣ, ಕೃಷಿ, ಮೂಲಸೌಲಭ್ಯ ಬಯಸಿದರು. ಆದರೆ ನೆಹರೂ ಈಡೇರಿಸಲಿಲ್ಲ. ಮುಂದೆ ಈಡೇರುವ ಲಕ್ಷಣಗಳು ಬಂದವು. ಅದಕ್ಕೆ ಅಡಿಗರು ಬರೆದ 'ನೆಹರೂ ನಿವೃತ್ತರಾಗುವುದಿಲ್ಲ' ಕವನವನ್ನು ಗಮನಿಸಬಹುದು.

ಅಡಿಗರ ಕಾವ್ಯದಲ್ಲಿ ರಾಜಕೀಯ ಧೋರಣೆಗಳು ಹೆಚ್ಚಾಗಿ ಕಂಡುಬರುತ್ತವೆ. ಏಕೆಂದರೆ ಪ್ರಭಾವಿತ ವ್ಯಕ್ತಿ ಎಲಿಯಟ್ ಅವರಲ್ಲಿಯೂ ರಾಜಕೀಯ ಧೋರಣೆಗಳು ಕಂಡುಬರುತ್ತವೆ. ಇದರಿಂದ ಇಂಗ್ಲೆಂಡ್ ಮತ್ತು ಭಾರತದ ರಾಜಕೀಯ ಧೋರಣೆಗಳೇನೆಂಬುದನ್ನು ಬೌದ್ಧಿಕ ವಲಯದಲ್ಲಿ ಇವರಿಂದ ತಿಳಿಯಲಾಗುವುದು. "ಎಲಿಯಟ್‌ನು ಉದಾರವಾದಿ ಎಡಪಂಥೀಯ ನಿಲುವುಗಳ ಬಗ್ಗೆ ಚೂರು ವಿಶ್ವಾಸವಿರಲಿಲ್ಲ"[೫೧] ಎಂದು ಜಿ.ರಾಜಶೇಖರ್ ಅವರು ಅಡಿಗರ ಸುವರ್ಣ ಪುತ್ಥಳಿ ಕವನ ಸಂಕಲನದ ಮುನ್ನುಡಿಯಲ್ಲಿ ಹೇಳುತ್ತಾರೆ. ಇದರಿಂದ ಅಡಿಗರು ಕೂಡ ಎಲಿಯಟ್ ಮಾದರಿಯ ರಾಜಕೀಯ ಉದಾರವಾದಿ ವ್ಯಕ್ತಿಯಾಗಿದ್ದರು. ಇದರಿಂದ ಕಮ್ಯೂನಿಸಂ ವಿರೋಧಿಯಾಗಿದ್ದರು ಎಂದು ಹೇಳಲಾಗುತ್ತದೆ. ಆದರೆ ಜಿ.ರಾಜಶೇಖರ್ ಅವರು ಮುನ್ನುಡಿಯಲ್ಲಿ ಹೀಗೆ ಹೇಳುತ್ತಾ "ಅಡಿಗರ ರಾಜಕೀಯ ಧೋರಣೆ ಏನು ಎನ್ನುವುದು ನಮಗೆಲ್ಲಾ ಸ್ಪಷ್ಟವಾಗಿ ಗೊತ್ತಿದೆ. ಹಾಗೂ ಸರಿ ಹೀಗೂ ಸರಿ ಎನ್ನುವ ಉದಾರವಾದಿಗಳಂತೆ ಅವರು ಎಂದೂ ನಡೆದುಕೊಂಡಿಲ್ಲ. ಅವರು ಕಮ್ಯೂನಿಸಂನ ವಿರೋಧಿ, ಈ ದೇಶ ಪ್ರಜಾಪ್ರಭುತ್ವ ವ್ಯಕ್ತಿವಾದಗಳನ್ನು ಬಿಟ್ಟು ಕಮ್ಯೂನಿಸ್ಟ್ ಸರ್ವಾಧಿಕಾರದತ್ತ ಸಾಗುತ್ತಿದೆ ಎಂದು ನಂಬಿದ್ದಾರೆ."[೫೨] ಹೀಗಾಗಿ ಕಮ್ಯೂನಿಸ್ಟ್ ಸರ್ಕಾರವನ್ನು ಅಡಿಗರು ಹಿಗ್ಗಾ ಮುಗ್ಗವಾಗಿ ಕಾವ್ಯದ ಮೂಲಕ ಟೀಕಿಸಿದರು. ಎಲಿಯಟ್ ಮಾದರಿಯ ಅಡಿಗರು ಮುಖ್ಯವಲ್ಲ. ಆದರೆ ಅಡಿಗರು ಕಂಡಂತೆ ರಾಜಕೀಯ ಧೋರಣೆಗಳು ಜನವಿರೋಧಿ ನೆಲೆಯಲ್ಲಿತ್ತು ಎಂದು ಕೆಲವು ನವ್ಯದವರು ವಿರೋಧಿಸಿದ್ದರು. ಆದರೆ ನಮ್ಮ ದೇಶದಲ್ಲಿ ನಡೆಯುವ ರಾಜಕೀಯ ವಿದ್ಯಮಾನಗಳನ್ನು ಜನಸಾಮಾನ್ಯರ ಮೇಲೆ ಪರಿಣಾಮ ಬೀರುವಂತವುಗಳಾಗಿದ್ದನ್ನು, ಜನರು ಒಂದು ತುತ್ತು ಅನ್ನಕ್ಕಾಗಿ ಪರದಾಡುವಂತಹ ಸ್ಥಿತಿ ಇತ್ತು.

೫೦-೬೦ರ ದಶಕದಲ್ಲಿ ಹಲವು ಸೌಲಭ್ಯಗಳು ಉಳ್ಳವರ ಪಾಲಾಗುತ್ತಿದ್ದವು. ಹಾಗಾಗಿ ಕಮ್ಯೂನಿಸಂ ವಿರೋಧಿಯಾಗಿ ಬರೆಯುವುದನ್ನು ಅವರ ಸಹಚರರು ಕಮ್ಯೂನಿಸಂ ವಿರೋಧಿ ಎಂದು ಹೇಳಲಾಗುತ್ತಿತ್ತು. ಆದರೆ ಅಡಿಗರು ಈ ಎಲ್ಲವುಗಳ ಪರವಾದ ನಿಲುವನ್ನು ಹೊಂದಿದವರು. ಜೊತೆಗೆ ಸಮಾಜದ ಕುರಿತು ಮನಗಂಡಿದ್ದರು. ಹಾಗಾಗಿ ಜಿ.ರಾಜಶೇಖರ್ ಅವರು ಹೇಳುವಂತೆ ಕೆಲವರು ಅಡಿಗರನ್ನು ಏಕೆ ವಿರೋಧಿಸಿದರು ಎಂದು ಹೇಳುತ್ತಾ "ಸ್ವಾತಂತ್ರ್ಯ ಬಂದ ಹೊಸತರಲ್ಲಿ ಕೇಂದ್ರ ಸರ್ಕಾರ ತೆಲಂಗಾಣದ ಕಮ್ಯೂನಿಸ್ಟ್ ಆಂದೋಲನವನ್ನು ತುಳಿದು ಹಾಕಿತು. ೧೯೫೬ರಲ್ಲಿ ನೆಹರೂ ಕೇರಳದ ಚುನಾಯಿತ ಕಮ್ಯೂನಿಸ್ಟ್ ಸರ್ಕಾರವನ್ನು ವಜಾಗೊಳಿಸಿದರು. ೭೦ರ ದಶಕದಲ್ಲಿ ಪಶ್ಚಿಮ ಬಂಗಾಳದ ಕಮ್ಯೂನಿಸ್ಟ್ ಸಂಘಟನೆಯನ್ನು ಇಂದಿರಾಗಾಂಧಿ ಫ್ಯಾಸಿಸ್ಟ್ ವಿಧಾನಗಳಿಂದ ನಾಶಗೊಳಿಸಲು ಪ್ರಯತ್ನಿಸಿದ್ದರು. ಜೊತೆಗೆ ಇದೇ ಅವಧಿಯಲ್ಲಿ ದೇಶದ ಬಂಡವಾಳಶಾಹಿಗಳ ಆಸ್ತಿ ಮತ್ತು ವಹಿವಾಟುಗಳು ಹಲವು ಪಟ್ಟು ಹೆಚ್ಚಾದವು. ಕೃಷಿ, ವಾಣಿಜ್ಯ, ಉದ್ಯಮ ಎಲ್ಲದರಲ್ಲೂ ಖಾಸಗಿಯವರ ಕೈಗಳು ಬಲವಾದವು. ಉತ್ತಮ ಶಿಕ್ಷಣ, ವಸತಿ ಮತ್ತು ವೈದ್ಯಕೀಯಗಳು ಕೂಡ ಉಳ್ಳವರಿಗೆ ಮೀಸಲು ಎಂಬ ಸ್ಥಿತಿ ಬಂದಿತು"[೫೩] ಎಂದು ಹೇಳುತ್ತಾರೆ. ಅಡಿಗರಲ್ಲಿ ಕಮ್ಯೂನಿಸ್ಟ್ ಚಿಂತನೆ ಇತ್ತು. ಆದರೆ ಕಮ್ಯೂನಿಸ್ಟ್ ಪಕ್ಷದ ನೀತಿ ನಿಯಮಗಳನ್ನು ಕುರಿತು ವಿರೋಧಿಸಿದರು. ಅದು ರಾಜಕಾರಣದ ಹಿನ್ನೆಲೆಯಿಂದ ಆಗಿದೆ. ಹಾಗಾಗಿ ಅವರ ಸಮಕಾಲೀನರಲ್ಲಿ ಅವರ ತಾತ್ವಿಕತೆಯನ್ನು ವಿರೋಧದ ನೆಲೆಯಲ್ಲಿ ಕೆಲವರು ಗ್ರಹಿಸಿದ್ದರು. ಏಕೆಂದರೆ ಅಡಿಗರು ಜನಸಂಘ ಪರಿವಾರದಲ್ಲಿ ಭಾಗವಹಿಸಿದ್ದರು ಎನ್ನುವುದಾಗಿದೆ. ಆದರೆ ಅವರ ಸಮಕಾಲೀನರಲ್ಲಿ ಅನಂತಮೂರ್ತಿ, ಪಿ.ಲಂಕೇಶ್, ಕಾರಂತರು ಇನ್ನೂ ಅನೇಕ ಕವಿಗಳು, ಬರಹಗಾರರು ರಾಜಕೀಯ ನಿಲುವನ್ನು ಒಳಗೊಂಡಿದ್ದರು. ಆದರೆ ರಾಜಕೀಯ ಅನೀತಿಯನ್ನು ವಿರೋಧಿಸಿದವರಾಗಿದ್ದರು. ನವ್ಯತೆಯ ಉದ್ದೇಶ ಭಾರತದ ಜನರ ಹಾಗೂ ಹಿಂದುಳಿದ ದಲಿತ ಸಮುದಾಯಕ್ಕೆ ರಾಜಕೀಯದಲ್ಲಿ ಅಧಿಕಾರ ಸಿಗಬೇಕು, ಜೊತೆಗೆ ದೇಶದ ಸೌಲಭ್ಯಗಳು ಸಿಗಬೇಕಾಗಿದೆ. ಆದರೆ ನವ್ಯ ಸಂದರ್ಭದ ಕಾಲದಲ್ಲಿ ಜನರ ಸ್ಥಿತಿ ಜನಸಮೂಹದ ನಾಯಕನನ್ನು ಹುಡುಕುವ ಸ್ಥಿತಿಯಲ್ಲಿದ್ದವು. ಏಕೆಂದರೆ ಇದು ಜನರ ಬದುಕಿನ ಪ್ರಶ್ನೆಯಾಗಿತ್ತು. ಈ ಹಿನ್ನೆಲೆಯಲ್ಲಿ ಗಾಂಧೀಜಿಯ ಕೊಲೆಯ ನಂತರ ಚಳುವಳಿಗಳು ಕಡಿಮೆಯಾಗಿದ್ದವು. ತದನಂತರ ದೇಶದಲ್ಲಿ ದೊಡ್ಡ ಚಳುವಳಿ ಪ್ರಾರಂಭಿಸಿದವರು ಜಯಪ್ರಕಾಶ ನಾರಾಯಣರು. ಆದರೆ ಸಾಮಾಜಿಕ, ಧಾರ್ಮಿಕ ತಾತ್ವಿಕತೆಯನ್ನು ಎದುರಿಸುವುದು ಮುಖ್ಯವಾಗಿತ್ತು.

ನವ್ಯಕಾವ್ಯ ಕುರಿತು ಕೆಲವರಲ್ಲಿ ಬೇರೆ ಬೇರೆ ಸ್ವರೂಪದ ಚಿಂತನೆಗಳು ಇವೆ. ಏಕೆಂದರೆ ನವ್ಯದವರು ಎದುರಿಸಿದ ತಾತ್ವಿಕ ಚಿಂತನೆಗಳು ನವೋದಯವರಲ್ಲಿ ಇರಲಿಲ್ಲವೇ? ಅಥವಾ ಅನುಭವಕ್ಕೆ ಬರಲಿಲ್ಲವೇ ಎಂಬುದು ಕುರ್ತಕೋಟಿಯವರ ಅಭಿಪ್ರಾಯವಾಗಿದ್ದು ಇದು ಮುಖ್ಯವಾಗಿದೆ. ನವೋದಯದವರು ಸಾಹಿತ್ಯವನ್ನು ಅವರವರದೇ ಆದ ವೈಯಕ್ತಿಕ ಆದರ್ಶಗಳಿಂದ ಕವಿಗಳ ವಸ್ತು, ಭಾವ, ಭಾಷೆ, ಅಭಿವ್ಯಕ್ತಿಯ ರೀತಿಯಲ್ಲಿ ಅವರ ಆದರ್ಶಗಳಾಗಿ ವ್ಯಕ್ತಗೊಂಡಿವೆ. ಹಾಗೆಯೇ ವಾಸ್ತವ ಬದುಕಿನ ಸ್ಥಿತಿಗತಿಗಳನ್ನು ಎದುರಿಸಿದ್ದಾರೆ. ಅವರು ಕತೆ, ಕಾದಂಬರಿ, ನಾಟಕ, ಪ್ರಬಂಧ

ಎನ್ನುವಂತಹ ಸಾಹಿತ್ಯ ಪ್ರಕಾರಗಳಿಂದ ಬರೆದರು. ಆದರೆ ನವ್ಯದವರು ಹಾಗಲ್ಲ, ಅವರು ಕಾವ್ಯಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದರು. ಅದು ನವ್ಯದ ಮೊದಲ ಸಂದರ್ಭವಾಗಿತ್ತು. ತದನಂತರ ಜನರಲ್ಲಿ ಕಾವ್ಯ ಕುರಿತು ಭ್ರಮನಿರಸನ ಹೊಂದುವ ಸ್ಥಿತಿ ಬಂದಿತು. ಆಗ ನವ್ಯದ ಕೆಲವರು ನವ್ಯದ ಚಿಂತನೆಯಲ್ಲಿ ಬೇರೆ ಬೇರೆ ಆಯಾಮಗಳ ಮೂಲಕ ಜನರ ಅಭಿರುಚಿಗೆ ತಕ್ಕಂತೆ ಹಾಗೂ ಸಮಾಜದ ಸ್ಥಿತಿಗತಿಗಳನ್ನು ಕುರಿತು ವಿಮರ್ಶಾತ್ಮಕ ದೃಷ್ಟಿಕೋನದಿಂದ ಕತೆ, ಕಾದಂಬರಿ, ಕಾವ್ಯದ ಮೂಲಕ ಬರೆದರು.

ಇದರಿಂದ ಕೆಲವರು(ನವ್ಯ ಮತ್ತು ಅಡಿಗರನ್ನು ಉದ್ದೇಶಿಸಿ) ನವ್ಯಕಾವ್ಯವು ಕೆ.ನರಸಿಂಹಮೂರ್ತಿಯವರು ಚಂಡಮದ್ದಳೆ ಕವನ ಸಂಕಲನದ ಮುನ್ನುಡಿಯಲ್ಲಿ "ಕಮ್ಯೂನಿಷ್ಟ್ ವಿಮರ್ಶಕರು ನವ್ಯಕಾವ್ಯದಲ್ಲಿ ನಿರಾಶೆಯು ವ್ಯಕ್ತವಾಗುವುದೆಂದು ಅದರಲ್ಲಿನ ಆಧ್ಯಾತ್ಮಿಕದ ಒಲವು ನಿಜವಾಗಿ ಪ್ರಗತಿ ಇಲ್ಲವೆಂದು ಟೀಕಿಸುತ್ತಾರೆ. ಆದರೆ ಕಾವ್ಯವಾಗಿದೆಯೇ, ಇಲ್ಲವೇ ಎನ್ನುವುದನ್ನು ನೋಡಬೇಕೇ ಹೊರತು ಅದರ ವಸ್ತು ನಮ್ಮ ದೃಷ್ಟಿಗೆ ಒಪ್ಪಿಗೆ ಆಗುತ್ತದೆಯೇ ಇಲ್ಲವೇ, ಎಂದು ನೋಡಬಾರದು. ಸಿದ್ಧಶೈಲಿಯ ಬೆಂಬಲಿಗರು ನವ್ಯಕಾವ್ಯದಲ್ಲಿ ಅರ್ಥವಾಗದ ಕ್ಲಿಷ್ಟತೆ ಇದೆ ಎನ್ನುತ್ತಾರೆ. ಬಿಗಿಯಾಗಿ ನಾಟಕೀಯವಾಗಿ ಬರೆಯುವಾಗ ಜನಸಾಮಾನ್ಯಕ್ಕೂ ಅರ್ಥವಾಗುವಂತೆ ಸಲೀಸಾಗಿ ಅರ್ಥವಾಗುವಂತೆ ಹೇಗೆ ಬರೆಯಲಾದೀತು? ಇನ್ನೊಂದು ಆಪಾದನೆಯೆಂದರೆ ನವ್ಯಕವಿಗಳು ಓದುಗನನ್ನು ಒಮ್ಮೆ ಹಾಲಿನಲ್ಲಿ ಅದ್ದುತ್ತಾರೆ, ಒಮ್ಮೆ ಗಂಜಲದಲ್ಲಿ ಅದ್ದುತ್ತಾರೆ ಎಂಬುದು ಇದು ವಿಧಿಯ ತಪ್ಪು"[೫೪] ಎಂದು ಹೇಳುತ್ತಾರೆ. ನವ್ಯದವರನ್ನು ಕುರಿತು ಸಾಹಿತ್ಯ ವಲಯದಲ್ಲಿ ವಾಗ್ವಾದಗಳು, ಪ್ರತಿಕ್ರಿಯೆಗಳು ಹೇಗಿವೆಯೆಂದರೆ ನವ್ಯಕಾವ್ಯ ಪಾಶ್ಚಿಮಾತ್ಯದ ಅತಿಯಾದ ಅನುಕರಣೆ. ಭಾರತೀಯ ನೆಲೆಯಿಂದ, ಸ್ಥಳೀಯ ಚಿಂತನೆಯಿಂದ ಜನಸಾಮಾನ್ಯರನ್ನು ಕುರಿತು ಇದೆಯೇ ಹಾಗೂ ನವ್ಯದವರ ಭಾಷೆ, ಛಂದಸ್ಸು, ಶೈಲಿ, ಪ್ರತಿಮೆಗಳು ಯಾವ ನೆಲೆಯಲ್ಲಿವೆ? ಅವು ಸಾಮಾಜಿಕ, ರಾಜಕೀಯವನ್ನು ಉದ್ದೇಶಿಸಲಾಗಿದೆಯೇ? ಆದರೆ ಜನಸಾಮಾನ್ಯರಿಗೆ ನವ್ಯ ಕಾವ್ಯದ ನಿಲುವು ತಲುಪಿದೆಯೇ? ಎಂಬುದು ಮುಖ್ಯವಾಗಿದೆ. ಸಿದ್ಧಶೈಲಿಯ ಬೆಂಬಲಿಗರು ನವೋದಯದವರಾಗಿದ್ದು, ಅವರ ನಿಲುವು, ಪರಂಪರೆ, ಸಂಪ್ರದಾಯ, ಆದರ್ಶಕತೆ, ನಿಸರ್ಗತೆಯಿಂದ ಕೂಡಿತ್ತು. ನವ್ಯದವರು ಇವುಗಳನ್ನು ಮೀರಿ ಸಮಾಜದ ಪರಿಶೋಧನೆಯಿಂದ ಅನುಭವದ ಐಡೆಂಟಿಟಿಗೆ ಭಾಷೆಯಲ್ಲಿ ಅದರ ಶೋಧನೆಗೆ ಸಾಕ್ಷಾತ್ಕಾರಕ್ಕೆ ನೀಡಿದ್ದು ಮಹತ್ವದ ಸಂಗತಿಯಾಗಿದೆ. ನವ್ಯದವರು ಭಾವನೆಯ ಜಾಗದಲ್ಲಿ ಬೌದ್ಧಿಕತೆಯನ್ನು ಪ್ರದರ್ಶಿಸಿದರು. ಹಾಗಾಗಿ ನವ್ಯತೆ ತನ್ನನ್ನು ತಾನು ವಿಶ್ಲೇಷಣೆಗೆ, ವಿಮರ್ಶೆಗೆ ಒಳಪಡುವ ಎಲ್ಲವನ್ನು ಪುರೊಹಿತಶಾಹಿ, ಬಂಡವಾಳಶಾಹಿ, ರಾಜಕೀಯಶಾಹಿ ಮುಖ್ಯವಾಗಿ ಮಡಿ, ಮೈಲಿಗೆ ಇಲ್ಲದೇ ಪ್ರಶ್ನಿಸುವ ಆರೋಗ್ಯಪೂರ್ಣವಾದ ಜೀವನದೃಷ್ಟಿಯನ್ನು ಗುರುತಿಸಿದೆ. ಆದರೆ ಜನಸಾಮಾನ್ಯರಿಗೆ ಕಾವ್ಯ ಅರ್ಥವಾಗಲಿಲ್ಲ ಎಂಬುದಾಗಿದೆ. ಹಾಗಾಗಿ ಅಡಿಗರ ಕುರಿತು ವಿಮರ್ಶೆ ಬಂದಿರುವುದು ಕಡಿಮೆಯೇ. ಹಾಗೆಯೇ ನವ್ಯದವರಲ್ಲಿ ಸ್ಥಳೀಯತೆಯ ಭಾಷೆ, ವಸ್ತು, ಕಾವ್ಯದಲ್ಲಿ ವ್ಯಕ್ತಗೊಂಡಿದ್ದು ಕಡಿಮೆ. ಅದು ವ್ಯಕ್ತಗೊಂಡಿದ್ದರೂ ಈ ಸಮಾಜವೇ ಬೇಡ, ಜನ, ಬದುಕು, ಜಿಗುಪ್ಸೆಯ ರೀತಿಯಲ್ಲಿ ವ್ಯಕ್ತಗೊಂಡಿದೆ.

"ಮಾತು ದೂರದ ಮಿಂಚು ತಂತಿಗಳಿರುವ ಹಾಗೆ
ಒದೆಸಿಕೊಳ್ಳುವೆ ಒಳಗು ಮಿಂಚು ಬಲ ತಿಳಿಯದು
ಆದ ಕಾರಣವೇ ಮಾತಿನಲ್ಲದು ಸಾಚ ಈ ಮೋಸ
ವಿಂದು ಹೇಳುವುದು ಬಡಪಾಯಿ ಕವಿಗಿಲ್ಲ ಸುಲಭ"[೫೫] (ಶರದ್ಗೀತ)

ಈ ತೆರನಾದ ಕಾವ್ಯಗಳು ಜನಸಾಮಾನ್ಯರಿಗೆ ತಿಳಿಯದೇ ಹೋಯಿತು. ಆದರೆ ಅಡಿಗರು ಯಾವುದೇ ನಿಸ್ವಾರ್ಥತೆಯಿಲ್ಲದೇ ಸಾಮಾಜಿಕ ಚಿಂತನೆಯಲ್ಲಿ ತೊಡಗಿದ್ದರು. ದೇಶವನ್ನು ಆಳುವ ರಾಜಕಾರಣಿಗಳು ಜನರಿಗೆ ಹಚ್ಚುವ ಮಂಕುಬೂದಿಯನ್ನು ಅಡಿಗರು ತಮ್ಮ ಹರಿತವಾದ ಭಾಷೆ ಮೂಲಕ ಖಂಡಿಸಿದ್ದಾರೆ. ಹಾಗಾಗಿ ಅನಂತಮೂರ್ತಿಯವರು ಭೂಮಿಗೀತ ಕವನಸಂಕಲನದ ಮುನ್ನುಡಿಯಲ್ಲಿ "ಸಾಹಿತ್ಯ ಸೃಷ್ಟಿಯ ಅಸಲು ಕಸಬಿನ ಬಗ್ಗೆ ಅಡಿಗರು ತೋರಿಸುತ್ತಿರುವ ಶ್ರದ್ಧೆ ಅವರನ್ನು ನಮ್ಮ ತಲೆಮಾರಿನ ಪ್ರಮುಖ ಕವಿಯಾಗಿ ಮಾಡಿದೆ. ಇವರಲ್ಲಿ 'ಕಲೆಗಾಗಿ ಕಲೆ' ಎನ್ನುವ ಅಪ್ರಬುದ್ಧ ಸೌಂದರ್ಯೋಪಾಸನೆಯು ಇಲ್ಲ, ಭಾಷೆ ಮತ್ತು ಸ್ವಾನುಭವದ ತರ್ಕಕ್ಕೆಗೊಗ್ಗದ ತತ್ವಗಳ ಪ್ರಚಾರಕ್ಕಾಗಿ, ಪದ್ಯ ರಚನೆಯ ಕಲೆಯನ್ನು ವಾಹಕವಾಗಿ ಮಾಡುವ ಆತ್ಮವಂಚನೆಯು ಇಲ್ಲ. ಜೀವನದ ಬಗ್ಗೆ ಎಷ್ಟೋ ಪದ್ಯ ರಚನೆಯ ಬಗ್ಗೆಯೂ ಅಷ್ಟೇ ಆಸಕ್ತಿ ತೋರಿಸುವ ಅಂತಃಕರಣದ ಪ್ರಾಮಾಣ್ಯವಿಲ್ಲದೇ ಯಾವ ಮಾತನ್ನು ಆಡದ ಇವರ ಪ್ರವೃತ್ತಿ ವಿಮರ್ಶೆಯ ದುರ್ಬಲವಾದ ನಮ್ಮ ನಾಡಿನಲ್ಲಿ ಆಶ್ಚರ್ಯದ ಸಂಗತಿ"[೫೬] ಎಂದೆನಿಸಿದ್ದಾರೆ. ಯು.ಆರ್.ಅನಂತಮೂರ್ತಿಯವರು ಮತ್ತೆ ಅಡಿಗರನ್ನು ಸಮರ್ಥಿಸಿಕೊಂಡಿದ್ದಾರೆ. ಏಕೆಂದರೆ ಅವರ ಭಾಷೆ, ಸಾಹಿತ್ಯ ಸೃಷ್ಟಿಯಲ್ಲಿರುವ ಶ್ರದ್ಧೆ, ನವೋದಯದವರ ಕಲೆಗಾಗಿ ಕಲೆ ಎಂಬ ಸಿದ್ಧಾಂತವನ್ನು ಒಪ್ಪಿಕೊಂಡಿರಲಿಲ್ಲ ಎಂಬುದಾಗಿದೆ. ಅಡಿಗರು ಸಾಮಾಜಿಕವಾಗಿ ಅವರಲ್ಲಿ ಅಡಗಿದ್ದ ಅಂತಃಕರಣದ ಸಂವೇದನೆಯನ್ನು ನಮ್ಮ ಸಾಹಿತ್ಯ ಲೋಕದ ವಿಮರ್ಶಕರು ವಿಶ್ಲೇಷಣೆಗೆ ಒಳಪಡಿಸಿರುವುದು ಕಡಿಮೆ. ಆದರೆ ಇತ್ತೀಚೆಗೆ ಹೆಚ್ಚು ಚರ್ಚೆಗೆ ಅಡಿಗರು ಗ್ರಾಸವಾಗಿದ್ದಾರೆ. ಅದರ ಜೊತೆಗೆ ನವ್ಯತೆಯ ತಾತ್ವಿಕತೆಯು ಹೆಚ್ಚಿಸಿದೆ.

## ನವ್ಯ ಸಾಹಿತ್ಯದ ಕೃತಿಗಳ ಮುನ್ನುಡಿಗಳಲ್ಲಿ ಅಭಿವ್ಯಕ್ತಗೊಂಡಿರುವ ಅಂಶಗಳು

ನವ್ಯತೆಯ ತಾತ್ವಿಕತೆಯನ್ನು ಈಗಾಗಲೇ ಕೆಲವು ಮಟ್ಟಿಗೆ ಗುರುತಿಸಲಾಗಿದೆ. ಹಾಗೆಯೇ ನವ್ಯತೆಯಲ್ಲಿ ವಸ್ತು, ಭಾಷೆ, ಸ್ಥಳೀಯ ಚಿಂತನೆ ಒಳಗೊಂಡಂತೆ ಹಲವಾರು ಆಯಾಮಗಳ ಮೂಲಕ ಪಾಶ್ಚಾತ್ಯ ಸಿದ್ಧಾಂತ, ಭಾರತೀಯ ಸಿದ್ಧಾಂತ ಎಂದರೆ ಸ್ಥಳೀಯತೆ ಸಂವೇದನೆಯನ್ನು ನವ್ಯದ ಹಲವಾರು ಲೇಖಕರು, ಕವಿಗಳು ಪ್ರಭಾವಿತರಾಗಿದ್ದರು. ಆದರೆ ಮುಖ್ಯವಾಗಿ ಅಡಿಗರು ನವ್ಯತೆಯನ್ನು ಹೆಚ್ಚು ಹೆಚ್ಚಾಗಿ ಭಾಷೆಯ ಜೊತೆಗೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬಳಸಿರುವುದರಿಂದ ಮುಖ್ಯವಾಗಿದ್ದಾರೆ. ಹಾಗಾಗಿ ನವ್ಯತೆಯನ್ನು ಕಾವ್ಯ, ಕತೆ, ಕಾದಂಬರಿ ಮತ್ತು ವಿಮರ್ಶೆಯಲ್ಲಿ ಕಾಣುತ್ತೇವೆ. ಹೀಗೆಯೇ ವ್ಯಕ್ತಿಯ ಹಿನ್ನೆಲೆಯಿಂದ "ಪಾಶ್ಚಾತ್ಯ ಆಧುನಿಕ ಕಾವ್ಯದ ಎಜ್ರಾ ಪೌಂಡ್, ಟಿ.ಎಸ್.ಎಲಿಯಟ್ ಮುಂತಾದವರ ಪ್ರಭಾವದಿಂದ ಬಂದ ಅಡಿಗರು ಕಾವ್ಯ ಮತ್ತು ಅದರ

ವಿಮರ್ಶೆ, ಆಲ್ಬರ್ಟ್ ಕಮು, ಫ್ರಾನ್ಸ್ ಕಾಫ್ಕಾ, ಜೀನ್‌ಪಾಲ್ ಸಾರ್ತ್ರೆ ಅವರ ಕಥೆ ಸಾಹಿತ್ಯದಿಂದ ಪ್ರಭಾವಿತರಾದ ಅನಂತಮೂರ್ತಿ, ಯಶವಂತ ಚಿತ್ತಾಲ, ಲಂಕೇಶ್, ಶಾಂತಿನಾಥ ದೇಸಾಯಿ, ಶ್ರೀಕೃಷ್ಣ ಆಲನಹಳ್ಳಿ, ತೇಜಸ್ವಿ ಮುಂತಾದ ಆಧುನಿಕ ಪಾಶ್ಚಾತ್ಯ ವಿದ್ವಾಂಸರ ಪ್ರಭಾವದಿಂದ ಗಿರಡ್ಡಿ ಗೋವಿಂದರಾಜ, ಜಿ.ಎಸ್.ಆಮೂರ, ಜಿ.ಎಚ್.ನಾಯಕ್"[೫೭] ಮುಂತಾದ ವಿಮರ್ಶಕರು ನವ್ಯದ ಚಿಂತನೆಯಲ್ಲಿ ಬರವಣಿಗೆಯಲ್ಲಿ ತೊಡಗಿದರು. ಅಡಿಗರು ಮುಖ್ಯವಾಗಿ ಕನ್ನಡದ ಸಂದರ್ಭದಲ್ಲಿ ತಾವೂ ನವ್ಯ ಎನ್ನುವ ಅರ್ಥಕ್ಕೆ ಸಂವಾದಿಯಾಗಿ ಬೆಳೆದವರು. ಅಡಿಗರ ಅಭಿವ್ಯಕ್ತಿಯಂತೆ

> "ಸಪ್ತ ಸಾಗರದಾಚೆಯೆಲ್ಲೋ ಸುಪ್ತ ಸಾಗರ ಕಾದಿದೆ
> ಮೊಳೆಯದಲೆಗಳ ಮೂಕ ಮರ್ಮರ ಇಂದು ಇಲ್ಲಿಗೆ
> ಹಾಯಿತೇ?"[೫೮]

ಎಂದು ಅವರ 'ಮೋಹನ ಮುರಳಿ' ಸಾಲುಗಳು ಆಧ್ಯಾತ್ಮಿಕ ಹುಡುಕಾಟವನ್ನು ತೋರಿಸುತ್ತಿದೆಯೇನೋ ಅನ್ನಿಸಿದರೂ ವಾಸ್ತವ ಬದುಕಿನ ಸತ್ಯದ ಗಂಭೀರ ತುಡಿತಗಳ ಧ್ವನಿಯಿದೆ. ಇದೇ ಕವನದಲ್ಲಿ ಅಡಿಗರು ಮುಂದುವರಿಯುತ್ತಾ 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ?' ಎಂದು ಪ್ರಶ್ನಿಸುತ್ತಾ, ಮನುಷ್ಯನ ಸಹಜ ಗುಣಗಳನ್ನು ಎತ್ತಿಹಿಡಿದಿದ್ದಾರೆ. ಭಾವುಕತೆಯಿಂದ ಬರೆಯುವ ಅಡಿಗರು ತಮ್ಮ 'ನಾವೆಲ್ಲರೂ ಒಂದೇ ಜಾತಿ' ಕವನದಲ್ಲಿ ದೇಶ, ಭಾಷೆಗಳ ಬಗ್ಗೆ ಉತ್ತರ ಧ್ವನಿಯಲ್ಲಿ ಬರಿಯುತ್ತಲೇ, ಸೌಮ್ಯ ಭಾವದ ಅಭಿವ್ಯಕ್ತಿಯನ್ನು ವ್ಯಕ್ತಪಡಿಸುತ್ತಾರೆ. ಅವರ ಕವನದ ಸಾಲುಗಳು:

> "ಹಳೆಯ ಕೊಳೆಯ ಕಳೆವೆವು
> ನವ ಶುಭವ ಬೆಳೆವೆವು"[೫೯]

ಅಡಿಗರನ್ನು ಕುರಿತು ಕೆಲವರಲ್ಲಿ ಬೇರೆ ರೀತಿಯ ಅಭಿಪ್ರಾಯಗಳು ವ್ಯಕ್ತಗೊಂಡಿವೆ. ಆದರೆ ಅವರ ಅಭಿವ್ಯಕ್ತಿ ವಿಧಾನವು ಮಾನವೀಯ ನೆಲೆಗಳನ್ನು ಹೊಂದಿದೆ. ಪಾಶ್ಚಾತ್ಯ ಪ್ರಭಾವ ಹೊಂದಿದರೂ ಅವರ ಕವನ ಸಂಕಲನ 'ಚಿಂತಾಮಣಿಯಲ್ಲಿ ಕಂಡ ಮುಖ'(೧೯೮೭)ದ ಮುನ್ನುಡಿಯಲ್ಲಿ "ಕ್ರಮೇಣ ಹೊರಗಡೆಯ ಎಲ್ಲಾ ಪ್ರಭಾವಗಳಿಂದಲೂ ತಪ್ಪಿಸಿಕೊಂಡು ಶುದ್ಧ ಸ್ವತಂತ್ರ ಭಾರತೀಯತೆ ಕನ್ನಡದಲ್ಲಿ ಆಧುನಿಕವಾಗಿ ಮೈತಳೆಯಬೇಕು. ಇದು ನಾವು ನಮ್ಮ ಮುಂದೆ ಇಟ್ಟುಕೊಳ್ಳಬೇಕಾದ ಗುರಿ ಎಂದು ನನ್ನ ಅಭಿಪ್ರಾಯ"[೬೦] ಎಂಬ ಅಡಿಗರಲ್ಲಿ ಸಂಪೂರ್ಣವಾಗಿ ಭಾರತೀಯ ಚಿಂತನೆ ಸಿದ್ಧಾಂತ, ಸಾಮಾಜಿಕ ಸಮಸ್ಯೆಗಳೇ ಮುಖ್ಯವಾಗಿದ್ದವು. ಪಾಶ್ಚಿಮಾತ್ಯ ಸಿದ್ಧಾಂತ ಬರೀ ಅನುಕರಣೀಯ ಆಗಿರಬೇಕು. ನಮ್ಮ, ನಾವು ಬದುಕುತ್ತಿರುವ ಸಮಾಜದ ತುಡಿತಗಳು, ಸಂವೇದನೆಗಳು ಮುಖ್ಯವಾಗಿ ಕಾಣಬೇಕು ಎಂಬುದಾಗಿದೆ.

ಯು.ಆರ್.ಅನಂತಮೂರ್ತಿಯವರ ಅಭಿವ್ಯಕ್ತಿಯ ನೆಲೆಗಳು ಅವರ ಮುನ್ನುಡಿಗಳಲ್ಲಿ ಒಂದು ಸಾಹಿತ್ಯ ಕೃತಿಯನ್ನು ವಿಮರ್ಶಿಸುವಾಗ ಒಟ್ಟು ಸಾಹಿತ್ಯದಿಂದ ತಾನು ಏನನ್ನು ಅಪೇಕ್ಷಿಸುತ್ತೇನೆ

ಎಂಬುದಾಗಿದೆ. ಅವರು ಪೂರ್ವಕಾಲಿಕವಾಗಿ ಕಮ್ಯೂನಿಸ್ಟ್ ಪಕ್ಷದಲ್ಲಿದ್ದು ದಲಿತ ಮತ್ತು ಹಿಂದುಳಿದ ಜನವ್ಯವಸ್ಥೆಯ ಪರವಾಗಿ ಇದ್ದವರು. ಪುರೋಹಿತಶಾಹಿ ಬಂಡವಾಳಶಾಹಿಗಳ ವಿರುದ್ಧ ರಾಜಕಾರಣಿಗಳು ಜನರ ಪರವಾಗಿ ಇರದಿದ್ದರೆ ನೇರವಾಗಿ ನಿಷ್ಠುರವಾಗಿ ಎಚ್ಚರಿಕೆ ನೀಡುವಂತಹ ವ್ಯಕ್ತಿತ್ವ ಅವರದಾಗಿತ್ತು. ಏಕೆ ಅವರು ಇಂತಹ ನಿಲುವುಗಳನ್ನು ಹೊಂದುತ್ತಿದ್ದರೆಂದರೆ ಅನಂತಮೂರ್ತಿಯವರಲ್ಲಿ ನವ್ಯ ಮತ್ತು ಬಂಡಾಯದ ಮನೋಭಾವ ಅವರಲ್ಲಿ ಸಾಯುವವರೆಗೂ ಒಳಗೊಂಡಿತ್ತು. ಇದೇ ರೀತಿ ಅಡಿಗರಲ್ಲೂ ಇತ್ತು. ಹಾಗಾಗಿ ಅನಂತಮೂರ್ತಿಯವರು, ಅಡಿಗರು ಮತ್ತು ದ.ರಾ.ಬೇಂದ್ರೆಯವರ ಸಾಹಿತ್ಯ ಮತ್ತು ಭಾಷೆಯ ಕುರಿತು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅನಂತಮೂರ್ತಿಯವರು ಸಾಹಿತ್ಯಕವಾಗಿ, ಸಾಮಾಜಿಕವಾಗಿ ಹಲವು ಸ್ತರದ ಸಂವೇದನೆಯನ್ನು ಹೊಂದಿದವರು. ಎಚ್.ಎಂ.ಚನ್ನಯ್ಯನವರ 'ಆಮೆ' ಕವನಸಂಕಲನಕ್ಕೆ ಮುನ್ನುಡಿ ಬರೆಯುತ್ತಾ "ನವ್ಯ ಸಾಹಿತ್ಯದಲ್ಲಿ ಇಷ್ಟೊಂದು ಕಾಮ ಏಕೆ ಇದೆ ಎಂದು ಬಹಳ ಜನರು ಕೇಳುತ್ತಾರೆ"[೧೧] ಎಂದು ಹೇಳುತ್ತಾರೆ. ಅನಂತಮೂರ್ತಿಯವರು ಈ ಸಣ್ಣ ವಿಷಯವನ್ನು ಸಾಹಿತ್ಯ ಮತ್ತು ಬೌದ್ಧಿಕ ನೆಲೆಯಲ್ಲಿ ಜನರಿಗೆ ಸರಳವಾದ ರೀತಿಯಲ್ಲಿ ಕಾಮದ ಅರಿವಿನ ಬಗ್ಗೆ ತಿಳಿಸಿದ್ದಾರೆ. ಮನುಷ್ಯನ ಗುಣ ತಾನು ಬಡವ, ಶ್ರೀಮಂತ ಎನ್ನುವುದಕ್ಕಿಂತ ತನಗೆ ಸಮಾಜದಲ್ಲಿ ಮರ್ಯಾದೆಯ ಪ್ರಶ್ನೆ ಹಾಗೂ ಸಂಕೋಚದ ಭಾವನೆ, ಇದು ಕಾಮದ ರೂಪ, ಪ್ರತೀಕವಾಗಿ ಎಚ್.ಎಂ.ಚೆನ್ನಯ್ಯ, ರಾಮಚಂದ್ರಶರ್ಮ, ಅನಂತಮೂರ್ತಿಯವರು ತಮ್ಮ ಸಾಹಿತ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಸಂಸ್ಕೃತಿಯ ನೆಲೆಯಲ್ಲಿ ಜಾತಿವ್ಯವಸ್ಥೆ, ಕಟ್ಟುಪಾಡುಗಳು, ಪ್ರೇಮ, ಕಾಮಗಳಂತಹ ವ್ಯಕ್ತಿಗತವಾದ ಅಗತ್ಯಗಳು ಜನರಲ್ಲಿವೆ. ಆದ್ದರಿಂದ ಪರಂಪರೆ, ಸಂಪ್ರದಾಯದಿಂದ ಜನರು ಕಾಮ, ಪ್ರೇಮದಂತಹ ಸಂಗತಿಗಳಿಂದ ಸಂಕೋಚ ಭಾವನೆ ಹೊಂದಿದ್ದಾರೆ. ಇಂತಹ ಭಾವನೆಗಳು ನವೋದಯದಲ್ಲಿ ಪ್ರತಿಪಾದಿಸಿತವಾಗಿವೆ. ಆದರೆ ನವ್ಯದವರು ಇದನ್ನು ಒಪ್ಪಿಕೊಳ್ಳದೆ ಅದಕ್ಕೆ ಜನರ ಅಭಿವ್ಯಕ್ತಿಗಳಿಂದ ಸಂಪ್ರದಾಯ, ಸಂಕೋಚ ಭಾವನೆಗಳು ಒಳಗೊಂಡಿವೆ. ಹಾಗಾಗಿ ನವ್ಯದವರು ಕಾಮದ ಅರಿವನ್ನು ತಿಳಿಸಲು ತಮ್ಮ ಸಾಹಿತ್ಯದಲ್ಲಿ ಪ್ರಯತ್ನಿಸಿದ್ದಾರೆ. ಹಾಗಾಗಿ ನವ್ಯದವರು ಹೆಚ್ಚಾಗಿ ಕಾಮದ ಸಂಕೇತದಂತಹ ವಸ್ತುವನ್ನು ಬಳಸಿಕೊಂಡಿದ್ದಾರೆ.

ಹೀಗೆ ಚಂದ್ರಶೇಖರ ಕಂಬಾರರ ಕಾವ್ಯ, ನಾಟಕ, ಇವುಗಳಲ್ಲಿ ಕಾಮದ ಪ್ರಜ್ಞೆ ಹೇಗೆ ಒಳಗೊಂಡಿದೆ ಎನ್ನುವುದಕ್ಕೆ ಅವರ ನಾಟಕ 'ಋಷ್ಯಶೃಂಗ' ಮತ್ತು 'ಹೇಳತೇನ ಕೇಳ' ಕವನಸಂಕಲನ ಈ ಎರಡೂ ಕೃತಿಗಳು ಒಂದೇ ಕತೆಯ ವಸ್ತುವನ್ನು ಆಧರಿಸಿ ರಚನೆಯಾಗಿವೆ. ಆದರೆ ಈ ಪ್ರಕಾರದ ಕೃತಿಗಳಲ್ಲಿ ಸಂದರ್ಭ ಮತ್ತು ಅಭಿವ್ಯಕ್ತಿಯ ಮಾಧ್ಯಮ ಭಿನ್ನವಾಗಿ ಕಾಣುತ್ತದೆ. ಋಷ್ಯಶೃಂಗ ನಾಟಕದಲ್ಲಿ ಗೊಲ್ಲತಿಯ ವೇಷದಲ್ಲಿ ಹೊಲೆಯರ ಕಮಲಿ ತನ್ನ ಕನಸನ್ನು ಹೇಳುತ್ತಾ ಸಫಲ ಕಾಮದ ಸಂಕೇತವಾಗುವುದಲ್ಲದೇ ನಾಟಕದ ನಾಯಕಿಯೂ ಆಗುತ್ತಾಳೆ. ಇಲ್ಲಿ ಮುಖ್ಯವಾಗಿ ಊರಿನ ಜನರ ಏಳ್ಗೆಗಾಗಿ ಬಾಳಗೊಂಡ ಮತ್ತು ಕಮಲಿಯರ ಕೂಡಿಕೆಯಿಂದ ಮಳೆಯಾಗಿ ಊರವರ ಬರಗಾಲದ ಪೀಡೆಯಿಂದ ಮುಕ್ತಿಗೊಳಿಸಿದ್ದಾರೆ. ಕಂಬಾರರ ಕಾವ್ಯಗಳು ಪೌರಾಣಿಕ

ವಸ್ತುವಾದರೂ ವಾಸ್ತವ ನೆಲೆಯನ್ನು ಸೂಚಿಸುತ್ತವೆ. ಉದಾಹರಣೆಗೆ ಜೋಕುಮಾರಸ್ವಾಮಿಯ ಕತೆ ಗಂಡು ಹೆಣ್ಣಿನ ಕಾಮದ ಕತೆಯಾಗಿದೆ. ಹಳ್ಳಿಯ ಸೊಗಡಿನ ಭಾಷೆ, ಲಯ, ಸಂಕೇತ ರೂಪಕವಾಗಿ ಪ್ರತಿಮೆಗಳ ಮೂಲಕ ಸಾಹಿತ್ಯದಲ್ಲಿ ಬೇಂದ್ರೆ, ಅಡಿಗರು, ಕಂಬಾರರು ವಿಶಿಷ್ಟ ಪ್ರತಿಭೆಯ ವ್ಯಕ್ತಿಗಳಾಗಿದ್ದಾರೆ.

ಕೀರ್ತಿನಾಥ ಕುರ್ತಕೋಟಿ ಅವರು ಋಷ್ಯಶೃಂಗ ನಾಟಕದ ಮುನ್ನುಡಿಯಲ್ಲಿ "ಈ ಕತೆಯು ನಾಟಕದಲ್ಲಿ ಅಭಿವ್ಯಕ್ತಿಯನ್ನು ಪಡೆಯುವಾಗ ಅದು ಹಲವಾರು ಮಟ್ಟಗಳಲ್ಲಿ ಬೆಳೆದು ಹೊಸ ಹೊಸ ಅರ್ಥ ವಿಶ್ಲೇಷಣೆಗಳನ್ನು ಮೈಗೂಡಿಸಿಕೊಂಡಿದೆ"[೬೨] ಎಂದು ಈ ನಾಟಕದ ಅಭಿವ್ಯಕ್ತಿಯತೆ ಹಳ್ಳಿಯ ಜನರ ಮಳೆಯಿಂದ ಬರಡಾದ ಹಳ್ಳಿಗೆ ನೀರುಣಿಸಬೇಕಾದ ಪ್ರಸಂಗವಿದೆ. ಹಾಗಾಗಿ ಬಾಳಗೊಂಡನ ವ್ಯಕ್ತಿತ್ವ ಬಹುಮುಖವಾಗಿರುವುದರಿಂದ ಕಮಲಿ ಬಾಳಗೊಂಡನ ಕಾಮದ ಮೂಲಕ ಹಳ್ಳಿಯ ಜನರಲ್ಲಿದ್ದ ಬರಡುತನದ ಮನಸ್ಥಿತಿಯನ್ನು ಮಳೆಯಾಗಿ ಸಂತೋಷಪಡಿಸಿದೆ. ಗೋಪಾಲಕೃಷ್ಣ ಅಡಿಗರು 'ಹೇಳತೇನ ಕೇಳ' ಕವನಸಂಕಲನದ ಮುನ್ನುಡಿಯಲ್ಲಿ ಚಂದ್ರಶೇಖರ ಕಂಬಾರರ ಅಭಿವ್ಯಕ್ತಿ, ಸ್ವರೂಪ ಕುರಿತು ಹೇಳುತ್ತಾ "ಈ ಕವಿಗೆ ಪರಿಸರದಿಂದ ಲಭಿಸಿದ ಜಾನಪದ ಭಾಷೆಗೂ, ಈ ಕವಿಯ ಆಧುನಿಕ ಪ್ರಜ್ಞೆಗೂ ನಡೆಯುತ್ತಿರುವ ದ್ವಂದ್ವ, ಪರಂಪರೆಯಿಂದ ಬಂದ ಸಹಜ ಪ್ರಾಕೃತ ಭಾಷಾ ಸಂಪತ್ತಿಗೂ, ಇಂದು ಈಗ ಜೀವಂತವಾಗಿದ್ದು ಹೊಸ ಪರಿವರ್ತನೆಗಳಿಗೆ ಜಾಗೃತನಾದ ಕವಿಯ ವಿಶಿಷ್ಟ ಅನುಭವಗಳಿಗೂ ನಡುವೆ ಇರುವ ಕಂದಕಕ್ಕೆ ಸೇತುವೆ ಕಟ್ಟುವ ಪ್ರಯತ್ನ ಉದ್ದಕ್ಕೂ ಕಂಡುಬರುತ್ತದೆ. ಆದರೆ ಈ ಎರಡೂ ಒಂದೇ ಆಗಿ ಒಂದು ಇನ್ನೊಂದರ ಮೈಯಾಗುವ ಮಟ್ಟದಲ್ಲಿ ಸಮಗ್ರೀಕರಣ ಇನ್ನೂ ಸಿದ್ಧಿಸಬೇಕಾಗಿದೆ"[೬೩] ಎಂದು ಹೇಳಿದ್ದಾರೆ. ಇಲ್ಲಿ ಕಂಬಾರರ ಸಾಹಿತ್ಯ ಅಭಿವ್ಯಕ್ತಿಯ ಕ್ರಮ ತನ್ನ ಪರಿಸರದಿಂದ ಜಾನಪದ ಭಾಷೆ, ಪರಂಪರೆ, ರೂಪಕ ಪ್ರತಿಮೆಗಳು ಅವರನ್ನು ಸಾಹಿತ್ಯಲೋಕಕ್ಕೆ ಆಧುನಿಕ ಪ್ರಜ್ಞೆಯಿಂದ ಹೊಸ ಪರಿವರ್ತನೆಗೆ ಸಾರ್ವಕಾಲಿಕವಾಗಿ ಧ್ವನಿಸುವ ಶಕ್ತಿ ಇದೆ. ಕಂಬಾರರ 'ಹೋರಿ', 'ಹೇಳತೇನ ಕೇಳ' ಆಧುನಿಕ ಪ್ರಜ್ಞೆಗೆ ವಿಶಿಷ್ಟವಾದ ಅವರ ವೈಯಕ್ತಿಕ ಅನುಭವಗಳು ಗಾಢವಾಗಿಸಿವೆ.

ಹಾಗಾಗಿ ಪಿ.ಲಂಕೇಶರು ಉಲ್ಲೇಖಿಸುವಂತೆ ಅನಂತಮೂರ್ತಿಯವರು 'ಹರಿಯುವ ನೀರಿದು' ಮುನ್ನುಡಿಯಲ್ಲಿ "ನಮ್ಮ ಈಚಿನ ಕವಿಗಳಲ್ಲಿ ಪ್ರಾಯಶಃ ಕಂಬಾರರೊಬ್ಬರೇ ಬೇಂದ್ರೆ, ಅಡಿಗರಂತೆ ಭಾಷೆಯ ಜೊತೆ ಆಟವಾಡಬಲ್ಲವರು. ಯೌವ್ವನದ ಹುಮ್ಮಸ್ಸನ್ನೆಲ್ಲಾ ಕಂಬಾರರು ತಮ್ಮ ಪದ್ಯದಲ್ಲಿ ತುಂಬಿಬಿಟ್ಟಿದ್ದಾರೆ. ಆದರೆ ಚಿತ್ತಾಲರು ಭಾಷೆಯನ್ನು ಹೀಗೆ ಭಾವಾಭಿನಯಕ್ಕಾಗಿ ಬಳಸುವವರಲ್ಲ"[೬೪] ಎಂದು ಹೇಳಿದ್ದಾರೆ. ಕಂಬಾರರ ಅಭಿವ್ಯಕ್ತಿಯನ್ನು ಪಿ.ಲಂಕೇಶರು ಸರಿಯಾಗಿ ತಿಳಿಯಪಡಿಸಿದ್ದಾರೆ. ನವ್ಯದಲ್ಲಿ ಭಾಷೆಯನ್ನು ಭಾವನೆಗಾಗಿ ಆದರ್ಶಕ್ಕಾಗಿ ಬಳಸಿದ್ದು ಕಡಿಮೆ. ಆದರೆ ನವ್ಯತೆಯ ಭಾಷೆ ಹರಿತವಾದ ಸಾಮಾಜಿಕವಾಗಿ ಪ್ರತಿಮೆ, ರೂಪಕವಾಗಿ ಒಳಗೊಂಡ ಭಾಷೆಯಾಗಿದೆ. ಪಿ.ಲಂಕೇಶ್ ಅವರು ಮುನ್ನುಡಿ ಬರೆದದ್ದು ಕಡಿಮೆ. ಆದರೆ ಅವರ ಸಾಹಿತ್ಯ 'ಅಕ್ಷರ ಹೊಸಕಾವ್ಯ' ಮುನ್ನುಡಿಯಲ್ಲಿ ನವ್ಯ ಕಾಲದ ಸಾಹಿತ್ಯದ ತಾತ್ವಿಕತೆಯನ್ನು ಎತ್ತಿ ತೋರಿಸಿದ್ದಾರೆ. ಹಾಗೆಯೇ ನವ್ಯ ಕಾಲದ ಕವಿಗಳ

ಕವನಗಳನ್ನು ಕುರಿತು ಪ್ರಸ್ತುತಪಡಿಸಿದ್ದಾರೆ. "ಒಂದು ತಲೆಮಾರಿನ ಕವನಗಳು ಸಂಗ್ರಹವೊಂದರಲ್ಲಿ ವಿಶಿಷ್ಟ ರೀತಿಯಲ್ಲಿ ಬಂದೊಡನೆ ಅಲ್ಲಿಯ ವಿವಿಧ ಬಗೆಯ ಜೀವಂತಿಕೆಯ ಕವನಗಳು ಒಂದರ ಮೇಲೊಂದು ಬೆಳಕು ಚೆಲ್ಲಿ ಗುಣ ದೋಷಗಳ ದೃಷ್ಟಿಯಿಂದ ಹಲವು ಹೊಂದಾಣಿಕೆ ಮಾಡಿಕೊಳ್ಳುತ್ತವೆ. ಈ ಅರ್ಥಗಳಲ್ಲಿ ಕವನ ಮಂಡನೆಯೇ ಒಂದು ಬಗೆಯ ವಿಮರ್ಶೆ"[೮] ಎಂದು ಹೇಳುತ್ತಾರೆ. ನವ್ಯದ ಕವನಸಂಗ್ರಹಗಳಿಂದ ಪಿ.ಲಂಕೇಶ್ ಅವರು ತಿಳಿಸಿರುವಂತೆ ಒಂದು ಬಗೆಯ ಆತ್ಮವಿಮರ್ಶೆಯನ್ನು ಕಾಣಬಹುದು. ಏಕೆಂದರೆ ಕವನಗಳ ಮಧ್ಯೆ ಭಿನ್ನತೆ ಅರ್ಥ, ಸೃಷ್ಟಿ, ಭಾಷೆ, ಚಿಂತನೆ, ವಸ್ತು, ಅಭಿವ್ಯಕ್ತತೆಯನ್ನು ಈ ಕವನಗಳ ಮೂಲಕ ಗುಣಗಳನ್ನು ಕಂಡುಕೊಳ್ಳಬಹುದು. ಜೊತೆಗೆ ಕಾವ್ಯ ಪ್ರೇಮಿಗಳು ಬೇರೆ ಬೇರೆ ನೆಲೆಯಿಂದ ಹಲವು ದೃಷ್ಟಿಕೋನಗಳಾಗಿ ಗ್ರಹಿಸಬಹುದು. ಜೊತೆಗೆ ವ್ಯಕ್ತಿನಿಷ್ಠತೆಯನ್ನು ತಿಳಿಯಬಹುದು. ಕವಿತೆ ಸಾಮಾಜಿಕ ಮನಸ್ಥಿತಿಯನ್ನು ವ್ಯಕ್ತಪಡಿಸುತ್ತವೆ. ಲಂಕೇಶರ ನಿಲುವು ಸಾಮಾಜಿಕವಾಗಿ ಅಭಿವೃದ್ಧಿಯ ಜನಪರವಾಗಿ ಅವರ ಸಾಹಿತ್ಯದ ನಿಲುವಾಗಿದೆ.

ತೇಜಸ್ವಿಯವರು ಕೂಡಾ ನವ್ಯತೆಯ ಚಿಂತನೆಯಲ್ಲಿ ತಮ್ಮ ಕತೆ, ಕಾದಂಬರಿ, ವೈಚಾರಿಕ ಬರಹಗಳಾಗಿ ತಮ್ಮ ಸೃಜನಶೀಲತೆಯನ್ನು ರೂಪಿಸಿಕೊಂಡಿದ್ದಾರೆ. ಅವರ ಅಬಚೂರಿನ ಪೋಸ್ಟಾಫೀಸು ಕೃತಿಯ 'ಹೊಸ ದಿಗಂತದೆಡೆಗೆ' ಮುನ್ನುಡಿ ನವ್ಯತೆಯನ್ನು ಮೀರುವ ಮತ್ತು ನವ್ಯತೆಯ ಕಾಲಘಟ್ಟವನ್ನು ಮೌಲ್ಯಕ್ಕೊಳಪಡಿಸಿದೆ. ಈ ಮುನ್ನುಡಿಯಿಂದ ತೇಜಸ್ವಿಯವರು ಯಾವುದೇ ಪಾಶ್ಚಾತ್ಯರ ಪ್ರಭಾವವನ್ನು ಮೀರಿ ಸ್ಥಳೀಯತೆಯ ತತ್ವವನ್ನು ಅಳವಡಿಸಿಕೊಳ್ಳಬೇಕಾಗಿದೆ ಎಂಬ ನಿಲುವು ಇದೆ. "ಲೋಹಿಯಾ ಅವರ ತತ್ವಚಿಂತನೆ, ಕುವೆಂಪು ಅವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನಲ್ಲಿ ಪ್ರಯೋಗಶಿಲತೆ ಈ ಮೂರೇ ನನ್ನ ಈಚಿನ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮ ಉಂಟು ಮಾಡಿರುವಂತಹವು. ಬಹುಶಃ ಮುಂಬರುವ ಕಲಾವಿದರಿಗೆ ಕನ್ನಡ ಸಾಹಿತ್ಯ ಸೃಷ್ಟಿಯಲ್ಲಿ ಚೈತನ್ಯ ಶಕ್ತಿಯಾಗಬಲ್ಲಂತಹವು ಈ ಮೂರೇ"[೬] ಎಂದು ತೇಜಸ್ವಿಯವರು ಹೇಳುತ್ತಾರೆ. ಈ ಹಿನ್ನೆಲೆಯ ಮುನ್ನುಡಿಯಿಂದ ನವ್ಯದ ತಾತ್ವಿಕತೆಯನ್ನು ಈ ಮೂರು ಜನರ ತತ್ವಗಳ ಅಭಿವ್ಯಕ್ತಿಯನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಲೋಹಿಯಾ ಅವರ ತತ್ವಚಿಂತನೆ ಸಾಮಾಜಿಕ ನ್ಯಾಯಕ್ಕೋಸ್ಕರ ಹೋರಾಟದ ತತ್ವಚಿಂತನೆಯಾಗಿ ಅಳವಡಿಸಿಕೊಳ್ಳಬೇಕಾಗಿದೆ. ಕುವೆಂಪು ಅವರ ಕಲಾಸೃಷ್ಟಿ ಅವರ ಸಾಹಿತ್ಯದ ಕಾದಂಬರಿ, ಕಾವ್ಯದಲ್ಲಿ ವ್ಯಕ್ತಪಡಿಸುತ್ತಾ ಪುರೋಹಿತಶಾಹಿಯ ಅವಾಂತರಗಳನ್ನು ತಮ್ಮ ನಾಟಕಗಳಲ್ಲಿ ನಿರೂಪಿಸಿದ್ದಾರೆ. ಹಾಗೆಯೇ ಗ್ರಾಮೀಣ ಪ್ರದೇಶದ ಜಮೀನ್ದಾರಿಗಳು ದಲಿತರನ್ನು ಜೀತಕ್ಕೆ ಇಟ್ಟುಕೊಂಡ ಸ್ಥಿತಿಯನ್ನು ಮತ್ತು ಅವರ ಕಾವ್ಯಸೌಂದರ್ಯಗಳ ಮೂಲಕ ಜನರಲ್ಲಿ ಸಂವೇದನೆಯನ್ನು ಸೃಷ್ಟಿಸಿದರು. ಶಿವರಾಮ ಕಾರಂತರ ಜೀವನದೃಷ್ಟಿಯನ್ನು ಮನುಷ್ಯ ಮನುಷ್ಯನ ಮಧ್ಯೆ ಮಾನವೀಯ ನೆಲೆಯಾಗಿ ಜೀವನ ಮತ್ತು ಅವರ ಸಾಹಿತ್ಯದಲ್ಲಿ ತೋರಿಸಿಕೊಟ್ಟಿದ್ದಾರೆ. ಅವರ 'ಚೋಮನ ದುಡಿ' ಕಾದಂಬರಿಯಲ್ಲಿ ದಲಿತ ಬದುಕಿನ ಸ್ಥಿತಿ, ಸಂಪ್ರದಾಯದ ದೃಷ್ಟಿಕೋನ ಇವು ಪ್ರತಿಯೊಬ್ಬ ಮನುಷ್ಯನ ಬದುಕಿನಲ್ಲಿ ಬಂದಿವೆ. ಇವೆಲ್ಲವುಗಳನ್ನು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಪ್ರಯೋಗಶೀಲತೆಯಾಗಿ ಸಮಾಜದ ಮಾನವೀಯ ನೆಲೆಯಾಗಿ

ರೂಪಿಸಿಕೊಳ್ಳಬೇಕಾಗಿದೆ. ಇವು ತತ್ವಗಳಾದರೂ ತೇಜಸ್ವಿಯವರು ತಮ್ಮ ಸಾಹಿತ್ಯದ ಮೂಲಕ ಸಮಾಜದ ಬದುಕನ್ನು ಅಭಿವ್ಯಕ್ತಿಯಲ್ಲಿ ಕಂಡುಕೊಂಡಿದ್ದಾರೆ. ಅವರ ಸಾಹಿತ್ಯದ ನಿಲುವು ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಸಮಾಜ ಎಂದರೇನು? ಸಮಾಜದಲ್ಲಿರುವ ಬದುಕಿನ ಸ್ಥಿತಿಗತಿಗಳೇನು? ನಮ್ಮ ಆಲೋಚನೆಗಳು ಏನಾಗಿರಬೇಕು? ಎಂಬುದನ್ನು ಅರ್ಥೈಸುವ ಒಂದು ತತ್ವದ ಮೂಲಕ ತಿಳಿಯಪಡಿಸಿದ್ದಾರೆ.

ಈ ಹಿನ್ನೆಲೆಯಿಂದ ನವ್ಯತೆಯಲ್ಲಿ ಬದುಕಿನ ಪ್ರಯೋಗಶೀಲತೆ ಅಲ್ಲದೇ ಬರೀ ಆಡಂಬರದ ಮಾತುಗಳು, ಭ್ರಮನಿರಸನಳಿವೆ. ಇದರಿಂದ ಜನರು ಪ್ರಗತಿಯನ್ನು ಬಯಸಿದರು. ಹಾಗಾಗಿ ಅಬಚೂರಿನ ಪೋಸ್ಟಾಫೀಸು ಕೃತಿಯಿಂದೀಚೆಗೆ ಹಾಗೂ ತೇಜಸ್ವಿ ಕತೆಗಳು, ಬೆಸಗರಹಳ್ಳಿ, ಕುಂ.ವಿ., ಬರಗೂರು ಇವರಲ್ಲಿ ಸಮಾಜದ ಪ್ರಗತಿಯ ಹಿನ್ನೆಲೆಯಲ್ಲಿ ಜನರ ಬದುಕಿನ ಪ್ರಶ್ನೆಯಾಯಿತು. ಒಂದು ಕಡೆ ನೆಹರೂ ಆಡಳಿತ ಮಾಡಿದ ರೀತಿಯು ಇದರ ಪರಿಣಾಮಗಳಾದವು. ಆದರೆ ನವ್ಯದವರು ಇದಕ್ಕೆ ಪ್ರತಿಕ್ರಿಯೆ ನೀಡಲಿಲ್ಲ. ಹಾಗಾಗಿ ದಲಿತ ಮತ್ತು ಬಂಡಾಯಕ್ಕೆ ದಾರಿ ಮಾಡಿಕೊಟ್ಟಿತು. ಆಗ ನವ್ಯ ಸಾಹಿತ್ಯದಲ್ಲಿ ಎಲ್ಲಾ ಬುದ್ಧಿಜೀವಿಗಳಿದ್ದರೂ ವೇದಿಕೆ ಮೇಲೆ ಭಾಷಣ ಮಾಡುವಾಗ ಅತಿ ಸಂಸ್ಕೃತಿಯ ಚಿಂತನೆಯಿಂದ ಇಲ್ಲ ಸಲ್ಲದ ನಿಲುವು ಮಂಡಿಸಿ 'ಭಾಷೆಯ ಪ್ರಭುತ್ವದಿಂದ ಅತಿ ಸುಸಂಸ್ಕೃತಿಯ ಮೆಣಸಿನ ಹೊಗೆ ಹಾಕಿದ್ದಾರೆ ಎಂಬುದು ತೇಜಸ್ವಿಯವರಲ್ಲಿ ಮುನ್ನುಡಿ ವ್ಯಕ್ತಗೊಂಡಿದೆ.' ಹಾಗಾಗಿ ಈ ಎಲ್ಲಾ ಕಾರಣಗಳಿಂದ ದಲಿತ ಮತ್ತು ಬಂಡಾಯ ಸಾಹಿತ್ಯಕ್ಕೆ ಎಡೆ ಮಾಡಿಕೊಟ್ಟಿತು.

### ೪.೪. ದಲಿತ ಮತ್ತು ಬಂಡಾಯ ಸಾಹಿತ್ಯ ಸಂದರ್ಭದ ಮುನ್ನುಡಿಗಳು

ದಲಿತ ಮತ್ತು ಬಂಡಾಯ ಸಾಹಿತ್ಯ ಸುಮಾರು ೭೦-೮೦ರ ದಶಕದಿಂದ ಈಚೆಗೆ ಬೆಳವಣಿಗೆಯಾಗಿರುವುದನ್ನು ಕಾಣಬಹುದು. ಈ ಕಾಲಘಟ್ಟದ ಹಿಂದೆಯೂ ಬಂಡಾಯ ಇತ್ತು. ಅದು ೧೯೪೦ರ ಆಸುಪಾಸಿನ ಪ್ರಗತಿಶೀಲ ಸಾಹಿತ್ಯವು ಬಂಡಾಯ ಮನೋಧರ್ಮವನ್ನು ಹೊಂದಿತ್ತು. ಅಂದು ಗಾಂಧೀಜಿಯವರ ಚಳುವಳಿಯಿಂದ ಅದು ತಣ್ಣಗಾಯಿತು. ಆ ಪ್ರಗತಿಶೀಲ ಸಾಹಿತ್ಯದ ಸಾಹಿತ್ಯಕ ರಚನೆಯ ಸಂದರ್ಭದ ಕಾಲವು ಜನರು ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡುವ ಶಕ್ತಿಯನ್ನು ಮತ್ತು ಜನರ ಮಧ್ಯೆ ಒಳ ಒಳಗೆ ನಡೆಯುವ ಶೋಷಣೆ, ದಬ್ಬಾಳಿಕೆ ಮತ್ತು ವಸಾಹತುಶಾಹಿಯ ದುರುದ್ದೇಶಗಳನ್ನು ಕುರಿತು ಪ್ರತಿಕ್ರಿಯಿಸಿದೆ. ಆದರೆ ದಲಿತ ಮತ್ತು ಬಂಡಾಯದ ಸಾಹಿತ್ಯದ ಸಂದರ್ಭಗಳು ಹೇಗಿವೆ ಎಂದರೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದೆ. ಆದರೆ ಭಾರತೀಯ ಎಲ್ಲಾ ಪ್ರಜೆಗಳು ಸ್ವಾತಂತ್ರ್ಯ ಪ್ರಿಯರು ಎಂದು ಹೇಳಲಾಗುತ್ತದೆ. ನಿಜವಾಗಿ ಸ್ವಾತಂತ್ರ್ಯ ಪಡೆದವರು ಯಾರು ಎಂಬುದು ೮೦ರ ದಶಕದಲ್ಲಿ ಪ್ರಶ್ನೆಯಾಗಿತ್ತು. ಅಂದು ಡಾ.ಬಿ.ಆರ್.ಅಂಬೇಡ್ಕರ್ ಅವರು ದೇಶದ ಜನತೆಯ ದೀನ-ದಲಿತರ ಹೆಸರಿನಲ್ಲಿ ಅವರ ಉದ್ಧಾರಕ್ಕಾಗಿ ಸಾಮಾನ್ಯ ಜನರ ಕಲ್ಯಾಣಕ್ಕಾಗಿ ಅವರ ಮುಕ್ತ ಅಭಿವ್ಯಕ್ತಿಗಾಗಿ ಕಾನೂನು ನಿಯಮಗಳನ್ನು

ಮಂಡಿಸಿದ್ದಾರೆ. ಆದರೆ ೭೦ರ ದಶಕದಲ್ಲಿಯೂ ದಲಿತರ ಬಾಳು ಬ್ರಿಟಿಷರ ಕಾಲಕ್ಕಿಂತಲೂ ಶೋಚನೀಯವಾಗಿತ್ತು ಎನ್ನುವುದಕ್ಕೆ ಅವರು ತಾಳಿದ ಮನೋಭಾವದಿಂದ ಅಂದಿನ ಎಲ್ಲಾ ಸಾಹಿತಿಗಳು ಬಂಡಾಯದ ಹಿನ್ನೆಲೆಯಿಂದ ದಲಿತರ ಪರವಾಗಿ ಅನೇಕ ರೀತಿಯಲ್ಲಿ ಧ್ವನಿಗೂಡಿಸಿದರು. ಚಳುವಳಿಯಲ್ಲಿ ತೊಡಗಿದರು. ಸಿದ್ಧಲಿಂಗಯ್ಯ, ದೇವನೂರು ಮಹಾದೇವ ಇನ್ನಿತರರು ದಲಿತರ ಅಸ್ಮಿತೆಗಾಗಿ ಹೋರಾಟ ಮಾಡತೊಡಗಿದರು. ಸಿದ್ಧಲಿಂಗಯ್ಯನವರ ಕಾವ್ಯದ ಭಾಷೆ ೭೦ರ ದಶಕದಲ್ಲಿ ಹರಿತವಾಗಿತ್ತು. ಆದರೆ ದೇವನೂರ ಮಹಾದೇವ ಅವರು ಸಾಹಿತ್ಯಕ ಬರವಣಿಗೆಯಲ್ಲಿ ತೊಡಗಿದ್ದು ಕಡಿಮೆ. ಅವರು ದಲಿತ ಸಂಘರ್ಷ ಸಮಿತಿಯ ಮೂಲಕ ಚಳುವಳಿ, ಹೋರಾಟವನ್ನು ದೀರ್ಘವಾಗಿ ಮುನ್ನಡೆಸಿದರು.

ದಲಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮುನ್ನುಡಿಗಳು ಕಡಿಮೆ. ಆದರೆ ದಲಿತ ಮತ್ತು ಬಂಡಾಯ ಸಾಹಿತ್ಯದ ಚಿಂತನೆಯನ್ನು ಒಳಗೊಳ್ಳುವ ಬರಹಗಳು ಮುನ್ನುಡಿಗಳಲ್ಲಿ ಯಥೇಚ್ಛವಾಗಿ ಕಂಡುಬರುತ್ತವೆ. ಪ್ರಸ್ತುತ ದಲಿತ ಸಾಹಿತ್ಯದ ಚಿಂತನೆಯಲ್ಲಿ ಪಲ್ಲಟಗಳು ಯಾವುವು ಎನ್ನುವುದು ಮುಖ್ಯ ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿ ಭೂತ, ವರ್ತಮಾನ, ಭವಿಷ್ಯತ್ ಕಾಲಗಳನ್ನೊಳಗೊಂಡ ಚಿಂತನೆಯು ಮುಖ್ಯವಾಗಿದೆ. ಹಾಗಾಗಿ ದಲಿತ ಸಾಹಿತ್ಯದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ, ಬೌದ್ಧಿಕ, ಶೈಕ್ಷಣಿಕವಾಗಿ ಚಿಂತನೆಗಳಾಗುವ ತುರ್ತಿದೆ. ದಲಿತ ಮತ್ತು ಬಂಡಾಯದ ಸಾಹಿತ್ಯಕ ಚಿಂತನೆಗಳಿಂದ ಚಾರಿತ್ರಿಕತೆಗಳನ್ನು ನೋಡಬೇಕಾಗಿದೆ. 'ದಲಿತ ಸಾಹಿತ್ಯ ಚಳುವಳಿ'ಯ ಕೃತಿಯ ಮುನ್ನುಡಿಯಲ್ಲಿ ಮಲ್ಲಿಕಾ ಘಂಟಿಯವರು "ಆಧುನಿಕ ಜಗತ್ತು ಹಿಗ್ಗಿದಷ್ಟು ವೈಚಾರಿಕ ಪ್ರಜ್ಞೆ ಕುಗ್ಗುತ್ತಾ ನಡೆದಿದೆ. ತತ್ವರಹಿತ ಪ್ರಭುತ್ವ ರೂಪಿಸುವ ನೀಡುವ ಪರಿಹಾರಗಳ ಭರಾಟೆಯಲ್ಲಿ ನಮ್ಮ ಹಕ್ಕೊತ್ತಾಯದ ಚಳುವಳಿಯ ಶಕ್ತಿ, ಸಾಮರ್ಥ್ಯ ಕ್ರಮೇಣ ನಿಶಕ್ತಗೊಳ್ಳುತ್ತಿದೆ. ದೀರ್ಘ ಕಾಲದ ಶೋಷಣೆ, ದಬ್ಬಾಳಿಕೆಗೆ ಒಳಗಾದ ಸಮುದಾಯಗಳಿಂದ ವೈಚಾರಿಕ ಕ್ರಾಂತಿಯೊಂದನ್ನು ಮಾಡಬೇಕೆಂಬ ಅಗತ್ಯ ಎಂದಿಗಿಂತಲೂ ಇಂದು ಅಗತ್ಯವಾಗಿದೆ"[೬೭] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ದಲಿತ ಸಂವೇದನೆಗಳು ಚರಿತ್ರೆಯುದ್ದಕ್ಕೂ ಇದನ್ನು ಪ್ರತಿರೋಧಿಸುತ್ತಲೇ ಬಂದ ಶೂದ್ರ ಸಂಸ್ಕೃತಿ, ಧರ್ಮ, ರಾಜಕಾರಣ, ಸಾಹಿತ್ಯದ ಬದುಕನ್ನು ಮತ್ತೆ ಮತ್ತೆ ವರ್ತಮಾನದ ನೆರಳಿನಲ್ಲಿ ತಂದೊಡ್ಡಬೇಕಾಗಿದೆ. ಒಂದು ಕಡೆ ಆಕ್ರಮಣಶೀಲವಾದ ಯಾಜಮಾನ್ಯ ವೈದಿಕ ಸಂಸ್ಕೃತಿಯನ್ನು ನಿಯಂತ್ರಿಸುವುದು ಮತ್ತು ನಮ್ಮ ಶೂದ್ರಾದಿ ವರ್ಗಗಳನ್ನು ಶೋಷಣೆಗೆ ಒಳಗು ಮಾಡಿದೆ. ಆದರೆ ಪ್ರಸ್ತುತ ಸ್ಥಿತಿಯಲ್ಲಿ ದಲಿತ ಬದುಕಲು ಅವಕಾಶ ಮಾಡಿ ಕೊಡದ ರೀತಿಯಲ್ಲಿ ಸಮಾಜದಲ್ಲಿ ಶೋಷಣೆ ನಡೆಯುತ್ತಿವೆ. ಆರ್ಥಿಕ ರಂಗದಲ್ಲಿ, ರಾಜಕೀಯ ರಂಗಗಳಲ್ಲಿ, ದಲಿತರು ತಮ್ಮನ್ನು ತಾವು ಎದೆಯೊಡ್ಡಿ ನಿಲ್ಲುವುದಕ್ಕಾಗುವುದಿಲ್ಲ ಎಂಬ ಸ್ಥಿತಿ ಬಂದಿದೆ. ಉದಾಹರಣೆಗೆ ಕಂಬಾಲಪಲ್ಲಿ ಪ್ರಸಂಗ, ನರಗುಂದದ ಪ್ರಸಂಗ, ಉತ್ತರ ಪ್ರದೇಶದಲ್ಲಿ ದಲಿತ ಬಾಲಕಿಯ ಮೇಲೆ ನಡೆದ ಅತ್ಯಾಚಾರ ಮತ್ತು ಕೊಲೆ, ಹಾಗೂ ರೋಹಿತ್ ವೇಮುಲನ ಆತ್ಮಹತ್ಯೆ ಪ್ರಕರಣ ಇವು ಏನು ಹೇಳುತ್ತಿವೆ. ಸವರ್ಣೀಯರ ಮುಂದೆ ತಲೆ ತಗ್ಗಿ ನಿಲ್ಲುವ ಸ್ಥಿತಿ ಬಂದಿದೆ. ಕಾನೂನು ರಾಜಕಾರಣ ಆರ್ಥಿಕ ಬಲ ಇದ್ದವರು ಸಾಮಾನ್ಯರ ಬದುಕು

ಬವಣೆಯಲ್ಲಿ ಆಟ ಆಡುತ್ತಾರೆ. ಪ್ರಸ್ತುತವಾಗಿ ದಲಿತರು, ಮುಸ್ಲಿಮರು ಇತರೆ ಸಮುದಾಯದ ಶೋಷಣೆಗೊಳಗಾದ ಬದುಕನ್ನು ಕೇಳುವರಿಲ್ಲದ ಸ್ಥಿತಿಗೆ ಬಂದಿದೆ. ಇದೇ ದಲಿತ ಬದುಕಾಗಿದೆ. ಹಾಗಾಗಿ ಇಂದಿನ ದಲಿತ ಸಾಹಿತ್ಯ ಚರಿತ್ರೆ ಸಾಂಸ್ಕೃತಿಕತೆಯನ್ನು ನೆನಪಿಸಿಕೊಳ್ಳಬೇಕಾಗಿದೆ.

೭೦-೮೦ರ ದಶಕದಲ್ಲಿ ದಲಿತ ಕವಿ ಸಿದ್ಧಲಿಂಗಯ್ಯನವರು "ದಲಿತರು ಬರುವರು ದಾರಿ ಬಿಡಿ ದಲಿತರ ಕೈಗೆ ರಾಜ್ಯ ಕೊಡಿ"[೧೮] ಮತ್ತು "ಎಲ್ಲಿಗೆ ಬಂತು ಯಾರಿಗೆ ಬಂತು ೪೭ರ ಸ್ವಾತಂತ್ರ್ಯ"[೧೯] ಎಂಬ ಕವಿತೆಯ ಮೂಲಕ ಹರಿತವಾದ ಭಾಷೆಯ ಮೂಲಕ ದಲಿತ ಬಂಡಾಯವನ್ನು ಮುಂಚೂಣಿಗೆ ದೂಡಿದರು. ಇದರ ಜೊತೆಗೆ ಅನೇಕ ದಲಿತಪ್ರಜ್ಞೆ ಉಳ್ಳವರು ಕೈಜೋಡಿಸಿದ್ದಾರೆ. ಡಿ.ಆರ್.ನಾಗರಾಜ ಅವರು 'ನನ್ನ ಜನಗಳು' ಕವನ ಸಂಕಲನದ ಮುನ್ನುಡಿಯಲ್ಲಿ "ಹೊಸ ರೀತಿಯ ಪ್ರಜ್ಞಾವಂತ ದಲಿತ ತನ್ನ ಭೂತ, ವರ್ತಮಾನ ಭವಿಷ್ಯವನ್ನು ಕಾಣುತ್ತಿದ್ದ ಕ್ರಮಗಳು ಅವು ಈ ಕಾರಣಕ್ಕಾಗಿ ಕವಿಯ ಕಾವ್ಯ ದಲಿತರ ಪ್ರಣಾಳಿಕೆಯಂತಾಗಿ ನಾಡಿನಾದ್ಯಂತ ದಲಿತ ಯುವ ಜನಾಂಗ ಅದನ್ನು ಗುನುಗುಣಿಸುತ್ತಿದ್ದುದು ಸಾಮಾನ್ಯವಾದ ದೃಶ್ಯವಾಗಿತ್ತು."[೨೦] ಈ ಅಂಶಗಳ ಮೂಲಕ ದಲಿತರು ಶೂದ್ರ ವರ್ಗದವರು ತಮ್ಮ ಅಸ್ಮಿತೆಗಾಗಿ ಹುಡುಕಾಟ ನಡೆಸುತ್ತಾರೆ. ಆಗ ಸಿದ್ಧಲಿಂಗಯ್ಯನಂತವರು ಪ್ರಮುಖರಾಗುತ್ತಾರೆ. ಸಿದ್ಧಲಿಂಗಯ್ಯನವರ ಕುರಿತು ಡಿ.ಆರ್.ನಾಗರಾಜ ಅವರು ಮೆರವಣಿಗೆ ಕವನ ಸಂಕಲನದ ಮುನ್ನುಡಿಯಲ್ಲಿ "ಎರಡು ದಶಕಗಳಿಗೂ ಹಿಂದೆ ಮೊದಲ ಬಾರಿಗೆ ನಾನು ಗೆಳೆಯ ಸಿದ್ಧಲಿಂಗಯ್ಯನವರ ಕವಿತೆಗಳನ್ನು ಓದಿದಾಗ ಬೆಚ್ಚಿಬಿದ್ದಿದ್ದೆ. ಕಾರಣ ಕವಿಯ ವ್ಯಕ್ತಿತ್ವಕ್ಕೂ ಕವಿತೆಗಳಿಗೂ ಇರುವ ವ್ಯತ್ಯಾಸ ದೈನ್ಯತೆಯೇ ಸಾಕಾರವಾಗಿದ್ದ ಪುಟಾಣಿ ಕವಿ ಹೆಚ್ಚೆಂದರೆ ಇಪ್ಪತ್ತೈದು ಕೆ.ಜಿ. ಆಳು. ಆದರೆ ಕವಿತೆಗಳು ಬೆಂಕಿಯ ಉಂಡೆಗಳು"[೨೧] ಎಂದು ಹೇಳುತ್ತಾರೆ. ಸಿದ್ಧಲಿಂಗಯ್ಯನವರ ವ್ಯಕ್ತಿತ್ವ ಮತ್ತು ಕಾವ್ಯಸತ್ವವನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಆದರೆ ಪಿ.ಲಂಕೇಶರವರು ಅಕ್ಷರ ಹೊಸಕಾವ್ಯದ ಎರಡನೇ ಆವೃತ್ತಿಯ ಮುನ್ನುಡಿಯಲ್ಲಿ ಸಿದ್ಧಲಿಂಗಯ್ಯನವರ ಹೊಲೆಮಾದಿಗರ ಹಾಡು ಕವನ ಸಂಕಲನದ ಕುರಿತು "ಹಲವರು ಘೋಷಣೆಗಳನ್ನು ಕವನವಾಗಿಸಲು ಯತ್ನಿಸಿ ಕೆಟ್ಟಿದ್ದಾರೆ. ಅಂತಹವರಲ್ಲಿ ಸಿದ್ಧಲಿಂಗಯ್ಯನವರು ಒಬ್ಬರು"[೨೨] ಎಂದು ಹೇಳುತ್ತಾರೆ. ಪಿ.ಲಂಕೇಶರ ಮಾತನ್ನು ಒಪ್ಪಬೇಕೋ ಬಿಡಬೇಕೋ, ಆದರೆ ಯಾವುದೇ ಜನಾಂಗ, ಸಮುದಾಯ ತನ್ನ ಅಸ್ತಿತ್ವಕ್ಕಾಗಿ, ಅನನ್ಯತೆಗಾಗಿ ಹೋರಾಟ ಮಾಡುತ್ತಾರೆ. ಹಾಗೆಯೇ ಘೋಷಣೆಗಳನ್ನು ಕೂಗುತ್ತಾರೆ. ಆ ಘೋಷಣೆಯ ಹೋರಾಟ, ಬರವಣಿಗೆ ರೂಪಕ್ಕೆ ತಂದರೆ ಸಾಹಿತ್ಯ ವಸ್ತುವಾಗಿ ಬಿಡುತ್ತದೆ. ಹಾಗಾಗಿ ಕೆಲವರಲ್ಲಿ ಪಿ.ಲಂಕೇಶ್ ತರಹ ಅರ್ಥ ಮಾಡಿಕೊಳ್ಳದೇ ಸಾಹಿತ್ಯದ ವಸ್ತುವಾಗಿ ಸಾಮಾಜಿಕ ಸ್ಥಿತಿಗತಿಯಾಗಿ ಸಿದ್ಧಲಿಂಗಯ್ಯನವರ ಕಾವ್ಯಗಳನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ.

ಸಿದ್ಧಲಿಂಗಯ್ಯನವರ 'ಅಲ್ಲೇ ಕುಂತವರೆ' ಖಂಡಕಾವ್ಯ ದಲಿತ ಕಾವ್ಯ ಸಂದರ್ಭದಲ್ಲಿ ಹೊಸ ಭರವಸೆಯನ್ನು ಮೂಡಿಸಿದ ಕವಿತೆಯಾಗಿದೆ. ಈ ಸಂಕಲನದ ಕುರಿತು ಮುನ್ನುಡಿಯಲ್ಲಿ ಡಿ.ಆರ್.ನಾಗರಾಜ ಅವರು "ದಲಿತ ಸಾಹಿತ್ಯ ಒಂದು ಬಗೆಯ ಧಾರೆಯ ಅತ್ಯುತ್ತಮ ಸಾಧನೆಯನ್ನು ಅಲ್ಲೇ ಕುಂತವರೆ

ಖಂಡಕಾವ್ಯದಲ್ಲಿ ಕಾಣುತ್ತೇವೆ. ಅದು ಪರಂಪರೆಯನ್ನು ಹಿಂಸೆಯ ಪರಮರೂಪ ಎಂದು ಕಾಣುವ ಧಾರೆಯ ಶಕ್ತಿಶಾಲಿ ಪ್ರತಿನಿಧಿಕರಣ"[೭೩] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಬರಗಾಲದ ತೀವ್ರತೆಯನ್ನು ಹಾಗೂ ಅದರ ಒತ್ತಡಕ್ಕೆ ಸಿಲುಕಿದ ಜನಜೀವನದ ಸ್ಥಿತಿಗತಿಗಳನ್ನು ಖಂಡಕಾವ್ಯ ವಿವರಿಸುತ್ತದೆ. ಸಾಮಾಜಿಕ ಒಳಿತಿಗಾಗಿ ಹಲವು ಚಿಂತನೆಗೆ ಈ ಕಾವ್ಯ ಎಡೆ ಮಾಡಿಕೊಡುತ್ತದೆ. ವರದಕ್ಷಿಣೆ ಕಿರುಕುಳ, ಬರಗಾಲ, ಹಸಿವು, ಹುಸಿನಂಬಿಕೆಗಳೆಂದು ವಿವರಿಸುತ್ತದೆ. 'ಅನ್ನ ನೀಡದೇ ಹೋದ ನೂರಾರು ದೇವರು ಹೋದಾವೋ, ಬಿದ್ದಾವೋ ಪಾಳೂ ಬಾವಿ' ಎಂಬ ಅಭಿಪ್ರಾಯವನ್ನು ಈ ಕವಿಗಳು ವ್ಯಕ್ತಪಡಿಸುತ್ತಾರೆ. ಈ ಕಾವ್ಯ ಜಾನಪದದ ಬಂಧವುಳ್ಳದ್ದಾಗಿವೆ. ಶೋಷಿತರ ಆಸೆ ನಿರಾಸೆ, ಆತಂಕಗಳನ್ನು, ಶೋಷಕರ ದೌರ್ಜನ್ಯದ ಭೀಕರತೆಯ ದೃಶ್ಯದ ಕಲ್ಪನೆಯನ್ನು ಚಿತ್ರಿಸುತ್ತಾ ಸಾಗುತ್ತದೆ. ಬಿ.ಚಿನ್ನಸ್ವಾಮಿ ಅವರ 'ಕೊಂಡಿಗಳು ಮತ್ತು ಮುಳ್ಳು ಬೇಲಿಗಳು' ಕವನಸಂಕಲನಕ್ಕೆ ಸಿದ್ಧಲಿಂಗಯ್ಯನವರು ಮುನ್ನುಡಿ ಬರೆಯುತ್ತಾ "ನವ್ಯ ಕವಿತೆಯಲ್ಲಿ ಕಾಣಿಸಿಕೊಂಡಿದ್ದ ಅಕಾಡೆಮಿಕ್ ಎನ್ನಬಹುದಾದ ಈ ಪ್ರವೃತ್ತಿ ಚಿನ್ನಸ್ವಾಮಿ ಅವರ ರಚನೆಗಳಲ್ಲಿ ಕಂಡುಬರುವುದು ಕುತೂಹಲಕರ. ಅದು ದಲಿತ ಬಂಡಾಯ ಮನೋಧರ್ಮದ ಈ ಕವಿಯನ್ನು ಓದುವ ಬಗೆ ಪ್ರತಿಭಟನೆಯ ಪ್ರವೃತ್ತಿಯಿದ್ದು, ಅವರು ಲೋಕವನ್ನು ಗ್ರಹಿಸುವ ರೀತಿಯಲ್ಲಿ ಬುದ್ಧಿಪ್ರಧಾನವಾದುದು"[೭೪] ಎಂದು ಹೇಳುತ್ತಾರೆ. ಅಂದರೆ ಸಿದ್ಧಲಿಂಗಯ್ಯನವರು ನವ್ಯ ಪ್ರವೃತ್ತಿಯ ಕಾವ್ಯವನ್ನು ಹೋಲುವ ಪ್ರಕ್ರಿಯೆ ಇರಬಹುದು. ಆದರೆ ದಲಿತ ಬಂಡಾಯದ ಮನಸ್ಥಿತಿ ಹೋರಾಟದ ಧ್ವನಿಯಾಗಿ ರೂಪಿಸಿಕೊಂಡಿದೆ. ಈ ಕವಿಯ ವಿಚಾರಧಾರೆ ಕವಿಯಲ್ಲಿ ವ್ಯಕ್ತಗೊಂಡಂತೆ ಊಳಿಗಮಾನ್ಯ ವ್ಯವಸ್ಥೆಯನ್ನು ಕುರಿತು ವ್ಯಂಗ್ಯ ಮಾಡಿವೆ. ಹಾಗಾಗಿ ಸಿದ್ಧಲಿಂಗಯ್ಯನವರ ಮಾತು "ಸೋಗಿಗಿಂತ ದಲಿತತ್ವದ ನೋವು ಈ ಕವಿತೆಗಳಲ್ಲಿ ದಟ್ಟವಾಗಿ ಹರಡಿದೆ"[೭೫] ಎಂಬ ಮಾತು ಅರ್ಥಪೂರ್ಣತೆಯನ್ನು ಹೊಂದಿದ್ದು ಬಿ.ಚಿನ್ನಸ್ವಾಮಿಯವರ ಇನ್ನೊಂದು ಕವನಸಂಕಲನದ 'ಗೋಧೂಳಿ'ಯ ಮುನ್ನುಡಿಯಲ್ಲಿ ಚೆನ್ನವೀರ ಕಣವಿಯವರು ದಲಿತತತ್ವವನ್ನು ಸಮರ್ಥಿಸಿಕೊಂಡಿದ್ದಾರೆ.

ಈ ಗೋಧೂಳಿಯ ಮುನ್ನುಡಿಯಲ್ಲಿ ಚೆನ್ನವೀರ ಕಣವಿಯವರು ಹೇಳುತ್ತಾ "ಆಕ್ರೋಶಕ್ಕೂ ಎಡೆ ಮಾಡಿಕೊಡದೇ ಓದುಗರ ಮನಸ್ಸನ್ನು ಕಲಕುವ ಗುಣಕ್ಕೆ 'ಗೋಧೂಳಿ' ಮತ್ತು 'ಮತ್ತೆ ಮಳೆ ಬರುವ ಮುನ್ನ' ಕವಿತೆಗಳು ಉತ್ತಮ ಉದಾಹರಣೆಗಳಾಗಿವೆ. ಈ ಯಾತನಾಮಯವಾದ ದಲಿತ ಜೀವನದ ಕರುಳು ಮಿಡಿಯುವ ಚಿತ್ರ ಗೋಧೂಳಿಯಲ್ಲಿ ಕಾವ್ಯವಾಗಿ ನಮ್ಮನ್ನು ತಟ್ಟುತ್ತದೆ. ಹಸಿದು ಕಂಗಾಲಾದ ಎಳೆಗೂಸು ದುಡಿದು ದಣಿದು ಸೊಪ್ಪಾಗಿ ಹಟ್ಟಿಗೆ ಹಿಂತಿರುಗುವ ತಾಯಿ ಇವರ ನಡುವಿನ ವಾತ್ಸಲ್ಯ ಭಾವ ನುಡಿಯಲ್ಲೂ ಮಡುಗಟ್ಟುವಂತಿದೆ"[೭೬] ಎಂದು ಹೇಳುತ್ತಾರೆ. ಇಲ್ಲಿ ದಲಿತರ ಜೀವನದ ಸ್ಥಿತಿಗತಿಗಳ ಕುರಿತು ದುಡಿಯುವ ಕೈಗಳಿಗೆ ಹೊಟ್ಟೆ ತುಂಬಾ ಅನ್ನ ಇಲ್ಲದ ಸ್ಥಿತಿ ಇದೆ. ದಲಿತ ಬದುಕಿನಲ್ಲಿ ದುಃಖಿತನಾಗಿದ್ದಾನೆ. ಹೀಗಿರುವಾಗ ಅಂತಃಕರಣದ ಸಂಗತಿಗಳು ಈ ಕಾವ್ಯಗಳ ಸಾಹಿತ್ಯ ರಚನೆಯಲ್ಲಿ ಒಳಗೊಂಡಿದೆ. ಸಮಾಜದ ಪ್ರಗತಿಪರರು, ಚಿಂತಕರು ದಲಿತ ಸಂವೇದನೆಯನ್ನು ಸಾಂಸ್ಕೃತಿಕವಾಗಿ ಅರ್ಥ ಮಾಡಿಕೊಳ್ಳಬೇಕಾಗಿದೆ. "ಪ್ರಗತಿಪರ, ಮನುಷ್ಯಪರ,

ಜೀವಪರ ಶಕ್ತಿಗಳೆಲ್ಲ ಸೇರಿ ಕಟ್ಟಿದ್ದ ೭೦ರ ದಶಕದ ಸೌಹಾರ್ದತೆ ಗೂಡಿನಲ್ಲಿಂದು ಮತೀಯವಾದ ಎಡೆಯೆತ್ತಿ ಆಡುತ್ತಿದೆ. ಶೂದ್ರ ಶಂಭೂಕನನ್ನು ಕೊಂದ ರಾಮನ ಭಕ್ತರೆಲ್ಲಾ ಶಂಭೂಕನ ಸಂತತಿ. ಅವರ ಕೈಯಲ್ಲಿರುವುದು ರಾಮ ಬಾಣಗಳೇ. ಈ ಬಾಣಗಳನ್ನು ಬಿಡುವವರು ಮತ್ತು ಬಲಿಯಾಗುವವರೆಲ್ಲಾ ಶಂಭೂಕ, ಏಕಲವ್ಯ, ಕನಕದಾಸ, ಬಸವಣ್ಣ, ಅಂಬೇಡ್ಕರ್‌ರ ಮನೆಯ ಮಕ್ಕಳೆಂಬುದೊಂದು ದುರಂತ"[೨೭] ಎಂದು ಮಲ್ಲಿಕಾ ಘಂಟಿಯವರು ದಲಿತ ಸಾಹಿತ್ಯ ಚಳುವಳಿ ಕೃತಿಯ ಮುನ್ನುಡಿಯಲ್ಲಿ ಹೇಳುತ್ತಾರೆ. ಈ ಹಿನ್ನೆಲೆಯಿಂದ ಪ್ರಸ್ತುತ ದಲಿತ ಸಾಹಿತ್ಯ ಮರು ಓದಾಗಿ ಚಾರಿತ್ರಿಕ ಬಿಕ್ಕಟ್ಟುಗಳಿಗೆ ಪರಿಹಾರ ಹುಡುಕುವ ಸಲುವಾಗಿ ಯುವಜನಾಂಗಕ್ಕೆ ಒಂದು ಸಂದೇಶವನ್ನು ಮುಟ್ಟಿಸಬೇಕಾಗಿದೆ. ಯಾವುದು ನಮ್ಮ ಮೇಲೆ ಸಾಂಸ್ಕೃತಿಕ ದಾಳಿ ಮಾಡುತ್ತಿದೆ ಎನ್ನುವ ಹಿನ್ನೆಲೆಯಿಂದ ಹೊಸ ಸಂವೇದನೆಯ ಮೂಲಕ ಹಾಗೂ ಸಾಹಿತ್ಯದ ರಚನೆಯ ಮೂಲಕ ಹೊಸ ಹುಟ್ಟಿನ ಪರಿಯಲ್ಲಿ ದಲಿತ ಸಾಹಿತ್ಯ ರೂಪಿಸಿಕೊಳ್ಳಬೇಕಾಗಿದೆ. ವಾಸ್ತವವಾಗಿ ಯಾರು ಆರ್ಥಿಕವಾಗಿ ಹೀನರಿದ್ದಾರೋ ಮತ್ತು ಯಾರು ಪ್ರಬಲ ಸಮುದಾಯದ ಜನರಿದ್ದಾರೋ ಅಲ್ಲಿ ಹಲ್ಲೆಗೊಳಗಾಗಿದ್ದಾರೆ. ಅವರೆಲ್ಲಾ ದಲಿತರು ಎಂದು ಹೇಳಬಹುದು. ಈ ಹಿನ್ನೆಲೆಯಿಂದ ದಲಿತ ಸಾಹಿತ್ಯದ ಮರು ಓದುವಿನಿಂದ ಜಾಗತೀಕರಣ, ಖಾಸಗೀಕರಣ ಶ್ರೀಮಂತರ ವಿರುದ್ಧ ಹೋರಾಟ ಮಾಡುವ ಸ್ಥಿತಿ ಇದೆ. ಹಾಗೆಯೇ ಯಾವ ಸಮುದಾಯದ ಜನ ಪ್ರಬಲರಾಗಿ ಹೊಂದಿದ್ದರೆ, ಅಲ್ಲಿ ಅಲ್ಪಸಂಖ್ಯಾತ ಸಮುದಾಯವಿದ್ದರೆ ಅಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಹಲ್ಲೆಗೊಳಗಾಗುತ್ತಾ ಶೋಷಣೆ, ದಬ್ಬಾಳಿಕೆ ನಡೆದಿರುತ್ತದೆ. ಹೀಗಾಗಿ ಚರಿತ್ರೆಯುದ್ಧಕ್ಕೂ ಪ್ರತಿರೋಧಿಸುತ್ತಲೇ ಬಂದ ಶೂದ್ರ, ದಲಿತ ಸಂಸ್ಕೃತಿ, ಧರ್ಮ, ರಾಜಕಾರಣ, ಸಾಹಿತ್ಯದ ಒಳಿತನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದು ಅಗತ್ಯವಿದೆ.

ಸಿದ್ಧಲಿಂಗಯ್ಯನವರ ಕಾವ್ಯ ಅಂದಿನ ದಿನಗಳಲ್ಲಿ ಉಪಮೆ ರೂಪಕಗಳ ಮೂಲಕ ಹೆಚ್ಚಾಗಿ ಚರ್ಚೆಗೆ ಗ್ರಾಸವಾಗುತ್ತಿತ್ತು ಎನ್ನುವುದನ್ನು ಡಿ.ಆರ್.ನಾಗರಾಜ ಅವರು ಈ ರೀತಿ ಗುರುತಿಸುತ್ತಾರೆ. "ಉತ್ಪ್ರೇಕ್ಷಾಲಂಕಾರ ಎಡಪಂಥೀಯ ಕಾವ್ಯದ ಸಹಜಧರ್ಮ ಎನ್ನುವುದಾದರೆ ಸಿದ್ಧಲಿಂಗಯ್ಯ ಆ ಧರ್ಮದ ದೇವತೆ ತೆಲುಗಿನಲ್ಲಿ ಶ್ರೀ ಶ್ರೀ ಕೂಡ. ಇದೇ ರೀತಿಯ ಉತ್ಪ್ರೇಕ್ಷಾಲಂಕಾರ ಚಕ್ರವರ್ತಿ! ಮಹಾಪ್ರಸ್ತಾನಂನ ಸಂಸ್ಕೃತಭೂಯಿಷ್ಟತೆ ಎಂತಹವರನ್ನು ದಂಗು ಬಡಿಸುತ್ತದೆ. ಜೊತೆಗೆ ಸಮೃದ್ಧವಾದ ಬ್ರಾಹ್ಮಣೀಯ ಮತ್ತು ವೈದ್ಯಕೀಯ ಪ್ರತಿಮಾವಳಿ ಬೇರೆ. ಸಿದ್ಧಲಿಂಗಯ್ಯ ಆ ಬಗೆಯ ಅಸಾಂಗತ್ಯಕ್ಕೆ ಹೋಗುವುದಿಲ್ಲವಾದರೂ ಸದಾ ಉತ್ಪ್ರೇಕ್ಷಾಲಂಕಾರಕ್ಕೆ ಹಾತೊರೆಯುತ್ತಾರೆ"[೨೮] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಸಿದ್ಧಲಿಂಗಯ್ಯನವರು ತಮ್ಮ ಕಾವ್ಯವನ್ನು ಉತ್ಪ್ರೇಕ್ಷಾ ಆಲಂಕಾರಿಕವಾಗಿ ಹಾಗೂ ರೂಪಕಗಳ ಜೊತೆಗೆ ಕಾವ್ಯರಚನೆಗೆ ತೊಡಗಿದ್ದು ಜನರ ದೃಷ್ಟಿಯಿಂದ ಎಂದು ಹೇಳಿರಬಹುದು. ಬಂಡಾಯ ಉದ್ಭವಿಸುವುದಕ್ಕಾಗಿ ಉತ್ಪ್ರೇಕ್ಷತೆಯಿಂದ ಬರೆದಿದ್ದಾರೆ. ಅವರ ಕವನ ಹೀಗಿದೆ:

"ದೊಡ್ಡಗೌಡ್ರ ಬಾಗಿಲಿಗೆ  
ನಮ್ಮ ಮೂಳೆಯ ತ್ವಾರಣ

ನಮ್ಮ ಜನಗಳ ಕಾಲುಕಯ್
ಕಂಬ ಅವರ ಹಟ್ಟಿಗೆ
ಅವರ ತೋಟದ ತೆಂಗಿನಲ್ಲಿ
ನಮ್ಮ ರಕ್ತದ ಎಳೆನೀರು
ಅವರ ಅಮಲಿನ ಗುಂಗಿನಲಿ
ಕೂಲಿ ಹೆಣ್ಣಿನ ಕಣ್ಣಿರು"[೬೯] (ಬೆಲ್ಚಿಯ ಹಾಡು)

ಈ ಕವನದಲ್ಲಿ ಸಿದ್ಧಲಿಂಗಯ್ಯನವರು ಬಳಸಿದ ರೂಪಕಗಳು ಮತ್ತು ಪ್ರತಿಮೆಗಳು ಒಳಗೊಂಡಿವೆ. ಇವರ ಕಾವ್ಯ ಕುರಿತು ಡಿ.ಆರ್.ನಾಗರಾಜ ಅವರು ಹೇಳುವ ಹಾಗೆ "ಈ ಬಗೆಯ ಸಾಲುಗಳಲ್ಲಿ ಸಿದ್ಧಲಿಂಗಯ್ಯನವರ ಯಶಸ್ಸು ಇದೆ. ಸೋಲು ಇದೆ. ಅವರ ಉತ್ಪ್ರೇಕ್ಷೆ ಅಲಂಕಾರ ತನ್ನ ತೀವ್ರತೆಯ ತುದಿಯಲ್ಲಿ ಅಸಾಮಾನ್ಯವಾದ ರೂಪಕ ಶಕ್ತಿ ಸಾಧಿಸಬಹುದು. ಇಲ್ಲವೇ ಅದೊಂದು ಚಮತ್ಕಾರ ಅಥವಾ ಕವಿಯ ಸಮಯವಾಗಿ ಪರಿವರ್ತನೆ ಆಗಬಹುದು. ಆಗ ಪ್ರತಿಮೆಗಳ ನಿರೀಕ್ಷಿತ ಹೊಂದಾಣಿಕೆ ಎದ್ದು ಕಾಣುತ್ತದೆ. ಸಿದ್ಧಲಿಂಗಯ್ಯನವರ ಮೂಲ ಪ್ರತಿಭೆಯಲ್ಲಿ ಇಂದಿಗೂ ಇರುವ ಮೂಲ ಗ್ರಹಿಕೆ ಗುಣಗಳಿವೆ. ಸಾಕಷ್ಟು ಬದಲಾವಣೆ ಆಗಿದ್ದರೂ ಉತ್ಪ್ರೇಕ್ಷೆ ಹಾಗೇ ಉಳಿದಿದೆ"[೭೦] ಎಂದು ಡಿ.ಆರ್.ನಾಗರಾಜ ಅವರ ಮಾತು ಪ್ರಸ್ತುತವೆನಿಸುತ್ತದೆ. ಸಿದ್ಧಲಿಂಗಯ್ಯನವರು ಅಷ್ಟು ಬೇಗ ಜನರಿಗೆ ಕಾವ್ಯ ತಲುಪಿಸಲು ಮುಖ್ಯ ಕಾರಣ ಅವರ ಕಾವ್ಯದ ರೂಪಕಗಳು, ಪ್ರತಿಮೆಗಳು ಎಂದು ಹೇಳಬಹುದು.

ದಲಿತ ಬಂಡಾಯ ಸಾಹಿತ್ಯದಲ್ಲಿ ರಾಜಕಾರಣ ಮತ್ತು ಸಾಹಿತ್ಯದ ನಡುವಿನ ಪರಸ್ಪರ ಸಂಬಂಧ ಹೆಚ್ಚು ವಿಶಿಷ್ಟವಾಗಿ ಕಾಣುತ್ತದೆ. ಹಾಗೆಯೇ ಸಮಕಾಲೀನ ರಾಜಕೀಯ ವ್ಯವಸ್ಥೆಯೊಳಗಿನ ವಾಸ್ತವತೆಯನ್ನು ಬಿಂಬಿಸುವುದು ಕೂಡ ಸಾಹಿತ್ಯಕ ಜವಾಬ್ದಾರಿಯಾಗಿದೆ. ಈ ಚಿಂತನೆಯಿಂದ ಸಾಹಿತ್ಯ ವಲಯದಲ್ಲಿ ಹೊಸ ತಿರುವು ಪಡೆಯಿತು. ಆಗ ಸಾಹಿತಿಗಳು ಸಾಮಾಜಿಕ ಪರಿಸರದಲ್ಲಿನ ಮನುಷ್ಯವಿರೋಧಿ ನೆಲೆಗಳನ್ನು ಸೃಜನಶೀಲ ಬರವಣಿಗೆ ಮೂಲಕ ದಾಖಲಿಸಿ ವಿರೋಧಿಸಿದರು. ಹಲವು ಸಾಹಿತಿಗಳು ರೂಪಕ, ಪ್ರತಿಮೆಗಳ ಮೂಲಕ ರಾಜಕಾರಣವನ್ನು ಟೀಕಿಸಿದರು. ಹಾಗೆಯೇ ರಾಜಕೀಯ ಸಂದರ್ಭದಲ್ಲಿಯ ಪ್ರತಿಗಾಮಿತನವನ್ನು ಹೊರದಬ್ಬುವ ಪ್ರವೃತ್ತಿಯನ್ನು ರೂಪಿಸಿಕೊಂಡರು. ಡಿ.ಆರ್.ನಾಗರಾಜ ಅವರು ಮೆರವಣಿಗೆ ಕವನ ಸಂಕಲನದ ಮುನ್ನುಡಿಯಲ್ಲಿ "ಒಂದು ಜನಾಂಗವನ್ನು ಎರಡು ರೀತಿಗಳಲ್ಲಿ ಕಟ್ಟಲು ಸಾಧ್ಯ. ಒಂದು, ರಾಜಕೀಯ ಸಂಕಲ್ಪದ ಮೂಲಕ. ಎರಡು, ಸಾಹಿತ್ಯ ಪ್ರತಿಭಾ ಸಂಕಲ್ಪದ ಮೂಲಕ. ಇವೆರಡು ಒಂದರೊಳಗೊಂದು ಹರಿಯುತ್ತದೆ ಎನ್ನುವುದು ಸತ್ಯ. ರಾಜಕೀಯ ಸಂಕಲ್ಪದ ಮೂಲಕ ನಿರ್ಮಾಣವಾದ ಜನಾಂಗ ತನಗೆ ಅಗತ್ಯವಿರುವ ಸಾಂಸ್ಕೃತಿಕ ರೂಪಕಗಳನ್ನು ಸೃಷ್ಟಿಸಿಕೊಳ್ಳುತ್ತದೆ ಹಾಗೂ ಸಾಹಿತ್ಯ ಸಂಕಲ್ಪ ಕೂಡ ತನಗೆ ಸಾಧ್ಯ ಇರುವ ರಾಜಕೀಯ ಕ್ರಿಯೆಯ ಮಾದರಿಗಳನ್ನು ಸೃಷ್ಟಿಸಿಕೊಳ್ಳುತ್ತದೆ. ಈ ತತ್ವದ ಹಿನ್ನೆಲೆಯಲ್ಲಿ ಸಿದ್ಧಲಿಂಗಯ್ಯನವರ

ರೂಪುರೇಖೆಗಳು ಇನ್ನಷ್ಟು ಉಜ್ವಲವಾಗುತ್ತವೆ"[೮೧] ಎಂದು ಡಿ.ಆರ್.ನಾಗರಾಜ ಅವರ ಮಾತುಗಳು ಸಮರ್ಥನೀಯವಾಗಿವೆ.

ಸಿದ್ಧಲಿಂಗಯ್ಯನವರ ಸಾಹಿತ್ಯವು ರಾಜಕೀಯ ವಿಡಂಬನೆಯ ಅವ್ಯವಸ್ಥೆಯಾಗಿ ಚರ್ಚೆಗಾಗಿದೆ. ಜೊತೆಗೆ ರಾಜಕಾರಣಿಗಳ ಮುಖವಾಡವನ್ನು ಬಯಲುಗೊಳಿಸಿದೆ. ದಲಿತರು, ಬಡವರು, ಶೋಷಿತರನ್ನು ಶೋಷಣೆಗೊಳಪಡಿಸುತ್ತಾ ಬಂದ ಸ್ವಾರ್ಥ ರಾಜಕಾರಣಿಗಳನ್ನು ಸಿದ್ಧಲಿಂಗಯ್ಯನವರ ಕಾವ್ಯ ಹೀಗೆ ಹೇಳುತ್ತದೆ:

"ಇಕ್ರಲಾ ವದೀರ್ಲಾ
ಈ ನನ್ ಮಕ್ಕಳ್ ಚರ್ಮ ಎಬ್ರಲಾ
ನಮ್ಯಾಲ್ ಮೀಟಿಂಗ್ ಮಾಡ್ತಾರೆ ಕಾನೂನ್ ಮಾಡ್ತಾರೆ
ನಮ್ಮ ಯಸ್ರೇಳಿ ಹಾರ ಹಾಕ್ತಾರೆ ಹಾಕುಸ್ಕೋತಾರೆ
ನಮ್ಮನ್ನ ಉದ್ಧಾರ ಮಾಡ್ತೀವಿ ಅಂತ ಪೇಪ್ರಲೀ
ಮೈಕಲಿ ಜೋರಾಗಿ ಕೂಗ್ತಾ ಅವ್ರಲ್ಲಪ್ಪೋ"[೮೨]

ಎಂದು. ಈ ಸಾಲುಗಳು ೭೦-೮೦ರ ದಶಕದ ಕೂಗಾಗಿದ್ದರೂ ವಾಸ್ತವಸ್ಥಿತಿ ಇನ್ನೂ ಬದಲಾವಣೆಯಾಗಿಲ್ಲ. ದಲಿತಪರ ನಾನು, ರೈತನ ಮಗ ನಾನು, ನನ್ನ ಕ್ಷೇತ್ರ ನನ್ನ ಜನ ನನ್ನ ಮನೆಯವರ ತರ, ನನ್ನ ಬಂಧುಗಳು ಎಂದು ಹೇಳಿ ಜನರನ್ನು ನಂಬಿಸಿ ಕೊನೆಗೆ ಗೆಲ್ಲಿಸಿದ ಜನರನ್ನು ಮರೆತು ಕಡೆಯ ಪಕ್ಷ ಹಳ್ಳಿ ಕಡೆಗೆ ತಿರುಗಿ ನೋಡದೆ ಇರುವ ರಾಜಕಾರಣಿಗಳು ಕಂಡುಬರುತ್ತಾರೆ. ಇದು ವಾಸ್ತವ ಸಂಗತಿಯಾಗಿದೆ.

ಇಂದು ದಲಿತ-ಬಂಡಾಯ ಸಾಹಿತ್ಯದ ಚಿಂತನೆಯಲ್ಲಿ ನಾವು ಪ್ರಗತಿಪರರು ಎಂದು ಹೇಳಿಕೊಂಡು ತಿರುಗುವವರು ಹೆಚ್ಚಾಗಿ ಕಂಡುಬರುತ್ತಾರೆ. ಏಕೆಂದರೆ ಬಂಡಾಯದ ನಿಜ ಅರ್ಥ ಕಳೆದುಕೊಂಡಿರಬಹುದು ಎಂದೆನಿಸುತ್ತದೆ. ಹಿಂದಿನ ದಿನಗಳಲ್ಲಿ ಬುದ್ಧನಿಂದ, ಬಸವನಿಂದ, ಶರಣ-ಶರಣೆಯರಿಂದ, ಕನಕ, ಗಾಂಧಿ, ಅಂಬೇಡ್ಕರ್, ಕುವೆಂಪು, ಮಾರ್ಕ್ಸ್, ಲೋಹಿಯಾ ಇತರೆ ಮುಂತಾದ ಸಾಮಾಜಿಕ ಚಿಂತಕರು ಪ್ರಗತಿಪರತೆಯ ಆಶಯವನ್ನು ಸಾಮಾಜಿಕ ಬದಲಾವಣೆಗಾಗಿ ತಮ್ಮ ತತ್ವವನ್ನು ದಿಕ್ಸೂಚಿಯಾಗಿ ಬಳಸಿದರು. ಯಶಸ್ವಿಯಾದರು. ಆದರೆ ಇಂದು ಜಾತ್ಯತೀತ ಮೌಲ್ಯಗಳ ನೆಲೆಯಲ್ಲಿ ಮೈಪಡೆದುಕೊಂಡ ಪ್ರಗತಿಪರರು ಮನುಷ್ಯನ ನಾಟಕೀಯ ಗುಣಗಳಿಂದ ತಮ್ಮಲ್ಲಿ ಕುತಂತ್ರದ, ಸ್ವಾರ್ಥದ ಹಾಗೂ ಸಣ್ಣತನಗಳ ಕಾರಣಕ್ಕಾಗಿ ತನ್ನತನವನ್ನು ಕಳೆದುಕೊಂಡು, ಹಿಂದಿನ ಪ್ರಗತಿಪರರು ಅನಾಥವಾಗಿದ್ದಾರೆ.

ಆದರೆ ಕೆಲವರ ಹೇಳಿಕೆಯಿಂದ ಪ್ರಗತಿಪರರ ಬಗ್ಗೆ ಇಂದು ಎಚ್ಚರದಿಂದಿರಬೇಕಾದ ಅನಿವಾರ್ಯತೆ ಎದುರಾಗಿದೆ. ಏಕೆಂದರೆ ಸಾರ್ವಜನಿಕ ಸಭೆಗಳಲ್ಲಿ ಚಿಂತಕರ ಸಭೆಗಳು, ಕಮ್ಮಟಗಳು, ಗೋಷ್ಠಿಗಳಲ್ಲಿ ಮತ್ತು ವಿದ್ಯಾರ್ಥಿಗಳ ಮುಂದೆ ನಾವುಗಳು ಬುದ್ಧ, ಬಸವ, ಅಂಬೇಡ್ಕರ್, ಗಾಂಧಿ

ಮುಂತಾದವರ ವೈಚಾರಿಕತೆ ನಮ್ಮಲ್ಲಿದಯೆಂದು ನಾವು ಅವರ ವಿಚಾರದಂತೆ, ಬದುಕಿ ಸಮಾಜ ಸುಧಾರಣೆ ಮಾಡಬೇಕಾಗಿದೆ ಎಂದು ಪ್ರಗತಿಪರರು ಆಡಂಬರದ ಮಾತಾಡಿ ಚೌಕಾಸಿ ನಡೆಸುತ್ತಿದ್ದಾರೆ. ಇವರಿಂದ ಬಂಡಾಯದ ಅರ್ಥ ಕಳೆಗುಂದಿದೆಯೇನೋ? ಆದುದರಿಂದ ಪ್ರಗತಿಪರರೆಂದರೆ ಅನುಮಾನದಿಂದ ನೋಡುವ ಪರಿಸ್ಥಿತಿ ಎದುರಾಗಿದೆ. ಹೀಗಾಗಿ ಇದರ ಹಿಂದೆ ನವ್ಯದವರ, ಪ್ರಗತಿಪರರ ಕುರಿತು ತೇಜಸ್ವಿಯವರು ಅಬಚೂರಿನ ಪೋಸ್ಟಾಫೀಸು ಕೃತಿಯ ಮುನ್ನುಡಿಯಲ್ಲಿ "ಈ ಜನ ವಿದ್ವತ್ ಗೋಷ್ಠಿಗಳಲ್ಲಿ ವಿಮರ್ಶೆಯಲ್ಲಿ ಚರ್ಚೆ ಸಮಾವೇಶಗಳಲ್ಲಿ ಅತೀ ನಾಜೂಕಿನ ವಾತಾವರಣವೊಂದನ್ನು ಸೃಷ್ಟಿ ಮಾಡಿ ಕೇವಲ ಆತ್ಮ ಗೋಚರಮಾತ್ರವಾದ ಪಾರಿಭಾಷಿಕ ಪದ ಸಮುಚ್ಚಯಗಳನ್ನು ಸೃಷಿಸಿ ನೇರವಾದ ಸರಳವಾದ ಅನ್ಯಕ್ಷೇತ್ರದ ವ್ಯಕ್ತಿಗಳು ಸಾಹಿತ್ಯಕ್ಷೇತ್ರದ ಹತ್ತಿರ ಸುಳಿಯದೇ ಸಂಕೋಚದಿಂದ ಓಡಿಬಿಡುವಂತೆಯೇ ಅತೀ ಸಂಸ್ಕೃತಿಯ ಮೆಣಸಿನ ಹೊಗೆ ಹಾಕಿದ್ದಾರೆ"[೮೩] ಎಂದು ಹೇಳಲಾಗಿದೆ. ಅದು ನವ್ಯ ಸಾಹಿತಿಗಳ ವಿರುದ್ಧ ಹೇಳಿದ ಮಾತಾಗಿದೆ. ಇನ್ನೊಂದು ಚರ್ಚೆಯೆಂದರೆ ಈ ಮುನ್ನುಡಿಯಲ್ಲಿ ತೇಜಸ್ವಿಯವರು ಪ್ರಗತಿಪರರ ಟೊಳ್ಳು ಮಾತುಗಳನ್ನು ತಮ್ಮ ನೇರ ಮಾತುಗಳಿಂದ ವಿಮರ್ಶಿಸಿದ್ದಾರೆ.

ದಲಿತ–ಬಂಡಾಯ ಸಾಹಿತ್ಯದ ಚಳುವಳಿ ಸಿದ್ಧಲಿಂಗಯ್ಯನವರ ಸಾಹಿತ್ಯ ರಚನೆಯಿಂದ, ರಾಜ್ಯದ ದಲಿತ ಸಂಘರ್ಷ ಸಮಿತಿಯ ಅಧ್ಯಕ್ಷರಾದ ದೇವನೂರು ಮಹಾದೇವರಿಂದ ಮೊದಲಾಯಿತು. ದಲಿತ ಕವಿಗಳಾದ ಅನೇಕರು ತಮ್ಮ ಜನಾಂಗದ ನೋವು ಸಂಕಷ್ಟಗಳಿಗೆ ಕಾರಣವೆಂದು ಒಂದು ಸಮುದಾಯವನ್ನು ಇನ್ನೊಂದು ಸಮುದಾಯದ ಮೇಲೆ ಸಾಂಸ್ಕೃತಿಕ ಒತ್ತಡಗಳನ್ನು ಹೇರುವುದರಿಂದ ಇಡಿಯಾಗಿ ಬೈದರು. ಶತಮಾನಗಳಿಂದ ತುಳಿತಕ್ಕೊಳಪಟ್ಟ ಇವರು ರಾಜಕಾರಣಿಗಳ ವಿರುದ್ಧ ಸಾಹಿತ್ಯ ರಚನೆ, ಚಳುವಳಿ ಮಾಡಿದರು. ಹಾಗೆಯೇ ದಲಿತ ಚಳವಳಿಯ ಜೊತೆಗೆ ಬಂಡಾಯ ಚಳುವಳಿಯು ಎದ್ದಿತು. ಏಕೆಂದರೆ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ(೧೯೭೪) ಹಲವು ಶೋಷಿತ ಹಾಗೂ ಆರ್ಥಿಕತೆಯಿಂದ ಹಿಂದುಳಿದ ಸಮುದಾಯಗಳು ಪ್ರಗತಿಪರರಾಗಿ ದಲಿತ–ಬಂಡಾಯ ಚಳುವಳಿ ಶುರುವಾಯಿತು. ಡಿ.ಆರ್.ನಾಗರಾಜ ಅವರು ನನ್ನ ಜನಗಳು ಕವನ ಸಂಕಲನದ ಮುನ್ನುಡಿಯಲ್ಲಿ "ಕನ್ನಡ ದಲಿತ ಜನಾಂಗ ಒಂದು ನಿರ್ದಿಷ್ಟ ರೀತಿಯಲ್ಲಿ ನಿರ್ಮಿತವಾಯಿತು. ಹಾಡು ಜನಾಂಗವನ್ನು ಕಟ್ಟಿತು. ಜನಾಂಗ ಹಾಡನ್ನು ಸೃಷ್ಟಿಸುವುದರ ಮೂಲಕ ತಾನು ಸೃಷ್ಟಿಸಿರುವ ಹಾಡಿನಿಂದಲೂ ಅದು ಪ್ರಭಾವಿತಗೊಳ್ಳುತ್ತದೆ. ೧೯೭೫ರಿಂದೀಚೆಗೆ ದಲಿತರು ಹೊಸ ಪ್ರಜ್ಞಾವಂತ ಜನಾಂಗವಾಗಿ ಕರ್ನಾಟಕದಲ್ಲಿ ಸಿದ್ಧಲಿಂಗಯ್ಯನವರ ಕವಿತೆಗಳ ಎರಕದಲ್ಲಿ ರೂಪುಗೊಂಡವರು. ಅದಕ್ಕಾಗಿ ದಲಿತರ ಮೆರವಣಿಗೆ ಬೀದರ್‌ನಿಂದ ಕೋಲಾರದ ತನಕ ಯಾವುದೇ ಮೂಲೆಯಲ್ಲಿ ನಡೆದರೂ ಅಲ್ಲಿ ಕವಿಯ ಹಾಡುಗಳು, ಅದಕ್ಕಾಗಿಯೇ ಇದು ಸಾರ್ವಜನಿಕ ಕಾವ್ಯದ ಅಂತಿಮ ಯಶಸ್ಸು"[೮೪] ಎಂದು ಹೇಳುತ್ತಾರೆ. ಡಿ.ಆರ್.ನಾಗರಾಜ ಅವರ ಚಿಂತನೆ ೮೦ರ ದಶಕದ್ದಾಗಿರಬಹುದು. ಆದರೆ ಈಗಿನ ದಲಿತಚಿಂತನೆ ಸ್ವರೂಪ ಬೇರೆ ರೀತಿಯಾಗಿ ರೂಪುಗೊಂಡಿದೆ. ಆದರೂ ಕೂಡ ಹಿಂದಿನ ವಾತಾವರಣ ಇದ್ದೇ ಇದೆ. ಈಗ ದಲಿತ

ಚಿಂತನೆಯಲ್ಲಿ ಸಾಕಷ್ಟು ಅಧ್ಯಯನ ನಡೆದಿವೆ. ಆದರೆ ವಾಸ್ತವವಾಗಿ ಪರಿಹಾರ ದೊರೆತಿಲ್ಲ. ಅದು ತೆರೆಮರೆಯಲ್ಲಿ ಕಾಣುತ್ತದೆ. ಅದು ಮುನ್ನೆಲೆಗೆ ಬರಬೇಕಾಗಿದೆ. ದಲಿತರು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಮುಂದೆ ಬರಬೇಕಾಗಿದೆ. ಇದು ಮೀಸಲಾತಿ ವಿಷಯದಲ್ಲೂ ಮುಖ್ಯ. ಹಾಗೆಯೇ ದಲಿತ ಚಿಂತನೆಯಲ್ಲಿ ಸಿದ್ಧಲಿಂಗಯ್ಯ, ದೇವನೂರು ಮಹಾದೇವ ಅವರ ಚಿಂತನೆಯಲ್ಲಿ ಸಾಹಿತ್ಯ ಮೂಡಿಬಂದಿತು. ಮೊಗಳ್ಳಿ ಗಣೇಶ್, ಶೂದ್ರ ಶ್ರೀನಿವಾಸ್, ಕೋಟಗನಹಳ್ಳಿ ರಾಮಯ್ಯ, ಬಿ.ಎಂ.ಪುಟ್ಟಯ್ಯ, ಚೆನ್ನಣ್ಣ ವಾಲೀಕಾರ, ಆರ್.ಮಾನಸಯ್ಯ ಇತರರು ದಲಿತ ಸಂವೇದನೆಯುಳ್ಳವರು, ದಲಿತ ಚಿಂತನೆಯ ಸಾಹಿತ್ಯ ರಚನೆಯಲ್ಲಿ ತೊಡಗಿದವರು. ಅವರ ಅಸ್ಮಿತೆಯನ್ನು ಈಗಲೂ ಕರ್ನಾಟಕ ಅಲ್ಲದೇ ದೇಶದ ಇತರೆ ಭಾಗಗಳಲ್ಲು ದಲಿತ ಚಿಂತನೆ ಹೋರಾಟದ ಹಾಡುಗಳು, ಸಮಾವೇಶಗಳು ನಡೆಯುತ್ತಿವೆ. ಒಟ್ಟಾರೆ ದಲಿತ ಸಾಹಿತ್ಯ ಚಿಂತನೆ ಸಾಮಾಜಿಕ ಒಳಿತಿಗಾಗಿ ದಲಿತರ ಪರವಲ್ಲದೇ ಇನ್ನಿತರ ಸಮುದಾಯಗಳ ಪರ ಧ್ವನಿಯೆತ್ತಿದೆ ಎಂದು ಹೇಳಬಹುದು.

**ದಲಿತ ಮತ್ತು ಬಂಡಾಯ ಸಾಹಿತ್ಯದ ವಾಸ್ತವ ಚಿಂತನೆಗಳು**

ದಲಿತ ಬಂಡಾಯ ಸಾಹಿತ್ಯಕ ನೆಲೆಯನ್ನು ಈಗಾಗಲೇ ಕನ್ನಡ ಸಾಹಿತ್ಯ ಚಿಂತನ ಸ್ವರೂಪದಲ್ಲಿ ಗುರುತಿಸಲಾಗಿದೆ, ಗುರುತಿಸುತ್ತಿದ್ದೇವೆ. ಈಗಲೂ ಇದರ ಬಗ್ಗೆ ಅನೇಕ ಚರ್ಚೆಗಳು ನಡೆಯುತ್ತಿವೆ. ನಾವು ಈ ಹೊತ್ತಿನಲ್ಲಿ ದಲಿತ ಮತ್ತು ಬಂಡಾಯ ಸಾಹಿತ್ಯವನ್ನು ನಾವು ಹೇಗೆ ಗ್ರಹಿಸುತ್ತೇವೆ ಎನ್ನುವುದು ಮುಖ್ಯವಾಗುತ್ತದೆ. ಹೀಗಾಗಿ ನೂರಾರು ವರ್ಷಗಳ ಹಿಂದಿನ ಸಾಹಿತ್ಯಕ, ಸಾಂಸ್ಕೃತಿಕ ಸನ್ನಿವೇಶವನ್ನು ಈ ರೀತಿಯಲ್ಲಿ ಹಿನ್ನೋಟದ ನೆರವಿನಿಂದ ನೋಡುವಾಗ ಸಾಹಿತ್ಯಕ ಪರಿಕರಗಳು ಚರಿತ್ರೆ ಗತಕಾಲದ ಚಳವಳಿಗಳ ಸಾಂಸ್ಕೃತಿಕ ಸಂಘರ್ಷಣಾತ್ಮಕ ನೆಲೆಗಳು ನಾವು ಅಧ್ಯಯನ ಮಾಡುವಾಗ ಪೂರಕ ಅಂಶಗಳಾಗಿ ನಮಗೆ ಎದುರಾಗುತ್ತವೆ.

ಈ ಹಿನ್ನೆಲೆಯಿಂದ ಒಂದು ವಿಜೃಂಭಣೆ, ಇನ್ನೊಂದು ಸಾಮಾಜಿಕ ಅಂಚಿನ ಸ್ಥಿತಿಯಲ್ಲಿ ನೋವಿನ ಸಂಗತಿಗಳು. ಈ ಎರಡು ನೆಲೆಯಲ್ಲಿ ದಲಿತ ಬಂಡಾಯದ ಸಾಂಸ್ಕೃತಿಕ ಸಂಘರ್ಷವನ್ನು ಗುರುತಿಸುತ್ತೇವೆ. ವಿಜೃಂಭಣೆ ದಲಿತ–ಬಂಡಾಯ ಸಾಹಿತ್ಯಕ್ಕೆ ವಿರೋಧ ನೆಲೆಯಲ್ಲಿ ವ್ಯಕ್ತಗೊಂಡಿದೆ. ಪ್ರಾಚೀನ ಕಾಲದ ಅಥವಾ ಹಳಗನ್ನಡ ಸಾಹಿತ್ಯ ಸಂದರ್ಭಗಳಲ್ಲಿ ನಾಲ್ಕು ವರ್ಣಗಳು ಅಂದರೆ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಈ ನಾಲ್ಕು ವರ್ಣಗಳು ಅವುಗಳದೇ ಆದ ಸಂಬಂಧಗಳನ್ನು ಹೊಂದಿದ್ದವು. ಅವು ಶ್ರೇಣೀಕರಣಗೊಂಡಿದ್ದವು. ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಬೇರೆ ಬೇರೆ ಸ್ಥಿತಿಗತಿಗಳನ್ನು ಹೊಂದಿದ್ದರು. ಭಾಷಾ ಮಾಧ್ಯಮವಾಗಿ ಒಂದೇ ಆಗಿವೆ. ಇಲ್ಲಿ ಮುಖ್ಯವಾದ ಅಂಶವೇನೆಂದರೆ, ಪುರೋಹಿತಶಾಹಿ, ವೈದಿಕಶಾಹಿ ಚಿಂತನೆ. ಅವರ ಪ್ರಭುತ್ವದಿಂದ, ಮಠಗಳ ಮೂಲಕ, ರಾಜಾಶ್ರಯಗಳ ರಾಜನ ಆಜ್ಞೆಯ ಮೇರೆಗೆ ವಿಜೃಂಭಣೆ, ಸಂಭ್ರಮ ನಡೆಯುತ್ತಿತ್ತು.

ಆದರೆ ಪಂಪನ ಕಾಲಕ್ಕೆ ಶೂದ್ರವರ್ಗ ಅಥವಾ ದಲಿತವರ್ಗಗಗಳು ಎನ್ನುವಂತದ್ದು ಸಮಾಜಮುಖಿಯಾಗಿ ಸಾಹಿತ್ಯ ರಚನೆಯಲ್ಲಿ ಯಾಕೆ ಗುರುತಿಸಿಕೊಳ್ಳಲಿಲ್ಲ? ಅಥವಾ ಗುರುತಿಸಿಕೊಡಲಿಲ್ಲವೆ? ಇವರಿಂದ ಸಾಹಿತ್ಯ ರಚನೆ ಮಾಡಲು ಆಗಲಿಲ್ಲವೆ? ಹಾಗೆಯೇ ಅಕ್ಷರ ಜ್ಞಾನ ಯಾಕೆ ನೀಡಲಾಗಲಿಲ್ಲ ಎಂಬುದು ಪ್ರಶ್ನೆಯಾಗಿ ಮೂಡುತ್ತದೆ. ಈ ಶ್ರೇಣೀಕರಣದಲ್ಲಿ ಸಾಮಾಜಿಕ ಭಾಷಿಕ ಮಾಧ್ಯಮ ಒಂದೇ ಆಗಿತ್ತು. ಪುರೋಹಿತಶಾಹಿ ಪ್ರಭುತ್ವ ಇವರಿಗೆ ಅವಕಾಶ ಕೊಡಲಿಲ್ಲ ಎಂಬುದು ಅಂಬೇಡ್ಕರ್ ಜೀವನ ಚರಿತ್ರೆ ಓದಿದರೆ ಗೊತ್ತಾಗುತ್ತದೆ. ಇವು ಸಾಮಾಜಿಕ ಅಂಚಿನ ಸ್ಥಿತಿಯ ನೋವಿನ ಸಂಗತಿಗಳಾಗಿವೆ.

ಹಾಗಾದರೆ ಇನ್ನೊಂದು ಚಿಂತನೆಯನ್ನು ಪ್ರಶ್ನೆ ಮಾಡಿಕೊಂಡರೆ 'ವಾಲ್ಮೀಕಿ' 'ರಾಮಾಯಣ'ವನ್ನು ಹೇಗೆ ಬರೆದನು? ಅವನು ಕೆಳಸಮುದಾಯದ 'ಬೇಡ' ಜನಾಂಗದಿಂದ ಬಂದವನು. 'ವಾಲ್ಮೀಕಿ ರಾಮಾಯಣ' ಹೇಗೆ ಬರೆಯಲು ಸಾಧ್ಯ ಎಂದು ಗುರುತಿಸುವುದಾದರೆ, ಒಬ್ಬ ದಲಿತ ವರ್ಗದ ವಾಲ್ಮೀಕಿ ಇಂಥ ರಾಮಾಯಣವನ್ನು ಹೇಗೆ ಬರೆದನು ಎಂದು ಪುರೋಹಿತಶಾಹಿಗೆ ಸಹಿಸಿಕೊಳ್ಳದಿರಬಹುದು. ಆಗ ಕೇವಲ ಮಿತ್‌ಗಳನ್ನು ಸೃಷ್ಟಿಸಿರಬಹುದು. ಅದು ಹೇಗೆಂದರೆ, ವಾಲ್ಮೀಕಿ ಬೇಟೆಯಾಡುವಾಗ 'ಋಷಿಮುನಿ' ಹೇಳುತ್ತಾನೆ. ಬೇಟೆ ಆಡುವುದು ತಪ್ಪು, ಹಿಂಸೆಯಾಗುತ್ತದೆ. ನಿನ್ನಲ್ಲಿ ಜ್ಞಾನದ ಶಕ್ತಿ ಇದೆ. ನೀನು ತಪಸ್ಸಿಗೆ ಕುಂತುಕೊ ಎಂದು ಆರ್ಶೀವಾದ ಮಾಡಿದನೆಂದು ಹೇಳಲಾಗುತ್ತದೆ. ಇದು ಮಿತ್ ಸೃಷ್ಟಿಸಿರಬಹುದು. ಹಾಗಾದರೆ ವಾಲ್ಮೀಕಿ ಆ ಕಾಲದ ಸಂದರ್ಭದಲ್ಲಿ ತಮ್ಮ ಸಮುದಾಯದವರಿಗೆ ಅಕ್ಷರಜ್ಞಾನ ಹೇಳಿಕೊಡಬಹುದಾಗಿತ್ತಲ್ಲವೆ? ಯಾಕೆ? ಹೇಳಿಕೊಡಲಿಲ್ಲ, ಹೇಳಿಕೊಟ್ಟರೂ ಮರೆಮಾಚಿಸಲಾಗಿದೆಯೆ? ವಾಲ್ಮೀಕಿ ಋಷಿಮುನಿಯ ಆಶೀರ್ವಾದದಿಂದ ವಾಲ್ಮೀಕಿ ಬರೆಯಲಿಲ್ಲ. ಅದು ರಾಜ ಮಹಾರಾಜರ ಮಕ್ಕಳಿಗೆ ಕಾಡಿನಲ್ಲಿ, ನದಿಯ ದಂಡೆಯ ಮೇಲೆ ಪಾಠ ಪ್ರವಚನ ಮಾಡಲಾಗುತ್ತಿತ್ತು. ಆಗ ದೂರದಿಂದ ಕೇಳಿಕೊಳ್ಳುತ್ತಾ ತನ್ನ ಜ್ಞಾನ ಸೃಷ್ಟಿಗೊಂಡಿದೆ. ಇದರಿಂದ ವಾಲ್ಮೀಕಿ 'ರಾಮಾಯಣ' ಬರೆದಿರಬಹುದು. ಇದರಿಂದ ಪುರೋಹಿತಶಾಹಿ ಹಲವು ಮಿತ್‌ಗಳನ್ನು ಸೃಷ್ಟಿಸಲಾಗಿದೆ. ಏಕೆಂದರೆ ಒಬ್ಬ ದಲಿತ ಇಂಥ ಕಾವ್ಯ ಬರೆದರೆ ಪುರೋಹಿತಶಾಹಿಗೆ ಅಸ್ತಿತ್ವ ಇರುವುದಿಲ್ಲ ಎನ್ನುವುದನ್ನು ಗ್ರಹಿಸಬೇಕಾಗಿದೆ. ಇದೇ ತರಹ ಏಕಲವ್ಯನ ಹೆಬ್ಬೆರಳು ಕಿತ್ತುಕೊಳ್ಳುವ ಪ್ರಸಂಗವನ್ನು ಗ್ರಹಿಸಬೇಕಾಗಿದೆ. ಹಾಗಾದರೆ ಪ್ರಸ್ತುತ ಸಂದರ್ಭಗಳಲ್ಲಿ ಧರ್ಮದ ಕೆಲವು ಸಮುದಾಯಗಳು ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕನನ್ನು ಹುಡುಕುವ ಮತ್ತು ಗುರುತಿಸಿಕೊಳ್ಳಲು ಹೊರಟಿವೆ. ಇದರ ಹಿಂದೆ ಇರುವ ರಾಜಕಾರಣ ಮತ್ತೊಂದು ಕಡೆ ತಿರುಗುತ್ತದೆ ಎನ್ನಬಹುದು.

ಪಂಪನು "ಮನುಷ್ಯ ಜಾತಿ ತಾನೊಂದೆ ವಲಂ" ಎಂದು ಹೇಳುತ್ತಾನೆ. ಅವತ್ತಿನ ದಿನದಲ್ಲಿಯೇ ಜಾತಿವ್ಯವಸ್ಥೆಯ ಬಗ್ಗೆ ಪ್ರಶ್ನೆ ಮಾಡುತ್ತಾನೆ. ಈ ಮಾತು ನಿದರ್ಶನವಾಗುತ್ತದೆ. ಶೂದ್ರವರ್ಗಕ್ಕೆ ಯಾವುದೇ ರೀತಿಯಲ್ಲಿ ಸಮಾಜಮುಖಿಯಾಗಿ ನಿಲ್ಲುವುದಕ್ಕೆ ಅವಕಾಶ ನೀಡಲಿಲ್ಲ.

ಆದರೆ ದಲಿತರನ್ನು ತಮ್ಮ ಕೆಲಸಕ್ಕೆ ಬಳಸಿಕೊಳ್ಳುತ್ತಿದ್ದರು. ಅದು ಹಿಂಸೆಯ ಸ್ವರೂಪದಿಂದ ಕೂಡಿದೆ ಎನ್ನುವುದಕ್ಕೆ ಹಲವಾರು ಉಲ್ಲೇಖಗಳಿವೆ. ಅವರಿಗೆ ಯಾವುದೇ ರೀತಿಯ ಮಾತನಾಡುವ ಅಥವಾ ಪ್ರತಿಭಟಿಸುವ ಹಕ್ಕಿಲ್ಲ. ಪ್ರತಿಭಟಿಸಿದರೆ ಊರಿನಲ್ಲಿ ಭಿಕ್ಷೆ ನೀಡಲಾಗುತ್ತಿರಲಿಲ್ಲ. ಇಂತಹ ಸಂಗತಿಗಳು ಶೋಚನೀಯವಾಗಿವೆ. ಹಾಗಾದರೆ ದಲಿತರಿಗೆ ಸಮಾಜದಲ್ಲಿ ಪ್ರತಿರೋಧಿಸುವ ನೆಲೆ ೧೨ನೇ ಶತಮಾನದ ವಚನಕಾರರ ಚಳುವಳಿಯ ಹಿನ್ನೆಲೆಯಿಂದ ರೂಪಗೊಂಡಿತು. "ಶೈವಭಕ್ತಿ ಚಳುವಳಿಯೂ ತಮಿಳುನಾಡಿನಿಂದ ಕರ್ನಾಟಕಕ್ಕೆ ಪ್ರವೇಶ ಮಾಡಿತು. ಇದರಿಂದ ಈ ಅವಧಿಯಲ್ಲಿ ಇಲ್ಲಿ ಆಳುತ್ತಿದ್ದ ದೊರೆ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಅಧಿಕಾರಿಗಳಾಗಿದ್ದವರು ಕೊಂಡಗುಳಿ ಕೇಶಿರಾಜ ಮತ್ತು ತೆಲುಗು ಬೊಮ್ಮಣ್ಣ ಎಂಬ ಶೈವ ಭಕ್ತರು ಅಂದಿನ ಚಾತುರ್ವರ್ಣ್ಯದ ಅಸಮಾನತೆಯ ವಿರುದ್ಧ ಅವರು ಬಂಡಾಯವೆದ್ದು, ಅಧಿಕಾರ ತ್ಯಜಿಸಿ ಶಿವಭಕ್ತರಾದ ಇವರು ಶೂದ್ರ, ಅಸ್ಪೃಶ್ಯರ ಬಳಿಗೆ ಹೊರಟುಹೋಗುತ್ತಾರೆ. ದಲಿತರ ಬಗೆಗಿನ ಇವರ ಪ್ರೇಮ ಮುಂದೆ ವೀರಶೈವ ವಚನಕಾರರಿಗೆ ಸ್ಫೂರ್ತಿ ನೆಲೆಯಾಯಿತು."[೮೫]

ಇದರಿಂದ ವಚನ ಚಳವಳಿಯ ಅಶೋತ್ತರಗಳು ವಚನ ಸಾಹಿತ್ಯದಲ್ಲಿ ಅನನ್ಯವಾಗಿ ಪ್ರಕಟಗೊಂಡವು. ಈ ಸಾಹಿತ್ಯ ಕೆಳವರ್ಗದವರ ಜೊತೆ ಆತ್ಮೀಯ ಸಂವಾದ ನಡೆಸಿತು. ಇದರಿಂದ ಸ್ಫೂರ್ತಿಗೊಂಡ ಕೆಳವರ್ಗದ ಭಕ್ತರು ಇದೇ ಮೊದಲೆಂಬಂತೆ ಆತ್ಮವಿಶ್ವಾಸದಿಂದ, ಆತ್ಮ ತೃಪ್ತಿಗಾಗಿ ಮೇಲ್ವರ್ಗದ, ಪರೋಹಿತಶಾಹಿ ವಿರುದ್ಧ ಬಂಡೆದ್ದರು. ಆಗ ಕರ್ನಾಟಕದಲ್ಲಿ ಒಮ್ಮಿಂದೊಮ್ಮೆಲೆ ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಅಭೂತಪೂರ್ವ ಪಲ್ಲಟಗಳು ಕಾಣಿಸಿಕೊಂಡವು. ಆದರೆ ಬಹಳ ದಿನ ಮುಂದುವರಿಯಲಿಲ್ಲ. ಬಸವಣ್ಣ ತನ್ನ ವಚನದಲ್ಲಿ

> "ಚೆನ್ನಯ್ಯನ ಮನೆಯ ದಾಸಿಯ ಮಗನು
> ಕಕ್ಕಯ್ಯನ ಮನೆಯ ದಾಸಿಯ ಮಗಳು
> ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು
> ಇವರಿಬ್ಬರಿಗೆ ಹುಟ್ಟಿದ ಮಗ ನಾನು"[೮೬]

ಬಸವಣ್ಣ ಈ ವಚನದ ಹೇಳುವ ಮೂಲಕ ಕೆಳವರ್ಗದ ಭಕ್ತರಿಗೆ ಪ್ರೇರಣೆಯಾಗುತ್ತಾನೆ. ಹಾಗೆಯೇ ಈ ವಚನ ಜಾತಿ ಸಂಬಂಧವಿಲ್ಲದೇ ಮಾನವೀಯತೆಯ ಸಂಬಂಧವಾಗಿ, ಸಾಮಾಜಿಕವಾಗಿ ಅನುಬಂಧವಾಗಿದೆ. ಇದರಿಂದ ವಚನಕಾರರ ಪ್ರಕಾರ 'ದಲಿತ' ಶಿವಭಕ್ತರು ಬ್ರಾಹ್ಮಣನಿಗಿಂತ ಶ್ರೇಷ್ಠರು. ಹಾಗಾಗಿಯೇ ಕೆಳಜಾತಿಯ ಕಾಳವ್ವ ದಲಿತರ ಆಹಾರ ಪದ್ಧತಿ, ಬ್ರಾಹ್ಮಣರ ಆಹಾರ ಪದ್ಧತಿಗಿಂತ ಯಾವ ರೀತಿಯಲ್ಲಿ ಕೀಳಲ್ಲವೆಂದು ಸಮರ್ಥಿಸಿಕೊಳ್ಳುತ್ತಾರೆ.

ಜಾತಿವ್ಯವಸ್ಥೆಯ ವಿರುದ್ಧ ದಂಗೆ ಏಳುವ ಕಾಳವ್ವ ಹೊಲೆಮಾದಿಗರ ಆತ್ಮೀಯವಾದ ಪ್ರತೀಕವಾಗುತ್ತಾಳೆ. ಕೆಳವರ್ಗದ ವಚನಕಾರರೆಂದರೆ "ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ, ಉರಿಲಿಂಗ ಪೆದ್ದಿ, ಮಾದಾರ ಧೂಳಯ್ಯ, ಕಾಳವ್ವ, ಸೂಳೆಸಂಕವ್ವ, ಬಹುರೂಪಿ ಚೌಡಯ್ಯ,

ಅಮ್ಮಿದೇವಯ್ಯ, ಡಕ್ಕೆಯ್ಯ ಬೊಮ್ಮಣ್ಣ, ನಗೆಯ ಮಾರಿತಂದೆ, ಭಿಕಾರಿ ಭೀಮಯ್ಯ, ಕುರುಗಾಹಿ ರಾಮಣ್ಣ, ಕಂಬದ ಮಾರಿತಂದೆ, ಹೆಂಡದ ಮಾರಯ್ಯ"[೮೭] ಇತ್ಯಾದಿ. ಇವರೆಲ್ಲರೂ ಮೇಲ್ವರ್ಗದ ಸವರ್ಣೀಯರ, ಸಮಾಜದ ಅಂಕುಡೊಂಕು, ದೋಷ-ದುಷ್ಟ ಬುದ್ಧಿಗಳನ್ನು ನಿಷ್ಠುರವಾಗಿ, ನಿರ್ಭಯವಾಗಿ ಖಂಡಿಸಿದ್ದಾರೆ. ಆದರೆ ಪಂಪಪೂರ್ವ ಕಾಲದಲ್ಲಿ ದಲಿತರ ಧ್ವನಿ ಕಳೆಗುಂದಿತು. ಆದರೆ ವಚನಕಾರರಿಂದ ಧ್ವನಿ ಮೊಳಗಿತು. ಇದು ಕಲ್ಯಾಣಿ ಕ್ರಾಂತಿಯಿಂದ ಮತ್ತೆ ಕುಗ್ಗುತ್ತದೆ. ಈ ಕಾಲದಲ್ಲಿ ಯಾವುದೇ ರೀತಿಯಲ್ಲಿ 'ಅಸ್ಪೃಶ್ಯತೆ' ಎನ್ನುವುದು ತೊಲಗಲಿಲ್ಲ. ಆದರೆ ಸಂಘರ್ಷಕ್ಕೆ ಎಡೆ ಮಾಡಿಕೊಟ್ಟಿತು.

ಮಧ್ಯಕಾಲೀನ ಸಾಹಿತ್ಯ ಸಂದರ್ಭದಲ್ಲಿ ವಚನಕಾರರ ಸಾಮಾಜಿಕ ಆಂದೋಲನ ಕಲ್ಯಾಣದ ಕ್ರಾಂತಿಯಿಂದ ಕೊನೆಗೊಳ್ಳುತ್ತಿದ್ದಂತೆ, ಮತ್ತೆ ರಾಜಾಶ್ರಯದಿಂದ 'ಪುರೋಹಿತಶಾಹಿತ್ವ' ಮತ್ತೆ ಉತ್ಕೃಷ್ಟಗೊಳ್ಳುತ್ತದೆ. ಒಂದುಕಡೆ ದಾಸರು, ತತ್ವಪದಕಾರರು, ಸೂಫಿಗಳು, ಸಿದ್ಧರು, ಅವಧೂತರು, ಸಾಮಾಜಿಕ ಆಂದೋಲನದಲ್ಲಿ ತೊಡಗಿದರು. ಇವರು ಕೆಳಸಮುದಾಯದಿಂದ ಬಂದವರು. ಧರ್ಮ, ಜಾತಿ, ಪ್ರಭುತ್ವಕ್ಕೆ ಸೆಡ್ಡು ಒಡೆದು ಮೂಢನಂಬಿಕೆ ಹೋಗಲಾಡಿಸಲು ತಮ್ಮ ಹಾಡುಗಳು, ಮಾತುಗಳ ಮೂಲಕ ಭಾಷಿಕ ರಚನೆಯಲ್ಲಿ ಸಮಾಜವಾಣಿಯಾಗಿ ಜನಸಮುದಾಯಕ್ಕೆ ಮುಟ್ಟಿಸಿದ್ದಾರೆ. ಇನ್ನೊಂದು ಕಡೆ ಪುರೋಹಿತಶಾಹಿ, ಪ್ರಭುತ್ವ ತನ್ನ ವ್ಯಾಪ್ತಿಯ ಎಲ್ಲೆ ಮೀರಿ ದಲಿತರನ್ನು ತುಳಿವ ನೆಲೆಯಾಗಿ ರೂಪುಗೊಳ್ಳುತ್ತದೆ. ಇದರ ಮಧ್ಯ ರಾಜಮನೆತನಗಳ ಸಂಘರ್ಷಣೆಗಳು, ರಾಜತಾಂತ್ರಿಕ ನೀತಿಗಳಿಂದ ದಲಿತರನ್ನು ಕೀಳಾಗಿ ನೋಡಲಾಗಿದೆ.

ಆಗ ನಮ್ಮ ದೇಶಕ್ಕೆ ವಸಾಹತುಶಾಹಿಗಳ ಆರಂಭದಿಂದ ಹಲವಾರು ಬದಲಾವಣೆಗಳಾದವು. ಆದರೆ ಆ ಬದಲಾವಣೆಗಳು ತಮ್ಮ ಅನುಕೂಲಕ್ಕಾಗಿ ಮಾಡಿಕೊಂಡ ಅಭಿವೃದ್ಧಿಗಳೇ ವಿನಾಃ ಅವು ನಮ್ಮ ದೇಶದ ಅಭಿವೃದ್ಧಿಗಳಲ್ಲ. ಈ ಮಾದರಿಗಳಲ್ಲೂ ನಮ್ಮ ದೇಶ ಮುಂದುವರಿಯುತ್ತಿದೆ. ಆದರೆ ದೇಶದ ರಕ್ಷಣೆಗಾಗಿ ಎಂದು ಹೇಳಬಹುದು.

ಪಾಶ್ಚಿಮಾತ್ಯರ ವಸಾಹತುಶಾಹಿ ಹಿನ್ನೆಲೆಯಿಂದ ಭಾರತವನ್ನು ಮತಾಂಧತೆಯ ಬೀಡಾಗಿ ರೂಪಿಸಲಾಯಿತು. ಭಾರತದಲ್ಲಿ ಮುಖ್ಯವಾದ ಸಮಸ್ಯೆಯನ್ನು ಬ್ರಿಟಿಷರು ಕಂಡುಹಿಡಿದರು. ಆ ಮುಖ್ಯ ಸಮಸ್ಯೆ, ಜಾತಿಸಮಸ್ಯೆ, ಜಾತಿತಾರತಮ್ಯತೆ. ಇದರಿಂದ ಬ್ರಿಟಿಷರು ಭಾರತವನ್ನು ಸಂಪೂರ್ಣವಾಗಿ ಕೈವಶ ಮಾಡಿಕೊಂಡರು. ನಂತರ ದೇಶದ ರಾಜರ ಮೂಲಕ ಪ್ರಾಂತೀಯ ಆಡಳಿತ ನಡೆಸಿದರು. ಆಗ ಎಲ್ಲಾ ರಾಜರು ಹೆಚ್ಚು ಹೆಚ್ಚು ಸುಂಕವನ್ನು(ತೆರಿಗೆ) ಕಟ್ಟಬೇಕಾಯಿತು. ಹಾಗೆಯೇ ರಾಜರಿಗೂ ತೆರಿಗೆ ಕಟ್ಟ ಬೇಕಾಯಿತು. ಈ ತೆರಿಗೆ ಕಟ್ಟುವುದಕ್ಕೆ ದೇಶದ ಜನಸಾಮಾನ್ಯರನ್ನು ಬಳಸಿಕೊಳ್ಳಲಾಯಿತು. ಅಂತಹದರಲ್ಲಿ ದಲಿತರಿಂದ ಇನ್ನೂ ಕಿತ್ತುಕೊಳ್ಳುವ ಹಂತಕ್ಕೆ ಹೋಯಿತು. ಆ ಸಂದರ್ಭದಲ್ಲಿ ದಲಿತರ ಬದುಕು, ಬವಣೆ, ಜೀವನ ನಡೆಸುವುದು ಕಷ್ಟವಾಯಿತು. ಗೌಡ, ಕುಲಕರ್ಣಿ ಜಮೀನ್ದಾರರ ಮನೆಯಲ್ಲಿ ಜೀತಕ್ಕೆ ಇರುವ ಪರಿಸ್ಥಿತಿ ಬಂತು. ಆಗ ಅವರು ಕೊಡುವ ಗಂಜಿ ಅನ್ನಕ್ಕೆ, ದಿನಪೂರ್ತಿ ದುಡಿಯುವುದು ಮತ್ತು ಹಿಂಸೆ, ಪ್ರತಿರೋಧ ಮಾಡಿದರೆ ಬಹಿಷ್ಕಾರದಂತಹ ಸಂದರ್ಭಗಳು ಬಂದು

ಒದಗಿದವು. ಆದರೆ ಇನ್ನೂ ಸಮಾಜದ ಸಂದರ್ಭಗಳಲ್ಲಿ ಕಂಡುಬರುತ್ತದೆ. ಇದು ಭಾರತದ ಜನರ ಸ್ಥಿತಿಗತಿಯನ್ನು ವಿವರಿಸುತ್ತದೆ.

ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಯಲ್ಲಿ ಬರುವ 'ಚೋಮ' ತನ್ನ ದುಡಿಯ ಮೂಲಕ ಪ್ರತಿಭಟಿಸುತ್ತಾನೆ. ತುಂಡುಭೂಮಿಗಾಗಿ ತನ್ನ ಜೀವನವನ್ನೇ ಮುಡಿಪಾಗಿಡುತ್ತಾನೆ. ಕೊನೆಗೆ ಸಾಯುತ್ತಾನೆ. ಇಲ್ಲಿ ಎರಡು ಪ್ರಶ್ನೆಗಳು ಹುಟ್ಟುತ್ತವೆ. ಚೋಮನಿಗೆ ಭೂಮಿ ಕೊಟ್ಟರೆ, ಆ ಒಡೆಯನ ಹೊಲ, ಮನೆಯಲ್ಲಿ ಕೆಲಸ ಮಾಡುವವರ್ಯಾರು? ದಲಿತರು ಜೀತದಾಳಾಗಿ ಕೆಲಸ ಮಾಡಬೇಕು. ಅವರು ಭೂಮಿಯನ್ನುಳ್ಳವರಲ್ಲ, ಅವರಿಗೆ ಭೂಮಿ ಕೊಟ್ಟರೆ ನಮ್ಮ ಪರಂಪರೆ, ಸಂಪ್ರದಾಯ ಮುರಿದಂತೆ. ಹಾಗಾಗಿ ಭೂಮಿಯನ್ನು ಕೊಡುವುದು ಸೂಕ್ತವಲ್ಲ ಎಂದು ಭೂಮಿಯ ಮನೆಯ ಒಡತಿ ಹೇಳುತ್ತಾಳೆ. ಈ ಕಾದಂಬರಿಯಲ್ಲಿ ಚೋಮನ ಮಗಳು ಬೆಳ್ಳಿ ತಂದೆಯ ಸಾಲವನ್ನು ತೀರಿಸಲು ಮನ್ವೇಲನ ತೋಟಕ್ಕೆ ಜೀತಕ್ಕಾಗಿ ಹೋಗುತ್ತಾಳೆ. ಆಗ ಮನ್ವೇಲ ಬೆಳ್ಳಿಯನ್ನು ಹಣದ ಹೆಚ್ಚಿನ ಆಸೆಯನ್ನು ತೋರಿಸಿ ಬಳಸಿಕೊಳ್ಳುತ್ತಾನೆ. ಹಾಗೆಯೇ ಚೋಮನ ಮಗ ನೀಲ ನೀರು ಕುಡಿಯಲು ಹೋದಾಗ ಕೊಳಕ್ಕೆ ಜಾರಿ ಬೀಳುತ್ತಾನೆ. ಇದನ್ನು ಬ್ರಾಹ್ಮಣ ಹುಡುಗ ನೋಡಿದಾಗ ಕಾಪಾಡುವುದಕ್ಕೆ ಮುಂದಾದಾಗ ಬ್ರಾಹ್ಮಣ ಹಿರಿಯ ತಡೆದು ಅವನು ಹೀನ ಜಾತಿಯವ ಅವನನ್ನು ಮುಟ್ಟಿದರೆ ಮೈಲಿಗೆಯಾಗುತ್ತದೆ ಎಂದು ಹೇಳುತ್ತಾನೆ. ಆಗ ನೀಲ ಸಾಯುತ್ತಾನೆ.

ಇಂತಹ ಘಟನೆಗಳು ನವೋದಯ ಸಂದರ್ಭದಲ್ಲಿವೆ. ಇವು ಶತಶತಮಾನದಿಂದ ನಡೆದಿವೆ. ಪ್ರಸ್ತುತ ಸಂದರ್ಭದಲ್ಲಿ ಬೇರೆ ಬೇರೆ ಸ್ವರೂಪದಲ್ಲಿ ದಲಿತರನ್ನು ಬಳಸಿಕೊಳ್ಳಲಾಗಿದೆ. ಯಾಕೆ? ಶಿವರಾಮ ಕಾರಂತರು ಇಂತಹ ಸಾಮಾಜಿಕ ವಿಘಟನೆಯನ್ನು ಕಾದಂಬರಿಯ ಮೂಲಕ ವ್ಯಕ್ತಪಡಿಸಿದ್ದಾರೆ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ 'ಹೊನ್ನಳ್ಳಿ ಹೊಡೆತ' ಇದು ಗೌಡ ಕುಲಕರ್ಣಿ ಪಾಟೀಲ ಅವರ ಚೇಲ್ಯಾಗಳಾದ ಸಾಬಿಗಳು ಮಾಡುವ ಕಾರ್ಯ. ಇಲ್ಲಿ ಯಾರು ದಲಿತರು ತಪ್ಪು ಮಾಡುತ್ತಾರೊ ಅವರನ್ನು ಸಾಯುವ ಹಾಗೇ ಹೊಡೆಯುವುದು ಹೊನ್ನಳ್ಳಿ ಹೊಡೆತವಾಗಿದೆ. ಇಂತಹ ವಸ್ತುಗಳು ವ್ಯಕ್ತಗೊಂಡಿವೆ. ಇವು ಜೀತಪದ್ಧತಿ ಆರ್ಥಿಕತೆ, ಸಾಮಾಜಿಕದಿಂದ ಬಹಿಷ್ಕಾರದಂತಹ ಘಟನೆಗಳು ದಲಿತರಿಗೆ ಸಂಘರ್ಷಕ್ಕೆ ಎಡೆ ಮಾಡಿಕೊಡುತ್ತವೆ. ಇಂತಹ ಸನ್ನಿವೇಶಗಳು ಸಾಹಿತ್ಯದುದ್ದಕ್ಕೂ ಬರವಣಿಗೆ ಕ್ರಮದಲ್ಲಿ ರೂಪಗೊಂಡಿವೆ. ನಿರಂಜರ 'ಚಿರಸ್ಮರಣೆ' ಕಾದಂಬರಿ, ದೇವನೂರರ 'ಒಡಲಾಳ'ದ ಹಸಿವಿನ ಪ್ರಜ್ಞೆ ಹಾಗೂ 'ಮಾರಿಕೊಂಡವರು' ಕಥೆಯನ್ನು ಗಮನಿಸಿದರೆ ಶೋಷಣೆ, ಅತ್ಯಾಚಾರ, ಬಹಿಷ್ಕಾರ ಸಮಾಜದಲ್ಲಿ ನಡೆದಿವೆ. ಇವು ಕಥಾರೂಪದಲ್ಲಿ ಒಡಮೂಡಿವೆ.

ಇದರಿಂದ ೭೦-೮೦ರ ದಶಕದಲ್ಲಿ ಬಂಡಾಯದ ಅಲೆ ಎದ್ದಿತು. ಸಿದ್ಧಲಿಂಗಯ್ಯನವರ ಕಾವ್ಯಧಾರೆಯ ಮೂಲಕ ಸಮಾಜದಲ್ಲಿ ದಲಿತರು ಬಂಡಾಯದ ಧ್ವನಿಯನ್ನು, ಅನ್ಯಾಯ,

ದಬ್ಬಾಳಿಕೆ, ಶೋಷಣೆ, ಮೇಲ್ಜಾತಿಯವರ ಧೋರಣೆಯನ್ನು ಧಿಕ್ಕರಿಸಿದರು. 'ಹೊಲೆಮಾದಿಗರ' ಹಾಡುವಿನಿಂದ ಶುರುವಾದ ತೀರಾ ಈಚಿನ ತನಕ ಸಿದ್ಧಲಿಂಗಯ್ಯನವರ ಕಾವ್ಯವನ್ನು ೨೧ನೇ ಶತಮಾನದ ದಲಿತರು ಕೆಳಜಾತಿಗಳ ಆತ್ಮಪ್ರತಿನಿಧೀಕರಣದ ಆಶಯವನ್ನು ರೂಪಿಸಿದ್ದರು. ಡಿ.ಆರ್. ನಾಗರಾಜ ಅವರು ಹೇಳುವ ಹಾಗೇ "ಹೊಸ ರೀತಿಯ ಪ್ರಜ್ಞಾವಂತ ದಲಿತ ತನ್ನ ಭೂತ, ವರ್ತಮಾನ, ಭವಿಷ್ಯವನ್ನು ಕಾಣುತ್ತಿದ್ದ ಕ್ರಮಗಳು ಅವು. ಈ ಕಾರಣಕ್ಕಾಗಿ, ಕವಿಯ ಕಾವ್ಯ ದಲಿತರ ಪ್ರಣಾಳಿಕೆಯಂತಾಗಿ ನಾಡಿನಾದ್ಯಂತ ದಲಿತ ಯುವ ಜನಾಂಗ ಅದನ್ನು ಗುಣುಗುಣಿಸುತ್ತಿದ್ದುದು ಸಾಮಾನ್ಯವಾದ ದೃಶ್ಯವಾಗಿತ್ತು"[೮೮] ಎಂದು ಹೇಳುತ್ತಾರೆ. ೮೦ರ ದಶಕಗಳಲ್ಲಿ ಸಿದ್ಧಲಿಂಗಯ್ಯನವರ ಕಾವ್ಯ ಮತ್ತು ದಲಿತ ಚಳುವಳಿಗಳು ಪರಸ್ಪರ ರೂಪಿಸಿಕೊಂಡಿದ್ದವು. ದಲಿತ ಹೋರಾಟದ ಎಲ್ಲಾ ಆಶಯಗಳನ್ನು ಕವಿಯ ಕಾವ್ಯದಲ್ಲಿ ಪ್ರತಿಧ್ವನಿಸಿದವು.

ದಲಿತ ಬಂಡಾಯದ ಭಾಷೆ ಕಲಾತ್ಮಕವಾದ ಫಾರ್ಮ್ ಆಗಿ ರೂಪುಗೊಂಡಿತ್ತು. ವಸ್ತು ಮುಖ್ಯವಾದದ್ದು ಈ ವಸ್ತು ಭಾಷೆಯ ಮೂಲಕ ತಲುಪಬೇಕಾದ ಜನ ಸಮುದಾಯದ ಆಶೋತ್ತರಗಳಿಗೆ ಸ್ಪಂದಿಸುವುದು ಮುಖ್ಯವಾಯಿತು. ಅಂದಿನ ದಿನಗಳಲ್ಲಿ ಎಲ್ಲಾ ಸಮುದಾಯದ ದಲಿತಪ್ರಜ್ಞೆಯುಳ್ಳವರು ಧ್ವನಿಗೂಡಿಸಿದರು. ಹಾಗೆಯೇ ನೋವಿನಲ್ಲಿ ಹುಟ್ಟಿ ಬಂದ ಹಳ್ಳಿಗಾಡಿನ ಕವಿಗಳು ತೀವ್ರತರವಾದ ದಲಿತ ನೋವಿನ, ಶೋಷಣೆಯ ಸಾಮಾಜಿಕ ಪ್ರಜ್ಞೆಯಿಂದ ಕಾವ್ಯ ರಚನೆಯ ಮೂಲಕ ಸಮಾಜಕ್ಕೆ ತಲುಪಿಸಿದರು. ದಲಿತ-ಬಂಡಾಯ ಕಾವ್ಯ ಪ್ರತಿಮೆಗಳ ರೂಪಕಗಳ ಮೂಲಕ ವಿಷಾದಪಡಿಸಿವೆ. ಬಿ.ಚಿನ್ನಸ್ವಾಮಿಯವರ 'ಅಸ್ಪೃಶ್ಯರು' ಪದ್ಯದಲ್ಲಿ ದಲಿತರ ಕೀಳರಿಮೆಯಿಂದ ನರಳುತ್ತಿರುವ ಚಿತ್ರದ ಅಭಿವ್ಯಕ್ತಿಯಲ್ಲಿರುವ ಪ್ರತಿಮೆಗಳನ್ನು ಗಮನಿಸಬಹುದು.

> "ಸ್ಪರ್ಶ ಬಾಧೆಯಿಂದ ನಮಗೂ
> ಮುಟ್ಟಿದ ಮುನಿ ಗಿಡಗಳಂತೆ ಹುಟ್ಟು ರೋಗ
> ನಮ್ಮ ಓಡಾಟವು
> ಕೆಂಜಿಗೆ ಹರಿದಾಡಿದಂತೆ ಕಂಡು
> ಕಿಕ್ಕರಿಸುವ ಈ ಜನಕ್ಕೆ
> ನಾವು ಭೂಮಿ ತಾಯಿಯ ಹಾದರದ ಮಕ್ಕಳು"[೮೯]

ಮುಟ್ಟಿದ ಮುನಿ, ಕೆಂಜಿಗೆ ಮುಂತಾದ ಪದಗಳ ಪರಿಚಯವಿದ್ದು, ಹಾದರದ ಮಕ್ಕಳು ಅನುಭವಿಸುವ ಯಾತನೆಯ ಅನುಭವವಿದ್ದವರಿಗೆ ಮಾತ್ರ ಈ ಪದ್ಯದ ಆಳ ಎಷ್ಟೆಂಬುದು ವ್ಯಕ್ತವಾಗುತ್ತದೆ. ಇವುಗಳಿಂದ ನೋವು, ಅವಮಾನ, ನಿರಾಶೆಗಳು ಶೋಷಣೆಗಳಾಗಿರುವುದನ್ನು ಮನಗಾಣಬೇಕಾಗಿದೆ.

ಈ ವಾಸ್ತವದ ದಿನಗಳಲ್ಲಿ ದಲಿತ-ಬಂಡಾಯದ ನೆಲೆ ಸಾಹಿತ್ಯದ ಚರಿತ್ರೆಯಲ್ಲಿ ಅಡಗಿದೆ. ಆದರೆ ಅದರ ಸ್ವರೂಪ ಹಲವು ವ್ಯತ್ಯಾಸಗಳಿಂದ ಕೂಡಿದೆ. ದಲಿತರ ಮೇಲೆ ಸಾಂಸ್ಕೃತಿಕವಾದ

ದಬ್ಬಾಳಿಕೆ, ಶೋಷಣೆ, ಪ್ರಭಾವ, ಸಂಸ್ಕೃತಿಯನ್ನು ಕೆಳಸಮುದಾಯದ ಮೇಲೆ ಹೇರುವುದು, ಆಹಾರ ಸಂಸ್ಕೃತಿಯ ಮೇಲೆ ದಬ್ಬಾಳಿಕೆ ಮಾಡುವುದು, ಈ ತೆರನಾದ ಪ್ರಕ್ರಿಯೆಗಳು ನಿರಂತರವಾಗಿ ಪುರೋಹಿತಶಾಹಿ ಹಿತಾಸಕ್ತಿಗಳು ನಡೆಸಿವೆ. ಹಾಗೆಯೇ ಬಂಡವಾಳಶಾಹಿ ಜಾಗತೀಕರಣ, ಉದಾರೀಕರಣದಿಂದ ಪ್ರಸ್ತುತ ಜನ ಎಲ್ಲಾ ಸಮುದಾಯದಲ್ಲಿಯೂ ದಲಿತ ಪ್ರಜ್ಞೆ ಅವಿತುಕೊಂಡಿದೆ. ಆದರೆ ದಲಿತರ ಬದುಕು ಈ ಕಾರ್ಪೋರೇಟ್ ಜಗತ್ತಿನ ಮುಂದೆ ಮಂಕಾಗಿದೆ. ಅವರ ಕೂಗು ಇದ್ದರೂ ಕೇಳುವುದಿಲ್ಲ. ರೈತರ ಸಾವಿನ ಸರಣಿ, ಮಹಿಳೆಯರ ಶೋಷಣೆ, ಅತ್ಯಾಚಾರ, ದೇವದಾಸಿಯರು ಹೀಗೆ ಮುಂದುವರಿದಂತೆ ರೋಹಿತ್ ವೇಮುಲರಂತವರು ದಲಿತ ಧ್ವನಿ ಎತ್ತಿದ್ದಕ್ಕಾಗಿ ಅವನ ಜೀವವನ್ನೇ ತೆಗೆದುಕೊಂಡರು.

ನೂರು ವರ್ಷಗಳ ಹಿಂದೆ ದಲಿತರ ಪರಿಸ್ಥಿತಿ ಹೇಗಿತ್ತೆಂದು ಊಹಿಸಿಕೊಳ್ಳಿ. ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕಾಗಿ ಸಾಮಾನ್ಯ ಜನರನ್ನು ಬಳಕೆ ಮಾಡುತ್ತಾರೆ. ಹಲವಾರು ಸಾಹಿತ್ಯಕ ಹೋರಾಟ ಚಳವಳಿ ನಡೆದರೂ, ಪ್ರೇರಿತ ಶಕ್ತಿಗಳಿಂದ ಚಳುವಳಿ ತಣ್ಣಗಾಗುತ್ತವೆ. ಇದರ ಹಿಂದೆ ಹುನ್ನಾರ ನಡೆಯುತ್ತವೆ. ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ತರುವ, ಮೀಸಲಾತಿ ಹೊಡೆಯುವ, ತೆಗೆಯುವ ಹುನ್ನಾರಗಳು ಸಾಮಾನ್ಯರ, ದಲಿತರ ತಿನ್ನುವ ಆಹಾರ ಕಿತ್ತುಕೊಳ್ಳುವ ಚಿಂತನೆ ಬಲಪಂಥೀಯ ಸಂಘಟನೆಯ ಪರಿವಾರದಿಂದ ದೇಶದಲ್ಲಿ ಅಲ್ಲೋಲ ಕಲ್ಲೋಲ ನಡೆದಿವೆ. ಇದರ ಹಿಂದೆ ಆರ್ಥಿಕ ಶಕ್ತಿ ರಾಜಕಾರಣ ಬಹುದೊಡ್ಡದಾಗಿ ಕೆಲಸ ಮಾಡುತ್ತದೆ. ಸರಕಾರಗಳಿಂದ ಒಂದು ಕಡೆ ಆಶ್ವಾಸನೆ ನೀಡಿ ಇನ್ನೊಂದು ಕಡೆ ಕಿತ್ತುಕೊಳ್ಳುತ್ತಿದೆ ಎಂದು ಅನಿಸಿದೆ.

ಒಟ್ಟಾರೆಯಾಗಿ ಸಮಾಜದಲ್ಲಿ ಆರ್ಥಿಕತೆಯಿಂದ ಜಾತಿ ಶ್ರೇಣೀಕರಣ ನಡೆಯುತ್ತಿದೆ. ಇದರಿಂದ ಸಮಾಜದಲ್ಲಿ ಸ್ಥಾನಮಾನಗಳು ಉದ್ಭವಿಸುತ್ತವೆ. ಹಾಗೆಯೇ ದಲಿತರ ಬದುಕು ಬವಣೆ ಸುಧಾರಿಸುವ ಹಂತದಲ್ಲಿ ಇದ್ದರೂ ಕೈಗೂಡುವುದಿಲ್ಲ. ಇದರಿಂದ ದಲಿತ ದಲಿತನಾಗಿಯೇ ಇರಬೇಕಾದ ಸ್ಥಿತಿ ಒದಗಿದೆ. ಒಂದು ಕಡೆ ದಲಿತರಲ್ಲಿ ಪುರೋಹಿತಶಾಹಿತ್ವ ಬೆಳೆಯುತ್ತಿದೆ. ಇದಕ್ಕೆ ಮುಖ್ಯ ಕಾರಣ ರಾಜಕೀಯ ಒಡೆದಾಳುವ ನೀತಿಯಿಂದ ಹಾಗೂ ರಾಜಕೀಯ ಪ್ರೇರಿತ ಶಕ್ತಿಗಳಿಂದ ಸಮಾಜದಲ್ಲಿ ಸೃಷ್ಟಿಸುವ ಶಕ್ತಿಗಳು ಹುಟ್ಟಿಕೊಂಡಿವೆ. ಹೀಗಾಗಿ ಮನುಷ್ಯರಿಗೆ ಸಹಜ ಪ್ರೀತಿ, ವಿಶ್ವಾಸ ನಂಬಿಕೆ, ತಾಳ್ಮೆ ಬೇಕಾಗಿದೆ. ಇಲ್ಲದಿದ್ದರೆ ಮತ್ತೆ ನಾವು ದಲಿತ–ಬಂಡಾಯವಾಗಿ ಸಂಘರ್ಷ ಮಾಡುವ ಅನಿವಾರ್ಯತೆ ಎದುರು ನೋಡಬೇಕಾಗುತ್ತದೆ ಎಂದು ಹೇಳಬಹುದು.

### ೪.೫. ಮಹಿಳಾ ಸಾಹಿತ್ಯ ಸಂದರ್ಭದ ಮುನ್ನುಡಿಗಳು

ಆಧುನಿಕ ಮಹಿಳಾ ಸಾಹಿತ್ಯದ ಅಧ್ಯಯನ ಕೃತಿಗಳು ತಾತ್ವಿಕ ಚಿಂತನೆಯಲ್ಲಿ ತೊಡಗಿವೆ. ಇಂದಿನ ದಿನಗಳಲ್ಲಿ ತೊಡಗುವಿಕೆಯಲ್ಲಿ ಮಹಿಳಾ ಸಾಹಿತ್ಯಕ್ಕೆ ಮುನ್ನುಡಿಗಳು ಸಾಥ್ ನೀಡಿವೆ. ಹಾಗೆ ಮುಖ್ಯ ವೇದಿಕೆಯಾಗಿ ಕನ್ನಡ ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯ ಅದರದೇ ಆದ ಸ್ವರೂಪ ಹೊಂದಿರುತ್ತದೆ. ಈ ಹೊತ್ತಿಗಾಗಲೇ ಕನ್ನಡ ಸಾಹಿತ್ಯದಲ್ಲಿ ಸಮಾಜ ಸುಧಾರಣಾ ಚಳುವಳಿಗಳು

ಎನ್ನುವ ಸಾಂಸ್ಕೃತಿಕ ಸಂಘರ್ಷಗಳು ನಡೆದಿವೆ. ದೇಶದ ಸ್ವಾತಂತ್ರ್ಯ ಚಳುವಳಿಯೊಂದಿಗೆ ದೇಸಿಯಂತಹ ಚಿಂತನೆಯಲ್ಲಿ ಸಾಮಾಜಿಕ ಚಳುವಳಿಗಳು ರೂಪ ಪಡೆದಿವೆ. ಜಾತಿವ್ಯವಸ್ಥೆ, ಅಸ್ಪೃಶ್ಯತೆ, ಮಹಿಳೆಯರ ಶೋಷಣೆ, ಕೆಲವು ಸಮುದಾಯದಲ್ಲಿ ಕೇಶಮುಂಡನ ಪದ್ಧತಿ, ಬಾಲ್ಯವಿವಾಹ, ಬಹುಪತ್ನಿತ್ವ, ವರದಕ್ಷಿಣೆ ಕಿರುಕುಳ ಇನ್ನೂ ಮೊದಲಾದವುಗಳ ವಿಷಯಗಳನ್ನು ಚರ್ಚೆಗೊಳಪಡಿಸಲಾಗುವುದು. ನಮ್ಮವರ ನಮ್ಮೊಳಗಿನಿಂದಲೇ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನ ಬರಹ ರೂಪದಲ್ಲಿ ಸಾಮಾಜಿಕ ಸಂವೇದನೆಯಲ್ಲಿ ನಡೆಯುತ್ತಾ ಬಂದಿದೆ. ಹೀಗಾಗಿ ಸಮಾಜ ಸುಧಾರಣಾ ಚಳುವಳಿಯ ಅಂಗವಾಗಿ ಸ್ತ್ರೀ ಶಿಕ್ಷಣ, ಸತಿಪದ್ಧತಿ ವಿರೋಧ, ವಿಧವಾವಿವಾಹದಂತಹ ಮಾನವೀಯ ಮತ್ತು ಸಮಾನತೆಯ ನೆಲೆಗಳು ಬೆಳೆದವು. ಇಡೀ ಸಮಾಜದ ವ್ಯವಸ್ಥೆಯಲ್ಲಿ ಸಾಂಪ್ರದಾಯಿಕ ಮತ್ತು ಆಧುನಿಕ ಮನೋಧರ್ಮಗಳ ಸಂಘರ್ಷಗಳು ನಿರಂತರವಾಗಿದ್ದವು. ಈ ಸಂಘರ್ಷಗಳಿಂದ ಕೊನೆಯಲ್ಲಿ ಮಹಿಳಾ ಕೂಗು ಕೇಳಿಸತೊಡಗಿದೆ.

"ಮಹಿಳೆಗೆ ಬೇಕಾಗಿರುವುದು ಸ್ವೇಚ್ಛೆಯಲ್ಲ, ಆಳುವ ಅಧಿಕಾರವಲ್ಲ. ಆಕೆಗೆ ಅವಶ್ಯವಿರುವುದು ಸಹಜವಾಗಿ ಬೆಳೆಯುವ ಅವಕಾಶ, ಸ್ವಂತದ ಬುದ್ಧಿಯನ್ನು ಉಪಯೋಗಿಸುವ ಅವಕಾಶ ಒತ್ತಡ ದಬ್ಬಾಳಿಕೆಗಳಿಂದ ಮುಕ್ತವಾದ ಬದುಕನ್ನು ಹೊಂದುವ ಅವಕಾಶ"[೦] ಎಂದು ಮಹಿಳಾ ಸ್ವಾತಂತ್ರ್ಯವನ್ನು ಅಮೆರಿಕದ ಪ್ರಖ್ಯಾತ ಮಹಿಳಾ ವಿಮೋಚನಾವಾದಿ ಮಾರ್ಗರೇಟ್ ಪುಲಾರ್ ವ್ಯಾಖ್ಯಾನಿಸುತ್ತಾಳೆ. ಈ ವ್ಯಾಖ್ಯಾನದಿಂದ ಜಗತ್ತಿನಾದ್ಯಂತವಾಗಿ ಪ್ರಮುಖ ಚಳುವಳಿಯಾಗಿ ಸೆಳೆಯುತ್ತದೆ. ಈ ಹಿನ್ನೆಲೆಯಿಂದ ಮಹಿಳಾಪ್ರಜ್ಞೆ ತನ್ನತನದ ಸಾಕ್ಷಾತ್ಕಾರ, ಆಧುನಿಕ ಮಹಿಳಾತನ ಇನ್ನೂ ಹಲವಾರು ಪರಿಕಲ್ಪನೆಗಳಿಂದ ಚರ್ಚೆಗಳು, ವಾಗ್ವಾದಗಳುಂಟಾಗಿ, ಅಲ್ಲಲ್ಲಿ ಸಂಘಟನೆಗಳಾಗಿ, ಸ್ತ್ರೀ ವಿಮೋಚನಾ ಚಳುವಳಿಯಾಗಿ ಮಹಿಳೆಯರ ಸಮಗ್ರತೆಯ ಅಸ್ತಿತ್ವಕ್ಕಾಗಿ ಹೋರಾಟಗಳು ನಡೆಯುತ್ತಿವೆ.

ಭಾರತೀಯ ಸಂದರ್ಭದಲ್ಲಿ ಮಹಿಳೆಯರಿಗೆ ಸೀತೆ, ದ್ರೌಪದಿಯರ ಮಾದರಿಗಳು ಆದರ್ಶಗಳು ಎಂದು ಎತ್ತಿಹಿಡಿಯುವ ಒಂದು ಮನೋಧರ್ಮ ಪುರೋಹಿತಶಾಹಿ ನೆಲೆಯಲ್ಲಿ ಗ್ರಹಿಸಬಹುದು. ಹೀಗಾಗಿ ಸ್ತ್ರೀಯರ ಯಥಾಸ್ಥಿತಿಯನ್ನು ಒಪ್ಪಿಕೊಳ್ಳುವ ಮತ್ತು ಅದನ್ನು ಮೀರುವ ಎರಡು ನಿಲುವುಗಳಾಗಿ ಕಾಣಿಸಿಕೊಳ್ಳುತ್ತವೆ. ಇಂತಹ ಕಡೆಗಳಲ್ಲಿ ನಿಲುವುಗಳು ಸಾಂಸ್ಕೃತಿಕ ಮತ್ತು ಸಾಮಾಜಿಕ ಒತ್ತಡಗಳಿಂದ ಬಂದಿವೆ. ಹಾಗಾಗಿ ಈ ಎರಡು ನಿಲುವು ಒಪ್ಪಿಕೊಳ್ಳುವ ಮತ್ತು ಮೀರುವ ನೆಲೆಯಿಂದ ಮಹಿಳಾ ಸಮಸ್ಯೆಗಳ ನಿವಾರಣೆ ಆಗಬೇಕಾದರೆ ಸ್ತ್ರೀಯರ ಅಭಿವ್ಯಕ್ತಿಗಾಗಿ ಮಹಿಳೆಯರ ಸಮಸ್ಯೆಗಳ ಸ್ವರೂಪವನ್ನು ಸಮಾಜದೆದುರು ದಿಟ್ಟತನದಿಂದ ತೆರೆದಿಡುವಂತಾಗಿದೆ. ಇದರಿಂದ ವಿಧವೆಯರ ಕಷ್ಟಗಳು, ಬಂಜೆತನದ ನೋವುಗಳು, ಬಾಲ್ಯವಿವಾಹದ ಪರಿಣಾಮಗಳು, ಬಹುಪತ್ನಿತ್ವದಿಂದುಂಟಾಗುವ ಸಮಸ್ಯೆಗಳು, ಸ್ತ್ರೀಯರ ಅಭಿವ್ಯಕ್ತಿಯ ಮುಖ್ಯ ವಸ್ತು ವಿಷಯವಾಗಿ ಸ್ತ್ರೀ ಶಿಕ್ಷಣದ ಅಗತ್ಯ, ಸಾರ್ವಜನಿಕ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರ ಮೊದಲಾದ ಸಂಗತಿಗಳು ಚರ್ಚೆಗೆ ಗ್ರಾಸವಾಗಿವೆ. ಇದಕ್ಕೆ ಸಾಹಿತ್ಯ ಒಂದು ಮಾಧ್ಯಮವಾಗಿ ಪರಿಣಮಿಸಿತು.

### ಮಹಿಳಾ ಸಾಹಿತ್ಯ ಚರಿತ್ರೆ ಗುರುತಿಸುವಲ್ಲಿ ಮುನ್ನುಡಿಗಳು

ಮಹಿಳಾ ಸಾಹಿತ್ಯ ಚರಿತ್ರೆಯನ್ನು ಬಹುತೇಕವಾಗಿ ಜಗತ್ತಿನಲ್ಲಿಯೇ ಗುರುತಿಸಿರುವುದು ಕಡಿಮೆ. ಆದರೆ ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಮಹಿಳಾ ಸಂಗತಿಗಳನ್ನು ಅವರ ಕೃತಿಗಳು ಗುರುತಿಸುವುದು ಅತ್ಯಂತ ಕಡಿಮೆ ಎಂದು ಹೇಳಬಹುದು. ಎಚ್.ಎಸ್.ಶ್ರೀಮತಿಯವರು 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ' ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ. "ನಮ್ಮ ಕನ್ನಡ ಸಾಹಿತ್ಯ ಚರಿತ್ರೆಗಳನ್ನು ಬರೆಯತೊಡಗಿದ ಆಧುನಿಕ ಕಾಲದ ವೇಳೆಗೆ ಪುರುಷರ ಸಾಹಿತ್ಯದ ಬಗೆಗಿನ ಮಾಹಿತಿಗಳು ಕೂಡ ಮಸುಕಾಗಿಯೇ ಇದ್ದದ್ದು. ಆದರೆ ವಿದ್ವಾಂಸರು ಅನೂಹ್ಯವೆನಿಸುವ ಮೂಲಗಳನ್ನು ಬಿಡದೇ ಶೋಧಿಸಿ ಪುರುಷರ ಸಾಹಿತ್ಯವನ್ನು ಸಂಕಲಿಸಿದರು"[೧] ಎಂದು ಹೇಳುತ್ತಾರೆ. ನಮ್ಮ ಕನ್ನಡ ಸಾಹಿತ್ಯ ಚರಿತ್ರೆ ಕಟ್ಟಿಕೊಳ್ಳುವುದಕ್ಕೆ ಹಲವಾರು ದ್ವಂದ್ವಗಳು ಕಾಡಿರಬಹುದು. ರಂ.ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ ಬಹುತೇಕವಾಗಿ ಬ್ರಾಹ್ಮಣೀಯ ಹಾಗೂ ಉನ್ನತ ವರ್ಗಗಳ ಕುರಿತು ಹೆಚ್ಚು ಪ್ರಸ್ತುತಪಡಿಸಿವೆ. ಏಕೆಂದರೆ ಬ್ರಾಹ್ಮಣ, ಜೈನ, ವೀರಶೈವ ಕೃತಿಗಳು ಮತ್ತು ಕೃತಿಕಾರರನ್ನು ಒಳಗೊಂಡಿದೆ.

ಇಲ್ಲಿ ಕೆಳವರ್ಗಗಳ ಕವಿಗಳ ವಿಶ್ಲೇಷಣೆಯನ್ನು ಕಡೆಗಣಿಸಲಾಗಿದೆ. ಅಷ್ಟೊತ್ತಿಗಾಗಲೇ ಕನ್ನಡ ಸಾಹಿತ್ಯ ಚರಿತ್ರೆಗಳ ಬರವಣಿಗೆಗಳು ಬಂದಿದ್ದವು. ಬಿ.ಎಂ.ಶ್ರೀಯವರ ಕನ್ನಡ ಸಾಹಿತ್ಯ ಚರಿತ್ರೆ ಬರೆಯುವುದು ಅರ್ಧಕ್ಕೆ ನಿಂತುಹೋಗಿದೆ. ಕಾರಣ ಯಾವುದನ್ನು ಕನ್ನಡ ಸಾಹಿತ್ಯ ಚರಿತ್ರೆಯಾಗಿ ಗುರುತಿಸಬೇಕು ಎಂಬುದು ದ್ವಂದ್ವಗಳಾಗಿ ಒಳಗೊಂಡಿದೆ. ಸಾಹಿತ್ಯ ಚರಿತ್ರೆ ಬರೆಯಲು ನಿಲ್ಲಿಸಿರಬಹುದು. ಏಕೆಂದರೆ ಜಾನಪದ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಪ್ರಾಧಾನ್ಯತೆ ಹೊಂದಿದ್ದರೂ ಆದರೆ ಗುರುತಿಸುವಲ್ಲಿ ಹಿಂದೆ ಬಿದ್ದಿವೆ. ಹೀಗೆ ತತ್ವಪದ ಸಾಹಿತ್ಯ, ದಾಸಸಾಹಿತ್ಯ, ಸೂಫಿಗಳ ಚರಿತ್ರೆ, ಆದಿವಾಸಿ ಸಮುದಾಯಗಳ ಕಾವ್ಯಗಳ ಕುರಿತು ಇನ್ನೂ ಸಾಹಿತ್ಯ ಚರಿತ್ರೆಯಾಗಿ ಗುರುತಿಸಿಲ್ಲ. ಆದರೆ ಮಹಿಳಾ ಸಾಹಿತ್ಯವನ್ನು ಕೆಲವು ಕೃತಿಗಳಲ್ಲಿ ಆದರೂ ಪ್ರಸ್ತಾಪ ಮಾಡಿವೆ. ಆದರೆ ಒಟ್ಟಿನಲ್ಲಿ ನಗಣ್ಯ ಮಾಡಲಾಗಿದೆ.

ಎಚ್.ಎಸ್.ಶ್ರೀಮತಿಯವರು 'ಮಹಿಳಾ ಸಾಹಿತ್ಯ ಚರಿತ್ರೆ' ಕುರಿತು ಅದರದೇ ಆದ ಅನನ್ಯತೆ ಹೊಂದಿದೆ. ಆದರೆ ನವೋದಯ, ನವ್ಯ ಕಾಲಘಟ್ಟದ ಸಂದರ್ಭದಲ್ಲಿ ಪುರುಷಕೇಂದ್ರಿತ ಸಾಮಾಜಿಕ ಸ್ವರೂಪ ಹೊಂದಿವೆ. ಇಪ್ಪತ್ತನೇ ಶತಮಾನದ ಮುಂದಿನ ದಿನಗಳಲ್ಲಿ ವಿಶೇಷವಾಗಿ ಬೆಳೆದ ಕನ್ನಡ ಸಾಹಿತ್ಯ ಲೋಕದಲ್ಲಿ ಮಹಿಳೆಯರ ಸಾಹಿತ್ಯ ಅತ್ಯಂತ ವೈವಿಧ್ಯಪೂರ್ಣ ಸೃಜನ ಸಾಹಿತ್ಯ. ರಾಷ್ಟ್ರೀಯತೆ ಸ್ವಾತಂತ್ರ್ಯ ಪೂರ್ವದ ಹಾಗೂ ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ಪುರುಷರಷ್ಟು ವಿಸ್ತಾರ ವೈವಿಧ್ಯತೆ ಪಡೆದಿದೆ. ಸಾಮಾಜಿಕ ಸಂವೇದನೆಯಿಂದ ಮಹಿಳಾ ಅಸ್ಮಿತೆಯ ಮೂಲಕ ನೂತನ ಪ್ರಾಪಂಚಿಕವಾದ ಸ್ತ್ರೀ ಜಗತ್ತಿನ ಸೃಜನಶೀಲತೆ ಅನಾವರಣ ಸತ್ವಪೂರ್ಣವಾಗಿದೆ ಎನ್ನುವುದಕ್ಕೆ ತ್ರಿವೇಣಿ, ಅನುಪಮಾ, ಎಂ.ಕೆ.ಇಂದಿರಾ, ಟಿ.ಸುನಂದಮ್ಮ,

ನೇಮಿಚಂದ್ರ, ಎನ್.ಗಾಯಿತ್ರಿ ಇನ್ನೂ ಅನೇಕ ಮಹಿಳೆಯರು ಕನ್ನಡ ಸಾಹಿತ್ಯ ಬರವಣಿಗೆಯಲ್ಲಿ ತೊಡಗಿದ್ದಾರೆ. ಆದರೂ ಮಹಿಳಾ ಸಾಹಿತ್ಯ ಅಲಕ್ಷಿತ ಕ್ಷೇತ್ರವಾಗಿ ಕಂಡುಬರುತ್ತದೆ.

ಏಕೆಂದರೆ ಎಚ್.ಎಸ್.ಶ್ರೀಮತಿಯವರ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಕೃತಿಯ ಮುನ್ನುಡಿಯಲ್ಲಿ "ದೊಡ್ಡ ಪ್ರಮಾಣದಲ್ಲಿ ಶ್ರೇಷ್ಠ ಸಾಹಿತ್ಯವನ್ನು ರಚಿಸಿದ ಕವಿಗಳನ್ನಷ್ಟೇ ಪರಿಗಣಿಸಿದರೆಂದೇನಿಲ್ಲ ಪ್ರಮಾಣ ಶ್ರೇಷ್ಠತೆಗಳನ್ನಷ್ಟೇ ಮುಖ್ಯವಾಗಿಸಿದೆಯೋ? ಕೊನೆಗೆ ಕೇವಲ ಹೆಸರಷ್ಟೇ ದೊರೆಯುತ್ತದೆ ಎಂದಾಗಲೂ ಆ ಕಾವ್ಯಗಳನ್ನು ಕವಿಗಳನ್ನು ಗುರುತಿಸಿಕೊಂಡರು. ದೊರೆತ ಹಸ್ತಪ್ರತಿಗಳನ್ನು ಅಪಾರ ಶ್ರಮವಹಿಸಿ ಶಾಸ್ತ್ರೀಯವಾಗಿ ಸಂಪಾದಿಸಿ ವಿಸ್ತೃತ ಮುನ್ನುಡಿಗಳನ್ನು ಬರೆದು ಪ್ರಕಟಿಸುವ ಆಸಕ್ತಿಯನ್ನು ವಿದ್ವಾಂಸರು ವಹಿಸಿದ್ದರು"[೨] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಚರಿತ್ರೆಯಂತಹ ಬರವಣಿಗೆಯ ಕ್ರಮದಲ್ಲಿ ಮಹಿಳೆಯರನ್ನು ಅಲಕ್ಷಿಸಿದ್ದಾರೆ ಎನ್ನುವುದು ಒಂದು ಕಡೆಯಾದರೆ, ಇನ್ನೊಂದು ಕಡೆ ಅಕ್ಕಮಹಾದೇವಿ, ಸಂಚಿ ಹೊನ್ನಮ್ಮ, ತಿರುಮಲಾಂಬಾ, ಅನುಪಮಾ ನಿರಂಜನ ಇನ್ನಿತರರ ಬಗ್ಗೆ ಚರ್ಚೆ ಮಾಡಿದ್ದಾರೆ. ಸಾಹಿತ್ಯ ಕೃತಿಗಳಲ್ಲಿ ಪುರಾಣವಾಗಿ ಸೀತೆ, ದ್ರೌಪದಿಯಂತವರನ್ನು ನಾಯಕಿಯರ ಸ್ಥಾನವನ್ನು ಹೊಂದಿದವರಾಗಿದ್ದಾರೆ. ೧೨ನೇ ಶತಮಾನದ ಅಕ್ಕಮಹಾದೇವಿ ಸಾಹಿತ್ಯದಲ್ಲಿ ಬಹುಚರ್ಚಿತವಾಗುತ್ತಾಳೆ. ಆದರೆ ಸೂಳೆ ಸಂಕವ್ವೆ, ಕಾಳವ್ವೆ, ಆಯ್ದಕ್ಕಿ ಲಕ್ಕಮ್ಮ, ಹರಪನಹಳ್ಳಿ ಭೀಮವ್ವ, ಹೆಳವನಕಟ್ಟೆ ಗಿರಿಯಮ್ಮ ಇನ್ನಿತರ ವಚನಕಾರ್ತಿಯರ ಬಗ್ಗೆ ಚರ್ಚೆ ಮಾಡಿರುವುದು ಲೋಪವಾಗಿದೆ. ಪುರೋಹಿತಶಾಹಿ ವರ್ಗಗಳ ಕೈವಾಡವಿರಬಹುದು. ಆದರೆ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಸೃಷ್ಟಿಯಾಗುತ್ತಿರುವ ಬದಲಾಗುತ್ತಿರುವ ಪ್ರಪಂಚದ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯವು ಒಂದಾಗಿದೆ. ಹಾಗಾಗಿ ಸ್ವತಂತ್ರ್ಯ ಸಾಹಿತ್ಯ ಚರಿತ್ರೆಯನ್ನು ಬಯಸಿದೆ. ಅದಕ್ಕೆ ಉತ್ತರವಾಗಿ ಎಚ್.ಎಸ್.ಶ್ರೀಮತಿಯವರು ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯ ಸಂಪಾದನೆಯ ಕೃತಿಯಿಂದ ನೀಗಿಸಿದ್ದಾರೆ ಎಂದು ಹೇಳಬಹುದು.

"ಜನಮನದಿಂದ ಮರೆಯಾಗಿ ಹೋಗಬಹುದಾಗಿದ್ದ ಸುಮಾರು ಸಂಖ್ಯೆಯ ಪುರುಷ ಸಾಹಿತಿಗಳೂ, ಅವರ ಕೃತಿಗಳು ಆಧುನಿಕವಾದ ಮುದ್ರಣ ಪ್ರಕಾಶನಗಳ ನೆರವಿನಿಂದ ಬೆಳಕಿಗೆ ಬರುವಂತಾಯಿತು. ಕಳೆದುಹೋಗಬಹುದಾಗಿದ್ದ ಎಳೆಗಳನ್ನು ಪರಿಶ್ರಮ ವಹಿಸಿ ಕೂಡಿಸಿಕೊಂಡು ಸಾಹಿತ್ಯ ಚರಿತ್ರೆಗಳನ್ನು ಬರೆಲಾಯಿತು. ನಮಗೆ ಉಪಯುಕ್ತ ಮೌಲಿಕ ಸಾಹಿತ್ಯ ದಕ್ಕಿತು. ಆದರೆ ಇದೇ ಪರಿಶ್ರಮವನ್ನು ಮಹಿಳಾ ಸಾಹಿತ್ಯವನ್ನು ಸಂಕಲಿಸುವಲ್ಲಿ ಈ ವಿದ್ವಾಂಸರು ವಹಿಸಲಿಲ್ಲ. ಲಭ್ಯವಿಲ್ಲ ಎಂದು ಸುಮ್ಮನಾಗಿಬಿಟ್ಟರು. ಆ ಚಾರಿತ್ರಿಕ ಪರಿಸರಗಳಲ್ಲಿ ಮಹಿಳೆಯರಿಗೆ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅವಕಾಶಗಳು ಸಿಕ್ಕಿದವೇ ಸಿಕ್ಕಷ್ಟು ಅವಕಾಶಗಳಲ್ಲಿ ಎಷ್ಟು ಮಹಿಳೆಯರು ಕೃತಿಗಳನ್ನು ರಚಿಸಿದರು"[೩] ಎಂದು ಎಚ್.ಎಸ್.ಶ್ರೀಮತಿಯವರು ಮುನ್ನುಡಿಯಲ್ಲೂ ಹೇಳುತ್ತಾರೆ. ಈ ಮೂಲಕ ಕನ್ನಡ ಸಾಹಿತ್ಯದ ಚರಿತ್ರೆಯ ಬರವಣಿಗೆಯಲ್ಲಿ ಮಹಿಳಾ ಸಾಹಿತ್ಯ ವಚನಕಾರ್ತಿಯರ ಹಾಗೂ(ಕೀರ್ತನಕಾರ್ತಿಯರು ಇದ್ದಿರಬಹುದು) ನವೋದಯ ಸಂದರ್ಭದಲ್ಲಿ

ಅನೇಕ ಮಹತ್ವ ಸಂಗತಿಯ ಮಹಿಳಾ ಕೃತಿಗಳನ್ನು ಹೊಂದಿದ್ದರೂ ಅಲಕ್ಷಿಸಿವೆ. ಏಕೆಂದರೆ ಮಹಿಳಾ ಸಾಹಿತ್ಯದ ಗುಣಲಕ್ಷಣಗಳು ಏನು? ಅದರ ಚಿಂತನೆ ಸ್ವರೂಪ ಯಾವುದಾಗಿತ್ತು ಎಂಬುದನ್ನು ಪುರುಷ ಸಾಹಿತ್ಯವು ಮಹಿಳೆಯರು ಅಪರೂಪಕ್ಕೆ ನಡೆಸಿರಬಹುದಾದ ಪ್ರಯತ್ನಗಳಾಗಿವೆ. ಹಾಗೆಯೇ ಮಹಿಳಾ ಸಾಹಿತ್ಯ ಗುಣದ ದೃಷ್ಟಿಯಿಂದ ತೀರಾ ಕಳಪೆಯವು ಎಂಬಂತಹ ಅಭಿಪ್ರಾಯಗಳು ಬಂದಿರಬಹುದು. ಅದು ಮಹಿಳೆಯರ ಕೇಶಮುಂಡನದಂತಹ ಸಮಸ್ಯೆಗಳು, ಸತಿಪದ್ಧತಿ, ಬಾಲ್ಯವಿವಾಹ, ವರದಕ್ಷಿಣೆ ಕಿರುಕುಳ ಇಂತಹ ಅನೇಕ ಸಂಗತಿಗಳಿಂದ ಮಹಿಳೆರು ತೀವ್ರತರವಾಗಿ ಸಮಾಜದಲ್ಲಿ ತಮ್ಮ ಅಭಿವ್ಯಕ್ತಿಯ ಧ್ವನಿಯನ್ನು ಎತ್ತಿದ್ದಾರೆ. ಹೀಗಾಗಿ ಮಹಿಳಾ ಸಾಹಿತ್ಯ ಗುಣದ ದೃಷ್ಟಿಯಿಂದ ತೀರಾ ಕಳಪೆಯವು ಎಂಬಂತಹ ಅಭಿಪ್ರಾಯಗಳು ಕುಟುಂಬಶಾಹಿ, ಪುರೋಹಿತಶಾಹಿ, ಸಾಮ್ರಾಜ್ಯಶಾಹಿಗಳ ಪುರುಷರಿಂದ ವ್ಯಕ್ತಗೊಂಡಿವೆ. ಅದಕ್ಕಾಗಿ ಮಹಿಳಾ ಸಾಹಿತ್ಯ ಚರಿತ್ರೆಯಾಗಿ ದಾಖಲೆಗೊಂಡಿಲ್ಲ. ಆದರೆ ಮಹಿಳಾ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ಎಚ್.ಎಸ್.ಶ್ರೀಮತಿಯವರು ಹೇಳಿರುವ ತಮ್ಮ ಮುನ್ನುಡಿಯಲ್ಲಿ ಪ್ರಮುಖವೆನಿಸುತ್ತದೆ. ಸಾಮಾಜಿಕವಾಗಿ ಮಹಿಳಾ ಸಾಹಿತ್ಯ ಸಂದರ್ಭಗಳು, ಮಹಿಳಾ ಅಧ್ಯಯನದ ಕಾಳಜಿಯ ವಿದ್ವಾಂಸರು ಮಹಿಳಾ ಸಾಹಿತ್ಯ ಚರಿತ್ರೆ ಕಟ್ಟುವುದಕ್ಕೆ ತೊಡಗಿದ್ದಾರೆ. ಈವರೆಗಿನ ರೂಢಿಗತ ಸಾಹಿತ್ಯ ಚರಿತ್ರೆಗಳ ಪ್ರಮಾಣ ಏನು? ಅವುಗಳ ಉದ್ದೇಶ ಏನು? ಓದುಗರು ಅರಿತುಕೊಳ್ಳಬೇಕು. ಹಾಗೆಯೇ ನಮ್ಮ ಸಾಹಿತ್ಯ ಚರಿತ್ರೆಗಳು ನಮ್ಮ ಪೂರ್ವಿಕ ಲೇಖಕಿಯರನ್ನು ಮರೆತಿರುವುದು ಮೇಲ್ನೋಟಕ್ಕೆ ಕಾಣುತ್ತದೆ. ಹಾಗಾಗಿ ಬಿ.ಎನ್.ಸುಮಿತ್ರಾಬಾಯಿ ಅವರು ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಕಟ್ಟುವುದನ್ನು ಬೇರೆ ನೆಲೆಯಲ್ಲಿ ಗುರುತಿಸುತ್ತಾರೆ. ೭೦-೮೦ರ ದಶಕದಲ್ಲಿ ಮಹಿಳಾ ಚಳುವಳಿ ಮತ್ತು ಸ್ತ್ರೀವಾದಿ ತಾತ್ವಿಕತೆಯನ್ನು ಕುರಿತು ಚಿಂತನೆಗಳು ವಿಮರ್ಶೆ ಸಂಶೋಧನೆಗಳಲ್ಲಿ ವಿಸ್ತರಿಸಿಕೊಳ್ಳುತ್ತಾ ಪರಿಣಾಮಗಳಾಗಿ ಗುರುತಿಸಬೇಕಾಗಿದೆ.

* "ಸುಶಿಕ್ಷಿತ ಮಧ್ಯಮವರ್ಗದ ಮಹಿಳೆಯರಲ್ಲಿ ಹೆಚ್ಚಿರುವ ಸ್ತ್ರೀವಾದಿ ಪ್ರಜ್ಞೆ, ಜಾಗೃತಿ ಮತ್ತು ಸ್ವಾಭಿಮಾನಿ ವ್ಯಕ್ತಿತ್ವದ ಅನನ್ಯತೆಗಾಗಿ ಹುಡುಕಾಟ. ವಸಾಹತೋತ್ತರ ಚಿಂತನೆಗಳ ಪ್ರಭಾವದಿಂದ ಪಾಶ್ಚಿಮಾತ್ಯ ಸ್ತ್ರೀವಾದವನ್ನು ಚಿಕಿತ್ಸಾತ್ಮಕವಾಗಿ ನೋಡುವ ಸ್ವಸಂಸ್ಕೃತಿ ಬೋಧನೆಗಾಗಿ ಹೆಚ್ಚುತ್ತಿರುವ ಕಾಳಜಿ"[೪] ಎಂದು ಬಿ.ಎನ್.ಸುಮಿತ್ರಾಬಾಯಿಯವರು ಸ್ತ್ರೀವಾದಿ ಕೃತಿಯ ಮುನ್ನುಡಿಯಲ್ಲಿ ಮಹಿಳೆಯರ ಅಸ್ಮಿತೆಗಾಗಿ ಮಹಿಳೆಯರ ಚರಿತ್ರೆಯನ್ನು ಕಟ್ಟುವುದಕ್ಕೆ ತಿಳಿಸಿದ್ದಾರೆ.

ಮಹಿಳೆಯರು ಮೂಲದಿಂದಲೂ ಪಿತೃಪ್ರಧಾನವಾದ ವ್ಯವಸ್ಥೆಯಲ್ಲಿ ಬದುಕಿದವರು ಮತ್ತು ದಮನಕ್ಕೆ ಒಳಗಾದವರು. ಈ ಹಿನ್ನೆಲೆಯಿಂದ ಪಾಶ್ಚಿಮಾತ್ಯ ಚಿಂತನೆಗಳು ಕನ್ನಡದಲ್ಲಿಯೂ ಇವೆ. ಪ್ರಸ್ತುತ ಮಹಿಳಾ ಲೇಖಕಿಯರ ಮಹಿಳಾ ಅನನ್ಯತೆಯ ಸವಾಲುಗಳನ್ನು ಮೆಟ್ಟಿ ನಿಲ್ಲುವಂತಹ ಶಕ್ತಿ ಒಳಗೊಂಡಿದೆ. ಇದಕ್ಕೆ ಪ್ರೇರಣೆ ಪಾಶ್ಚಿಮಾತ್ಯ ಸಿದ್ಧಾಂತಗಳು, ಸ್ಥಳೀಯ ಸಿದ್ಧಾಂತಗಳು ಒಟ್ಟುಗೂಡಿವೆ. ಆದರೆ ಬಿ.ಎನ್.ಸುಮಿತ್ರಾಬಾಯಿಯವರು ಪಾಶ್ಚಿಮಾತ್ಯ ಸಿದ್ಧಾಂತಗಳು ಬೇಡ ಎಂಬ ನಿಲುವನ್ನು

ವ್ಯಕ್ತಪಡಿಸಿದ್ದಾರೆ. ನಮ್ಮ ಸ್ಥಳಿಯ ಸಾಹಿತ್ಯಕ್ಷೇತ್ರಗಳ ಮೂಲಕ ಸ್ತ್ರೀವಾದಿ ಚಿಂತನೆಗಳು ಚರಿತ್ರೆಗಳು ಒಡಮೂಡಬೇಕಾಗಿದೆ. ಅವರು ಹೇಳುವ ಹಾಗೆ "ನಮ್ಮ ಸಾಹಿತ್ಯ ಸಾಂಸ್ಕೃತಿಕ ಪರಿಸರದಲ್ಲಿ ವಚನಯುಗ, ಜಾನಪದ ಸಾಮಗ್ರಿ, ಕೆಳಸ್ತರದ ಜನಜೀವನದ ಅನುಭವಗಳು, ಮಾತೃಸಂಸ್ಕೃತಿ ಕೇಂದ್ರಿತ, ತಾತ್ವಿಕತೆ ಮುಂತಾದವುಗಳಿಂದ ಸ್ತ್ರೀವಾದಕ್ಕೆ ಅವಶ್ಯಕ ಬಲವನ್ನು ಗಳಿಸಿಕೊಳ್ಳಲು ಸಾಧ್ಯವಿಲ್ಲವೇ? ಆಗಿದ್ದಾಗ ನಮ್ಮೆಲ್ಲಾ ಸ್ತ್ರೀವಾದಿ ಚರ್ಚೆಗಳನ್ನು ಗಳಿಸಿಕೊಳ್ಳಲು ಸಾಧ್ಯವಿಲ್ಲವೇ? ಹಾಗಿದ್ದಾಗ ನಮ್ಮೆಲ್ಲ ಸ್ತ್ರೀವಾದಿ ಚರ್ಚೆಗಳನ್ನು ಏಕೆ ಸಿಮೋನ್ ದಿ ಬೋವಾ, ಇಲ್ಲವೇ ಕೇಟ್ ಮಿಲ್ಲೆಟ್‌ರಿಂದ ಆರಂಭಿಸಬೇಕೆ? ಎಂಬಂತಹ ಪ್ರಶ್ನೆಗಳು ಇಂದು ಸ್ತ್ರೀವಾದಕ್ಕೆ ಈ ನಾಡಿನಲ್ಲಿ ಎದುರಾಗುತ್ತವೆ"[೫] ಎಂದಿದ್ದಾರೆ. ಈ ನೆಲೆಯಿಂದ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಹೊಸದಾಗಿ ಚರಿತ್ರೆಯನ್ನು ರೂಪಿಸಿಕೊಳ್ಳುವುದಕ್ಕೆ, ಚರಿತ್ರೆಯನ್ನು ಕಟ್ಟಿಕೊಳ್ಳುವುದಕ್ಕೆ ಈ ಚಿಂತನೆಯು ಉಪಯುಕ್ತವಾದೀತು.

ಇನ್ನೊಂದು ಕಡೆ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ನಿರ್ಮಿಸಿಕೊಳ್ಳುವುದಕ್ಕೆ ಕೇಟ್ ಮಿಲ್ಲೆಟ್, ಸಿಮೋನ್ ದಿ ಬೋವಾರಂತಹ ಚಿಂತನೆಯಿಂದ ನಮ್ಮ ಕನ್ನಡ ಮಹಿಳಾ ಚಿಂತನೆ, ಮಹಿಳಾ ಚರಿತ್ರೆ ನಿರ್ಮಿಸಿಕೊಳ್ಳಬಹುದು. ಆದರೆ ನಮ್ಮ ಸ್ಥಳೀಯ ಮಹಿಳಾ ಸಂವೇದನೆಗಳಿಂದ ಮಹಿಳಾ ಚರಿತ್ರೆ ನಿರ್ಮಿಸಿಕೊಳ್ಳುವುದಕ್ಕೆ ಬಿ.ಎನ್.ಸುಮಿತ್ರಾಬಾಯಿ, ಎಚ್.ಎಸ್.ಶ್ರೀಮತಿ ಇನ್ನಿತರರು ವ್ಯಕ್ತಪಡಿಸಿದ್ದಾರೆ. ಈಗಾಗಲೇ ಎಚ್.ಎಸ್.ಶ್ರೀಮತಿಯವರಿಂದ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಸಂಪಾದಿತ ಲೇಖನವಾಗಿ ನಿರ್ಮಾಣಗೊಂಡಿದೆ. ಆದರೆ ಈ ನಮ್ಮ ಸಾಹಿತ್ಯ ಚರಿತ್ರೆಗಳು ನಮ್ಮ ಪೂರ್ವಿಕ ಲೇಖಕಿಯರನ್ನು ಮರೆತು ನಿರ್ಲಕ್ಷಿಸಿದ್ದರಿಂದ ಹೇಗೆ ವಿವರಿಸಿಕೊಳ್ಳಬಹುದು. ನಮ್ಮ ಹಿಂದಿನ ಶತಮಾನದಲ್ಲಿ ನಮ್ಮ ಸಮಕಾಲೀನ ಆಧುನಿಕತೆಯಲ್ಲಿ ಬಾಳಿ ಬದುಕಿದ ಲೇಖಕಿಯರು ಹಾಗೂ ಅವರ ಸಾಹಿತ್ಯ ಕೃತಿಗಳು ಅದರಲ್ಲೇ ಮುದ್ರಣಗೊಂಡು ಬಂದವು ಕೂಡ. ಆದರೆ ಕಣ್ಣಿಗೆ ಬೀಳಲಿಲ್ಲವೇ? ಎಂಬುದನ್ನು ವಿವರಿಸಿಕೊಳ್ಳಲೂ ತೀರಾ ಕಷ್ಟದ ಮಾತಾಗಿದೆ. ಏಕೆಂದರೆ ದಮನಿತ ಸಮುದಾಯಗಳು ತಮ್ಮ ಅಸ್ತಿತ್ವದ ನೆಲೆಗಳನ್ನು ಹುಡುಕುತ್ತಾ ಮೊದಲು ಅಗತ್ಯವಾಗಿ ತಮ್ಮ ಚರಿತ್ರೆಗಳನ್ನು ತಾವೇ ಪುನಾರಚಿಸಿಕೊಳ್ಳಬೇಕಾಗಿದೆ. ಅಂತಹವರಲ್ಲಿ ಎಚ್.ಎಸ್.ಶ್ರೀಮತಿ, ಬಿ.ಎನ್.ಸುಮಿತ್ರಾಬಾಯಿ ಮತ್ತು ಇತರ ಲೇಖಕಿಯರು ಹಾಗೂ ಚರಿತ್ರೆಕಾರರು ಗುರುತಿಸಿಕೊಳ್ಳಬೇಕಾಗಿದೆ. ಇದರಲ್ಲಿ ಪ್ರಧಾನವಾಗಿ ಮಹಿಳಾ ಸಾಹಿತ್ಯ ಕೃತಿಗಳ ಕುರಿತಂತೆ ಚರಿತ್ರೆಗಳು ದಮನಿತ ಸಮುದಾಯಗಳನ್ನು ಪಕ್ಕಕ್ಕೆ ಸರಿಸಿಡುವಲ್ಲಿ ಬಳಸುವ ತಂತ್ರಗಳನ್ನು ಮೊದಲಿಗೆ ಬಿಡಬೇಕು ಹಾಗೂ ಇಂತಹವುಗಳನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಸೃಜನಶೀಲತೆಗೆ ಸಂಬಂಧಿಸಿದ ಹಲವು ಸಾಹಿತ್ಯ ಚರ್ಚೆಗಳು, ವಿಶ್ಲೇಷಣೆಗಳು ಸಾಹಿತ್ಯ ವಲಯದಲ್ಲಿ ಇಂತಹ ಪ್ರತ್ಯೇಕವಾದ ನಿಲುವಿನ ರಾಜಕಾರಣವನ್ನು ವಿವರಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯದ ಚರಿತ್ರೆಯ ಅಸ್ತಿತ್ವದ ಶೋಧಕ್ಕಾಗಿ ಪ್ರಧಾನವಾದ ಚಿಂತನೆಗೆ ಒಳಪಡುವ ಕವಿ, ಕೃತಿ, ಓದುಗ ನೆಲೆಯ ಸಾಹಿತ್ಯ ಚರ್ಚೆಗಳು ಚರಿತ್ರೆಗಳಾಗಿ ನಿರ್ಮಿಸಿಕೊಳ್ಳಬಹುದಾಗಿದೆ.

## ಮುನ್ನುಡಿ ಸಾಹಿತ್ಯದಲ್ಲಿ ಮಹಿಳಾ ಸೃಜನಶೀಲತೆ ಮತ್ತು ಸಾಮಾಜಿಕತೆ

ಮುನ್ನುಡಿ ಸಾಹಿತ್ಯದಲ್ಲಿ ಮಹಿಳೆಯರನ್ನು ಕುರಿತಂತೆ ಹಲವು ಆಯಾಮಗಳ ಮೂಲಕ ಗುರುತಿಸಬಹುದು. ಜೊತೆಗೆ ಪುರುಷರು ಮಹಿಳಾ ಕೃತಿಗಳಿಗೆ ಬರೆದ ಮುನ್ನುಡಿಗಳಲ್ಲಿ ಹೇಗೆ ವ್ಯಕ್ತಪಡಿಸಿದ್ದಾರೆ ಎಂಬುದನ್ನು ಚರ್ಚೆಗೆ ಒಳಪಡಿಸಿದಾಗ ಅನೇಕ ಸಾಂಸ್ಕೃತಿಕ ಆಯಾಮಗಳು ದೊರಕುತ್ತವೆ. ಮಹಿಳಾ ಬದುಕಿನ ಸಾಮಾಜಿಕ ಸ್ವರೂಪವನ್ನು ಒಂದಿಷ್ಟು ಸೂಕ್ಷ್ಮತೆಗಳನ್ನು ವಿವರಿಸಿಕೊಂಡಾಗ ಮಹಿಳಾ ಬದುಕು ಎಂಬುದಕ್ಕೆ ಕಾನೂನಾತ್ಮಕ ಅಸ್ತಿತ್ವ ಕಂಡುಬರುತ್ತದೆ. ಆದರೆ ಸಾಮಾಜಿಕ ಮತ್ತು ಕುಟುಂಬವಾಗಿ ಅವಳ ಬದುಕಿನ ಅಸ್ತಿತ್ವ ಬೇರೆ ಸ್ವರೂಪವಾಗಿ ಕಂಡುಬರುತ್ತದೆ. ಅದು ಹೇಗೆಂದರೆ ಸಾಮಾಜಿಕ ಸ್ವತ್ತಾಗಿ, ವಸ್ತುವಾಗಿ ಬಿಡುತ್ತಾಳೆಯೋ ಏನೋ ಅನಿಸಿದೆ. ಕೌಟುಂಬಿಕ ಕಲಹಗಳು, ವರದಕ್ಷಿಣೆ ಕಿರುಕುಳ, ಅತ್ಯಾಚಾರ, ಸುಲಿಗೆ, ಮಹಿಳೆಯರನ್ನು ಬೇರೆ ಕಡೆಗೆ ಸಾಗಿಸುವುದು ಇತ್ಯಾದಿ ಪ್ರಸಂಗಗಳು ಮಾಧ್ಯಮಗಳಲ್ಲಿ ಕಣ್ಣಿಗೆ ಕಾಣುತ್ತವೆ. ಎಚ್.ಎಸ್.ಶ್ರೀಮತಿಯವರು ಕನ್ನಡದ ಮಹಿಳಾ ಸಾಹಿತ್ಯ ಚರಿತ್ರೆ ಕೃತಿಯ ಮುನ್ನುಡಿಯಲ್ಲಿ "ಮಹಿಳೆಯ ಬದುಕು ನಿಯಂತ್ರಿಸುವ ಮುಖ್ಯ ಸಾಮಾಜಿಕ ತಂತು ಈ ಗೃಹಿಣಿತ್ವ ಮೂಲದ್ದೇ ಆಗಿದೆ. ಈ ಗೃಹಣಿತ್ವ ಎನ್ನುವುದು ಮಹಿಳೆಗೆ ಅವಳ ಸಾಮಾಜಿಕ ಬಾಧ್ಯತೆಗಳನ್ನು ಸದಾಕಾಲವು ನೆನಪಿಸುತ್ತಲೇ ಕಾಡುವ ಭೂತ. ಈ ಭೂತದಿಂದ ಅವಳಿಗೆ ಬಿಡುಗಡೆಯೇ ಇಲ್ಲ. ಬದಲಿಗೆ ಇದೇ ನನ್ನನ್ನು ರಕ್ಷಿಸುವ ದೈವ ಎಂಬ ಮಾಯೆಗೆ ಹೆಣ್ಣು ಒಳಗಾಗುವುದೇ ಇಂದಿನ ಸಾಮಾಜಿಕ ವಾಸ್ತವ"[೯] ಎಂದು ಹೇಳುತ್ತಾರೆ. ಮಹಿಳೆಯರಲ್ಲಿ ಬಲವಾದ ನಂಬಿಕೆಯನ್ನು ಈ ಮೇಲಿನ ಹೇಳಿಕೆಯಿಂದ ಮೂಡಿಸಲಾಗಿದೆ. ಇದಕ್ಕೆ ಉದಾಹರಣೆ ಮುಸ್ಲಿಂ ಕುಟುಂಬಗಳು, ಬ್ರಾಹ್ಮಣ ಕುಟುಂಬಗಳು ಪುರುಷಪ್ರಧಾನವಾದ ಕುಟುಂಬಗಳಾಗಿವೆ.

ಕೆರೂರು ವಾಸುದೇವಾಚಾರ್ಯರ ಇಂದಿರಾ ಕಾದಂಬರಿಯ ಮುನ್ನುಡಿಯಲ್ಲಿ "ಕೆಳ ಸ್ತ್ರೀಯರು ಸ್ವಾತಂತ್ರ್ಯ ಸುಧಾರಣೆ ಎಂಬ ಹೆಸರಿನಲ್ಲಿ ಅತಿಗೆ ತೊಡಗುವ ಭಯವಿತ್ತು. ಹಿಂದೂ ಧರ್ಮವನ್ನು ತೆಗಳುವುದು ಸಾಮಾನ್ಯವಾಗಿತ್ತು. ಕೆಳಸ್ತ್ರೀಯರು ವಿಧವಾವಿವಾಹವನ್ನು ಪ್ರಚಾರ ಮಾಡುತ್ತಾ ಎರಡು ಮೂರು ಮದುವೆಗಳನ್ನು ಮಾಡಿಕೊಂಡಿದ್ದರು. ಇಂತಹ ಸಮಯದಲ್ಲಿ ಸಮಾಜದಲ್ಲಿಯ ಅನೇಕ ದೋಷಗಳನ್ನು ಕಿತ್ತು ಹಾಕಹೋಗಿ ನಮ್ಮ ಸಂಸ್ಕೃತಿಯ ಉತ್ತಮ ಗುಣಗಳನ್ನು ಮರೆಯುತ್ತಾ ಬಂದಿದ್ದನ್ನು ಕೆಲ ಮಹನೀಯರು ಕಂಡು ಮರುಗಿ ಸಮಾಜೋದ್ಧಾರಕ್ಕಾಗಿ ಟೊಂಕ ಕಟ್ಟಿ ನಿಂತಿದ್ದರು. ಈ ಪರಿಸ್ಥಿತಿಗೆ ನಮ್ಮ ಸಮಾಜವು ಬಂದ ಬಳಿಕ ನಮ್ಮ ಕಥಾನಕವು ಪ್ರಾರಂಭವಾಗುತ್ತದೆ"[೭] ಎಂದು ಹೇಳಲಾಗಿದೆ. ಮಹಿಳಾ ಸೃಜನಶೀಲತೆ ತಾವು ಅನುಭವಿಸಿದ ನೋವುಗಳನ್ನು ಕಂಡು ಇತರ ನೋವುಗಳಿಗೋಸ್ಕರ ಹೋರಾಟ ಮಾಡಿದ್ದಾರೆ. 'ಇಂದಿರಾ' ಕಾದಂಬರಿಯಲ್ಲಿ ಸಂಪ್ರದಾಯವಾದ ನಿಲುವಿದೆ. ಆ ನಿಲುವು ಪುರುಷಪ್ರಾಬಲ್ಯ ಹೊಂದಿದೆ. ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ ಎನ್ನುವುದಕ್ಕೆ ಕಾರಣವಾಗಿವೆ. ಇದೇ ಸಂದರ್ಭದಲ್ಲಿ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಗಳು, ಚಳುವಳಿಗಳು ನಡೆದಿವೆ. ಅಂದು ಅದರಲ್ಲಿ ಮಹಿಳೆಯರು ಸೇರಿದ್ದು

ಅನಿವಾರ್ಯತೆ ಇತ್ತು. ಹಾಗಾಗಿ ಮಹಿಳೆಯ ಸ್ವಾತಂತ್ರ್ಯ ಹೋರಾಟದ ಜೊತೆಗೆ ತಮ್ಮ ಸಾಮಾಜಿಕವಾಗಿ ಮಹಿಳೆಯ ಅಸ್ಮಿತೆಯನ್ನು ಸಮಾಜಕ್ಕೆ ತೋರಿಸಿದರು.

ಸ್ತ್ರೀಯರ ಮಾನವತಾವಾದದ ಹಿನ್ನೆಲೆಯ ಚಿಂತನೆ ಮಾಡಿದವರು ವಿಜಯಾ ದಬ್ಬೆಯವರು. ಅವರ 'ಸ್ತ್ರೀವಾದ ದಕ್ಷಿಣ ಏಷ್ಯಾದಲ್ಲಿ ಅದರ ಪ್ರಸಕ್ತತೆ' ಮುನ್ನುಡಿ ಭಾಗದಲ್ಲಿ "ಸ್ತ್ರೀವಾದ ಮಾನವತಾವಾದದ ಒಂದು ಭಾಗವೇ ಆಗಿದೆ. ಮತ್ತೊಬ್ಬ ವ್ಯಕ್ತಿಯ ಘನತೆ, ಅಂತಃಸತ್ವ, ಸ್ವತಂತ್ರ್ಯವನ್ನು ತಕ್ಕ ವಿಶ್ವಾಸ, ಗೌರವದಿಂದ ಮಾನ್ಯ ಮಾಡಬೇಕೆಂಬುದು ಈ ವಾದದ ಒಳತಿರುಳಾಗಿದೆ"[೯೮] ಈ ಹಿನ್ನೆಲೆಯಿಂದ ಮಹಿಳೆಯರನ್ನು ಮಾನವೀಯ ನೆಲೆಯಿಂದ ಮಾನವತಾವಾದದ ಗ್ರಹಿಕೆಯಲ್ಲಿ ಕಾಣಬೇಕಾಗಿದೆ. ಅದು ಸಂಪ್ರದಾಯ ನಿಷ್ಠೆಯಲ್ಲಿ ಒಳಗೊಂಡಿರಬೇಕಾಗಿದೆ. ಉದಾರವಾದ ಅನುಕಂಪ, ಮನುಷ್ಯ ಸ್ವಭಾವದ ಬಗೆಗಿನ ಸಂಬಂಧ ಹೀಗೆ ಪ್ರಪಂಚವಿದೆ ಎಂಬುದನ್ನು ಪೂರ್ವಗ್ರಹವಿಲ್ಲದೇ ನೋಡುವ ತಿಳಿ ಮನಸ್ಸು ಬರಬೇಕಾಗಿದೆ. ಕೆಲವು ಹಿರಿಯ ಸಾಹಿತಿಗಳು ಸ್ತ್ರೀಯರ ಕುರಿತು ಮಹಿಳಾ ಚಿಂತನೆ ವ್ಯಾಪ್ತಿ ದೊಡ್ಡದು ಎಂಬ ಭಾವನೆ ವ್ಯಕ್ತಪಡಿಸಿದ್ದಾರೆ. ಜಿ.ಎಸ್.ಶಿವರುದ್ರಪ್ಪನವರು 'ದಶವಾರ್ಷಿಕ ಕವಿತೆಗಳು' ಕೃತಿಯ ಮುನ್ನುಡಿಯಲ್ಲಿ "ಈ ಬಹುಸಂಖ್ಯೆಯ ಮಹಿಳೆಯ ಕವಿತೆಗಳಲ್ಲಿ ಬಹುಮಂದಿ ಬಂಡಾಯಕ್ಕೆ ಸಮೀಪವಾದ ಮನೋಧರ್ಮವನ್ನು ಪ್ರಕಟಿಸಿದ್ದಾರೆ. ಬಹುಕಾಲದಿಂದ ತಮ್ಮನ್ನು ನಿಯಂತ್ರಿಸುತ್ತದ್ದ ನಂಬಿಕೆ, ವಿಚಾರ, ಸಂಪ್ರದಾಯ ಹಾಗೂ ಸಾಮಾಜಿಕ ವ್ಯವಸ್ಥೆಗಳನ್ನು ಪ್ರತಿಭಟಿಸುವ, ಪ್ರಶ್ನಿಸುವ ದಿಟ್ಟತನ ಈ ಹಲವು ಕವಯಿತ್ರಿಯರ ಅಭಿವ್ಯಕ್ತಿಯಲ್ಲಿ ಕಾಣಿಸಿಕೊಂಡಿದೆ. ಬಹುಶಃ ಮುಂದಿನ ಸಾಹಿತ್ಯದ ದಿಕ್ಕನ್ನು ನಿರ್ಧರಿಸಿರುವುದರಲ್ಲಿ ಮಹಿಳಾ ಬರಹಗಾರ್ತಿಯರ ಪಾತ್ರ ಒಂದು ಮುಖ್ಯ ಸತ್ವವಾಗಬಹುದಾದ ಸಾಧ್ಯತೆ ಇದೆ"[೯೯] ಎಂದು ಹೇಳುತ್ತಾರೆ. ಜಿ.ಎಸ್.ಎಸ್.ರ ಆಶಯ ಮಹಿಳಾ ಸೃಜನಶೀಲತೆ ಅವರ ಸಾಮಾಜಿಕ ಅನನ್ಯತೆಯನ್ನು ಕವಯಿತ್ರಿಯರ ಒಗ್ಗಟ್ಟಿನ ಸಂಕೇತವಾಗಿ ಎತ್ತಿತೋರಿಸಲಾಗಿದೆ. ಇದೇ ರೀತಿಯಾಗಿ ಎಸ್.ಎಲ್.ಶೇಷಗಿರಿರಾವ್ ಮಹಿಳಾ ಚಿಂತಕಿಯರ ಕುರಿತು "ನಮ್ಮ ಲೇಖಕಿಯರು ಕೌಟುಂಬಿಕ ಜೀವನದ ಎಷ್ಟನ್ನು ತಮ್ಮ ಕಥಾಸಾಹಿತ್ಯದ ಸಾಮಗ್ರಿಯಾಗಿ ತೆಗೆದುಕೊಳ್ಳುತ್ತಾರೆ ಎನ್ನುವ ಆಕ್ಷೇಪಣೆ ಇದೆ. ಮನುಷ್ಯನ ಏಕಾಕಿತನ, ಅಂತಃಕರಣದ ಹಂಬಲ ಮಹಿಳಾ ಕತೆಗಳಲ್ಲಿ ವ್ಯಕ್ತವಾಗಿವೆ"[೧೦೦] ಎಂದು 'ಕೆಂಪು ಹೂ' ಮುನ್ನುಡಿಯಲ್ಲಿ ಹೇಳುತ್ತಾರೆ. ಹೆಣ್ಣು ಅಡುಗೆ ಮನೆಯ ವಸ್ತುವಿನಿಂದ ಸಮಾಜದ ವಸ್ತುವಾಗಿ ತನ್ನತನವನ್ನು ನಿರ್ಮಿಸಿಕೊಂಡಿದ್ದಾಳೆ ಎಂದು ಹೇಳಲಾಗುತ್ತದೆ.

ಎಂ.ಎಸ್. ಆಶಾದೇವಿಯವರು 'ಸ್ತ್ರೀಮತವನುತ್ತರಿಸಲಾಗದೇ?' ಎಂಬ ಕೃತಿಗೆ ರಾಜೇಂದ್ರ ಚೆನ್ನಿಯವರು ಮುನ್ನುಡಿ ಬರೆಯುತ್ತಾ ಇದರಲ್ಲಿ ಎಂ.ಎಸ್. ಆಶಾದೇವಿಯವರ ಮಹಿಳಾ ತಾತ್ವಿಕ ಚಿಂತನೆಯನ್ನು ಗುರುತಿಸಿದ್ದಾರೆ, ಮನುಷ್ಯನ ಪ್ರವೃತ್ತಿ ಅನೇಕ ನೆಲೆಯಲ್ಲಿರುತ್ತದೆ. ಆದರೆ ಸ್ತ್ರೀವಾದವೆಂದರೆ ಅದು ಸ್ತ್ರೀಯರ ಪ್ರಶ್ನೆಯಲ್ಲ, ಅಲ್ಲಿ ಪುರುಷರ ಪ್ರಶ್ನೆಯು ಬರುತ್ತದೆ ಎಂಬುದು ಎಂ.ಎಸ್. ಆಶಾದೇವಿಯವರ ಚಿಂತನೆಯಾಗಿದೆ. "ಕೃತಿನಿಷ್ಠ ವಿಮರ್ಶಾ ಸಿದ್ಧಾಂತಗಳು ಉದ್ದೇಶಪೂರ್ವಕವಾಗಿಯೇ

ಇಂತಹ ಶುದ್ಧ ವಿಮರ್ಶೆಯನ್ನು ಬೆಂಬಲಿಸುತ್ತದೆ. ಏಕೆಂದರೆ ಕೃತಿಯನ್ನು ಅದರ ಒಟ್ಟಾರೆ ಸಾಂಸ್ಕೃತಿಕ, ಚಾರಿತ್ರಿಕ, ರಾಜಕೀಯ ಸಂದರ್ಭದಲ್ಲಿ ಇಟ್ಟು ವಿಮರ್ಶಿಸತೊಡಗಿದಾಗ ಕೃತಿಯನ್ನು ಮಾತ್ರವಲ್ಲ, ಅವರ ಮೂಲಕ ಮನುಷ್ಯ ಅನುಭವ, ಸಮಾಜ, ವರ್ಗ, ಜಾತಿ, ಲಿಂಗರಾಜಕೀಯ ಇವೆಲ್ಲವುಗಳನ್ನು ವಿಮರ್ಶಿಸಬೇಕಾಗುತ್ತದೆ. ಅದರಲ್ಲಿ ವಿಶೇಷವಾಗಿ ಲಿಂಗರಾಜಕೀಯದ ಸಮಸ್ಯೆಯನ್ನು ಶುದ್ಧ ವಿಮರ್ಶೆಯಾಗಲು ಹೊರಗಿಡುತ್ತದೆ. ಲಿಂಗಾಧಾರಿತ ವಿಮರ್ಶೆಯನ್ನು ಅದು ಅಶುದ್ಧ ಅಸಾಹಿತ್ಯಕ ವಿಮರ್ಶೆಯೆಂದು ಪರಿಗಣಿಸುತ್ತದೆಯಲ್ಲದೇ ವಿಮರ್ಶೆಯೆಂದರೆ ಲಿಂಗಪ್ರಜ್ಞೆಯನ್ನು ಮೀರುವ ಕೆಲಸವೆಂದು ವಾದಿಸುತ್ತದೆ"[೧೦೧] ಎಂದು ರಾಜೇಂದ್ರ ಚೆನ್ನಿಯವರು ಹೇಳುತ್ತಾರೆ. ಎಂ.ಎಸ್. ಆಶಾದೇವಿಯವರ ತಾತ್ವಿಕ ಚಿಂತನೆ ಲಿಂಗರಾಜಕೀಯ, ಲಿಂಗಪ್ರಜ್ಞೆಯನ್ನು ಮೀರುವ ನೆಲೆ ಹೊಂದಿದೆ.

ಇದೇ ರೀತಿಯಾಗಿ ಬಿ.ಎನ್.ಸುಮಿತ್ರಾಬಾಯಿಯವರು ಎಂ.ಎಸ್. ಆಶಾದೇವಿಯವರ ಚಿಂತನೆಗಳನ್ನು ಗುರುತಿಸಿದ್ದಾರೆ. "ಲಿಂಗರಾಜಕಾರಣದ ಸಾಂಸ್ಕೃತಿಕ ವ್ಯವಸ್ಥೆಯ ಸಂಕೀರ್ಣ ಅಂತರ್ಜಾಲದದೊಳಗೆ ಈಜಿ ಎದ್ದು ಜಯಿಸಬೇಕಾದ ನೆಲದಲ್ಲೂ, ಕಾಲೂರಿರುವ ಮುಗಿಲಿಗೂ ಹಾರಬಯಸುವ ನಿರಂತರ ತಾಕಲಾಟದಲ್ಲಿ ಬದುಕುವ ಆಸೆ. ಇವು ಎಂದಿನ ಇರುವಿಕೆಯ ಅವಸ್ಥೆಗಳು. ಇವು ಯಾವ ಯಾವ ರೀತಿಗಳಲ್ಲಿ ಪ್ರಧಾನ ಸಂಸ್ಕೃತಿಯಿಂದ ತಿದ್ದಲ್ಪಟ್ಟಿರುವಂತವು. ಅವುಗಳಿಗೆ ಆಕೆ ಎಷ್ಟರ ಮಟ್ಟಿಗೆ ಒಗ್ಗಿಕೊಂಡಿರುತ್ತಾಳೆ. ಅವಳೊಬ್ಬ ವ್ಯಕ್ತಿಯಾಗಿ ತನ್ನ ಚೇತನದ ಬಿಡುಗಡೆಗೆ ತವಕಿಸುವ ಪರಿಹಾರಗಳೇನು? ತನ್ನನ್ನು ಹತ್ತಿಕ್ಕುವ ಸಾಂಸ್ಕೃತಿಕ ಪರಿಸರಕ್ಕೆ ಅವಳು ತೋರುವ ಪ್ರತಿರೋಧ, ಪ್ರತಿಭಟನೆಯ ಲಕ್ಷಣಗಳೇನು? ಎಂದು ಸಮಾಜದಲ್ಲಿನ ಕಲೆಗಳು ಸಾಹಿತ್ಯ ನಂಬಿಕೆಗಳು, ಪದ್ಧತಿಗಳು ಸಾಂಸ್ಥಿಕ ವ್ಯವಸ್ಥೆಗಳು ಸಂವಹನ ಪರಿಪಾಟಗಳೆಲ್ಲವನ್ನು ಒಳಹೊಕ್ಕು ಶೋಧಿಸಿವೆ"[೧೦೨] ಎಂದು ಹೇಳಿದ್ದಾರೆ. ಮಹಿಳಾ ಅಭಿವ್ಯಕ್ತಿಯನ್ನು ೭೦-೮೦ರ ದಶಕಗಳಲ್ಲಿ ಗುರುತಿಸಲಾಗಿದೆ. ಅಲ್ಲಿಂದ ಇಲ್ಲಿಯವರೆಗೆ ಹಲವಾರು ಮಹಿಳಾ ಸಂವೇದನೆಗಳು ಹುಟ್ಟಿಕೊಂಡಿವೆ.

ವೀಣಾಶಾಂತೇಶ್ವರರ 'ನಡೆದದ್ದೇ ದಾರಿ' ಕಾದಂಬರಿಯಲ್ಲಿ ಮಹಿಳಾ ಸಾಹಿತ್ಯ ಸಂದರ್ಭಗಳನ್ನು ಉಲ್ಲೇಖಿಸಲಾಗಿದೆ. ಆದರೆ ಸಂವೇದನೆ ವಸ್ತು, ಶೈಲಿ, ಆಕೃತಿ ಇವೆಲ್ಲವುಗಳಲ್ಲಿಯೂ ಅವರು ಹಿಡಿದ ಹಾದಿ ಅವರ ಹಿಂದಿನ ಮಹಿಳಾ ಸಾಹಿತಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಏಕೆಂದರೆ ನವ್ಯತೆ ಲೈಂಗಿಕ ಆಸ್ಥೆಗಳು ನಗರ ಸಂವೇದನೆ ಅನುಭವದ ಆದ್ಯತೆ ಇಂತಹ ಸಂವೇದನೆ ವೀಣಾ ಶಾಂತೇಶ್ವರ ಕತೆಗಳಲ್ಲಿ ಕಂಡುಬರುತ್ತವೆ. ಅವರ ಕತೆಗಳಾದ ಗಂಡಸರು, ಮುಳ್ಳುಗಳು ಇತ್ಯಾದಿ. 'ನಡೆದದ್ದೇ ದಾರಿ' ಕಾದಂಬರಿಯ ಮುನ್ನುಡಿಯಲ್ಲಿ ಜಿ.ಎಸ್.ಆಮೂರ ಅವರು ಹೀಗೆ ಗುರುತಿಸುತ್ತಾ "ವೀಣಾರ ಎಲ್ಲಾ ಕತೆಗಳನ್ನು ಒಟ್ಟಿಗೆ ನೋಡಿದಾಗ ಅರಿವಿಗೆ ಬರುವ ಒಂದು ಅಂಶವೆಂದರೆ ಅವರ ಪ್ರೀತಿಯ ಹಂಬಲ, ಪ್ರೀತಿಯ ಕ್ಷಣಗಳು ಅಷ್ಟೇ ಕ್ಷಣಿಕವೆನಿಸಿದರೂ ಹಿನ್ನೋಟದಲ್ಲಿ ಭ್ರಾಮಕವೆನಿಸಿದರೂ ಅವರ ಕತೆಗಳ ನಾಯಕಿಯರು ಜೀವಂತಿಕೆಯನ್ನು ಅನುಭವಿಸುವುದು ಈ ಕ್ಷಣಗಳಲ್ಲಿಯೇ ಇದೆ.

ಅವರ ಸೃಜನಶೀಲತೆಯ ಉಗಮವೂ ಆಗಿದೆ"[೧೦೩] ಎಂದು ಗುರುತಿಸುತ್ತಾರೆ. ಇಲ್ಲಿ ವೀಣಾಶಾಂತೇಶ್ವರರ ವೈಯಕ್ತಿಕ ಸಂಬಂಧಗಳ ಆಚೆಗಿನ ಸಮಸ್ಯೆಗಳ ಬಗ್ಗೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಹಾಗೆಯೇ ವೀಣಾ ಅವರು ವಾಸ್ತವಪ್ರಜ್ಞೆಯಿಂದ ಚಿಂತಿಸಿದವರಾಗಿದ್ದಾರೆ.

ಅನುಪಮಾ ನಿರಂಜನ ಅವರ 'ಮಾಧವಿ' ಕಾದಂಬರಿಯು ಕೂಡ ಸ್ತ್ರೀ ನೆಲೆಯ ಚಿಂತನೆಯನ್ನು ಹೊಂದಿದೆ. ಈ ಕೃತಿಯ ಮುನ್ನುಡಿಯಲ್ಲಿ "ಈ ಉಪ ಭೂಖಂಡದಲ್ಲಿ ಸ್ತ್ರೀದಾಸ್ಯದ ವಿರುದ್ಧ ಮೊದಲು ಬಂಡೆದ್ದವಳು ಮಾಧವಿ"[೧೦೪] ಎಂದು ಅನುಪಮಾ ಅವರು ಗುರುತಿಸುತ್ತಾರೆ. ಏಕೆಂದರೆ ಒಂದು ಪುರಾಣದ ಕತೆಯನ್ನು ಪ್ರಸ್ತುತ ಚಿಂತನೆಗೆ ಒಳಪಡಿಸುವುದು ಪ್ರಮುಖವಾಗಿದೆ. ಮಾಧವಿಯನ್ನು ತಂದೆಯಿಂದ ಹಿಡಿದು ಎಲ್ಲರೂ ಶೋಷಣೆಗೆ ಒಳಪಡಿಸಿದ್ದಾರೆ. ಈ ದೃಷ್ಟಿಯಲ್ಲಿ ಆಕೆಯ ದೇಹವೆಂಬುದು ಫಲವತ್ತಾದ ಭೂಮಿಯಾಗಿದೆ. ಮಾಧವಿಯ ದೇಹದ ವಿಶೇಷತೆ ಕುರಿತು ಅನುಪಮಾರ ಕಾದಂಬರಿಯಲ್ಲಿ ವ್ಯಕ್ತಗೊಂಡಿದೆ. ಮಾಧವಿ ಚಿಕ್ಕ ಹುಡುಗಿಯಾಗಿದ್ದಾಗ ಒಬ್ಬ ಋಷಿಮುನಿ 'ನೀನು ಎಷ್ಟು ಸಾರಿ ಪ್ರಸವಿಸಿದರೂ ಪ್ರಸವವಾದ ಕೆಲವೇ ದಿನಗಳಲ್ಲಿ ನವತರುಣಿಯಂತೆ ಕನ್ಯತ್ವವನ್ನು ಪಡೆ' ಎಂದು ಹೇಳುತ್ತಾನೆ. ಅನುಪಮಾ ಅವರು ಮಾಧವಿಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿದ್ದಾರೆ. ಕಾದಂಬರಿಯ ಕೊನೆಯ ಪ್ರಸಂಗದಲ್ಲಿ ಯಯಾತಿ 'ನಿನಿಗಿಷ್ಟ ಬಂದವನನ್ನು ಆರಿಸಿಕೋ ಎಂದು ಆಯ್ಕೆಯ ಸ್ವಾತಂತ್ರ್ಯ ಕೊಟ್ಟಾಗಲೂ ಆ ಮಾತು ಅರ್ಥಹೀನ ಎಂದು ತಿಳಿದು ಕೊನೆಗೆ ಎಲ್ಲರನ್ನು ಬಿಟ್ಟು ಹೋಗುತ್ತಾಳೆ. ಇಲ್ಲಿ ಮಾಧವಿಯ ನಿರ್ಧಾರ ಕುರಿತು ಲೇಖಕಿ ಮುನ್ನುಡಿಯಲ್ಲಿ "ಇದು ಮಾಧವಿಯ ಬಂಡಾಯ. ಈ ಸಮರದಲ್ಲಿ ವೈಯಕ್ತಿಕ ಗೆಲುವು ಅವಳದಾಯಿತು"[೧೦೫] ಎಂದು ಹೇಳಲಾಗುತ್ತದೆ.

ಮಾಧವಿಯ ಪಾತ್ರ ಕುರಿತು ಎನ್.ಗಾಯತ್ರಿಯವರು ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ. "ರಾಜ ಮಹಾರಾಜರುಗಳ ಆಸೆ, ಆಕಾಂಕ್ಷೆಗಳ ಕಾಲಡಿಯಲ್ಲಿ ಧೂಳಾಗಿ ನೋಯುವ ಹಲವು ಹೆಣ್ಣುಗಳ ಪ್ರತಿನಿಧಿಯಾಗಿರುವ ಇಲ್ಲಿನ ಮುಖ್ಯ ಪಾತ್ರವಾದ ಮಾಧವಿ ಆಧುನಿಕ ಚಿಂತನೆಯನ್ನು ಉಸಿರಾಡುತ್ತಾಳೆ. ಪ್ರಭುತ್ವದ ಅಮಾನವೀಯತೆಯನ್ನು, ನಿರಂಕುಶತ್ವವನ್ನು, ಡಂಬಾಚಾರವನ್ನು ಪ್ರಶ್ನಿಸುವ, ಎದುರಿಸುವ ದಿಟ್ಟ ಧ್ವನಿಯಾಗಿ ಮಾರ್ಪಡುತ್ತಾಳೆ. ಪುರುಷ ರಾಜಕಾರಣದಿಂದಾಗಿ ನೋವಿನ ಮುದ್ದೆಯಾಗಿ ಶೋಷಿತರ ಪ್ರತಿನಿಧಿಯಾಗಿ ಚಿತ್ರಿತವಾಗುವ ಮಾಧವಿ ಈ ರಾಜಕಾರಣದ ಬೇರುಗಳ ವಿವಿಧ ಮಗ್ಗಲುಗಳನ್ನು ಶೋಧಿಸುತ್ತಾಳೆ. ಪ್ರಭುತ್ವ ಮತ್ತು ಧರ್ಮ ಸೃಷ್ಟಿಸುವ ವಿಷವರ್ತುಲದಲ್ಲಿ ನೋಯುವ ಹೆಣ್ಣುಗಳ ಮನಸ್ಸು ಇಲ್ಲಿ ಅನಾವರಣಗೊಳ್ಳುತ್ತವೆ. ಹಾಗೆಯೇ ಹೆಣ್ಣನ್ನು ಸುತ್ತುವರಿದಿರುವ ಪುರಾಣವನ್ನು ಭಂಜಿಸುತ್ತಲೇ ಸ್ತ್ರೀ ಮಿಥ್ಯೆಯನ್ನು ಬೆತ್ತಲಾಗಿಸುವ ಕ್ರಿಯೆಯು ಇಲ್ಲಿ ಪ್ರಜ್ಞಾಪೂರ್ವಕವಾಗಿ ನಡೆದಿದೆ"[೧೦೬] ಎಂದು ಮಾಧವಿಯ ಹಿಂದಿನ ರಾಜಕಾರಣವನ್ನು ತಿಳಿಯಪಡಿಸಲಾಗಿದೆ.

ಮಾಧವಿಯ ಪಾತ್ರ ಪುರಾಣದಿಂದ ಪ್ರಸ್ತುತದವರೆಗೂ ಹಲವು ಸ್ತ್ರೀವಾದಿ ಚಿಂತನೆಯಲ್ಲಿ ಪ್ರಮುಖಳಾಗಿದ್ದಾಳೆ. ಒಟ್ಟಾರೆಯಾಗಿ ಮಹಿಳಾ ಸಾಹಿತ್ಯ ಚಿಂತನೆ ಕಾವ್ಯ, ಕತೆ, ಕಾದಂಬರಿ,

ವಿಮರ್ಶೆ ಹಲವು ಸ್ತರಗಳಲ್ಲಿ ಆವರಿಸಿಕೊಂಡಿದೆ. ಮಹಿಳಾ ಅಸ್ಮಿತೆಯ ಹುಡುಕಾಟದಲ್ಲಿ ನಮ್ಮ ಕವಯಿತ್ರಿಯರು ಹೆಚ್ಚಾಗಿ ದ್ರೌಪದಿ, ಅಹಲ್ಯೆ, ಸೀತೆಯರಂತಹ ಪೌರಾಣಿಕ ಪ್ರತಿಮೆ, ರೂಪಕ ವಸ್ತುಗಳಾಗಿ ತಮ್ಮ ಸಾಹಿತ್ಯದಲ್ಲಿ ಬಳಸಿದ್ದಾರೆ. ಇದರ ಮೂಲಕ ಸ್ತ್ರೀವಾದಿ ಚಿಂತನೆಯಲ್ಲಿ ಅನುವು ಮಾಡಿಕೊಡಲಾಗಿದೆ.

### ೪.೬. ಮುನ್ನುಡಿಗಳು: ಚಳುವಳಿಗಳು

ಕನ್ನಡ ಸಾಹಿತ್ಯದ ಒಡಲೊಳಗೆ ಮೂಡಿದ ರೂಪ ಮುನ್ನುಡಿ ಸಾಹಿತ್ಯವಾಗಿದೆ. ಹಾಗೆಯೇ ಸಾಹಿತ್ಯ ಪ್ರಕಾರವಾಗುವಷ್ಟು ಅರ್ಹತೆ ಹೊಂದಿದೆ. ಮುನ್ನುಡಿ ಕೃತಿಯ ತಿರುಳುನೋಟವಾಗಿದೆ. ಕೃತಿಯ ಮೊದಲ ವಿಮರ್ಶಾತ್ಮಕವಾದ ಹಲವು ವಿಭಿನ್ನ ಚಿಂತನೆಗಳು ಮುನ್ನುಡಿ ಸಾಹಿತ್ಯದಲ್ಲಿ ನಡೆಯುತ್ತವೆ. ಹಾಗಾಗಿ ಮುನ್ನುಡಿಗಳಲ್ಲಿ ಚಳುವಳಿಯಾತ್ಮಕ ಅಂಶಗಳನ್ನು ಗುರುತಿಸುವ ಕೆಲಸ ಮಾಡಲಾಗುವುದು. ಮೊದಲಿಗೆ ಚಳುವಳಿ ಎಂದರೆ 'ಪ್ರತಿಭಟನೆ', 'ಪ್ರತಿಕ್ರಿಯೆ', 'ಪ್ರಯೋಗ' ಎಂದು, ಎಂ.ಎಂ.ಕಲಬುರ್ಗಿಯವರು 'ಚಲನವಲನ' ಶಬ್ದದ ತದ್ಭವ ಎಂದು ಹೇಳಿದ್ದಾರೆ. ಇಂಗ್ಲಿಷಿನಲ್ಲಿ Movement ಎಂದು ಹೇಳಲಾಗಿದೆ. ಚಳುವಳಿಗಳು ಹಲವು ಸ್ವರೂಪಗಳಾಗಿ ಕಾಣುತ್ತವೆ. ಅವುಗಳ ಪ್ರತಿಭಟನೆಯಾಗಿ, ಸಂಘಟನೆಯಾಗಿ, ಹೋರಾಟಗಳಾಗಿ, ಧರಣಿಗಳಾಗಿ, ಮೌಲ್ಯಗಳಿಗೆ ಸಂಬಂಧವಾಗಿ, ಜೀವನ ದೃಷ್ಟಿಗೆ ಸಂಬಂಧವಾಗಿ ಹಲವು ರೂಪಗಳಾಗಿ ಚಳುವಳಿಗಳು ನಡೆಯುತ್ತವೆ. ಇವೆಲ್ಲಾ ಸಮಾಜದ ಒಡಲೊಳಗೆ ನಡೆಯುವಂತವುಗಳಾಗಿವೆ. ಚಳುವಳಿಯನ್ನು ತಾತ್ಕಾಲಿಕ ಪ್ರತಿಕ್ರಿಯೆಯಾಗಿಯೂ ಕಾಣುತ್ತೇವೆ. ಹಾಗೆಯೇ ಚಳುವಳಿಗೆ ಇತಿಹಾಸವಿದೆ. ಚಳುವಳಿಗಳನ್ನು ಹಲವು ಪ್ರಕಾರಗಳಾಗಿ ಗುರುತಿಸಬಹುದು. ಸಾಹಿತ್ಯ ಚಳುವಳಿ, ಸಾಮಾಜಿಕ ಚಳುವಳಿ, ರಾಜಕೀಯ ಚಳುವಳಿ, ಧಾರ್ಮಿಕ ಚಳುವಳಿ, ಭಾಷಾ ಚಳುವಳಿ, ಪ್ರಾದೇಶಿಕ ಚಳುವಳಿ, ಮಹಿಳಾ ಚಳುವಳಿಯಾಗಿ ಗುರುತಿಸಿಕೊಂಡಿದ್ದೇವೆ. ಆದರೆ ಈ ಮೇಲಿನವುಗಳಲ್ಲಿ ಸಾಹಿತ್ಯ ಚಳುವಳಿ ವಿಭಿನ್ನ ರೀತಿಯಲ್ಲಿ ತನ್ನ ಸ್ವರೂಪ ಪಡೆದುಕೊಂಡಿದೆ. ಉಳಿದವುಗಳನ್ನು ತತ್ಕಾಲೀನ ಚಳುವಳಿಯಾಗಿ ಕಾಣುತ್ತೇವೆ. ಆದರೆ ಸಾಹಿತ್ಯ ಚಳುವಳಿ ಇವೆಲ್ಲವುಗಳನ್ನು ತನ್ನ ಭಾಷಾ ಸಂವೇದನೆಯಿಂದ ಸೂಕ್ಷ್ಮವಾಗಿ ಅಂತಃಸತ್ವವಾಗಿ ಒಳಗೊಂಡಿದೆ. ಅಧ್ಯಯನ ದೃಷ್ಟಿಯಿಂದ ಸಾಹಿತ್ಯ ವಲಯದಲ್ಲಿ ಮುನ್ನುಡಿ ಸಾಹಿತ್ಯ ಕ್ಷೇತ್ರದಲ್ಲಿ ವ್ಯಕ್ತಗೊಂಡ ಚಳುವಳಿಯಾತ್ಮಕ ಅಂಶಗಳನ್ನು ಗುರುತಿಸುವುದು ಈ ವಿಷಯದ ಮುಖ್ಯ ಉದ್ದೇಶವಾಗಿದೆ.

### ಮುನ್ನುಡಿ ಸಾಹಿತ್ಯದಲ್ಲಿ ಚಳುವಳಿಗಳ ಸ್ವರೂಪ

ಚಳುವಳಿ ಎನ್ನುವುದು ಪ್ರತಿಕ್ರಿಯೆಯಾಗಿ ಮಾನವ ಹುಟ್ಟಿನಿಂದಲೂ ಒಂದಲ್ಲೊಂದು ರೀತಿಯಲ್ಲಿ ನಡೆದುಕೊಂಡು ಬಂದಿದೆ. ಮಾನವನ ಜೀವನ, ಬದುಕು ರೂಪಿಸಿಕೊಳ್ಳುವುದಕ್ಕೆ ಕಾಲದಿಂದ ಕಾಲಕ್ಕೆ ಸ್ಥಳದಿಂದ ಸ್ಥಳಕ್ಕೆ ಅಲೆಮಾರಿಯಾಗಿ ತಿರುಗಾಡುತ್ತ ತನ್ನಲ್ಲಿ ಕಂಡುಕೊಂಡ ವಾಸದ ಪರಿಕಲ್ಪನೆ, ಅನ್ನದ ಪರಿಕಲ್ಪನೆ, ಬೇಟೆ ಪರಿಕಲ್ಪನೆ, ಕೃಷಿ ಪರಿಕಲ್ಪನೆ ಹೀಗೆ ಹಲವು ವಿಭಿನ್ನ ಪರಿಕಲ್ಪನೆಯಿಂದ ಮಾನವ ಅಭಿವೃದ್ಧಿಯಾಗುವುದನ್ನು ಕಂಡುಕೊಂಡಿದ್ದಾನೆ. ಆದರೆ ಇದರ

ಮಧ್ಯೆಯೇ ಮಾನವ ಸಂಘರ್ಷದಿಂದ ಶ್ರೇಷ್ಠ ಕನಿಷ್ಠ ಎಂಬ ಮಾನವನ ಅಪಕಲ್ಪನೆಯಿಂದ ಜಾತಿ ಎಂಬ ಭಯೋತ್ಪಾದನೆಯಾಗಿ ಹುಟ್ಟಿದ್ದು ಶೋಚನೀಯ ಸಂಗತಿಯಾಗಿದೆ. ಈ ಹಿನ್ನೆಲೆಯಿಂದ ಇವೆಲ್ಲವನ್ನು ಸಮಾಜ ಎಂದು ಗುರುತಿಸಿಕೊಂಡು, ಅದರಲ್ಲಿ ಆರ್ಥಿಕ ಶ್ರೇಣೀಕರಣವನ್ನು ಗುರುತಿಸಲಾಗಿದೆ. ಶ್ರೀಮಂತ, ಬಡವ, ದಲಿತ ಎಂದು, ಹಾಗೆಯೇ ಒಂದು ತುತ್ತು ಅನ್ನಕ್ಕಾಗಿ ಪರದಾಡುವಂತಹ ಜನರನ್ನು ಕೂಡ ಸಮಾಜದಲ್ಲಿ ಕಾಣುತ್ತೇವೆ. ಪ್ರಸ್ತುತ ದಿನಗಳಲ್ಲಿ ಕೂಡ ಅಂತಹ ಘಟನೆಗಳು ಇವೆ. ಜಾಗತಿಕವಾಗಿ ನಡೆದ ವಸಾಹತುಶಾಹಿಗಳ ಅಬ್ಬರದಿಂದ ನಮ್ಮ ದೇಶದಲ್ಲಿ ಕೈಗಾರಿಕಾ ಕ್ರಾಂತಿಯಿಂದ ಒಂದು ಕಡೆ ಅಭಿವೃದ್ಧಿ ಇನ್ನೊಂದು ಕಡೆ ಅಭಿವೃದ್ಧಿ ಎಂಬ ಮಾಯೆಯಿಂದ ನಲುಗಿದ ಅದೆಷ್ಟೋ ಕುಟುಂಬಗಳು ಇದರ ಬೆನ್ನಲ್ಲೇ ದಲಿತ ಬಡ ಕುಟುಂಬಗಳು ಈಗಲೂ ತಮ್ಮ ಅಸ್ತಿತ್ವಕ್ಕಾಗಿ ಹೋರಾಟಗಳು, ಧರಣಿಗಳು, ಪ್ರತಿಭಟನೆ ಇಂತಹ ಚಳುವಳಿಗಳು ನಡೆದಿರುವುದನ್ನು ಕಾಣುತ್ತೇವೆ.

ಸಾಹಿತ್ಯಕವಾಗಿ ಕವಿರಾಜಮಾರ್ಗ ಕಾಲದಿಂದ ಪ್ರಸ್ತುತ ಕಾಲದವರೆಗೂ ಸಾಹಿತ್ಯ ಚಳುವಳಿಗಳು ನಡೆಯುತ್ತಿವೆ. ಸಾಹಿತ್ಯವು ಚಳುವಳಿಯಾಗಿ ಪ್ರತಿಯೊಂದು ಚಳುವಳಿಯ ಸಂದರ್ಭಗಳು ನಾವು ಕಾಣುವುದು, ಒಂದು ಸಮಾನ ಲಕ್ಷಣವೆಂದರೆ ಯಾವುದೇ ಹೊಸ ಸಾಹಿತ್ಯ ಚಳುವಳಿ ನೆಲೆಗೊಂಡಾಗ ಹಾಗೂ ಅದಕ್ಕೆ ಹಿನ್ನೆಲೆಯುಳ್ಳ ಸಾಹಿತ್ಯ ಪರಂಪರೆಯ ಬಗ್ಗೆ ಅತೃಪ್ತಿತನಗೊಳ್ಳುತ್ತದೆ. ಹಾಗೆಯೇ ಮೂಲವಾದಿತನವನ್ನು ಹೋಗಲಾಡಿಸುವ ಕಾರ್ಯವನ್ನು ಸಾಹಿತ್ಯ ಚಳುವಳಿಗಳು ಮಾಡುತ್ತವೆ. ಇದರಿಂದ ಗಟ್ಟಿತನದ ಸಾಹಿತ್ಯ ಚಳುವಳಿಯು ನಿರ್ಮಾಣಗೊಳ್ಳುತ್ತದೆ. ಹಾಗಾಗಿ ಸಾಹಿತ್ಯ ಪರಂಪರೆಯಲ್ಲಿ ಸಾಹಿತ್ಯ ಚಳುವಳಿಗಳು ಮೌಲ್ಯಯುತವಾಗಿ ಜೀವನದೃಷ್ಟಿಗೆ ಸಂಬಂಧಿತವಾಗಿದೆ. ಹೀಗೆ ಒಂದು ಸಾಹಿತ್ಯದ ಸಂಪ್ರದಾಯದ ವಸ್ತು ಸ್ವೀಕರಿಸಿ ಸಾಹಿತ್ಯದಲ್ಲಿಯೇ ಬದಲಾವಣೆಯ ಗಾಳಿ ಬೀಸಿದಾಗ ಆ ಸಂಪ್ರದಾಯವನ್ನು ವಿರೋಧಿಸಿ ಮತ್ತೊಂದು ಸಾಹಿತ್ಯ ಮಾರ್ಗ ಆರಂಭಗೊಳ್ಳುವುದು ಕಾಣುತ್ತೇವೆ. ಈ ಹಿನ್ನೆಲೆಯಿಂದ ನವೋದಯ ಸಾಹಿತ್ಯ ಪರಂಪರೆ ಮತ್ತು ಸಂಪ್ರದಾಯದ ನೆಲೆಯು ಅಸ್ತಿತ್ವಗೊಂಡಾಗ ಇದನ್ನು ಪ್ರತಿಭಟಿಸಿ ಪ್ರಗತಿಶೀಲ ಚಳುವಳಿ ಆರಂಭವಾಯಿತು. ಆದರೆ ಸಾಂಪ್ರದಾಯಿಕ ಸಮಾಜದಲ್ಲಿ ಪ್ರಗತಿಶೀಲ ಸಂಘಟನೆ ಕಾರ್ಮಿಕ ಬಡವರ ಏಳ್ಗೆಗಾಗಿ ಮಾರ್ಕ್ಸ್ ಸಿದ್ಧಾಂತದ ಮೂಲಕ ಈ ಚಳುವಳಿ ಹೊಸತನಕ್ಕೆ ಕಾಲಿಟ್ಟಿತು. ಆದರೆ ಮನುಷ್ಯತ್ವದ ಹುಡುಕಾಟಕ್ಕಾಗಿ, ತನ್ನತನದ ಅಸ್ತಿತ್ವಕ್ಕಾಗಿ ನವ್ಯ ಸಾಹಿತ್ಯ ಚಳುವಳಿ ಆರಂಭವಾಯಿತು. ನಮ್ಮ ಸಾಮಾಜಿಕ ಬದುಕಿಗೆ ವಿಮುಖವಾಗಿದೆಯೆಂಬ ಆರೋಪದೊಂದಿಗೆ ಬಂಡಾಯ ಸಾಹಿತ್ಯ ಚಳುವಳಿ ಜನ್ಮ ತಾಳಿತು. ಇದರ ಜೊತೆಗೆ ಮಹಿಳಾ ಅಸ್ತಿತ್ವದ ಕೂಗು ಬಂಡಾಯ ಚಳುವಳಿಯಲ್ಲಿ ಧ್ವನಿಗೂಡಿತು. ಇವುಗಳಿಗೆ ಆಯಾ ಕಾಲದ ಸಿದ್ಧಾಂತವನ್ನು ಮೈಗೂಡಿಸಿಕೊಂಡಿರುವುದು ಪ್ರಮುಖ ಅಂಶವಾಗಿದೆ. ಆದರೆ ಯಾವುದೇ ಚಳುವಳಿ ಹುಟ್ಟಿದೆಯೋ ಅದು ಸಮಾಜದಿಂದ ಹುಟ್ಟಿ ಸಮಾಜಕ್ಕೆ ತಲುಪಿದೆ. ಅದರಲ್ಲಿ ದ್ವಂದ್ವಗಳು ಕೂಡ ಕಾಣಬರಬಹುದು. ಆದರೆ ಸಮಕಾಲೀನ ಚಳುವಳಿಗಳು ಅಷ್ಟೇನು ಸಾಹಿತ್ಯ ಚಳುವಳಿಗಳಾಗಿರದೇ ಸಾಂಸ್ಕೃತಿಕ ಸಾಹಿತ್ಯ ಚಿಂತನೆ ನಡೆದಿದೆ. ಆದರೆ ಪ್ರಸ್ತುತ ಚಳುವಳಿಗಳು ಯಾರದೋ ಹಿತಾಸಕ್ತಿಗಾಗಿ ರಾಜಕೀಯ ಚಳುವಳಿಗಳು, ಧಾರ್ಮಿಕ ಚಳುವಳಿಗಳು, ಸಾಮಾಜಿಕ ಚಳುವಳಿಗಳು ನಡೆಯುತ್ತಿವೆ. ಇವುಗಳಿಗೆ ಅಸ್ತಿತ್ವವೇ ಇಲ್ಲ, ತತ್ಕಾಲೀನವಾಗಿ ನಡೆಯುತ್ತಿವೆ.

## ಹಳಗನ್ನಡ ಕಾವ್ಯಗಳಿಗೆ ಬರೆದ ಮುನ್ನುಡಿಗಳಲ್ಲಿ ವ್ಯಕ್ತಗೊಂಡ ಚಳುವಳಿಗಳು

ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ಹಲವು ವಿದ್ವಾಂಸರು ಉಪೋದ್ಘಾತ, ಪ್ರಸ್ತಾವನೆ, ಮುನ್ನುಡಿಯನ್ನು ಬರೆದಿದ್ದಾರೆ. ಆರ್.ನರಸಿಂಹಾಚಾರ್, ಎಸ್.ಜಿ.ನರಸಿಂಹಾಚಾರ್ಯ, ಗೋವಿಂದ ಪೈ, ಕುವೆಂಪು, ಡಿವಿಜಿ, ದೇ.ಜವರೇಗೌಡ ಕಾಲದವರೆಗೂ ಹಳಗನ್ನಡ ಕಾವ್ಯಗಳನ್ನು ಸಂಪಾದನೆ ಮಾಡಿರುವುದು ಮತ್ತು ಪುನಃ ಮೌಲ್ಯಕ್ಕೊಳಪಡಿಸಿದ್ದು ಕಾಣುತ್ತೇವೆ. ಆದರೆ ಇವರೆಲ್ಲಾ ನವೋದಯ ಕಾಲದಲ್ಲಿ ಗುರುತಿಸಿಕೊಂಡವರು. ಹಾಗಾಗಿ ತಮ್ಮ ಕಾಲದ ಸಂದರ್ಭದಲ್ಲಿದ್ದ ಸಾಹಿತ್ಯ ಚಿಂತನೆಗಳನ್ನು ಹಳಗನ್ನಡ ಕಾವ್ಯಗಳ ಮುನ್ನುಡಿಗಳಲ್ಲಿ ಆ ಕಾವ್ಯದ ಚಿಂತನೆ, ತಮ್ಮ ಸೃಜನಶೀಲ ಚಿಂತನೆಯಿಂದ ಹಲವಾರು ವಿಷಯಗಳು ಅನಾವರಣಗೊಂಡಿವೆ. ಜಿ.ಎಸ್.ಶಿವರುದ್ರಪ್ಪನವರು ಹೇಳುವ ಹಾಗೆ "ಕನ್ನಡದ ಪ್ರಾಚೀನ ಕಾವ್ಯಗಳ ಪ್ರಾಸ್ತಾವಿಕ(ಮುನ್ನುಡಿ) ಭಾಗಗಳಲ್ಲಿ ಹಿಂದಿನ ಬರಹದ ಸಂಪ್ರದಾಯಗಳ ಬಗ್ಗೆ ತಮ್ಮ ಪ್ರತಿಕ್ರಿಯೆಗಳನ್ನು ತಮ್ಮ ಕಾವ್ಯದಲ್ಲಿ ಮತ್ತು ಪ್ರಸ್ತುತ ಕಾವ್ಯ ಸಂದರ್ಭದಲ್ಲಿ ಆಗಬೇಕಾದ ಬದಲಾವಣೆಯ ಸ್ವರೂಪವನ್ನು ಕುರಿತು ತಮ್ಮದೇ ಆದ ಚಿಂತನೆಗಳನ್ನು ದಾಖಲು ಮಾಡಿದ್ದಾರೆ ಎಂಬುದನ್ನು ನಾವು ಪರಿಗಣಿಸಬೇಕಾಗಿದೆ. ಈ ಪ್ರಾಸಂಗಿಕ ಕಾವ್ಯ ಚಿಂತನೆಯನ್ನು ನಮಗೆ ಮಾಡಿಕೊಡುವುದಾದರೂ, ಅವು ಇವತ್ತಿನ ಸಾಹಿತ್ಯ ಚಳುವಳಿಗಳಷ್ಟು ಸ್ಪಷ್ಟವೂ, ಘೋಷಿತವೂ ಆಗಿಲ್ಲ ಎಂಬುದು ನಿಜ. ಆದರೆ ಅವು ಸ್ಥಗಿತಗೊಂಡ ಸಾಹಿತ್ಯ ಸಂದರ್ಭವೊಂದರಲ್ಲಿ ಅದಕ್ಕೆ ಚಲನಶೀಲತೆಯನ್ನು ತರುವ ಸೃಜನಶೀಲ ಮನುಷ್ಯನ ತುಡಿತವಾಗಿವೆಯೆಂಬುದಂತೂ ಖಂಡಿತ"[೧೦೭] ಎಂದು ಹೇಳುತ್ತಾರೆ. ಈ ಮಾತಿನಿಂದ ಪ್ರತಿಯೊಂದು ಸಾಹಿತ್ಯ ಚಳುವಳಿಯೂ ಅವತ್ತಿನ ಐತಿಹಾಸಿಕವಾಗಿ ಮಹತ್ವವಾಗಿವೆ. ಇದರ ಹಿಂದೆ ಹಲವಾರು ಸಾಂಸ್ಕೃತಿಕ, ಸಾಹಿತ್ಯಕ, ವೈಚಾರಿಕ ಒತ್ತಡಗಳು ಇರುತ್ತವೆ. ಪರಂಪರೆ ಮತ್ತು ಸಂಪ್ರದಾಯ ತೊಳಲಾಟದಲ್ಲಿ ಒದ್ದಾಡುವ ಜನಸಾಮಾನ್ಯರು ಇಂತಹ ಚಳುವಳಿಯನ್ನು ಬಯಸುವುದು ಸಾಮಾನ್ಯವಾಗಿದೆ. ೧೦ನೇ ಶತಮಾನದಲ್ಲಿ ಕೂಡ ತೀವ್ರತರವಾದ ಚಳುವಳಿಗಳು ಕಂಡುಬರುವುದಿಲ್ಲ. ಆದರೆ ಧಾರ್ಮಿಕವಾದ ಚಳುವಳಿಗಳು ಕಂಡುಬರುತ್ತವೆ.

೧೦ನೇ ಶತಮಾನದ ಸಂದರ್ಭದಿಂದ ಮುದ್ದಣನ ಕಾಲದವರೆಗೂ ಸಾಹಿತ್ಯ ಚಳುವಳಿಗಳು ಸೂಕ್ಷ್ಮತರವಾದ ಸಂವೇದಿಯಾಗಿ ಸಾಹಿತ್ಯ ಚಳುವಳಿಯಲ್ಲಿ ನಡೆದಿವೆ. ಅವುಗಳ ಪ್ರೇರಣೆಗಳು, ಧಾರ್ಮಿಕ ವಾದಗಳು ಪ್ರಮುಖವಾಗಿ ಕಂಡುಬಂದಿವೆ. ಧರ್ಮಶ್ರದ್ಧೆ, ಮತಪರವಾದ ನಿಲುವು ಅಂದಿನ ದಿನಗಳಲ್ಲಿ ಬೇರೂರಿದ್ದವು ಎಂಬುದು ಮುಖ್ಯವಾದ ಅಂಶವಾಗಿದೆ. ಆದರೆ ಹಳಗನ್ನಡ ಕೃತಿಗಳು ಪಾಶ್ಚಿಮಾತ್ಯರ ಪೂರ್ವದಲ್ಲಿ ಕಾವ್ಯಗಳಾಗಿರದೇ ಪುರಾಣಕಾವ್ಯಗಳಾಗಿದ್ದವು. ಇವು ಪಂಡಿತ ಪಾಮರರಿಗೆ ಮೀಸಲಾಗಿದ್ದವು. ಪುರಾಣ ಪ್ರವಚನದ ಮೂಲಕ ಕಾವ್ಯಗಳು ಸಾಮಾನ್ಯ ಜನರಿಗೆ ತಲುಪುತ್ತಿದ್ದವು. ಆದರೆ ವೈಚಾರಿಕವಾಗಿ, ಲೌಕಿಕವಾಗಿ ಆಗಿರದೇ ಧಾರ್ಮಿಕತೆಯ ಕಾವ್ಯಗಳಾಗಿ ಅವುಗಳು ಮೂಡಿಬರುತ್ತವೆ. ಏಕೆಂದರೆ ಪಂಡಿತ, ಪುರೋಹಿತಶಾಹಿ ವರ್ಗಗಳು ಕಾವ್ಯಗಳನ್ನು ವೈಚಾರಿಕವಾಗಿ ಬೋಧನೆ ಮಾಡದಿರುವುದು ಮತ್ತು ಅವುಗಳನ್ನು ಧರ್ಮಾಂಧತೆಯ ಹಿನ್ನೆಲೆಯಿಂದ

ಅವುಗಳು ನಿರೂಪಣೆಗೊಳ್ಳುತ್ತಿದ್ದವು. ಪಂಡಿತ ಪುರೋಹಿತಶಾಹಿ ವರ್ಗವನ್ನು ದೇವರ ಸಮಾನವಾಗಿ ಅಂದಿನ ದಿನಗಳಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದವರು ಭಾವಿಸುತ್ತಿದ್ದರು. ಹಾಗೆಯೇ ಕಾವ್ಯಗಳ ಹಸ್ತಪ್ರತಿಗಳನ್ನು ಕೂಡ ದೇವರ ಸಮಾನವಾಗಿ ನೋಡಲಾಗುತ್ತಿತ್ತು. ಹಾಗಾಗಿ ಪುರೋಹಿತಶಾಹಿಯು ನಿಲುವು ವೇದವಾಕ್ಯದಂತಿತ್ತು. ಆಗ ಪುರೋಹಿತಶಾಹಿ ವರ್ಗಗಳು ಕಾವ್ಯಗಳ ಕುರಿತು ತಮಗೆ ಬೇಕಾದ ನಿಲುವುಗಳನ್ನು, ಇಷ್ಟಾರ್ಥವನ್ನು ಸಾಮಾನ್ಯರಿಗೆ ಹೇಳುತ್ತಿದ್ದವು. ಇದರಿಂದ ಜನರ ಭಾವನೆಗಳ ಆಶೋತ್ತರಗಳಿಗೆ ದಿಕ್ಕು ತಪ್ಪಿಸುವ ಕೆಲಸ ಅಂದಿನ ಸಂದರ್ಭದಲ್ಲಿ ನಡೆದಿರಬಹುದು. ಹಾಗಾಗಿ ಯಾವುದೇ ಪ್ರೇರಣೆ ಪ್ರಭಾವಗಳು ಇರದೆ ಧರ್ಮಾಂಧತೆಯಿಂದ ಪುರೋಹಿತಶಾಹಿಗಳು ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ತಮ್ಮಲ್ಲಿ ನಡೆದ ರಾಜಕಾರಣದಿಂದ ಸಾಮಾನ್ಯರಿಗೆ ಯಾವುದೇ ರೀತಿಯಲ್ಲಿ ಪ್ರತಿಭಟನೆಗೆ ಅವಕಾಶ ನೀಡದಿರುವುದು ಹಳಗನ್ನಡ ಕಾವ್ಯಗಳ ಮುನ್ನುಡಿಗಳ ಸಮೀಕ್ಷೆಯಲ್ಲಿ ತಿಳಿದುಕೊಳ್ಳುತ್ತೇವೆ. ಪಂಪ, ರನ್ನ, ಮುದ್ದಣನ ಕಾಲದವರೆಗೂ ರಾಜಾಶ್ರಯದಿಂದ ಈ ವಾತಾವರಣ ಸೃಷ್ಟಿಯಾಗಿತ್ತು. ಆದರೆ ಅವರು ರಾಜನ ನಿಲುವು ರಾಜನನ್ನು ಸಮೀಕರಿಸಿ ಬರೆಯುವುದು ಇನ್ನೊಂದು ರಾಜಕಾರಣವಾಗಿತ್ತು. ಈ ಹಿನ್ನೆಲೆಯಿಂದ ಅಂದು ಸಾಹಿತ್ಯ ರಚನೆ ಮತ್ತು ಓದು ಮೇಲ್ವರ್ಗಗಳಿಗೆ ಸಂಬಂಧಿಸಿದ್ದಾಗಿತ್ತು. ಆದರೆ ಬಡ, ದಲಿತ, ಹಿಂದುಳಿದ ಜನರಿಗೆ ಯಾವ ತೆರನಾಗಿಯೂ ಸಾಮಾಜಿಕವಾಗಿ ಅಸ್ತಿತ್ವ ಇರಲಿಲ್ಲ. ಎಲ್ಲಾ ಪುರೋಹಿತಶಾಹಿ ಹಾಗೂ ಆಳುವ ವರ್ಗಗಳ ಮೂಲಕವಾಗಿಯೇ ಆಡಳಿತ ನಡೆಯುತ್ತಿತ್ತು. ಆದರೆ ಆರ್ಥಿಕವಾಗಿ ಹಿಂದುಳಿದವರಿಗೆ ಅವಕಾಶ ಇರಲಿಲ್ಲ ಎಂಬುದು ಗಮನಾರ್ಹ ಸಂಗತಿಯಾಗಿದೆ.

ಪಂಪನು ದೇಸಿ ಚಿಂತನೆಯಿಂದ ಸಂಸ್ಕೃತವನ್ನೇ ಧಿಕ್ಕರಿಸಿ ಮಾರ್ಗ ಕಾವ್ಯ ಚಳುವಳಿ ಆರಂಭಿಸಿದ್ದು, ಇದರಿಂದ ಹಲವಾರು ಬದಲಾವಣೆಗಳೇ ಆಗಿವೆ. ವಸ್ತು ಶೈಲಿಯಲ್ಲಿ ಬದಲಾವಣೆಯಾಗಿದ್ದು ಪ್ರಮುಖ ಅಂಶವಾಗಿದೆ. ಸಂಸ್ಕೃತ ಕಾವ್ಯವನ್ನು ಕನ್ನಡ ಸಂಬಂಧಿಯಾಗಿ ಬರೆದಿದ್ದು ಅತ್ಯಂತ ಪ್ರಮುಖವಾದದ್ದು. ಇದರಿಂದ ಆಂಡಯ್ಯನಂತವರು ಇನ್ನೂ ಮುಂದುವರಿದು ಭಾಷಾ ವಲಯದಲ್ಲಿ ಮುಟ್ಟಲಾಗದೆಂಬಂತೆ ಸಂಸ್ಕೃತವನ್ನು ಅಸ್ಪೃಶ್ಯ ರೀತಿಯಲ್ಲಿ ದೂರ ಇಟ್ಟಿರುವುದನ್ನು ಕಾಣುತ್ತೇವೆ. ಜಿ.ಎಸ್.ಶಿವರುದ್ರಪ್ಪ ಹೇಳುವಂತೆ "ಪಂಪನಿಂದ ಉದ್ಘೋಷಿತವಾದ ಮಾರ್ಗ ದೇಸಿಗಳ ಒಡಂಬಡಿಕೆಯ ಧೋರಣೆಯೂ ಚಿಕಿತ್ಸೆಗೆ ಗುರಿಯಾಗಿ ನಯಸೇನನಿಂದ ನೆಲೆಗೊಂಡದ್ದು ಮುಖ್ಯವಾದ ಸಂಗತಿಯಾಗಿದೆ"[೧೦೮] ಎಂದು ಹೇಳುತ್ತಾರೆ. ಅಂದಿನ ಸಂಸ್ಕೃತ ಮತ್ತು ಮಾರ್ಗ, ದೇಸಿ ಎಂಬ ಧೋರಣೆಯಿಂದ ನಯಸೇನನು ಸಂಸ್ಕೃತವನ್ನು ಎಣ್ಣೆಗೂ, ಕನ್ನಡವನ್ನು ತುಪ್ಪಕ್ಕೂ ಹೋಲಿಸುವುದರ ಮೂಲಕ ಮೊಟ್ಟಮೊದಲಿಗೆ ಕನ್ನಡದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತಾನೆ. ನಯಸೇನನದು 'ಶುದ್ಧ ಕನ್ನಡ ಚಳುವಳಿಯಾದರೆ ಆಂಡಯ್ಯನದು 'ಅಚ್ಚಗನ್ನಡ' ಚಳುವಳಿ. ಇವರು ರೂಪಕಗಳ ಮೂಲಕ ಅಂದು ಭಾಷಾ ಸಂಸ್ಕೃತಿಯನ್ನು ಹೊಗಳಿದರು. ಇದರ ಫಲವಾಗಿ ೧೨ನೇ ಶತಮಾನದ 'ವಚನ ಚಳುವಳಿ'ಯನ್ನು ಭಾಷೆ, ಅದರ ಅರ್ಥ, ಇತ್ತೀಚಿನ ಸಾಹಿತ್ಯ ಚಳುವಳಿಯ ಸ್ವರೂಪವೆಂಬಂತೆ ಕಾಣುತ್ತೇವೆ. ಆದರೆ ವಚನ ಚಳುವಳಿ ಸಾಮಾಜಿಕ, ಧಾರ್ಮಿಕ, ಮೂಢನಂಬಿಕೆ, ಜಾತ್ಯತೀತಕ್ಕೆ

ಒಲವು ನೀಡಿದೆ. ವಚನ ಚಳುವಳಿ ಯಾವುದೇ ಧರ್ಮ, ಜಾತಿ ಮೇಲುಕೀಳು ಎನ್ನದೆ ಸಾಮಾಜಿಕ ಚಳುವಳಿಯಾಗಿದೆ. ಸಾಹಿತ್ಯ ಸರಳ ಭಾಷೆಯಿಂದ ಜನರಿಗೆ ಹತ್ತಿರವಾಯಿತು. ಹಾಗೆಯೇ ಆ ಕಾಲದ ಸಂದರ್ಭದಲ್ಲಿ ಯಾವ ಸಮುದಾಯ ತುಳಿತಕ್ಕೆ ಒಳಪಟ್ಟಿತು ಎಂಬುದು, ಆ ಸಮುದಾಯದಿಂದ ಡೊಹರ ಕಕ್ಕಯ್ಯ, ಉರಲಿಂಗ ಪೆದ್ದಿ, ಸೂಳೆಸಂಕವ್ವ ಮುಂತಾದವರು ಇಂತಹ ಚಳುವಳಿಯಲ್ಲಿ ತಮ್ಮ ಬದುಕಿನ ಅಸ್ತಿತ್ವ ಮೂಡಿಸಿದ್ದು ಪ್ರಮುಖವಾಗಿದೆ. ಕಾಲ ಗತಿಸಿದಂತೆ ಪ್ರತಿರೋಧವಾಗಿ ಭಕ್ತರು, ಸಂತರು, ಅನುಭವಿಗಳು ತಮ್ಮ ಅಭಿವ್ಯಕ್ತಿಯ ಮೂಲಕ ಭಕ್ತಿ ಆಂದೋಲನ ಚಳುವಳಿ ಆರಂಭಿಸಿದ್ದು, ಹೊಸ ಸಾಮಾಜಿಕವಾದ, ಧಾರ್ಮಿಕವಾದ ಎಚ್ಚರಿಕೆಯ ಘಂಟೆ ಬಾರಿಸಿದ್ದು, ಹೊಸ ಚಳುವಳಿಯನ್ನು ಹುಟ್ಟು ಹಾಕಿದರು. ವಸಾಹತುಶಾಹಿಗಳ ಯುಗಾರಂಭದಲ್ಲಿ ಸೂಫಿಗಳು ಕೂಡ ಬ್ರಿಟಿಷರ ವಿರುದ್ಧ ಚಳುವಳಿ ಮಾಡಿದ್ದು ಗಮನಾರ್ಹ ಸಂಗತಿಯಾಗಿದೆ.

ಕೆ.ವಿ.ಪುಟ್ಟಪ್ಪನವರು 'ಆದಿಪುರಾಣ ಸಂಗ್ರಹ'ಕ್ಕೆ ಮುನ್ನುಡಿ ಬರೆಯುತ್ತಾ "ನಮ್ಮ ನಮ್ಮ ಹಮ್ಮು ಬಿಮ್ಮುಗಳನ್ನು ಮುರಿಯುವುದಕ್ಕೂ ನಮ್ಮ ನಮ್ಮ ಸ್ವಾರ್ಥ ಅಸೂಯೆ ದರ್ಪಕೋಪಾದಿಗಳನ್ನು ದಮನ ಮಾಡಲು ಕೊನೆಗಾಲವಿದೆ"[೧೯೯] ಎಂದು ಹೇಳುತ್ತಾರೆ. ಇಂತಹ ಮಾತಿನ ಸನ್ನಿವೇಶ ಅಂದು ಪುರೋಹಿತಶಾಹಿಯಲ್ಲಿ ವಸಾಹತುಶಾಹಿಯನ್ನು ಕಾಣುತ್ತೇವೆ. ಇಂದು ವಸಾಹತುಶಾಹಿ ಮತ್ತು ಕೈಗಾರಿಕಾಶಾಹಿಗಳ ದರ್ಬಾರುಗಳನ್ನು ಕಾಣುತ್ತೇವೆ. ಕೆ.ವಿ.ಪುಟ್ಟಪ್ಪನವರ ಆದಿಪುರಾಣ ಸಂಗ್ರಹ ಮುನ್ನುಡಿಯಲ್ಲಿ "ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಕಕ್ಷಿ ಕಕ್ಷಿಗಳ, ಪಕ್ಷ ಪಕ್ಷಗಳ ಖಂಡನ ಮಂಡನಗಳಿಂದಲೂ ಆಘಾತ ಪ್ರತ್ಯಾಘಾತಗಳಿಂದಲೂ ಕ್ಷಣ ಕ್ಷಣಕ್ಕೂ ಹೆಚ್ಚುತ್ತಿರುವ ಸಹಸ್ರ ಸಹಸ್ರ ವಿಷಯ ವಿರೋಧಗಳಿಗೆ ಪ್ರತ್ಯೇಕ ಬೀಜಮದ್ದು ತ್ಯಾಗ ವೀರನಾದ ಬಾಹುಬಲಿಯ ಚರಿತ್ರಪಠನ"[೨೦೦] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳು ಜನರಲ್ಲಿ ದೊಡ್ಡ ಕ್ಷೇತ್ರಗಳಾಗಿದ್ದರಿಂದ ಜನರಲ್ಲಿ ಸ್ವಾರ್ಥತೆ, ಅಸಹಕಾರತೆ ಭಾವನೆ ಮೂಡುವುದು ಸಹಜವಾಗಿದೆ. ಇದರಿಂದ ಚಳುವಳಿ, ಪ್ರತಿಭಟನೆ ಮಾಡಿದರೂ ಮುಕ್ತಿ ಎಂಬುದು ಇಲ್ಲ. ಆದರೆ ಪಂಪನ ಆದಿಪುರಾಣದ ಕೃತಿಯ ಪ್ರಸಂಗದಲ್ಲಿ ಭರತನು ಇಡೀ ಭೂಮಂಡಲವನ್ನು ಗೆಲ್ಲುತ್ತೇನೆಂಬ ಅಹಂಕಾರದಿಂದ ಚಕ್ರರತ್ನ ಬಳಸಿದನು. ಕೊನೆಗೆ ಬಾಹುಬಲಿಯ ಜೊತೆಗೆ ಹೋರಾಟದ ಮೂಲಕ ಭರತ ಸೋಲುತ್ತಾನೆ. ಆಗ ಬಾಹುಬಲಿಯೂ ಈ ಸಮಾಜದಲ್ಲಿ ಸ್ವಾರ್ಥ ಅಸೂಯೆ ತುಂಬಿರುವಾಗ ಬದುಕುವುದು ತುಂಬಾ ಕಷ್ಟ ಎಂದು ತಿಳಿದು ಕೊನೆಗೆ ಭರತನಿಗೆ ರಾಜ್ಯವನ್ನು ತ್ಯಾಗ ಮಾಡಿ ತಪಸ್ಸಿಗೆ ಹೋಗುತ್ತಾನೆ. ಈ ರೀತಿಯಾಗಿ ಬ್ರಿಟಿಷರ ಕೂಡ ಇಡೀ ಭಾರತವನ್ನು ತಮ್ಮ ವಶದಲ್ಲಿಟ್ಟುಕೊಂಡಾಗ ಗಾಂಧೀಜಿಯ ನಾಯಕತ್ವದಲ್ಲಿ ಹಲವಾರು ಸತ್ಯಾಗ್ರಹಗಳು, ಚಳುವಳಿಗಳು, ಅಹಿಂಸೆಯ ತತ್ವದ ಮೂಲಕ ಗಾಂಧೀಜಿ ಬ್ರಿಟಿಷರನ್ನು ಸೋಲಿಸಿದ್ದಾರೆ. ಲೋಹಿಯಾ ಚಿಂತನೆಗಳಿಂದ ದಲಿತ ಚಳುವಳಿಗಳು, ಸಾಮಾಜಿಕ ಚಳುವಳಿಗಳು ನಡೆದಿರುವುದು ಭಾರತದುದ್ದಕ್ಕೂ ಸಿಗುತ್ತವೆ. ಸ್ವಾತಂತ್ರ್ಯದ ಕನಸು ನನಸಿನಲ್ಲಿ ಭಾರತವನ್ನು ಸುಂದರವಾದ ಹಾಗೂ ಜಾತ್ಯತೀತ ರಾಷ್ಟ್ರದ ಕನಸು ಮೂಡಿಸಿಕೊಂಡವರು. ಆದರೆ ನೆಹರು ಅವರ ಕೈಗಾರಿಕಶಾಹಿತ್ವದಿಂದ ಹಲವಾರು

ರಾಷ್ಟ್ರ ನಾಯಕರುಗಳಿಗೆ ಕೈಗಾರೀಕರಣ ಎಂಬುದು ಮುಳುವಾಯಿತು. ನೆಹರು ಚಿಂತನೆಗಳು ಭಾರತದ ಉನ್ನತ ಅಭಿವೃದ್ಧಿಯ ಕನಸಾಗಿತ್ತು. ಆದರೆ ಬಡವರ ಪರವಾಗಿರದೇ, ಆ ಉನ್ನತ ಕೈಗಾರಿಕೆಗಳ ಅಭಿವೃದ್ಧಿಯಿಂದ ಇನ್ನೂ ಚೇತರಿಸಿಕೊಳ್ಳದ ಅನೇಕ ಘಟನೆಗಳು ಈಗಲೂ ಸಹ ಕಾಣುತ್ತೇವೆ. ಅದಕ್ಕಾಗಿ ಬಾಹುಬಲಿಯಂತ ಈ ಸಮಾಜದ ಸ್ವಾರ್ಥ, ಅಧಿಕಾರದ ಅಸೂಯೆ ಇವುಗಳನ್ನು ಧಿಕ್ಕರಿಸಿ ಮುಕ್ತರಾಗಿ ತಪಸ್ಸಿಗೆ ಹೋದ, ಗಾಂಧೀಜಿ ಜಾತಿ, ಬಡವರ, ದಲಿತ ಹಳ್ಳಿಗಳ ಅಭಿವೃದ್ಧಿ ಸಮಾನತೆಗಾಗಿ ಹೋರಾಟ ಮಾಡಿ ಕೊನೆಗೆ ಗುಂಡೇಟಿನಿಂದ ಸಾಯುತ್ತಾರೆ. ಹೀಗೆ ಬಾಹುಬಲಿ, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಮುಂತಾದವರ ಚಿಂತನೆಗಳು ಮತ್ತು ಆದರ್ಶಗಳು ಚಳುವಳಿಗಳಿಗೆ ಪ್ರಸ್ತುತವಾಗಬೇಕಾಗಿವೆ.

**ಹೊಸಗನ್ನಡ ಸಾಹಿತ್ಯ ಸಂದರ್ಭದ ಮುನ್ನುಡಿಗಳು**

ಭಾರತೀಯ ಚಳುವಳಿಗಳ ಅವಧಿಯೆಂದರೆ ೧೯ನೇ ಶತಮಾನದ ಕೊನೆ ಮತ್ತು ೨೦ನೇ ಶತಮಾನದ ಆರಂಭದ ಸಂದರ್ಭಗಳು. ಈ ಸಂದರ್ಭದಲ್ಲಿ ಅತೀ ಹೆಚ್ಚು ಚಳುವಳಿಗಳು ನಡೆದಿರುವುದು ಗೊತ್ತಾಗುತ್ತವೆ. ವಸಾಹತೀಕರಣ ವಿಜ್ಞಾನ, ಶಿಕ್ಷಣ, ಕೈಗಾರಿಕೆ, ಸ್ವಸಂಸ್ಕೃತಿ ಪ್ರಜ್ಞೆ, ಸಾಮಾಜಿಕ ಪಲ್ಲಟಗಳ ಫಲವಾದ ತಲ್ಲಣಗಳು, ಹಳೆಯ ಕಾವ್ಯರೂಪಕಗಳನ್ನು ಮರೆಯುವಂತ ಸ್ಥಿತಿಗಳು ಮುಂತಾದವುಗಳ ಮೂಲಕ ಬದಲಾವಣೆಯ ಗಾಳಿ ಬೀಸಿದೆ. ಹೊಸಗನ್ನಡ ಸಾಹಿತ್ಯದ ಆರಂಭದಲ್ಲಿ ಕೆಲವು ಕವಿಗಳು ಅಪೂರ್ವವಾದ ಸಾಮಾಜಿಕ ಎಚ್ಚರದಿಂದ ಕಾವ್ಯ ರಚನೆ ಮಾಡಿದರು. ಆಗ ಸ್ವಾತಂತ್ರ್ಯ ಹೋರಾಟದ ವಸ್ತುವಾಗಿ, ಪ್ರತಿಭಟನೆಯ ಸ್ಫೂರ್ತಿಯಾಗಿ ದೇಶಪ್ರೇಮ ರಾಷ್ಟ್ರದ ಪರಿಕಲ್ಪನೆಯಿಂದ ಹಲವಾರು ಸಾಹಿತ್ಯ ರಚನೆಗೊಂಡಿದೆ. ಆಗ ಇದರಿಂದ ಕನ್ನಡ ಸಾಹಿತ್ಯಕ್ಕೆ ಪ್ರೇರಣೆಗಳು ಪ್ರಭಾವಗಳಿಂದ, ರಷ್ಯನ್ ಕ್ರಾಂತಿಯಲ್ಲಿ ಅನೇಕ ಕವಿಗಳು ನೊಂದವರ, ಶೋಷಿತರ ಪರವಾಗಿ ಬರೆದಿದ್ದಾರೆ('ಪ್ರತಿಭಟನೆ ಕಾವ್ಯ', ಮುನ್ನುಡಿ: ಹಂಪ ನಾಗರಾಜಯ್ಯ). ಕೆಲವೊಮ್ಮೆ ಅನುವಾದದ ಸಾಹಿತ್ಯವು ನಮ್ಮ ಕನ್ನಡ ಸಾಹಿತ್ಯದ ಮೇಲೆ ಪ್ರಭಾವಕ್ಕೊಳಗಾಗಿ ತನ್ನ ಅಭಿವ್ಯಕ್ತಿಗೆ ಸೂಕ್ತವೆನಿಸಿದ ಪಾಶ್ಚಿಮಾತ್ಯರ ಮಾದರಿಗಳನ್ನು ಕೇವಲ ಆಧುನೀಕರಿಸಿಕೊಳ್ಳದೇ ಪರಿವರ್ತಿಸಿಕೊಳ್ಳುವ ಮನೋಭಾವದ ಮೇಲಿನ ನವೋದಯ ಸಾಹಿತ್ಯ ಚಳುವಳಿಯಾಗಿ ಬದಲಾವಣೆಯಾಯಿತು. ಆಗ ಅನ್ಯಜ್ಞಾನ ಸಾಹಿತ್ಯದ ಪ್ರೇರಣೆ ಪ್ರಭಾವಗಳಿಂದ ಕನ್ನಡ ಸಾಹಿತ್ಯದಲ್ಲಿ ಛಂದಸ್ಸು ಮತ್ತು ಅಲಂಕಾರಗಳ ಹಿಡಿತದಿಂದ ತಪ್ಪಿಸಿಕೊಂಡು ನವೋದಯದಲ್ಲಿ ಯಾವುದೇ ಛಂದೋಬದ್ಧ ಇಲ್ಲ ಎಂಬುದಾಗಿ ಆಗ ಹಳೇ ಬೇರು, ಹೊಸ ಚಿಗುರು ಎಂಬಂತೆ ಬರವಣಿಗೆಯ ವಿಧಾನ ಬೇರೆಯಾಯಿತು. ತೀ.ನಂ.ಶ್ರೀ.ಯವರು 'ಇಂಗ್ಲಿಷ್ ಗೀತಗಳು' ಕೃತಿಗೆ ಮುನ್ನುಡಿ ಬರೆಯುತ್ತಾ, "ಸಾಂಪ್ರದಾಯಿಕ ದೃಷ್ಟಿಯಿಂದ ನೋಡಿದರೆ 'ಇಂಗ್ಲಿಷ್ ಗೀತಗಳ'ಲ್ಲಿ ಎಲ್ಲವೂ ಹೊಸದು, ಉದ್ದೇಶಪೂರ್ವಕವಾಗಿ ಆಮೂಲಾಗ್ರವಾಗಿ ಹೊಸದು, ಭಾಷೆ ಹೊಸದು, ರೀತಿ ಹೊಸದು, ಛಂದಸ್ಸು ಹೊಸದು"[೧೦೦] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಬಿ.ಎಂ.ಶ್ರೀ.ಯವರು

ತಮ್ಮ ತಲೆಮಾರಿನವರಿಗಿಂತ ಭಿನ್ನರಾಗಿ ಗುರುತಿಸಿಕೊಂಡವರು. ಇವರು ಅಂದಿನ ಹೊಸಪ್ರಜ್ಞೆಯಿಂದ ಸಾಹಿತ್ಯ ಓದುಗರಲ್ಲಿ ಹೊಸತನ ಮೂಡಿಸಿದರು. "ಇಂಗ್ಲಿಷ್ ಸಂಪರ್ಕದಿಂದ ಕನ್ನಡ ಸಾಹಿತ್ಯವನ್ನು ಕಸಿ ಮಾಡಿ ಬೆಳೆಸುವುದು."[೧೨] ಕನ್ನಡ ಸಾಹಿತ್ಯ ಎಷ್ಟೊಂದು ಪ್ರಭಾವಗೊಂಡಿದೆ ಎಂದು ತಿಳಿಯುತ್ತೇವೆ. ಆಧುನಿಕ ಸಾಹಿತ್ಯಕ್ಕೆ 'ಇಂಗ್ಲಿಷ್ ಗೀತಗಳು' ಕೃತಿಯ ಮುನ್ನುಡಿಯು ಹೊಸತರವನ್ನು ಹೇಳಿಕೊಟ್ಟಿತು. ಅದು ಛಂದೋಬದ್ಧವಾಗಿರದೇ ಪ್ರಾಸವನ್ನು ಬಿಟ್ಟು ಸರಳ ಛಂದಸ್ಸಿನಲ್ಲಿ ಕಾವ್ಯ ರಚನೆಗೊಳ್ಳತೊಡಗಿದವು. ಇದೇ ಮುಂದುವರಿದು ಧರ್ಮವನ್ನು ನಿರಾಕರಣೆ ಮಾಡುವ ವ್ಯವಸ್ಥೆಯನ್ನು ವಿರೋಧಿಸುವ, ಮತಧರ್ಮ ಹಾಗೂ ಪ್ರಭುತ್ವಗಳನ್ನು ಮೊದಲಿಗೆ ತಿರಸ್ಕರಿಸುವ ದಿಟ್ಟತನದ ನಿಲುವು ತಾಳಿತು. ಕನ್ನಡ ಸಾಹಿತ್ಯದ ವಾಸ್ತವತೆ, ವೈಚಾರಿಕ ನೆಲೆಗಟ್ಟಿನಿಂದ ಪ್ರತಿಭಟಿಸುವ ಹಾಗೂ ಮತ-ಧರ್ಮ ಎನ್ನದೇ ಮಾನವೀಯತೆಯ ಲಕ್ಷಣದಿಂದ ನವೋದಯ ಸಾಹಿತ್ಯ ಚಳುವಳಿ ಆರಂಭಗೊಂಡಿತು.

ಕನ್ನಡದಲ್ಲಿ ಅಸ್ತಿತ್ವಗೊಂಡ ನವೋದಯ ಚಳುವಳಿ ಇಡೀ ಭಾರತೀಯ ಪುನರುಜ್ಜೀವನವನ್ನು ರೂಪಿಸಿದ ರಾಷ್ಟ್ರೀಯತೆ, ಆಧುನಿಕ ವೈಜ್ಞಾನಿಕ ಚಿಂತನೆಗಳು, ಟಾಗೋರ್, ಗಾಂಧಿ, ಅರವಿಂದರು, ರಾಮಕೃಷ್ಣರು, ವಿವೇಕಾನಂದರ ವಿಚಾರಗಳ ಮತ್ತು ವಿವಿಧ ಜಾಗತಿಕ ಪ್ರಭಾವಗಳು ಇತ್ಯಾದಿಯಾಗಿ ರೂಪಿಸಿಕೊಂಡ ಕನ್ನಡ ನವೋದಯ ಸಾಹಿತ್ಯದ ಇತರ ಪ್ರಕಾರವಾಗಿ ಕತೆ, ಕಾವ್ಯ, ಕಾದಂಬರಿ, ಲಲಿತಪ್ರಬಂಧ ಕೃತಿಗಳಿಗೆ ಮುನ್ನುಡಿಗಳಲ್ಲಿ ವ್ಯಕ್ತಗೊಂಡಂತೆ ಅನೇಕ ಕೃತಿಗಳ ಮೂಲಕ ಚಳುವಳಿಯನ್ನು ರೂಪಿಸಿಕೊಂಡಿದೆ.

ಸ್ವಾತಂತ್ರ್ಯಪೂರ್ವ ಕಾಲದಲ್ಲಿ ನವೋದಯ ಸಾಹಿತ್ಯದ ಜೊತೆ ಜೊತೆಗೆ ಕೆಲವು ವಿಚಾರಗಳಲ್ಲಿ ನವೋದಯದ ಧೋರಣೆಗಳಿಗೆ ಪ್ರತಿಕ್ರಿಯೆ ಎಂಬಂತೆ ಹುಟ್ಟಿಕೊಂಡ ಪ್ರಗತಿಶೀಲ ಚಳುವಳಿಯಾಗಿದೆ. ೧೯ ಮತ್ತು ೨೦ನೇ ಶತಮಾನದಲ್ಲಿ ನಡೆದ ಕೈಗಾರಿಕಾ ಕ್ರಾಂತಿ, ರಾಜಕೀಯ ಕ್ರಾಂತಿಗಳ ಪರಿಣಾಮವಾಗಿ ಶ್ರಮಿಕ ಮತ್ತು ಬಂಡವಾಳಶಾಹಿ ವರ್ಗಗಳು ರೂಪುಗೊಂಡ ಆರ್ಥಿಕ ಅಸಮಾನತೆಯಿಂದ ಸಾಹಿತಿಗಳಲ್ಲಿ ಮೂಡಿದ ಜನಪರ ಆಲೋಚನೆಗಳು ಇಂತಹ ಸ್ಥಿತಿಯಿಂದ ಫ್ರೆಂಚ್ ಕ್ರಾಂತಿಯ ನಂತರ ರಷ್ಯನ್ ಕ್ರಾಂತಿಗಳ ಪರಿಣಾಮವಾಗಿ 'ವಾಸ್ತವವಾದ' ಎಂಬ ಚಳುವಳಿಯೊಂದು ಹುಟ್ಟಿಕೊಂಡಿತು. ಇದರ ಪ್ರೇರಣೆಯಾಗಿ ೧೯೩೬ರಲ್ಲಿ ನಡೆದ ಪ್ರೇಮ್‌ಚಂದ್ ಅವರ ಅಧ್ಯಕ್ಷತೆಯಲ್ಲಿ ನಡೆದ ಭಾರತದ 'ಪ್ರಗತಿಶೀಲ' ಲೇಖಕರ ಪ್ರಥಮ ಅಧಿವೇಶನ ನಡೆಯಿತು. ಇದರ ಪ್ರಭಾವವಾಗಿ ೧೯೪೩ರಲ್ಲಿ ಕನ್ನಡದಲ್ಲಿ ಪ್ರಗತಿಶೀಲ ಲೇಖಕರ ಸಂಘ ಅಸ್ತಿತ್ವಗೊಂಡಿತು. ಬದುಕಿನ ಹೊಸತನವನ್ನು ಅಳವಡಿಸಿಕೊಳ್ಳುವ ಜನಸಮುದಾಯದ ಮೇಲೆ ನಡೆಯುವ ದಬ್ಬಾಳಿಕೆಗಳನ್ನು ವಿರೋಧಿಸುವ ಸಾಮ್ರಾಜ್ಯಶಾಹಿ ಮತ್ತು ಬಂಡವಾಳಶಾಹಿಗಳ ವಿರುದ್ಧ ಧ್ವನಿ ಎತ್ತುವ ಮತ್ತು ಸಮಾನತೆಯ ಸಾಮಾಜಿಕ ವ್ಯವಸ್ಥೆಯೊಂದನ್ನು ರೂಪಿಸಿಕೊಳ್ಳುವ ನಿಲುವನ್ನು ತಾಳಿತು.

ಅ.ನ.ಕೃ. ಅವರ 'ಪ್ರಗತಿಶೀಲ ಸಾಹಿತ್ಯ' ಎಂಬ ಪ್ರಬಂಧಗಳ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ(೧೯೪೪) "ಪ್ರಗತಿಶೀಲ ಸಾಹಿತಿಗಳ ಗುರಿ ಕೇವಲ ಸಾಮಾಜಿಕವಾದ ಸಾಹಿತ್ಯವನ್ನು

ನಿರ್ಮಾಣ ಮಾಡುವುದೇ ಅಲ್ಲ, ಸಾಹಿತ್ಯದಲ್ಲಿ ನೈಸರ್ಗಿಕತೆಯೇ ಇರಬೇಕು. ಅಜೇಯ ಶಕ್ತಿಯೂ ಇರಬೇಕು. ಅದು ನಮ್ಮ ಜನತೆಯ ಸಂಸ್ಕೃತಿ ಆಸೆ, ಆಶಯ ಸುಖ ದುಃಖಗಳ ಕನ್ನಡಿಯಾಗಿರಬೇಕು. ಸಾಹಿತಿ ಜನತೆಯ ಮಾರ್ಗದರ್ಶಕನಾಗಿರಬೇಕು. ತನ್ನ ಬಾಳಿನಿಂದ, ಭಾವನೆಯಿಂದ, ವಿಚಾರ ಈ ಉದ್ದೇಶದಿಂದ ಹೊರಗೆ ನಿಂತ ಸಾಹಿತ್ಯ ಸತ್ತ ಸಾಹಿತ್ಯ"[೧೧೩] ಎಂದು ಹೇಳುತ್ತಾರೆ. ಈ ಮೂಲಕ ಪ್ರಗತಿಶೀಲತೆ ತೀವ್ರತರವಾದ ಸಾಹಿತ್ಯ ಚಳುವಳಿಯಾಗಿದೆ. ಸಮಾಜದಲ್ಲಿ ವಾಸ್ತವತೆಯನ್ನು ಎತ್ತಿ ತೋರಿಸುವ ಕೆಲಸ ಅವರ ಕಥೆ, ಕಾದಂಬರಿ, ಪ್ರಬಂಧಗಳನ್ನು ಒಳಗೊಂಡಿದೆ. ಮಧ್ಯಮವರ್ಗದವರ ಬದುಕನ್ನು ಮತ್ತು ಬಡವರ, ಕೂಲಿಕಾರರ, ಶೋಷಿತರ, ಮಹಿಳೆಯರ ಜೀವನವನ್ನೇ ತನ್ನ ವಸ್ತುವಾಗಿ ಮಾಡಿಕೊಂಡು ಕಥೆ, ಕಾದಂಬರಿಗಳ ಮೂಲಕ ರೋಚಕವಾಗಿ ಹಾಗೂ ವೃತ್ತಿನಿರತವಾಗಿ ಈ ಸಾಹಿತ್ಯ ಕಾಣಿಸುತ್ತದೆ. ಒಬ್ಬ ಇಂಗ್ಲಿಷ್ ಲೇಖಕ 'ಲೆನಿನ್' ಹೇಳಿದ ಜನತೆಗೆ ಸರಿಯಾದ ಶಿಕ್ಷಣ ನೀಡುವುದು, ಸಮಾಜದ ಕಣ್ಣಾಗಿ, ಕಿವಿಯಾಗಿ ಕೆಲಸ ಮಾಡುವುದು, ಸಮಾಜಕ್ಕೆ ಸ್ಫೂರ್ತಿ ನೀಡುವುದು ಕಲೆಯ ಉದ್ದೇಶ, ಸಾಹಿತ್ಯದ ಉದ್ದೇಶ ಎಂದು ಹೇಳುತ್ತಾನೆ. ಈ ಮಾತು 'ಸಾಮಾಜಿಕ ವಾಸ್ತವವಾದದ' ಪರಿಕಲ್ಪನೆಗೆ ಕಾರಣವಾಗಿದೆ. ಪ್ರಗತಿಶೀಲ ಲೇಖಕರು ಕಣ್ಣಿನಿಂದ ನೋಡಿದಾಗ ಮತ್ತು ಕೇಳಿದಾಗ ಅದನ್ನು ಬರವಣಿಗೆಯ ಮೂಲಕ ತೋರಿಸಿದವರು ಪ್ರಗತಿಶೀಲರು. ಅವರು ತಮ್ಮ ಸಾಹಿತ್ಯ ರಚನೆಯ ಜೊತೆ ಜೊತೆಗೆ ಕರ್ನಾಟಕ ಮೂಲೆ ಮೂಲೆಗಳಿಗೆ ಹೋಗಿ ನಾಡು ನುಡಿಗಳ ಮೇಲಿನ ಪ್ರೀತಿ ಹುಟ್ಟಿಸಿದರು. ಅ.ನ.ಕೃ., ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗ, ತರಾಸು ಪ್ರಮುಖರು. ಮಾರ್ಕ್ಸ್ ಸಿದ್ಧಾಂತದ ಮೂಲಕ ಶೋಷಿತರ ಧ್ವನಿಯಾದರು. ಶ್ರಮಿಕವರ್ಗ, ಮೇಲ್ವರ್ಗಗಳ ಕಾಲ ಹಿಡಿಯುವ ಸ್ಥಿತಿಯ ವಿರುದ್ಧ ಮತ್ತು ಜಮೀನ್ದಾರಿಗಳ ವಿರುದ್ಧ ಹೋರಾಡಿದರು. ಇದಕ್ಕೆ ಮುಖ್ಯ ಉದಾಹರಣೆ ನಿರಂಜನರ 'ಚಿರಸ್ಮರಣೆ' ಕೃತಿ. ೭೦ರ ದಶಕದಲ್ಲಿ ದಲಿತ ಮತ್ತು ಬಂಡಾಯ ಸಾಹಿತ್ಯದ ಚಳುವಳಿಗೆ ಪ್ರಗತಿಶೀಲ ಚಳುವಳಿ ಪ್ರೇರಣೆಯಾಗಿದೆ. ಪ್ರಗತಿಶೀಲ ಚಳುವಳಿ ಸಂಪ್ರದಾಯ ಮತ್ತು ಪರಂಪರೆಯ ವಿರುದ್ಧ ಮುಖ ಮಾಡಿ ಸಾಹಿತ್ಯ ಚಿಂತನೆಯಲ್ಲಿ ವಿಭಿನ್ನ ಚಳುವಳಿಯಾಗಿ ಹೊರಹೊಮ್ಮಿತು. ಆದರೂ ಐದು-ಆರು ವರ್ಷಗಳ ಕಾಲ ಇದ್ದು, ಸಾಹಿತ್ಯ ಲೋಕದಲ್ಲಿ 'ಪ್ರಗತಿಶೀಲ' ಚಳುವಳಿ ಕಾವು ತೋರಿಸಿತು. ಮುಂದೆ ನವ್ಯ ಸಾಹಿತ್ಯ ಚಳುವಳಿಯ ಭರಾಟೆಯಲ್ಲಿ ಪ್ರಗತಿಶೀಲ ಸಾಹಿತ್ಯ ರಚನೆ ಕಡಿಮೆಯಾಯಿತು.

ಆಧುನಿಕ ಕನ್ನಡ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಾಣಿಸಿಕೊಂಡ ನವ್ಯ ಸಾಹಿತ್ಯ ಚಳುವಳಿ ಅತ್ಯಂತ ಕುತೂಹಲಕರವಾಗಿ, ಸಾಹಿತ್ಯ ಕಲ್ಪನೆಗಳ ಬೇರನೇ ನಡುಗಿಸಿದೆ. ಈ ಚಳುವಳಿ ವಿಮರ್ಶಾ ಪ್ರಜ್ಞೆಯಿಂದ ಕೂಡಿದೆ ಹಾಗೂ ಹೊಸ ಹೊಸ ಪ್ರಯೋಗಗಳಿಂದ ವಸ್ತು, ರೂಪ, ಪ್ರತಿಮೆ ಹೆಚ್ಚಾಗಿ ಭಾಷೆಗೆ ಒತ್ತು ನೀಡಿದೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ಕೆಲವು ಸಂಪ್ರದಾಯ, ಪರಂಪರೆ, ಕನಸುಗಾರಿಕೆ, ದೇಶಭಕ್ತಿ, ಆದರ್ಶಪರತೆ, ಮೌಲ್ಯ, ನಿಷ್ಠೆ ಇತ್ಯಾದಿಗಳು ನವ್ಯ ಸಾಹಿತ್ಯದಲ್ಲಿ ದ್ವಂದ್ವಗಳಾಗಿ ಕಾಣುತ್ತವೆ. ಏಕೆಂದರೆ ಗಾಂಧೀಜಿಯವರ ಮರಣದ ನಂತರ ಈ ಎಲ್ಲ ಅರ್ಥಗಳು ಕಳೆದುಕೊಂಡವು ಎಂಬುದಾಗಿದೆ. ಸ್ವತಂತ್ರ ಭಾರತದ ನಂತರ ಪರಿಸರ ಕಲುಷಿತಗೊಂಡು ಜನಗಳ ನಡುವಿನ

ನಂಬಿಕೆಯು ಕಲುಷಿತವಾಗಿ ಭ್ರಷ್ಟಾಚಾರ, ರಾಜಕಾರಣಿಗಳ ಭರವಸೆಗಳು ಸುಳ್ಳಾಗುವುದು, ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂತಹ ಸ್ಥಿತಿ ನಿರ್ಮಾಣಗೊಂಡಿದ್ದವು. ಆಧ್ಯಾತ್ಮದ ಹೆಸರಿನಲ್ಲಿ ನಡೆಯುವ ವಂಚನೆಗಳು, ನಗರದಲ್ಲಿ ಯಾಂತ್ರಿಕ ಬದುಕು ಸಾಗಿಸುವುದು, ಏಕಾಂಗಿತನ, ಅನಾಥಪ್ರಜ್ಞೆ ಇಂತಹ ಸ್ಥಿತಿಯಲ್ಲಿ ಬದುಕಿನ ಸಂವೇದನೆಗೆ ತಕ್ಕ ಅಭಿವ್ಯಕ್ತಿಯನ್ನು ಹೊಸಪ್ರಜ್ಞೆಯ ಮೂಲಕ ಹೊಸ ಸಾಹಿತ್ಯದ ಅಗತ್ಯತೆಯನ್ನು ೫೦ರ ದಶಕದಲ್ಲಿ ವಿ.ಕೃ. ಗೋಕಾಕರಿಂದ ಮೊದಲುಗೊಂಡು ಗೋಪಾಲಕೃಷ್ಣ ಅಡಿಗರಿಂದ ಈ ನವ್ಯ ಸಾಹಿತ್ಯ ಚಿಂತನೆಯಿಂದ ಕನ್ನಡ ಸಾಹಿತ್ಯದ ಹೊಸ ಪ್ರಕಾರವಾಯಿತು.

ಗೋಪಾಲಕೃಷ್ಣ ಅಡಿಗರು 'ನಡೆದುಬಂದ ದಾರಿ'ಯ ಕೃತಿಯ ಮುನ್ನುಡಿಯಲ್ಲಿ ನವ್ಯ ಸಾಹಿತ್ಯಕ್ಕೆ ಮುನ್ನುಡಿಯಾಗಿ ಪ್ರಣಾಳಿಕೆಯನ್ನು ವ್ಯಕ್ತಪಡಿಸಿದ್ದಾರೆ. ಅದು "ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕ ಇದ್ದ ವಾತಾವರಣ ಈಗ ಸಮೂಲ ಪರಿವರ್ತನೆಗೊಂಡಿದೆ. ಸ್ವಾತಂತ್ರ್ಯ ಸಂಗ್ರಾಮದ ಉತ್ಸಾಹ ಉದ್ವೇಗ ಆದರ್ಶಪರವಶತೆಯ ಹಾರಾಟ ಮುಗಿದು ಈಗ ನಮ್ಮ ಮನಸ್ಸು ಮತ್ತೆ ನೆಲಕ್ಕಿಳಿದಿದೆ. ಮೋಡವಾಗಿ ಮೇಲೇರಿದ ಮನಸ್ಸು ಮಳೆಯಾಗಿ ಬಿದ್ದು ಮತ್ತೆ ಹಳ್ಳ-ಕೊಳ್ಳಗಳಲ್ಲಿ ತುಂಬಿಕೊಂಡಿದೆ. ತಳದಲ್ಲಿ ಕೂತಿದ್ದ ಕೊಳೆ ಕಸ ರಾಡಿಯಲ್ಲಿ ಈಗ ಮೇಲೆದ್ದು ಬಂದು ಕನ್ನಡಿಯಂಥ ನೀರು ಕಲುಕಿದೆ. ಹೊಸ ಆದರ್ಶಕ್ಕಾಗಿ ಹೊಸ ಕನಸಿಗಾಗಿ ದೇಶದ ಮನಸ್ಸು ಹಸಿದು ಕಾಯುತ್ತಿದೆ. ಇಂತಹ ವಾತಾವರಣ ಸುತ್ತಮುತ್ತಲೂ ಇರುವಾಗ ಜೀವನಾವಲಂಬಿಯಾದ ಕಾವ್ಯವು ಪರಿವರ್ತನೆಗೊಳ್ಳುವುದು ಸಹಜ"[೧೧೪] ಎಂದು ಹೇಳುತ್ತಾರೆ. ಗೋಪಾಲಕೃಷ್ಣ ಅಡಿಗರು ಮುಖ್ಯವಾಗಿ ಸಂಪ್ರದಾಯ ಮತ್ತು ಪರಂಪರೆಯ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ಚರ್ಚೆಗೊಳಗಾಗುವಂತಹವರು. ಅಡಿಗರ ತಾತ್ವಿಕ ಚಿಂತನೆ ಹಳೆಯದರಲ್ಲಿ ಹೊಸತನ ಕಾಣುವುದು. ಹಾಗಾಗಿ ಕೊಳೆ ಕಸ ರಾಡಿಯೆಲ್ಲಾ ಬಂದು ಕನ್ನಡಿಯಂತಾಗಿದೆ. ಮುಖ್ಯವಾಗಿ ಚಳುವಳಿಯಾತ್ಮಕವಾಗಿ ಹೊಸ ಆದರ್ಶತೆಗಾಗಿ ವಾಲುತ್ತಿದೆ. ನವೋದಯ ಚಿಂತನೆಗಳಲ್ಲಿ ಗುರುತಿಸುವ ಹಾಗೆ ಬ್ರಿಟಿಷರ ಆಡಳಿತವನ್ನು ಕೊಳೆಯಾಗಿ ಗುರುತಿಸಿದೆ. ಈಗ ಅದೇ ಕೊಳೆ ಕನ್ನಡಿಯಂತಾಗಿ ಮೂಡಿದೆ. ಈ ನೆಲೆಯಿಂದ ಗಾಂಧೀಜಿಯವರಿಂದ ಸಾಕಾರಗೊಂಡಿದೆಯೋ ಜನರಿಂದ ಸಾಕಾರಗೊಂಡಿದೆಯೋ ಅಥವಾ ಸಮಕಾಲೀನರ ಚಿಂತನೆಯಲ್ಲಿ ಸ್ವಾತಂತ್ರ್ಯ ಕುರಿತು ಪ್ರತಿಕ್ರಿಯೆಯಾಗಿ ಜನರಲ್ಲಿ ಆದರ್ಶತೆಯ ಹೊಸತನ ಮೂಡಿದೆ ಎಂದು ಹೇಳಬಹುದು. "ಗಾಂಧೀಯುಗದಲ್ಲಿ ಬರೆದ ರೀತಿಯಲ್ಲೇ ಇನ್ನು ಬರೆದರೆ ಬಹುಶಃ ಅದು ಕಾವ್ಯಾಭಾಸವಾಗುತ್ತದೆ. ಇಲ್ಲವೇ ಸತ್ಯಹೀನ ಕಾವ್ಯವಾಗುತ್ತವೆ. ಆಗ ಭಾವವನ್ನು ಕೊಲ್ಲುವ ಮಾತು ಬೇತಾಳದಿಂದ ನಮ್ಮ ಬೆನ್ನು ಹತ್ತಿ ಸಮಾಜದ ಬೆಳವಣಿಗೆಗೆ ಮಾರಕವಾಗುತ್ತದೆ ಎಂದು ನನಗೆ ತೋರುತ್ತದೆ. ಆದ ಕಾರಣ ಈಗ ಕಾಣುತ್ತಿರುವ ಹೊಸ ಮನೋಧರ್ಮವನ್ನು ವ್ಯಕ್ತಪಡಿಸಲು ಹೊಸ ನಾಲಿಗೆ, ಹೊಸ ನುಡಿಕಟ್ಟು ರೂಪುಗೊಳ್ಳಬೇಕಾಗಿದೆ. ಈಗ ಬರೆಯುತ್ತಿರುವ ಕವಿಗಳಲ್ಲಿ ಈ ಕುರಿತು ಯೋಚನೆ ಮಾಡಬೇಕಾದುದು ಅನಿವಾರ್ಯ. ಹೊಸ ಹೊಸತಾಗಿ ಬರೆಯುತ್ತಿರುವ ತರುಣ ಕವಿಗಳಂತೂ ಈ ಸಮಸ್ಯೆಯನ್ನು ಎದುರಿಸದೆ ಗತ್ಯಂತರವಿಲ್ಲ. ನಮ್ಮ ಹಿರಿಯ ಕವಿಗಳ ದಾರಿಯಲ್ಲಿ ನಡೆಯುವುದರಿಂದಲೂ ಅಷ್ಟು ಕವಿತೆ ಬಂದಿತು. ಆದರೆ ಅದಕ್ಕೆ ಜೀವ ಕೊಡುವ ಸತ್ವವಾಗಲಿ

ಹೊಸ ಸಮಾಜದ ವಾಣಿಯಾಗುವ ಸಾಮರ್ಥ್ಯವಾಗಲೀ ಖಂಡಿತ ಬರಲಾರದು”[೧೧೫] ಎಂದು ಹೇಳುತ್ತಾರೆ.

ಅಡಿಗರ 'ನಡೆದುಬಂದ ದಾರಿ' ಕೃತಿಯು ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಕೃತಿ ಪ್ರಕಟವಾದ ಮೂರು ವರ್ಷಗಳ ನಂತರ ಪ್ರಕಟವಾಗಿದೆ. ಈ ಹಿನ್ನೆಲೆಯಿಂದ ನವೋದಯ ಚಳುವಳಿ ಮುಗಿದು ನವ್ಯ ಸಾಹಿತ್ಯ ಚಳುವಳಿಗೆ ಅಡಿಗರ 'ನಡೆದುಬಂದ ದಾರಿ' ಕೃತಿಯು ಮುನ್ನುಡಿಯು ಅಡಿಗಲ್ಲಾಗಿದೆ. ಹಿರಿಯ ಕವಿಗಳ ದಾರಿಯಲ್ಲಿ ನಡೆಯುವುದರಿಂದ, ಸಾಹಿತ್ಯ ರಚನೆ ಮಾಡುವುದಾದರೆ ಸತ್ಯವಾಗಲಿ ಹೊಸ ಸಮಾಜದ ವಾಣಿಯಾಗುವ ಸಾಮರ್ಥ್ಯ ಖಂಡಿತ ಬರಲಾರದು ಎಂದು ಅಡಿಗರು ಸ್ಪಷ್ಟವಾಗಿ ಹೇಳುತ್ತಾರೆ. ಸಂಪ್ರದಾಯ, ಪರಂಪರೆ, ರಾಷ್ಟ್ರೀಯತೆ ಎಂದು ಇದ್ದರೆ ಜನರ ಬದುಕಿನ ವಾಸ್ತವತೆ ಅರಿಯಬೇಕಾಗಿದೆ. ಈ ಸಂದರ್ಭದಲ್ಲಿ ಎರಡು ಮಹಾಯುದ್ಧವಾಗಿ ವಿಶ್ವವೇ ಆರ್ಥಿಕ ಪರಿಸ್ಥಿತಿಯಿಂದ ತೊಳಲಾಟದಲ್ಲಿ ಬದುಕುತ್ತಿರುವ ಜನಸಮೂಹಗಳು, ಆಗ ಅಡಿಗರ ಮಣ್ಣಿನ ವಾಸನೆಯಂಥ ಕೃತಿಯ ಮೂಲಕ ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ಮಾಡಬೇಕು ಎಂದು ಹೇಳುತ್ತಾರೆ. ವಿ.ಕೃ. ಗೋಕಾಕರು ತಮ್ಮ ಕಾವ್ಯದ ಮುನ್ನುಡಿಯಲ್ಲಿ ಹೇಳುವ ಹಾಗೆ “ನವ್ಯ ಕಾವ್ಯದ ಪ್ರಯೋಗದಲ್ಲಿ ಕಂಡುಬರುವುದು ತಾತ್ವಿಕ ಕ್ರಾಂತಿಯಲ್ಲ, ಅದು ನೂತನ ತಾಂತ್ರಿಕ ವಿಧಾನವೆಂದು ಹೇಳಬೇಕಾಗಿದೆ. ನವ್ಯ ಕಾವ್ಯ ಆಧ್ಯಾತ್ಮಿಕ ವಾದದ ಇಲ್ಲವೇ ಸಮತಾವಾದದ ವಿರುದ್ಧ ಎಬ್ಬಿಸಿದ ಬಂಡಾಯವಲ್ಲ”[೧೧೬] ಎಂದು ಹೇಳುತ್ತಾರೆ. ದಾಸ್ತೊವಸ್ಕಿಯ ನಾಯಕರು ಜೀವನದ ಅರ್ಥ ಏನೆಂದು ಮತ್ತೆ ಮತ್ತೆ ಪ್ರಶ್ನಿಸಿಕೊಳ್ಳುತ್ತಾರೆ. ಇಲ್ಲಿ ಜೀವನ ಮೌಲ್ಯಗಳ ರೂಪಕಗಳಾಗಿ ವಾಸ್ತವ ನೆಲೆಯನ್ನು ನವ್ಯ ಸಾಹಿತ್ಯ ಚಳುವಳಿ ತೋರಿಸಿ ಕೊಟ್ಟಿದೆ.

ನವ್ಯ ಸಾಹಿತ್ಯ ಚಳುವಳಿಗೆ ಸಿದ್ಧಾಂತಗಳು ಈ ಕಾಲದ ಸಂದರ್ಭದಲ್ಲಿ ಹುಟ್ಟಿದ ಕತೆ, ಕಾದಂಬರಿ, ಕಾವ್ಯಗಳ ಸಾಹಿತ್ಯ ವಿಮರ್ಶೆಗಳು ಬುನಾದಿಗಳಾಗಿವೆ. ಈ ಕಾಲದ ಅತ್ಯಂತ ಕ್ರಿಯಾಶೀಲವಾಗಿದ್ದ ಈ ಚಳುವಳಿಗೆ ವೈಯಕ್ತಿಕ ಸಮಸ್ಯೆಗಳು ಕೂಡ ಮುಖ್ಯವಾಗಿವೆ. ಹಾಗೆಯೇ ಬದುಕನ್ನು ತೀರ ಸರಳವಾದ ರೀತಿಯಲ್ಲಿ ನೋಡದೆ ಮನುಷ್ಯ ಜೀವನವನ್ನು ಸಂಕೀರ್ಣತೆಗಳೊಂದಿಗೆ ರೂಪಕಗಳಾಗಿ ಭಾಷೆಯಲ್ಲಿ ಅಭಿವ್ಯಕ್ತಪಡಿಸಿದೆ. ಮನುಷ್ಯನ ಅಂತರಾಳದ ಬದುಕನ್ನು ಶೋಧಿಸಿ ಮನುಷ್ಯನನ್ನು ಅರ್ಥ ಮಾಡಿಕೊಳ್ಳುವ ಬಗೆಯನ್ನು ತೋರಿಸಿದೆ. ನವೋದಯವನ್ನು ಪ್ರತಿಪಕ್ಷವಾಗಿ ನೋಡಿದೆ. ಅದರ ವಿರುದ್ಧ ಬಂಡಾಯ ಮನೋಧರ್ಮವನ್ನು ವ್ಯಕ್ತಪಡಿಸಿದೆ. ಅಡಿಗರ ನಡೆದು ಬಂದ ದಾರಿಯ ಕವಿತೆಯಲ್ಲಿ “ನಡೆದು ಬಂದ ದಾರಿ ಕಡೆಗೆ, ತಿರುಗಿಸಬೇಡ ಕಣ್ಣ ಹೊರಳಿಸಬೇಡ”[೧೧೭] ಎಂದು ಘೋಷಣೆಯ ಮೂಲಕ ನವ್ಯದ ಗಟ್ಟಿತನವನ್ನು ಎತ್ತಿ ತೋರಿಸಿದ್ದಾರೆ.

ಇದೇ ಕಾಲದಲ್ಲಿ ತೇಜಸ್ವಿ ಕೂಡ ಪ್ರಮುಖರಾಗಿ ಹಾಗೂ ಭಿನ್ನರಾಗಿ ಕಾಣಿಸುತ್ತಾರೆ. ಯಾಕೆಂದರೆ ಅವರ ಅಬಚೂರಿನ ಪೋಸ್ಟಾಫೀಸು ಕೃತಿಯ ಮುನ್ನುಡಿ, ಕನ್ನಡ ಸಾಹಿತ್ಯದಲ್ಲಿ ಹೊಸ ಸಿದ್ಧಾಂತವನ್ನು ಸೃಷ್ಟಿ ಮಾಡಿದೆ ಎಂದು ಹೇಳಬಹುದು. ತೇಜಸ್ವಿಯವರು ಮುನ್ನುಡಿಯಲ್ಲಿ ಹೇಳುವ

ಹಾಗೇ "ಲೋಹಿಯಾ ಅವರ ತತ್ವಚಿಂತನೆ, ಕುವೆಂಪು ಅವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನಲ್ಲಿನ ಕ್ರಿಯಾಶೀಲತೆ. ಈ ಮೂರು ನನ್ನ ಈಚೀನ ಸಾಹಿತ್ಯ ರಚನೆಯ ಮೇಲೆ ಗಾಡ ಪರಿಣಾಮಗಳನ್ನು ಮಾಡಿರುವಂಥವು"[೧೧೮] ಎಂದು ಹೇಳುತ್ತಾರೆ. ಈ ಮುನ್ನುಡಿಯಲ್ಲಿ ಲೋಹಿಯಾ ಅವರ ತತ್ವಚಿಂತನೆಯ ಬಗ್ಗೆ ಚರ್ಚೆ ಮಾಡಿದ್ದಾರೆ. ಲೋಹಿಯಾ ಅವರು ಸಾಮಾಜಿಕ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದವರು. ಬಡವರ, ದಲಿತರ ಪರವಾಗಿ ದೇಶವನ್ನು ಆರ್ಥಿಕ ಪರಿಸ್ಥಿತಿಯಿಂದ ಅಭಿವೃದ್ಧಿ ಕಡೆಗೆ ಚಿಂತಿಸಿದವರು. ನೆಹರು ಅವರ ಕೈಗಾರಿಕಾ ಕ್ರಾಂತಿಗೆ ಕೊಕ್ಕೆ ಹಾಕಿದವರು, ಕಾಂಗ್ರೆಸ್ ಪಕ್ಷ ಬಿಟ್ಟು ಸ್ವಂತ ಪಕ್ಷ ಕಟ್ಟಿದರು. ಲೋಹಿಯಾ ಅವರು ಸಾಮಾಜಿಕ ಚಳುವಳಿಗೆ ಹರಿಕಾರರಾಗಿದ್ದರು. ಆದರೆ ತೇಜಸ್ವಿ ಅವರು ಲೋಹಿಯಾ ಅವರ ಸಾಮಾಜಿಕ ಚಳುವಳಿ ಸಂದರ್ಭದಲ್ಲಿ ಈ ಮುನ್ನುಡಿ ಬರೆದಿದ್ದಾರೆ. ಹಾಗಾಗಿ ಮುನ್ನುಡಿಯಲ್ಲಿ ಹೇಳುತ್ತಾರೆ, "ಕನ್ನಡದ ನವ್ಯ ಸಂಪ್ರದಾಯವನ್ನು ಸಂಪೂರ್ಣವಾಗಿ ತೊರೆದು ಹೊಸ ದಿಕ್ಕಿನಲ್ಲಿ ನಾವೀಗ ಅನ್ವೇಷಿಸಬೇಕಾಗಿದೆ"[೧೧೯] ಎಂದು ಹೇಳುತ್ತಾರೆ. ಏಕೆಂದರೆ ಕನ್ನಡ ನವ್ಯ ಸಾಹಿತ್ಯ ರಚನೆ ಪಶ್ಚಿಮದ ಅನುಕರಣೆ, ಪಶ್ಚಿಮ ಸಿದ್ಧಾಂತ, ಅಸ್ತಿತ್ವತನದ ಬೇಸರ ಹಾಗೂ ವಿಶ್ವವಿದ್ಯಾಲಯದ ಉಪಾಧ್ಯಾಯರ ನಾಜೂಕಿನ ವಾತಾವರಣಕ್ಕೂ ಇಂತಹ ಸ್ಥಿತಿಗಳನ್ನು ಬಿಟ್ಟು ತೇಜಸ್ವಿಯವರು ಹಳ್ಳಿಯ ವಾತಾವರಣ, ಹಳ್ಳಿಯ ಬದುಕು, ಸಂಸ್ಕೃತಿ, ಹಳ್ಳಿಯ ಸಮಸ್ಯೆಗಳನ್ನು ಕಾಣುತ್ತಾರೆ. ಆಗ ಲೋಹಿಯಾ ಅವರ ಸಿದ್ಧಾಂತ ಭಾರತೀಯ ಸಮಾಜದ ಚಳುವಳಿಯಾಗಿತ್ತು. ನವ್ಯ ಸಿದ್ಧಾಂತ ಪಶ್ಚಿಮದ ಸಿದ್ಧಾಂತದ ಜೊತೆಗೆ ಭಾರತೀಯ ಸಿದ್ಧಾಂತವನ್ನು ರೂಪಿಸಿಕೊಳ್ಳಬೇಕಾಗಿತ್ತು. ತೇಜಸ್ವಿಯವರಲ್ಲಿ ಈ ತೆರನಾದ ಗೊಂದಲದಿಂದ ಈ ಮುನ್ನುಡಿಯ ಮೂಲಕ ಸಮಾಜದಲ್ಲಿ ಬಂಡಾಯ ಚಳುವಳಿ ಮುಖ್ಯ ಎಂಬ ಮಾತನ್ನು ವ್ಯಕ್ತಪಡಿಸಿದ್ದಾರೆ. ನವ್ಯ ಚಳುವಳಿ, ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ತಂದುಕೊಟ್ಟಿದೆ. ಒಂದು ವಿಮರ್ಶಾ ಪ್ರಜ್ಞೆಯ ಬೆಳವಣಿಗೆಗೆ ಕಾರಣವಾಗಿರುವುದು ಅದರ ಮಹತ್ವದ ಕೊಡುಗೆಯಾಗಿದೆ.

ಎಪ್ಪತ್ತರ ದಶಕದ ವೇಳೆಗೆ ದಲಿತ-ಬಂಡಾಯ ಸಾಹಿತ್ಯ ಚಳುವಳಿ ಆರಂಭವಾಯಿತು. ಇದು ಪ್ರಗತಿಶೀಲರ ಮನೋಧರ್ಮವನ್ನು ತಾಳಿತು. ಇದರ ಹಿಂದೆ ನವೋದಯ, ನವ್ಯದ ಕಾಲಘಟ್ಟದಲ್ಲಿ ದಲಿತರು ಸಾಹಿತ್ಯ ರಚನೆ ಮಾಡಿದ್ದು ಕಡಿಮೆ. ಆದರೆ ದಲಿತ-ಬಂಡಾಯ ಸಾಹಿತ್ಯ ಚಳುವಳಿ ದಲಿತರ ಬರವಣಿಗೆಗೆ ವೇದಿಕೆಯಾಯಿತು. ಇದರ ಮೂಲಕ ಹಲವಾರು ಸಮುದಾಯಗಳು ಮುನ್ನೆಲೆಗೆ ಬಂದವು. ಜೊತೆಗೆ ಮಹಿಳೆಯರ ಕೂಗು ಈ ಸಂದರ್ಭದಲ್ಲಿ ಗಟ್ಟಿಗೊಳ್ಳತೊಡಗಿತು. ಇವೆಲ್ಲದರ ಸಂವೇದನೆ ದಲಿತ-ಬಂಡಾಯ ಚಳುವಳಿಯಾಯಿತು. ಶತಶತಮಾನಗಳಿಂದ ಎಲ್ಲಾ ವರ್ಗದವರಿಂದ ಅಕ್ಷರ ರೂಪದ ಅಭಿವ್ಯಕ್ತಿಯನ್ನು ನೀಡಲು ಪ್ರಾರಂಭವಾಯಿತು.

ಸಿದ್ಧಲಿಂಗಯ್ಯನವರ 'ನನ್ನ ಜನಗಳು ಮತ್ತು ಇತರ ಕವಿತೆಗಳು' ಕೃತಿಗೆ ಡಿ.ಆರ್. ನಾಗರಾಜ ಅವರು ಮುನ್ನುಡಿ ಬರೆಯುತ್ತಾ, "ಹೊಲೆಮಾದಿಗರ ಹಾಡು'ವಿನಿಂದ ಶುರುವಾಗಿ ತೀರಾ ಈಚಿನ

ತನಕ ಸಿದ್ಧಲಿಂಗಯ್ಯನವರ ಕಾವ್ಯವನ್ನು ಈ ಶತಮಾನದ ದಲಿತರ, ಕೆಳಜಾತಿಗಳ ಆತ್ಮ-ಪ್ರತಿನಿಧೀಕರಣದ ಮೂರು ಪ್ರಧಾನ ಆಶಯಗಳು ರೂಪಿಸಿದ್ದವು. ಹೊಸ ರೀತಿಯ ಪ್ರಜ್ಞಾವಂತ ದಲಿತ ತನ್ನ ಭೂತ ವರ್ತಮಾನ ಭವಿಷ್ಯವನ್ನು ಕಾಣುತ್ತಿದ್ದ ಕ್ರಮಗಳು. ಅವು ಈ ಕಾರಣಕ್ಕಾಗಿ, ಕವಿಯ ಕಾವ್ಯ ದಲಿತರ ಪ್ರಣಾಳಿಕೆಯಾಗಿ ನಾಡಿನಾದ್ಯಂತ ದಲಿತ ಯುವ ಜನಾಂಗ ಅದನ್ನು ಗುಣಗುಣಿಸುತ್ತಿದ್ದುದ್ದು ಸಾಮಾನ್ಯ ದೃಶ್ಯವಾಗಿತ್ತು"[೧೨೦] ಎಂದು ಹೇಳುತ್ತಾರೆ.

ಈ ಕವಿತೆ – "ಹಸಿವಿಂದ ಸತ್ತೋರು ಸೈಜಗಲ್ಲು ಹೊತ್ತೋರು
ವದೆಸಿಕೊಂಡು ವರಗಿದೋರು ನನ್ನ ಜನಗಳು"[೧೨೧]

ಇಂತಹ ನೋವಿನ ಹೋರಾಟಗಳ ಮೂಲಕ ಚಳುವಳಿ ರೂಪಿಸಿದವರು. ಡಿ.ಆರ್. ಅವರು ಹೇಳುವುದು ಅರೆ ಪ್ರಜ್ಞಾವಂತರಾದ ನಾವು ಭವಿಷ್ಯದ ಮತ್ತು ವರ್ತಮಾನ ಬದುಕಿನೆಡೆಗೆ ಮುಖ ಮಾಡಬೇಕು ಎಂಬುದು ಕವಿತೆಯ ಮತ್ತು ಮುನ್ನುಡಿಕಾರನ ಆಶಯವಾಗಿದೆ. ದಲಿತ ಸಾಹಿತ್ಯ ಚಳುವಳಿಯಲ್ಲಿ ಮುಖ್ಯವಾಗಿ ಕೆಲವು ನಿಲುವುಗಳು ಕಂಡುಬರುತ್ತವೆ. "ದಲಿತರಿಗೆ ಶೋಷಣೆ, ದಮನಗಳಿಂದ ಹೊರತಾದ ಬೇರೆ ಸಾಂಸ್ಕೃತಿಕತೆ ಇಲ್ಲ ಎಂಬ ಚಾರಿತ್ರಿಕ ಗ್ರಹಿಕೆ, ಇದಕ್ಕೆ ಹೊಂದಿಕೊಂಡಂತೆ ಹಿಂದೂ ಧರ್ಮ ಒಂದು ಏಕಾಕಾರಿ ರಚನೆ ಎಂಬ ನಿಲುವು ಆತ್ಮಾನುಕಂಪ ಮತ್ತು ಆಕ್ರೋಶಗಳ ಎರಡು ಅಲೆಗಳಲ್ಲಿ ತುಯ್ಯಲಾಡುತ್ತಿದ್ದ ಮನೋರಾಜಕೀಯ ಸ್ಥಿತಿ. ಚರಿತ್ರೆಯ ವಿಕಾಸ ಪಥದಲ್ಲಿ ಆಧುನೀಕರಣ ತಮ್ಮ ಬಿಡುಗಡೆಯ ಏಕಮಾತ್ರ ದಾರಿ ಎಂಬ ಆಶಾವಾದ, ಆದ್ದರಿಂದ ಆಧುನೀಕರಣಕ್ಕಿಂತ ಹೆಚ್ಚಾಗಿ ಪರಂಪರೆಯ ಬಗ್ಗೆ ದಗದಗಿಸುವ ಸಿಟ್ಟು"[೧೨೨] ಎಂದು ಡಿ.ಆರ್.ನಾಗರಾಜ ಅವರು ಹೇಳುತ್ತಾರೆ. ಈ ಹಿನ್ನೆಲೆಯು ಕರ್ನಾಟಕದಲ್ಲಿ ದಲಿತ ಚಳುವಳಿಗೆ ಕಾರಣವಾಗಿರಬಹುದು. ಇದರಿಂದ ರಾಜ್ಯಾದ್ಯಂತವಾಗಿ ಉಗ್ರವಾಗಿ ಹೋರಾಟಕ್ಕೆ ಬಂಡಾಯಗಾರರು ದಲಿತ ಚಳುವಳಿಯಲ್ಲಿ ಬೆರೆತುಕೊಂಡು ೭೦-೮೦ರ ದಶಕದಲ್ಲಿ ತುರ್ತು ಪರಿಸ್ಥಿತಿಯಿಂದಾದ ಅನೇಕ ಸಾಮಾಜಿಕ ಅನಾಹುತಗಳಿಗೆ ಇವರು ಮುನ್ನುಡಿಯಾಗಿ ಹೋರಾಟ ಮಾಡುತ್ತಾರೆ.

ಜಿ.ಎಸ್. ಶಿವರುದ್ರಪ್ಪನವರು ನಟರಾಜ ಬೂದಾಳು ಅವರ 'ಕಪ್ಪು ಹುಡುಗನ ಬೆಳಗು' ಕವನ ಸಂಗ್ರಹಕ್ಕೆ ಮುನ್ನುಡಿ ಬರೆಯುತ್ತಾ "ಇದುವರೆಗಿನ ಸಾಹಿತ್ಯ ಚಳುವಳಿಗೆ ಹೋಲಿಸಿದರೆ, ಇವತ್ತಿನ ಸಂವೇದನೆಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವ ಸ್ವರೂಪದ್ದಾಗಿವೆ. ಹೀಗೆ ದಲಿತ-ಬಂಡಾಯದ ನಿಲುವುಗಳು ಹೊಸ ಆಯಾಮಗಳೊಂದಿಗೆ ಗಟ್ಟಿಗೊಳ್ಳುತ್ತಿರುವ ಸಂದರ್ಭದಲ್ಲಿ ಈ ಕವನ ಸಂಗ್ರಹ ಈ ಹೊಸ ಎಚ್ಚರದ ಪ್ರತೀಕವಾಗಿದೆ ಎಂದಿದ್ದಾರೆ."[೧೨೩] ಈ ಮುನ್ನುಡಿಯ ಮೂಲಕ 'ಕಪ್ಪು' ರೂಪಕವಾಗಿ, ಪ್ರಾದೇಶಿಕವಾಗಿ ತುಳಿತಕ್ಕೊಳಪಟ್ಟವನು ಎಂದು ಗೊತ್ತಾಗುತ್ತದೆ. ನಗರ ಪ್ರದೇಶದಲ್ಲಿ ಬದುಕುವ ಜನರಿಗೆ 'ಜಾತಿ' ಪ್ರಾಮುಖ್ಯತೆ ಕಡಿಮೆ. ಅಲ್ಲಿ ಆರ್ಥಿಕ ಪರಿಸ್ಥಿತಿ ಮುಖ್ಯವಾಗಿರುತ್ತದೆ. ಗ್ರಾಮೀಣ ಪ್ರದೇಶದ ಒಬ್ಬ ದಲಿತ ಆರ್ಥಿಕತೆಯಿಂದ ಪ್ರಬಲವಾದರೂ, 'ಜಾತಿ' ವರ್ಗಭೇದ ಕಂಡುಬರುತ್ತದೆ. ಇಂತಹ ಗ್ರಾಮೀಣ ಸಂವೇದನೆ ಈ ಕೃತಿಯಲ್ಲಿ ಕವನಗಳಾಗಿ ಉಲ್ಲೇಖಗೊಂಡಿವೆ.

ಎಂ.ಡಿ.ಒಕ್ಕುಂದ ಅವರ 'ಮಗು ಮಲಗಿದೆ ಎದೆಯ ಮೇಲೆ' ಎಂಬ ಕವನ ಸಂಗ್ರಹಕ್ಕೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆಯುತ್ತಾ "ಮನುಷ್ಯ ಮನುಷ್ಯರ ನಡುವೆ ಏರ್ಪಡುವ ಸಂಘರ್ಷಗಳಿಂದಾಗಿ ಮಾನವತೆಯ ಮಾರಣಹೋಮದೆದುರು ಸಮಸ್ತ ಇಂದ್ರಿಯಗಳೂ ಸ್ತಬ್ಧವಾಗಿ ಗ್ರಹಿಕೆಗೆ ಅತೀತವಾದ ನೋವೊಂದು, ಹದ್ದಿನ ಹಾಗೆ ಎರಗಿ ಕುಕ್ಕುತ್ತಿದೆ ಎಂದಿದ್ದಾರೆ."[೨೪] ಈ ಹಿನ್ನೆಲೆಯಿಂದ ನಾವು ಬದುಕುತ್ತಿರುವ ವಾಸ್ತವ ಸ್ಥಿತಿ ಬಗ್ಗೆ ಜಾಗತೀಕರಣ, ಖಾಸಗೀಕರಣ ಹಾಗೂ ರಾಜಕಾರಣಿಗಳಿಂದ ನಮ್ಮನ್ನು ನಾವು ನಾಶ ಮಾಡಿಕೊಳ್ಳುವ ಸ್ಥಿತಿ ಬಂದಿದೆ. ವಸ್ತುಗಳ ಬೆಲೆ ಏರಿಕೆಯಿಂದ ರೈತನಿಗೆ ಸೂಕ್ತ ಬೆಲೆ ಸಿಗದದ್ದು, ಚಳುವಳಿ ಹೋರಾಟ ಮಾಡಿದರು. ಸಾಮಾನ್ಯರು, ಬಡವರು ಬದುಕುವುದಕ್ಕೆ ಜಾಗತೀಕರಣ ಎಂಬ ಹದ್ದಿನ ಹಾಗೇ ಎರಗಿ ಕುಕ್ಕುತ್ತಿದೆ. ಸಮಕಾಲೀನ ಚಳುವಳಿಗಳ ಸ್ವರೂಪ ಬೇರೆಯಾಗಿದೆ. ಮೂಲ ಚಳುವಳಿಗಳ ಸ್ವರೂಪ ಮಹತ್ವವನ್ನು ಕಳೆದುಕೊಂಡಿವೆ. ರಾಜಕೀಯ ಚಳುವಳಿಯಾಗಿ, ಧಾರ್ಮಿಕ ಚಳುವಳಿಯಾಗಿ ಪ್ರಸ್ತುತ ದಿನಗಳಲ್ಲಿ ಪ್ರಮುಖವಾಗಿವೆ. ಆದರೆ ಅವು ಸ್ವಾರ್ಥತೆಯಿಂದ ಕೂಡಿದ್ದು ವಿಷಾದದ ಸಂಗತಿಯಾಗಿದೆ. ಸಾಮಾಜಿಕ ಚಳುವಳಿ ನಡೆದರೂ ಅವು ತಾತ್ಕಾಲಿಕವಾಗಿ ಮರೆಯಾಗುತ್ತಿವೆ. ಪ್ರಸ್ತುತ ಚಳುವಳಿಗಳು ರಾಜಕೀಯ ಕಪಿಮುಷ್ಟಿಯಲ್ಲಿ ಬಂಧಿತವಾಗಿವೆ ಎಂದು ಹೇಳಬಹುದು.

ಒಟ್ಟಾರೆಯಾಗಿ ಮುನ್ನುಡಿ ಸಾಹಿತ್ಯದಲ್ಲಿ ಚಳುವಳಿಯ ಅಂಶಗಳು ಸೂಕ್ಷ್ಮತರವಾಗಿ ಉಲ್ಲೇಖಗೊಂಡಿವೆ. ಕನ್ನಡದ ಸಂದರ್ಭದಲ್ಲಿ ಹೇಳುವುದಾದರೆ ಕೆಲವು ಸಲ ಸಾಹಿತ್ಯ ಚಳುವಳಿಗಳೇ ಸಾಮಾಜಿಕ ಚಳುವಳಿಗಳಾಗಿವೆ. ಇನ್ನು ಕೆಲವೊಮ್ಮೆ ಕ್ರಿಯಾತ್ಮಕವಾದ ಸಾಮಾಜಿಕ ಚಳುವಳಿಗಳು ಜೊತೆಯಲ್ಲಿದ್ದುಕೊಂಡೇ ಸಾಹಿತ್ಯ ರಚನೆಯ ಕಾರ್ಯ ನಿರ್ವಹಿಸುತ್ತವೆ. ಹೀಗೆ ಸಾಮಾಜಿಕ ಚಳುವಳಿಗಳು ಮತ್ತು ಸಾಹಿತ್ಯದ ಸಂಬಂಧ ತಮ್ಮೊಳಗೆ ಸಂಬಂಧವನ್ನು ಸೃಷ್ಟಿ ಮಾಡಿಕೊಂಡಿರುತ್ತವೆ. ಸೃಜನಶೀಲತೆಯಿಂದ ಸಮಾಜದ ಅಭಿವೃದ್ಧಿಯ ಆಶಯ ಮೂಡಿಸುತ್ತವೆ.

**ಕೊನೆಟಿಪ್ಪಣಿಗಳು**

೧. ಬಿ.ಎಂ.ಶ್ರೀ., **ಇಂಗ್ಲಿಷ್ ಗೀತಗಳು,** ಪುಟ–೩೬.

೨. ಅದೇ, ಪುಟ–೩೨.

೩. ಅದೇ, ಪುಟ–೩೨.

೪. ಅದೇ, ಪುಟ–೧೮.

೫. ಅದೇ, ಪುಟ–೧೫.

೬. ಅದೇ, ಪುಟ–೧೫.

೭. ಕುವೆಂಪು, **ಕೊಳಲು,** ಪುಟ, ಮುನ್ನುಡಿ ಭಾಗ.

೮. ಅದೇ, ಪುಟ–೧.

೯. ಬಿ.ಎಂ.ಶ್ರೀ., **ಶ್ರೀಸಾಹಿತ್ಯ**, ಪುಟ–೩೪೧.

೧೦. ಕುವೆಂಪು, **ಶೂದ್ರ ತಪಸ್ವಿ**, ಪುಟ, ಮುನ್ನುಡಿ ಭಾಗ.

೧೧. ಅದೇ, ಪುಟ, ಮುನ್ನುಡಿ ಭಾಗ.

೧೨. ಅದೇ, ಪುಟ, ಮುನ್ನುಡಿ ಭಾಗ.

೧೩. ಕುವೆಂಪು(ಸಂ), **ಕರ್ಣಾಟ ಭಾರತ ಕಥಾಮಂಜರಿ**, XIII.

೧೪. ಅದೇ, ಪುಟ, ಮುನ್ನುಡಿ ಭಾಗ.

೧೫. ಹಲಸಂಗಿ ಚನ್ನಮಲ್ಲಪ್ಪ, **ಗರತಿಯ ಹಾಡು**, ಪುಟ–೫.

೧೬. ಅದೇ, ಪುಟ–೫.

೧೭. ಅದೇ, ಪುಟ–೮.

೧೮. ಅದೇ, ಪುಟ–೧.

೧೯. ತೀ.ನಂ.ಶ್ರೀ., **ಭಾರತೀಯ ಕಾವ್ಯಮೀಮಾಂಸೆ**, ಪುಟ, ಮುನ್ನುಡಿ ಭಾಗ.

೨೦. ರಹಮತ್ ತರೀಕೆರೆ, **ಇಲ್ಲಿ ಯಾರೂ ಮುಖ್ಯರಲ್ಲ**, ಪುಟ–೧.

೨೧. ತೀ.ನಂ.ಶ್ರೀ., **ಭಾರತೀಯ ಕಾವ್ಯಮೀಮಾಂಸೆ**, ಪುಟ, ಮುನ್ನುಡಿ ಭಾಗ.

೨೨. ದ.ರಾ.ಬೇಂದ್ರೆ, **ಗರಿ**, ಪುಟ, ಮುನ್ನುಡಿ ಭಾಗ.

೨೩. ಅದೇ, ಪುಟ, ಮುನ್ನುಡಿ ಭಾಗ.

೨೪. ಹಲಸಂಗಿ ಚನ್ನಮಲ್ಲಪ್ಪ, **ಗರತಿಯ ಹಾಡು**, ಪುಟ–೬.

೨೫. ಕುವೆಂಪು(ಸಂ), **ಕರ್ಣಾಟ ಭಾರತ ಕಥಾಮಂಜರಿ**, ಪುಟ–XIII.

೨೬. ಕುವೆಂಪು, **ಕೊಳಲು**, ಪುಟ, ಮುನ್ನುಡಿ ಭಾಗ.

೨೭. ಆಮೂರ ಜಿ.ಎಸ್.(ಸಂ), **ಬೇಂದ್ರೆ ಕಾವ್ಯ**, ಪುಟ–೨.

೨೮. ಶಿವರಾಮ ಕಾರಂತ, **ಮೂಕಜ್ಜಿಯ ಕನಸುಗಳು**, ಪುಟ, ಮುನ್ನುಡಿ ಭಾಗ.

೨೯. ಅದೇ, ಪುಟ, ಮುನ್ನುಡಿ ಭಾಗ.

೩೦. ಶಿವರುದ್ರಪ್ಪ ಜಿ.ಎಸ್, **ಕನ್ನಡ ಸಾಹಿತ್ಯ ಸಂದರ್ಭ**, ಪುಟ–೭೬.

೩೧. ಬಿ.ಎಂ.ಶ್ರೀ., **ಶ್ರೀಸಾಹಿತ್ಯ**, ಪುಟ–೩೯೯.

೩೨. ಅ.ನ.ಕೃ., **ಸಂಜೆಗತ್ತಲು**, ಪುಟ, ಮುನ್ನುಡಿ ಭಾಗ.

೩೩. ಅದೇ, ಪುಟ, ಮುನ್ನುಡಿ ಭಾಗ.

೩೪. ಅದೇ, ಪುಟ, ಮುನ್ನುಡಿ ಭಾಗ.

೩೫. ನಿರಂಜನ, **ಚಿರಸ್ಮರಣೆ**, ಪುಟ, ಮುನ್ನುಡಿ ಭಾಗ.

೩೬. ನಿರಂಜನ, **ಮೃತ್ಯುಂಜಯ**, ಪುಟ, ಮುನ್ನುಡಿ ಭಾಗ.

೩೭. ಅದೇ, ಪುಟ, ಮುನ್ನುಡಿ ಭಾಗ.

೩೮. ಅ.ನ.ಕೃ., **ಶನಿಸಂತಾನ**, ಪುಟ, ಮುನ್ನುಡಿ ಭಾಗ.

೩೯. ಬಸವರಾಜ ಕಟ್ಟೀಮನಿ, **ಸ್ವಾತಂತ್ರ್ಯದೆಡೆಗೆ**, ಪುಟ-೧೦.

೪೦. ನಿರಂಜನ, **ಮೃತ್ಯುಂಜಯ**, ಪುಟ, ಮುನ್ನುಡಿ ಭಾಗ.

೪೧. ಅ.ನ.ಕೃ., **ವೀರರಾಣಿ ಕಿತ್ತೂರು ಚೆನ್ನಮ್ಮ**, ಪುಟ, ಮುನ್ನುಡಿ ಭಾಗ.

೪೨. ಬಸವರಾಜ ಕಟ್ಟೀಮನಿ, **ನರಗುಂದ ಬಂಡಾಯ**, ಪುಟ, ಮುನ್ನುಡಿ ಭಾಗ.

೪೩. ಅ.ನ.ಕೃ., **ಸಂಜೆಗತ್ತಲು**, ಪುಟ, ಮುನ್ನುಡಿ ಭಾಗ.

೪೪. ಬಸವರಾಜ ಕಟ್ಟೀಮನಿ, **ನರಗುಂದ ಬಂಡಾಯ**, ಪುಟ, ಮುನ್ನುಡಿ ಭಾಗ.

೪೫. ನಾಗಣ್ಣ ಡಿ., **ಸಾಹಿತ್ಯ ನೋಟ**, ಪುಟ-೫೬.

೪೬. ಗೋಪಾಲಕೃಷ್ಣ ಅಡಿಗ, **ಸಮಗ್ರ ಕಾವ್ಯ**, ಪುಟ-೫೬೭.

೪೭. ಅದೇ, ಪುಟ-೬೭೧.

೪೮. ಅದೇ, ಪುಟ-೧೫೯.

೪೯. ಅದೇ, ಪುಟ-೬೮೪.

೫೦. ಅದೇ, ಪುಟ-೬೭೫.

೫೧. ಅದೇ, ಪುಟ-೬೫೯.

೫೨. ಅದೇ, ಪುಟ-೬೫೯.

೫೩. ಅದೇ, ಪುಟ-೬೫೯-೬೬೦.

೫೪. ಅದೇ, ಪುಟ-೫೮೦-೫೮೧.

೫೫. ಅದೇ, ಪುಟ-೨೮೫.

೫೬. ಅದೇ, ಪುಟ-೫೮೧-೫೮೨.

೫೭. ರಾಜಪ್ಪ ದಳವಾಯಿ, **ಕನ್ನಡ ಸಾಹಿತ್ಯ ಕೋಶ**, ಪುಟ-೭೯.

೫೮. ಗೋಪಾಲಕೃಷ್ಣ ಅಡಿಗ, **ಸಮಗ್ರ ಕಾವ್ಯ**, ಪುಟ-೭೩.

೫೯. ಅದೇ, ಪುಟ-೬೯.

೬೦. ಅದೇ, ಪುಟ-೬೯೮.

೬೧. ಅನಂತಮೂರ್ತಿ ಯು.ಆರ್., **ನವ್ಯಲೋಕ**, ಪುಟ-೨೪

೬೨. ಚಂದ್ರಶೇಖರ ಕಂಬಾರ, **ಹೇಳತೇನ ಕೇಳ**, ಪುಟ, ಮುನ್ನುಡಿ ಭಾಗ.

೬೩. ಅದೇ, ಪುಟ, ಮುನ್ನುಡಿ ಭಾಗ.

೬೪. ಗಂಗಾಧರ ಚಿತ್ತಾಲ, **ಹರಿವ ನೀರಿದು**, ಪುಟ, ಮುನ್ನುಡಿ ಭಾಗ.

೬೫. ಲಂಕೇಶ್ ಪಿ., **ಅಕ್ಷರ ಹೊಸಕಾವ್ಯ**, ಪುಟ, ಮುನ್ನುಡಿ ಭಾಗ.

೬೬. ಪೂರ್ಣಚಂದ್ರ ತೇಜಸ್ವಿ ಕೆ.ಪಿ., **ಅಬಚೂರಿನ ಪೋಸ್ಟಾಫೀಸು**, ಪುಟ, ಮುನ್ನುಡಿ ಭಾಗ.

೬೭. ಮಲ್ಲಿಕಾ ಘಂಟಿ, **ದಲಿತ ಸಾಹಿತ್ಯ ಚಳುವಳಿ**, ಪುಟ, ಮುನ್ನುಡಿ ಭಾಗ.

೬೮. ಸಿದ್ಧಲಿಂಗಯ್ಯ, **ನನ್ನ ಜನಗಳು ಮತ್ತು ಇತರೆ ಕವಿತೆಗಳು**, ಪುಟ-೨೫.

೬೯. ಅದೇ, ಪುಟ-೬೭.

೭೦. ಅದೇ, ಪುಟ, ಮುನ್ನುಡಿ ಭಾಗ.

೭೧. ಸಿದ್ಧಲಿಂಗಯ್ಯ, **ಮೆರವಣಿಗೆ**, ಪುಟ, ಮುನ್ನುಡಿ ಭಾಗ.

೭೨. ಲಂಕೇಶ್ ಪಿ., **ಅಕ್ಷರ ಹೊಸಕಾವ್ಯ(ಸಂ)**, ಪುಟ, ಮುನ್ನುಡಿ ಭಾಗ.

೭೩. ಸಿದ್ಧಲಿಂಗಯ್ಯ, **ಮೆರವಣಿಗೆ**, ಪುಟ, ಮುನ್ನುಡಿ ಭಾಗ.

೭೪. ಚಿನ್ನಸ್ವಾಮಿ ಬಿ., **ಕೊಂಡಿಗಳು ಮತ್ತು ಮುಳ್ಳುಗಳು**, ಪುಟ, ಮುನ್ನುಡಿ ಭಾಗ.

೭೫. ಅದೇ, ಪುಟ, ಮುನ್ನುಡಿ ಭಾಗ.

೭೬. ಅದೇ, ಪುಟ, ಮುನ್ನುಡಿ ಭಾಗ.

೭೭. ಮಲ್ಲಿಕಾ ಘಂಟಿ, **ದಲಿತ ಸಾಹಿತ್ಯ ಚಳುವಳಿ**, ಪುಟ, ಮುನ್ನುಡಿ ಭಾಗ.

೭೮. ಸಿದ್ಧಲಿಂಗಯ್ಯ, **ನನ್ನ ಜನಗಳು**, ಪುಟ, ಮುನ್ನುಡಿ ಭಾಗ.

೭೯. ಅದೇ, ಪುಟ-೭೪.

೮೦. ಸಿದ್ಧಲಿಂಗಯ್ಯ, **ಮೆರವಣಿಗೆ**, ಪುಟ, ಮುನ್ನುಡಿ ಭಾಗ.

೮೧. ಅದೇ, ಪುಟ, ಮುನ್ನುಡಿ ಭಾಗ.

೮೨. ಸಿದ್ಧಲಿಂಗಯ್ಯ, **ನನ್ನ ಜನಗಳು**, ಪುಟ-೫೪.

೮೩. ಪೂರ್ಣಚಂದ್ರ ತೇಜಸ್ವಿ ಕೆ.ಪಿ., **ಅಬಚೂರಿನ ಪೋಸ್ಟಾಫೀಸು**, ಪುಟ, ಮುನ್ನುಡಿ ಭಾಗ.

೮೪. ಸಿದ್ಧಲಿಂಗಯ್ಯ, **ನನ್ನ ಜನಗಳು**, ಪುಟ, ಮುನ್ನುಡಿ ಭಾಗ.

೮೫. ಮಲ್ಲಿಕಾ ಘಂಟಿ, **ದಲಿತ ಸಾಹಿತ್ಯ ಚಳುವಳಿ**, ಪುಟ-೧೭.

೮೬. ಮರುಳಸಿದ್ಧಪ್ಪ ಕೆ.(ಸಂ), **ವಚನ ಕಮ್ಮಟ**, ಪುಟ-೪೩.

೮೭. ಅದೇ, ಕೃತಿಯ ಪರಿವಿಡಿ ಪುಟ, ಮುನ್ನುಡಿ ಭಾಗ.

೮೮. ಸಿದ್ಧಲಿಂಗಯ್ಯ, **ನನ್ನ ಜನಗಳು**, ಪುಟ, ಮುನ್ನುಡಿ ಭಾಗ.

೮೯. ಚಿನ್ನಸ್ವಾಮಿ ಬಿ., **ಕೊಂಡಿಗಳು ಮತ್ತು ಮುಳ್ಳುಗಳು**, ಪುಟ-೩೪.

೯೦. ನರಹಳ್ಳಿ ಬಾಲಸುಬ್ರಹ್ಮಣ್ಯ, **ಸಾಹಿತ್ಯ ಸಂಸ್ಕೃತಿ ಉಲ್ಲೇಖ**, ಪುಟ–೨೧.

೯೧. ಶ್ರೀಮತಿ ಎಚ್.ಎಸ್., **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ**, ಪುಟ–೧೫.

೯೨. ಅದೇ, ಪುಟ–೧೭.

೯೩. ಅದೇ, ಪುಟ–೧೬.

೯೪. ಸುಮಿತ್ರಾಬಾಯಿ ಬಿ.ಎನ್., **ಸ್ತ್ರೀವಾದಿ**, ಮುನ್ನುಡಿ ಪುಟ–VII.

೯೫. ಅದೇ, ಪುಟ, ಮುನ್ನುಡಿ ಭಾಗ–VII.

೯೬. ಶ್ರೀಮತಿ ಎಚ್.ಎಸ್., **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ**, ಪುಟ–೧೫.

೯೭. ಕೆರೂರು ವಾಸುದೇವಾಚಾರ್ಯ, **ಇಂದಿರಾ**, ಪುಟ, ಮುನ್ನುಡಿ ಭಾಗ.

೯೮. ವಿಜಯಾ ದಬ್ಬೆ, **ಸ್ತ್ರೀವಾದ ದಕ್ಷಿಣ ಏಷ್ಯಾದಲ್ಲಿ ಅದರ ಪಸಕ್ತತೆ**, ಪುಟ, ಮುನ್ನುಡಿ ಭಾಗ.

೯೯. ಶಿವರುದ್ರಪ್ಪ ಜಿ.ಎಸ್., **ದಶವಾರ್ಷಿಕ ಕವಿತೆಗಳು**, ಪುಟ, ಮುನ್ನುಡಿ ಭಾಗ.

೧೦೦. ವಿಜಯ ಲಕ್ಷ್ಮಿ, **ಕೆಂಪು ಹೂ**, ಪುಟ, ಮುನ್ನುಡಿ ಭಾಗ.

೧೦೧. ಆಶಾದೇವಿ ಎಂ.ಎಸ್., **ಸ್ತ್ರೀಮತವನುತ್ತರಿಸಲಾಗಿದೆ?**, ಪುಟ–೪.

೧೦೨. ಆಶಾದೇವಿ ಎಂ.ಎಸ್., **ನಡುವೆ ಸುಳಿವ ಆತ್ಮ**, ಪುಟ–೧೩

೧೦೩. ವೀಣಾ ಶಾಂತೇಶ್ವರ, **ನಡೆದದ್ದೇ ದಾರಿ**, ಪುಟ–ಮುನ್ನುಡಿ ಭಾಗ

೧೦೪. ಅನುಪಮಾ ನಿರಂಜನ, **ಮಾಧವಿ**, ಪುಟ–ಮುನ್ನುಡಿ ಭಾಗ

೧೦೫. ಅದೇ, ಪುಟ, ಮುನ್ನುಡಿ ಭಾಗ.

೧೦೬. ಅದೇ, ಪುಟ, ಮುನ್ನುಡಿ ಭಾಗ.

೧೦೭. ಶಿವರುದ್ರಪ್ಪ ಜಿ.ಎಸ್., **ಸಮಗ್ರ ಗದ್ಯ(ಸಂ–೩)**, ಪುಟ–೪೧೬.

೧೦೮. ಪುಟ್ಟಪ್ಪ ಕೆ.ವಿ., **ಆದಿಪುರಾಣ ಸಂಗ್ರಹ**, ಪುಟ, ಮುನ್ನುಡಿ ಭಾಗ.

೧೦೯. ಅದೇ, ಪುಟ, ಮುನ್ನುಡಿ ಭಾಗ.

೧೧೦. ಶಿವರುದ್ರಪ್ಪ ಜಿ.ಎಸ್., **ಸಮಗ್ರ ಗದ್ಯ(ಸಂ–೩)**, ಪುಟ–೪೧೭.

೧೧೧. ಬಿ.ಎಂ.ಶ್ರೀ., **ಇಂಗ್ಲಿಷ್ ಗೀತಗಳು**, ಪುಟ–೨೧.

೧೧೨. ಅದೇ, ಪುಟ–೨೧.

೧೧೩. ಅ.ನ.ಕೃ., **ಪ್ರಗತಿಶೀಲ ಸಾಹಿತ್ಯ**, ಪುಟ, ಮುನ್ನುಡಿ ಭಾಗ.

೧೧೪. ಗೋಪಾಲಕೃಷ್ಣ ಅಡಿಗ, **ನಡೆದು ಬಂದ ದಾರಿ**, ಪುಟ, ಮುನ್ನುಡಿ ಭಾಗ.

೧೧೫. ಅದೇ, ಪುಟ, ಮುನ್ನುಡಿ ಭಾಗ.

೧೧೬. ಗೋಕಾಕ್ ವಿ.ಕೃ., **ನವ್ಯಕಾವ್ಯ**, ಪುಟ, ಮುನ್ನುಡಿ ಭಾಗ.

೧೧೭. ಗೋಪಾಲಕೃಷ್ಣ ಅಡಿಗ, **ನಡೆದು ಬಂದ ದಾರಿ**, ಪುಟ, ಮುನ್ನುಡಿ ಭಾಗ.

೧೧೮. ಪೂರ್ಣಚಂದ್ರ ತೇಜಸ್ವಿ ಕೆ.ಪಿ., **ಅಬಚೂರಿನ ಪೋಸ್ಟಾಫೀಸು**, ಪುಟ, ಮುನ್ನುಡಿ ಭಾಗ.

೧೧೯. ಅದೇ, ಪುಟ, ಮುನ್ನುಡಿ ಭಾಗ.

೧೨೦. ಸಿದ್ಧಲಿಂಗಯ್ಯ, **ನನ್ನ ಜನಗಳು**, ಪುಟ, ಮುನ್ನುಡಿ ಭಾಗ.

೧೨೧. ಅದೇ, ಪುಟ-೧೨೦.

೧೨೨. ಅದೇ, ಪುಟ, ಮುನ್ನುಡಿ ಭಾಗ.

೧೨೩. ನಟರಾಜ ಬೂದಾಳು, **ಕಪ್ಪು ಹುಡುಗನ ಬೆಳಗು**, ಪುಟ, ಮುನ್ನುಡಿ ಭಾಗ.

೧೨೪. ಒಕ್ಕುಂದ ಎಂ.ಡಿ., **ಮಗು ಮಲಗಿದೆ ಎದೆಯ ಮೇಲೆ**, ಪುಟ, ಮುನ್ನುಡಿ ಭಾಗ.

ಅಧ್ಯಾಯ ಐದು

# ಮುನ್ನುಡಿ ಸಾಹಿತ್ಯ ಪರಂಪರೆ: ಮುನ್ನುಡಿಕಾರರು

೫.೧. ಬಿ.ಎಂ.ಶ್ರೀಕಂಠಯ್ಯ

೫.೨. ಕುವೆಂಪು

೫.೩. ಮಾಸ್ತಿ ವೆಂಕಟೇಶ ಅಯ್ಯಾಂಗಾರ್

೫.೪. ಅ.ನ.ಕೃಷ್ಣರಾಯ

೫.೫. ಜಿ.ಎಸ್.ಶಿವರುದ್ರಪ್ಪ

೫.೬. ಕೆ.ಪಿ.ಪೂರ್ಣಚಂದ್ರ ತೇಜಸ್ವಿ

೫.೭. ಪಿ.ಲಂಕೇಶ್

೫.೮. ಯು.ಆರ್.ಅನಂತಮೂರ್ತಿ

೫.೯. ಎಚ್.ಎಸ್.ರಾಘವೇಂದ್ರರಾವ್

೫.೧೦. ಕೆ.ವಿ.ನಾರಾಯಣ

೫.೧೧. ಡಿ.ಆರ್.ನಾಗರಾಜ

೫.೧೨. ಬಸವರಾಜ ಕಲ್ಗುಡಿ

ಅಧ್ಯಾಯ ಐದು

# ಕನ್ನಡ ಸಾಹಿತ್ಯ ಪರಂಪರೆ: ಮುನ್ನುಡಿಕಾರರು

ಮುನ್ನುಡಿ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ವಿಮರ್ಶಾ ಉಪಪ್ರಕಾರವೆಂದೇ ಹೇಳಬಹುದಾದಷ್ಟು ಮಹತ್ವ ಹೊಂದಿದೆ. ಹಳಗನ್ನಡದ ಕೃತಿಗಳಿಗೆ ಸಂಪಾದನೆಯಾಗಿ 'ಮುನ್ನುಡಿ', 'ಉಪೋದ್ಘಾತ' ಇತ್ಯಾದಿ ಶೀರ್ಷಿಕೆಗಳಾಗಿ ಬರೆಯಲಾಗಿದೆ. ಹಾಗಾಗಿ ಕನ್ನಡ ಸಾಹಿತ್ಯದ ಮೂಲ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಬೇಂದ್ರೆಯವರ 'ನಾದಲೀಲೆ' ಕವನ ಸಂಕಲನಕ್ಕೆ ಮಾಸ್ತಿಯವರು ಮುನ್ನುಡಿ ಬರೆದರು. ಇದರಿಂದ ವ್ಯಕ್ತಿನಿಷ್ಠ, ವಸ್ತುನಿಷ್ಠ, ಕೃತಿನಿಷ್ಠ ಮಾದರಿಯ ಮುನ್ನುಡಿಗಳನ್ನು ಬರೆಯತೊಡಗಿದರು. ಈ ಹಿಂದೆಯೂ ಮುನ್ನುಡಿ ಸಂಪಾದನೆಯ ನೆಪದಲ್ಲಿ ಇತ್ತು. 'ಇಂಗ್ಲಿಷ್ ಗೀತಗಳು,' 'ನಾದಲೀಲೆ' ಇತ್ಯಾದಿ ಕೃತಿಗಳಿಂದ ಮುನ್ನುಡಿ ಬರೆಯುವ ಕ್ರಮ, ಪ್ರಾಮಾಣಿಕ ವಿಮರ್ಶೆಯಾಗಿ ಬರತೊಡಗಿದವು. ಹೀಗೆಯೇ ನವೋದಯ ಸೇರಿದಂತೆ ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಪ್ರಸ್ತುತ ಸಂದರ್ಭಗಳಲ್ಲಿ ಮುನ್ನುಡಿ ಕನ್ನಡ ಸಾಹಿತ್ಯದಲ್ಲಿ ಪರಂಪರೆಯಾಗಿ ಮುಂದುವರಿಯಿತು. ಇದರಿಂದ ಕನ್ನಡ ಸಾಹಿತ್ಯದ ಮುಖ್ಯ ಲೇಖಕರೊಂದಿಗೆ ಬಿ.ಎಂ.ಶ್ರೀ., ಕುವೆಂಪು, ಬೇಂದ್ರೆ, ಡಿ.ವಿ.ಜಿ., ಮಾಸ್ತಿ, ಪುತಿನ, ನಿರಂಜನ, ಅ.ನ.ಕೃ., ಅಡಿಗರು, ಅನಂತಮೂರ್ತಿ, ತೇಜಸ್ವಿ, ಪಿ.ಲಂಕೇಶ್, ಕೆ.ವಿ.ನಾರಾಯಣ, ಎಚ್.ಎಸ್.ರಾಘವೇಂದ್ರರಾವ್, ಡಿ.ಆರ್.ನಾಗರಾಜ, ಎಚ್.ಎಸ್.ಶ್ರೀಮತಿ ಇತ್ಯಾದಿಯವರಿಂದ ಮುನ್ನುಡಿ ಬರೆಯುವ ಮುಂದಾಳುತನದಿಂದ, ಲೇಖಕರು ವಿಮರ್ಶೆಗೆ ನೀಡಿದ ವಿಶೇಷ ಪ್ರಾಶಸ್ತ್ಯದಿಂದ ಮುನ್ನುಡಿಗಳು ವಿಮರ್ಶೆಗಳಾದವು. ಪರಸ್ಪರ ಪ್ರಶಂಸೆ ಕಡಿಮೆಯಾಯಿತು. ಮುನ್ನುಡಿ ವಿಮರ್ಶೆ ಒಂದು ಸಾಹಿತ್ಯ ಪ್ರಕಾರ ಆಗುವಷ್ಟು ಬೆಳೆಯಿತು. ಮುನ್ನುಡಿಗಳು ಹಿಂದಿನಿಂದ ಇಂದಿನವರೆಗೆ ಕೃತಿಯ ಮೊದಲ ಚರ್ಚೆಗೆ ವೇದಿಕೆಯಾಗಿವೆ. ಅಗತ್ಯವೋ, ಅನಗತ್ಯವೋ ಸಾಮಾನ್ಯವಾಗಿ ಪ್ರತಿಯೊಂದು ಕೃತಿಗೂ ಒಂದು ಮುನ್ನುಡಿ ಇದ್ದೇ ಇರುತ್ತದೆ. ಕೆಲವು ಕೃತಿಗಳಿಗೆ ಅಗತ್ಯವಾದಂತಹ ಕನ್ನಡ ಸಾಹಿತ್ಯದ ಹೊಸ ತಿರುಳನ್ನು ರೂಪಿಸುವ ಕೇಂದ್ರಗಳಾಗಿ ಮುನ್ನುಡಿಗಳು ಗಮನ ಸೆಳೆದಿವೆ.

## ೫.೧. ಬಿ.ಎಂ.ಶ್ರೀಕಂಠಯ್ಯ

ಬಿ.ಎಂ.ಶ್ರೀ. ಅವರು ಹೊಸಗನ್ನಡದ ಪ್ರವರ್ತಕರಾಗಿ ನಮಗೆ ಕಾಣುತ್ತಾರೆ. ಏಕೆಂದರೆ ಬಿ.ಎಂ.ಶ್ರೀ.ಯವರ ಇಂಗ್ಲಿಷ್ ಗೀತಗಳ ಕನ್ನಡ ಅನುವಾದದ ಜೊತೆಗೆ 'ಕನ್ನಡ ಮಾತು

ತಲೆಯೆತ್ತುವ ಬಗೆ' ಎನ್ನುವ ಉಪನ್ಯಾಸದಿಂದ ಕನ್ನಡಿಗರಿಗೆ ಯಾವುದನ್ನು ಬಳಸಬೇಕು, ಯಾವುದನ್ನು ಉಳಿಸಿಕೊಳ್ಳಬೇಕು ಎಂಬ ಮಾತನ್ನು 'ಕನ್ನಡ ನಾಡು ನುಡಿ, ಭಾಷೆ, ನೆಲ, ಜಲ, ಸಂಸ್ಕೃತಿ, ಜಾನಪದ ಸೊಗಡು' ಇವುಗಳನ್ನು ಕುರಿತಂತೆ ಹೆಚ್ಚಾಗಿ ಒತ್ತು ನೀಡುತ್ತಾರೆ. ಈ ಹಿನ್ನೆಲೆಯಿಂದ ಅವರು ಕನ್ನಡ ಸಾಹಿತ್ಯದ ಅನೇಕ ಕೃತಿಗಳಿಗೆ ಮುನ್ನುಡಿಗಳು ಬರೆದಿದ್ದಾರೆ.

ಬಿ.ಎಂ.ಶ್ರೀ. ಅವರು 'ರನ್ನ ಕವಿ ಪ್ರಶಸ್ತಿ' ಕೃತಿಗೆ ಬರೆದ ಮುನ್ನುಡಿಯಲ್ಲಿ "ಕನ್ನಡ ಕಾವ್ಯರಾಶಿಯನ್ನು ಹೊರಕ್ಕೆ ತಂದು ಹೆಮ್ಮೆ ಪಟ್ಟದ್ದಾಯಿತು. ಈಗ ಬೇಕಾಗಿರುವುದು ಅವರ ಯೋಗ್ಯತೆಯನ್ನು ಗೊತ್ತು ಮಾಡುವ ವಿಮರ್ಶೆ ಜಳ್ಳನ್ನು ತೂರಿ, ಕಾಳನ್ನು ತುಂಬಿಕೊಳ್ಳಬೇಕಾಗಿದೆ."[೧] ಎಂದು ಹೇಳುತ್ತಾರೆ. ಅಂದರೆ ಕನ್ನಡ ಕಾವ್ಯರಾಶಿ ಯಾವುದು? ಹೊರಕ್ಕೆ ತಂದದ್ದು ಯಾವ ಸಾಹಿತ್ಯವಾಗಿದೆ? ಎಂಬ ಪ್ರಶ್ನೆ ಹಾಕಿಕೊಂಡಾಗ ಕನ್ನಡ ಸಾಹಿತ್ಯದ ಓದುಗರು ಹೆಮ್ಮೆಯಿಂದ ಯುರೋಪಿಯನ್ನರನ್ನು ನೆನೆಯಬೇಕಾಗಿದೆ. ಏಕೆಂದರೆ ಪಾಶ್ಚಿಮಾತ್ಯರು ರಾಜಕೀಯವಾಗಿ ನಮ್ಮ ದೇಶದ ಸಂಪತ್ತನ್ನು ಲೂಟಿ ಮಾಡಿರಬಹುದು, ಆದರೆ ಕನ್ನಡ ಸಾಹಿತ್ಯವನ್ನು ಹಸ್ತಪ್ರತಿಗಳ ಸಂಪಾದನೆಯಿಂದ ನೆಲದಿಂದ ನಿಧಿ ತೆಗೆದಂತಾಗಿದೆ. ಕನ್ನಡ ಸಾಹಿತ್ಯಕ್ಕೆ ಬುನಾದಿಯನ್ನು ಹಾಕಿಕೊಟ್ಟಿದ್ದು, ಹಾಗಾಗಿ ಅವರು ತೋರಿಸಿ ಮಾಡಿಸಿದ ಗ್ರಂಥ ಸಂಪಾದನೆಯಾಗಿದೆ. ಅವರು ಸಂಪಾದನೆ ಮಾಡಿದ ಸಾಹಿತ್ಯದ ದೃಷ್ಟಿಕೋನ ಪರಿಚಯಾತ್ಮಕವಾಗಿ ಸಾರಾಂಶಪ್ರಧಾನವಾದ ಚರ್ಚೆಗಳು ನಡೆಯುತ್ತವೆ. ಆದರೆ ಅವರಿಗೆ ಸ್ಥಳೀಯ ಚಿಂತನೆಗೆ ಅವಕಾಶ ಮಾಡಿಕೊಟ್ಟವರು ಸ್ಥಳೀಯ ವಿದ್ವಾಂಸರಾದ ಆರ್.ನರಸಿಂಹಾಚಾರ್, ರಾಮಾನುಜ ಅಯ್ಯಂಗಾರ್ ಇತ್ಯಾದಿ ಇವರ ಸಾಹಿತ್ಯ ಕಾವ್ಯದ ವಸ್ತುಗಳಾಗಿವೆ.

ಅಂದು ವಾಸ್ತವವಾಗಿ ಪುರೋಹಿತಶಾಹಿ ನೆಲೆಯಾಗಿಯೇ ಕೃತಿಗಳು ಸಂಪಾದನೆಗೊಂಡಿವೆ. ಪಾಶ್ಚಾತ್ಯ ವಿದ್ವಾಂಸರು ಮತ್ತು ದೇಶೀಯ ವಿದ್ವಾಂಸರು ಹಳಗನ್ನಡ ಕೃತಿಗಳ ವಸ್ತು, ಆಶಯ ನೆಲೆ ಯಾವುದೆಂದು ಗಮನಿಸದಿರುವುದು ಕಡಿಮೆ. ಅಲ್ಲಿ ಹಳಗನ್ನಡ ಕೃತಿಗಳು ಪರಿಚಯಾತ್ಮಕ ಸಾರಾಂಶ ಪ್ರಧಾನವಾದ ವಿಷಯಗಳಾಗಿ ಕಂಡುಬರುತ್ತವೆ. ಹಾಗಾಗಿ ೨೦ನೇ ಶತಮಾನದಲ್ಲಿ ಬಿ.ಎಂ.ಶ್ರೀ.ಯವರು ಹಳಗನ್ನಡ ಕೃತಿಗಳ ವಸ್ತು, ಆಶಯ, ಉದ್ದೇಶ ಏನೇನು ಎಂಬುದನ್ನು ಅರಿತು ಜಳ್ಳನ್ನು ತೂರಿ, ಕಾಳನ್ನು ತುಂಬಿಕೊಳ್ಳಬೇಕಾಗಿದೆ ಎಂದು ಹೇಳುತ್ತಾರೆ. ಇಂತಹ ಹಳಗನ್ನಡ ಕೃತಿಗಳನ್ನು ಸಂಪಾದನೆಯಿಂದ ಮರುಸಂಪಾದನೆ ಮಾಡುವುದಕ್ಕೆ ಈ ಕೆಲಸದಲ್ಲಿ ಹೊಕ್ಕು ಕನ್ನಡ ಸಾಹಿತ್ಯದ ತಿರುಳನ್ನು ಕನ್ನಡಿಗರೆಲ್ಲರೂ ತಿಳಿಯುವಂತೆ ಮಾಡಿಕೊಡುವುದು ಕನ್ನಡ ನಾಡಿನ ಪ್ರತಿಯೊಬ್ಬ ವಿದ್ವಾಂಸರಿಗೆ, ಜನರಿಗೆ ಒತ್ತಿ ಒತ್ತಿ ಹೇಳಿದ್ದಾರೆ. ಈ ಮುನ್ನುಡಿಯು ಕನ್ನಡದ ತಿರುಳನ್ನು ಗಟ್ಟಿಗೊಳಿಸುವುದಾಗಿದೆ.

ಬಿ.ಎಂ.ಶ್ರೀ. ಅವರು 'ಗರತಿಯ ಹಾಡು' ಸಂಗ್ರಹಕ್ಕೆ ಮುನ್ನುಡಿ ಬರೆದಿದ್ದಾರೆ. ಈ ಮುನ್ನುಡಿಯಲ್ಲಿ ಜನಸಾಮಾನ್ಯರ ಸಾಹಿತ್ಯ ಎಂದು ಕರೆಯುವ 'ಜಾನಪದ ಸಾಹಿತ್ಯ'ವನ್ನು ಸಂಸ್ಕೃತ ಪಂಡಿತರು ಆಪಾದನೆ ಮಾಡುವುದು ಮುನ್ನುಡಿಯಲ್ಲಿ ಗಮನಿಸುತ್ತೇವೆ. ಹಾಗೆಯೇ ಬಿ.ಎಂ.ಶ್ರೀ.ಯವರು ಉಲ್ಲೇಖಿಸಿದ್ದಾರೆ.

"ಪಂಡಿತರುಂ ವಿವಿಧಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ
ದುಂಡುಚಿಯೇ ಬೀದಿವರಯೆ ಬೀರನ ಕತೆಯೇ!?

ಎಂದು ಮಧುರ ಕವಿ ಜಾನಪದ ಸಾಹಿತ್ಯವನ್ನು ಹಾಸ್ಯ ಮಾಡಿರುವವನು"[೨] ಎಂದು ಉಲ್ಲೇಖಿಸಲಾಗಿದೆ. ಸಂಸ್ಕೃತ ಪಂಡಿತರು ಜನಪದ ಸಾಹಿತ್ಯವನ್ನೇ ಗೇಲಿ ಮಾಡುವ ಸಾಮಾನ್ಯ ಜನರ ಜೀವನದ ಸತ್ವವಾಗಿ ತಮಗೆ ಬೇಕಾದ ಸಮಯದಲ್ಲಿ ಸಂತೋಷಪಡುವ ಹಾಡುಗಳ ಮೇಲೆ ಪಂಡಿತ ಪಾಮರರು ಗೂಬೆ ಕೂಡಿಸುವ ಕೆಲಸ ಹಿಂದಿನ ದಶಕಗಳಲ್ಲೇ ನಡೆದಿದೆ. ಆದರೆ ಇದೇ ರೀತಿಯಾಗಿ ಸಾಮಾನ್ಯರ ಬದುಕಿನ ಮೇಲೆ ಇಂದು ಪಂಡಿತ ಪಾಮರರು ಅಥವಾ ಪುರೋಹಿತಶಾಹಿ ಯವರು ತಮ್ಮ ಸಂಸ್ಕೃತಿಯನ್ನು ಜನಸಾಮಾನ್ಯರ ಮೇಲೆ ಹೇರುವ ಕೆಲಸ ನಡೆದಿದೆ. ಉದಾ:- ರಾಮನೇ ಶ್ರೇಷ್ಠ ಎಂದು ಹೇಳಲಾಗುತ್ತಿದೆ. ಯಾಕೆ? ಆಂಜನೇಯನನ್ನು ಯಾಕೆ ಶ್ರೇಷ್ಠ ಎಂದು ಹೇಳಲಿಲ್ಲ ಎನ್ನುವುದು ಕೂಡ ಪ್ರಶ್ನೆಯಾಗುತ್ತದೆ. ಪ್ರಸ್ತುತವಾಗಿ ಪ್ರತಿಯೊಂದು ಹಳ್ಳಿ ಹಳ್ಳಿಗಳಲ್ಲಿಯೂ ಆಂಜನೇಯನನ್ನು ಪೂಜಿಸಲಾಗುತ್ತಿದೆ. ರಾಮನನ್ನು ಯಾಕೆ ಪೂಜಿಸಲಾಗುತ್ತಿಲ್ಲ. ಸಾಮಾನ್ಯರ ಬದುಕಿನ ಜೀವನಕ್ರಮದಲ್ಲಿ ಆಂಜನೇಯನನ್ನು ತಮ್ಮ ತಮ್ಮ ನೆಲಸಂಸ್ಕೃತಿಯಿಂದ ಜನಪರವಾಗಿ ಬಿಡಲಾಗುತ್ತಿಲ್ಲ. ಪಂಡಿತರ ವರ್ಗ ಜನಸಾಮಾನ್ಯರ ಮೇಲೆ ಅವರ ಸಂಸ್ಕೃತಿಯನ್ನು ದೂರವಿಡುವ ಕಾರ್ಯ ನಡಿತಿವೆ. ಬಿ.ಎಂ.ಶ್ರೀ.ಯವರು ಮುನ್ನುಡಿಯಲ್ಲಿ ಹೇಳುವ ಹಾಗೆ "ಶಾಸ್ತ್ರ ಬಲದಿಂದಲೂ, ಸಂಸ್ಕೃತ ಪ್ರತಿಭೆಯಿಂದಲೂ ರಚಿತವಾದ ಪ್ರೌಢಸಾಹಿತ್ಯವೇ ಸಾಹಿತ್ಯವೆಂದು ಹಳ್ಳಿಗಳಲ್ಲಿಯೂ, ಬೀದಿಗಳಲ್ಲಿಯೂ, ಮನೆಗಳಲ್ಲಿಯೂ ಜನಸಾಮಾನ್ಯರು ಹಾಡಿಕೊಳ್ಳುವ ಹಾಡುಗಳು ಸಾಹಿತ್ಯವಲ್ಲವೆಂದು ಇಂತಹ ಪಂಡಿತರ ಭಾವನೆ. ಈ ಅಭಿಪ್ರಾಯದ ಪ್ರಕಾರ ಆದಿಯಲ್ಲಿ ದೇವತಾ ಪ್ರೇರಣೆಯಿಂದ ಹುಟ್ಟಿದುದೇ ಕವಿತಾವಾಣಿ. ಅದು ಋಷಿಗಳಲ್ಲಿಯೂ ಮಹಾಕವಿಗಳಲ್ಲಿಯೂ ಕಾಣುವುದು. ಆ ಬಳಿಕ ಸರಸ್ವತಿ ಪ್ರಸಾದವಿಲ್ಲದ ಬರಿಯ ದುರಾಸೆಯ ದುಷ್ಟರುಗಳಲ್ಲಿ ತಲೆದೋರುವುದು ಅದರ ಆಭಾಸ. ಕಟ್ಟಕಡೆಗೆ ಕಾಣಿಸಿಕೊಂಡು ಜನಗಳು ಹಾಡಿ ನಲಿಯುತ್ತಿರುವ ಬಡ ಹಾಡಂತೂ ಕವಿತ್ವವೇ ಅಲ್ಲ"[೩] ಎಂದು ಬಿ.ಎಂ.ಶ್ರೀ.ಯವರು ಉಲ್ಲೇಖಿಸುತ್ತಾರೆ. ಆದರೆ ಈ ಅಭಿಪ್ರಾಯ. ಬಿ.ಎಂ.ಶ್ರೀ.ಯವರ ಸಮರ್ಥನೆ ಅಲ್ಲ. ಅದು ಪಂಡಿತರು ಹೇಳುವ ಪರಿಕಲ್ಪನೆ ಹೇಗಿದೆ ಎಂಬುದನ್ನು ಮನಗಾಣಿಸಿದ್ದಾರೆ. ಜನಪರ ಸಾಹಿತ್ಯವನ್ನು ಪಂಡಿತರು ಕವಿವಾಣಿ ಹೂವು ಎಂದು ಹೇಳಲಾಗುವುದಿಲ್ಲ. ಕಾಡುಜನರು, ಒಕ್ಕಲುಗಾರರು, ಹೆಂಗಸರು, ಮಕ್ಕಳು ಹಾಡುವುದಾಗಿದೆ. ಅವರಿಗೆ ಯಾವ ಶಾಸ್ತ್ರಗಳು ಪರಿಚಯವಿಲ್ಲ. ಆದರೆ ಕನ್ನಡ ದೇಸಿ ಛಂದಸ್ಸು ಬಲ್ಲವರಾಗಿದ್ದಾರೆ. ಪ್ರಸ್ತುತವಾಗಿ ಕನ್ನಡದ ದೇಸಿತನ ಎನ್ನುವುದಾದರೂ ಅದು ಹಳ್ಳಿ ಹಳ್ಳಿಗಳಲ್ಲಿ ಕಾಣುತ್ತಿವೆ. ಹಳ್ಳಿಗಳು ಬದಲಾವಣೆಯಾಗುತ್ತಿವೆ. ಇದಕ್ಕೆ ಕಾರಣ ಪುರೋಹಿತಶಾಹಿ ಹೊಂದಿರುವ ಜಾಗತೀಕರಣ, ವಸಾಹತುಶಾಹಿಗಳ ಪ್ರಭಾವದಿಂದಾಗಿದೆ. ಆದರೆ ಕೆಲವು ಸಂಪ್ರದಾಯದಲ್ಲಿ ಹಳ್ಳಿಗಳಲ್ಲಿ ಇನ್ನೂ ಬದಲಾವಣೆ ಆಗಿಲ್ಲ ಎಂದು ಹೇಳಬಹುದು.

ಬಿ.ಎಂ.ಶ್ರೀ. ಅವರು 'ಕನ್ನಡ ಗ್ರಂಥಮಾಲೆ'ಗೆ ಮುನ್ನುಡಿ ಬರೆಯುತ್ತಾ ಹಲವಾರು ಚಿಂತನೆಗಳನ್ನು ಮಾಡಿದ್ದಾರೆ. ಅವರು ಕನ್ನಡ ಸಾಹಿತ್ಯವನ್ನು ಯಾರಿಗೆ ತಲುಪಿಸಬೇಕಾಗಿದೆ? ಯಾರಿಗೆ ಮುಟ್ಟಿಸಬೇಕಾಗಿದೆ? ಎನ್ನುವುದೇ ಈ ಮುನ್ನುಡಿಯ ಆಶಯವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರತಿವರ್ಷ ಹಳಗನ್ನಡ ಕೃತಿಯನ್ನು ಸಂಪಾದನೆ ಮಾಡಿ ಜನಸಾಮಾನ್ಯರು, ವಿದ್ಯಾರ್ಥಿಗಳಿಗೆ ಮುಟ್ಟಿಸುವುದಕ್ಕೆ ಶ್ರಮಿಸಿದ್ದಾರೆ. ಈ ಮುನ್ನುಡಿಯಲ್ಲಿ ಹೇಳುವಂತೆ "ಈ ನವೀನ ಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯರಿಗೆ ಜ್ಞಾನವನ್ನು ಹರಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವ ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ ಮುಂತಾದ ವಿಷಯಗಳನ್ನು ಲಲಿತವಾದ ಹೊಸಗನ್ನಡ ಶೈಲಿಯಲ್ಲಿ ವಿವಾದಾಸ್ಪದವಲ್ಲದ ನಿಷ್ಪಕ್ಷವಾದ ರೀತಿಯಲ್ಲಿ ತಿಳಿಸತಕ್ಕವು. ಇವು ಸ್ವತಂತ್ರ ಗ್ರಂಥಗಳಾಗಿರಬಹುದು ಅಥವಾ ಭಾಷಾಂತರಗಳಾಗಿರಬಹುದು, ಸಂಕಲನಗಳಾಗಿರಬಹುದು"[೪] ಎಂದು ಹೇಳುತ್ತಾರೆ. ಕನ್ನಡ ಸಾಹಿತ್ಯ ರಚನೆಗೊಂಡಿರುವುದು ಸಾಮಾಜಿಕ ಸಂರಚನೆಗಾಗಿ. ಅಲ್ಲಿ ಸಾಮಾಜಿಕ ವರ್ಗ ಸಂವೇದನೆಗಳು ಕಂಡುಬರುವುದು ಸಹಜವಾಗಿದೆ. ಹಾಗಾಗಿ ಯಾವುದೇ ಸಾಹಿತ್ಯ ರಚನೆಯಾಗಲಿ, ಭಾಷಾಂತರವಾಗಲಿ ಹಳಗನ್ನಡ ಕೃತಿಗಳನ್ನು ಪುನಃ ಸಂಸ್ಕೃತಿಸುವುದಾಗಲಿ ಇವುಗಳ ಉದ್ದೇಶ ಮುಖ್ಯವಾಗಿ ಪ್ರತಿಯೊಬ್ಬರಿಗೂ ಮುಟ್ಟಿಸಬೇಕಾಗಿದೆ. ಅದು ಹೊಸಗನ್ನಡ ಎನ್ನುವ ಪ್ರಸ್ತುತ ಭಾಷೆಯಾಗಿ ಚಿಂತನೆ ಮಾಡಬೇಕಾಗಿದೆ. ಸಾಹಿತ್ಯ ರಚನೆಗೊಂಡಾಗ ಯಾರಿಗೂ ಮನಸ್ಸಿಗೆ ನೋವಾಗದಂತ ರೀತಿಯಲ್ಲಿ ರೂಪಗೊಳ್ಳಬೇಕಾಗಿದೆ ಎಂಬುದು ಈ ಮುನ್ನುಡಿಯ ಧ್ವನಿಯಾಗಿದೆ.

ನಾವು ಯಾವುದೇ ಕೃತಿಗಳನ್ನು ಓದದೇ ಇರುವುದು ಸರಿಯಲ್ಲ. ಕೃತಿ ಸರಿಯಾಗಿದೆ ಎಂದು ಹೇಳುವವರು ಹೆಚ್ಚಾಗಿದ್ದಾರೆ. ಅದಕ್ಕಾಗಿ ಮಾತನಾಡುವವರು ಮೂಲಕೃತಿಯನ್ನು ಓದಬೇಕಾಗಿದೆ. ಬಿ.ಎಂ.ಶ್ರೀ.ಯವರು ಹೇಳುವಂತೆ 'ಒಬ್ಬ ಕವಿಯ ಕವಿತಾಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು, ಇಲ್ಲ ಉತ್ತಮ ಭಾಗಗಳೆಲ್ಲ ವನ್ನಾದರೂ ಓದಬೇಕು' ಎಂದು ಹೇಳುತ್ತಾರೆ. ಪ್ರಮುಖವಾಗಿ ವಿದ್ಯಾರ್ಥಿಗಳಿಗೆ ಮುಟ್ಟಿಸುವುದು ಮುಖ್ಯವಾಗಿದೆ. ಯಾವುದೇ ಸಾಹಿತ್ಯ ಪ್ರಕಾರಕ್ಕೆ ಸಂಬಂಧಿಸಿದಂತಹ ಬರವಣಿಗೆ ಸಮಾಜಕೇಂದ್ರಿತವಾದ ನಿಲುವು ಹೊಂದಿರಬೇಕು. ಹಾಗಾಗಿ ಬಿ.ಎಂ.ಶ್ರೀ.ಯವರು ಗ್ರಂಥಸಂಪಾದನೆಯ ಮೂಲಕ ನಮ್ಮ ಕನ್ನಡದ ಗಟ್ಟಿಯಾದ ಬುನಾದಿ ಹಾಕಿದವರಲ್ಲಿ ಒಬ್ಬರಾಗಿದ್ದಾರೆ.

ಬಿ.ಎಂ.ಶ್ರೀ.ಯವರು ನಾಗಚಂದ್ರನ ಕುರಿತು ಧಾರವಾಡದ ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದಿಂದ ೧೯೩೮ರಲ್ಲಿ ಪ್ರಕಟಗೊಂಡ 'ಅಭಿನವ ಪಂಪ' ಎಂಬ ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾರೆ. ಈ ಮುನ್ನುಡಿ ನಾಗಚಂದ್ರನ ಭಕ್ತಿ, ಅವನ ಎರಡು ಕಾವ್ಯಗಳ ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. 'ಮಲ್ಲಿನಾಥ ಪುರಾಣ', 'ರಾಮಚಂದ್ರಚರಿತ ಪುರಾಣ' ಇವೆರಡು ಕೃತಿಗಳು ರಸಗಳಿಂದ ಕೂಡಿದ್ದು, ನಾಗಚಂದ್ರನ ವಿಮರ್ಶೆ, ಕವಿಯ ಗುಣವನ್ನು, ವರ್ಣನೆ, ಅವನ

ಶೈಲಿಯನ್ನು ಹೇಗೆ ಅಧ್ಯಯನ ಮಾಡಬೇಕು ಎಂಬುದನ್ನು ಈ ಮುನ್ನುಡಿ ಮೂಲಕ ಹೇಳಿದ್ದಾರೆ. ಬಿ.ಎಂ.ಶ್ರೀ.ಯವರು ಈ ಮುನ್ನುಡಿಯಲ್ಲಿ ಹಳಗನ್ನಡ ಕೃತಿಗಳನ್ನು ಹೇಗೆ ಅಧ್ಯಯನ ಮಾಡಬೇಕು, ಯಾವುದನ್ನು ಗ್ರಹಿಸಬೇಕು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ ಎಂದು ತಿಳಿಸಿದವರು. ಬಿ.ಎಂ.ಶ್ರೀ.ಯವರು ಹೇಳುವಂತೆ "ಕಾವ್ಯ ವ್ಯಾಸಂಗವನ್ನು ಸುಲಭಪಡಿಸಿ ಕನ್ನಡಿಗರ ಪ್ರೇಮಕ್ಕೆ ಪಾತ್ರರನ್ನಾಗಿ ಮಾಡಬೇಕೆಂದು ಬಯಸುತ್ತಿದ್ದವರು. ಇಂತಹ ಗ್ರಂಥಗಳನ್ನು ಒಂದರ ಮೇಲೊಂದು ಇದುವರೆಗೆ ಹುಟ್ಟಿರುವುದು ಅಲ್ಲದೇ ಮುಂದೆ ಇನ್ನು ಬೇಗ ಬೇಗ ಮುಂದೆ ಬರಲೆಂದು ಹಾರೈಸುವವರು. ಆಗಲೇ ಬಂದಿರುವ ಮುದ್ದಣ, ರನ್ನ, ಲಕ್ಷ್ಮೀಶ, ಈಗ ನಾಗಚಂದ್ರ, ನನಗೆ ತಿಳಿದಮಟ್ಟಿಗೆ ಸಿದ್ಧವಾಗುತ್ತಿರುವ ಕುಮಾರವ್ಯಾಸ, ಷಡಕ್ಷರಿ, ಸರ್ವಜ್ಞ, ಪಂಪ, ಸಾಹಿತ್ಯ ಲಕ್ಷಣವನ್ನು ಸಾಮಾನ್ಯವಾಗಿ ಶಾಸ್ತ್ರರೂಪದಲ್ಲಿ ಹೇಳುವುದು ಇರಲಿ ಅಗತ್ಯವಾಗಿ ನಮಗೆ ಬೇಕಾಗಿರುವುದು ವ್ಯಕ್ತಿ ವಿಮರ್ಶೆ, ರಸಾನುಭವ, ನಿಷ್ಕೃಷ್ಟವಾದ ಕಾವ್ಯ ಪರಿಜ್ಞಾನ"[೫] ಎಂದು ಹೇಳುತ್ತಾರೆ. ಈ ಮೂಲಕ ಹಳಗನ್ನಡ ಕೃತಿಗಳನ್ನು ಓದುವುದು, ಗ್ರಹಿಸುವುದು ಮುಖ್ಯವಾಗಿದ್ದು, ಕಾವ್ಯ ಲಕ್ಷಣಗಳು ಹಳಗನ್ನಡದಲ್ಲಿ ಅತಿ ಹೆಚ್ಚಾಗಿ ಓದಬೇಕಾಗಿದ್ದು, ವ್ಯಕ್ತಿ ವಿಮರ್ಶೆಯಿಂದ, ರಸಾನುಭವ ಕಾವ್ಯ ಅರ್ಥೈಸುವಿಕೆಯ ಕ್ರಮ ಮುಖ್ಯವಾಗಿದೆ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಮುನ್ನುಡಿ ಕೃತಿಯು ವಿದ್ಯಾರ್ಥಿ ಹಿತದೃಷ್ಟಿಯಿಂದ ಸಂಗ್ರಹಿಸಿ ಹಳಗನ್ನಡ ಸಾಹಿತ್ಯ ಸಿದ್ಧಾಂತ, ನಿರೂಪಣೆ ಕೃತಿಯ ಕೌಶಲ್ಯತೆಯ ಗ್ರಹಿಸುವ ವಿಧಾನವಾಗಿ ಈ ಮುನ್ನುಡಿಯಲ್ಲಿ ವ್ಯಕ್ತಗೊಂಡಿದೆ.

ಕುವೆಂಪು ಅವರ 'ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು', ಕೃತಿಗೆ ಬಿ.ಎಂ.ಶ್ರೀ.ಯವರು ಮುನ್ನುಡಿ ಬರೆಯುತ್ತಾರೆ. ಈ ಮುನ್ನುಡಿ 'ಕನ್ನಡ ತೇರು' ಶೀರ್ಷಿಕೆಯಲ್ಲಿ ಕನ್ನಡ ನಾಡು ನುಡಿಯ ಬಗ್ಗೆ ಚಿಂತಿಸಿದ್ದಾರೆ. ಕುವೆಂಪು ಅವರು 'ಕಿಂದರಜೋಗಿ'ಯಲ್ಲಿ ಮಕ್ಕಳನ್ನು ಸಂತೋಷಪಡಿಸುತ್ತಾರೆ. ಅದರ ಜೊತೆಗೆ ಅವರ ಕನ್ನಡ ಭಾಷೆ, ನೆಲ, ಜಲ ರುಚಿಯಿಡಿಸಿದ್ದಾರೆ. ಕನ್ನಡ ಪ್ರೇಮಿಗಳಾದ ಜನಸಮೂಹ ಸಂತೋಷದಿಂದ ಅಪ್ಪಿಕೊಂಡಿವೆ. ಬಿ.ಎಂ.ಶ್ರೀ.ಯವರು ಹೇಳುವಂತೆ "ಈ ಕ್ರಾಂತಿ ಯುಗದಲ್ಲಿ ಕನ್ನಡ ಕೊಚ್ಚಿ ಹೋಗುವ ಸಂಭವವುಂಟು. ನಮ್ಮ ಹಿರಿಯರು ಕನ್ನಡ ದೇವಿಯನ್ನು ತೇರಿನಲ್ಲಿ ವಿಜಯ ಮೂಡಿಸಿ ಭಕ್ತಿ ಕಾಣಿಕೆಗಳನ್ನು ಸಲ್ಲಿಸಿದರು. ರಥ ಇಕ್ಕಟ್ಟಿನ ಸುಳಿಗೆ ಸಿಲುಕಿದೆ. ಮುಂದಕ್ಕೆ ಎಳೆಯುವುದೇ, ಇದ್ದಲ್ಲಿ ಬಿಟ್ಟು ತೆರಳುವುದೇ ಈ ಪ್ರಶ್ನೆ ಕನ್ನಡಿಗರಲ್ಲಿ ಮಿಡಿಯುತ್ತದೆ"[೬] ಎಂದು ಕಿಂದರಜೋಗಿಯ ಮುನ್ನುಡಿಯಲ್ಲಿ ಹೇಳುತ್ತಾರೆ. ಈ ಹಿನ್ನೆಲೆಯಿಂದ ಕನ್ನಡದ ಬಗ್ಗೆ ಕಳಕಳಿಯಿಂದ ಉಳಿಸುವ ಬೆಳೆಸುವ ನಿವೇದನೆಯನ್ನು ಕನ್ನಡಿಗರಿಗೆ ಈ ಮುನ್ನುಡಿಯ ಮೂಲಕ ಹೇಳಿದ್ದಾರೆ. ಪ್ರಸ್ತುತವಾಗಿ ಕನ್ನಡದ ಶಿಕ್ಷಣ, ಭಾಷೆ, ನೆಲ, ಜಲ ಅಖಂಡ ಕರ್ನಾಟಕ ವಸಾಹತುಶಾಹಿ ಜಾಗತೀಕರಣದಿಂದ ಸೋಲುತ್ತಿದೆ. ರಾಜಕಾರಣಿಗಳು ಬೆಳೆಸಬೇಕಾದದ್ದನ್ನು ಅವರೇ ಬೇರೆ ಹಾದಿಗೆ ಒಯ್ಯುತ್ತಿದ್ದಾರೆ. ಖಾಸಗೀಕರಣಕ್ಕೆ ಕನ್ನಡ ಸಿರಿ ಭಾಷೆಯನ್ನು ಮಾರಿಕೊಂಡಿದ್ದಾರೆ. ಖಾಸಗೀಕರಣದಿಂದ ಕನ್ನಡ ನುಡಿ ನೆಲಕ್ಕೆ ಬಿದ್ದು ಒದ್ದಾಡುತ್ತಿದೆ. ನಾವುಗಳೇ ಬೆಳೆಸಬೇಕಾದ ಕನ್ನಡವನ್ನು ಸ್ವಾರ್ಥದಿಂದ ದೂರ ತಳ್ಳುತ್ತಿದ್ದೇವೆ ಎಂದು ಅನ್ನಿಸುತ್ತದೆ. ಕನ್ನಡ ಹೋರಾಟಕ್ಕಾಗಿ,

ಭಾಷಾಭಿಮಾನಕ್ಕಾಗಿ ಕನ್ನಡಿಗರಲ್ಲಿ ಕೆಲವು ಮಂದಿ ಮಾತ್ರ ತೊಡಗಿಸಿಕೊಂಡಿದ್ದಾರೆ. ಆದರೆ ಕನ್ನಡದಲ್ಲಿ ಒಡಕುಂಟಾಗಿದೆ. ನಾವೇ ಕನ್ನಡಿಗರು ಸರಿಪಡಿಸಬೇಕಾಗಿದೆ.

ಬಿ.ಎಂ.ಶ್ರೀ. ಅವರು 'ಕುಮಾರವ್ಯಾಸ ಪ್ರಶಸ್ತಿ' ಕೃತಿಗೆ ಮುನ್ನುಡಿ ಬರೆದಿದ್ದಾರೆ. ಇದು ಮೈಸೂರು ಮಹಾರಾಜ ಕಾಲೇಜಿನ ಕರ್ನಾಟಕ ಸಂಘದವರು ಸಂಗ್ರಹಿಸಿದ್ದಾರೆ. ಈ ಕೃತಿಯ ಮುನ್ನುಡಿಯಿಂದ ಕುಮಾರವ್ಯಾಸ ಭಾರತದ ಮೂಲ ಪ್ರತಿಗಳನ್ನು ತರಿಸಿ ಅದರ ಸಾರವಿಸ್ತಾರವನ್ನು ಗುರುತಿಸಿದವರು ಟಿ.ಎಸ್.ವೆಂಕಣ್ಣಯ್ಯ ಮತ್ತು ಪಂಜೆ ಮಂಗೇಶರಾಯರು ಆಗಿದ್ದಾರೆ. ಇದೇ ಕೃತಿಯನ್ನು 'ಕರ್ಣಾಟಕ ಭಾರತ ಕಥಾಮಂಜರಿ' ಕೃತಿಯನ್ನು ಸಂಪಾದಿಸಿ ಅದಕ್ಕೆ ಸವಿವರವಾಗಿ ಕುವೆಂಪು ಅವರು ಮುನ್ನುಡಿ ಬರೆದಿದ್ದಾರೆ. ಹಾಗಾಗಿ ಕುವೆಂಪು ಅವರಿಗೆ ಮೂಲ ಟಿ.ಎಸ್.ವೆಂಕಣ್ಣಯ್ಯ, ಪಂಜೆಮಂಗೇಶರಾಯ ಮತ್ತು ಬಿ.ಎಂ.ಶ್ರೀ.ಯವರು. 'ಕುಮಾರವ್ಯಾಸ ಪ್ರಶಸ್ತಿ' ಮುನ್ನುಡಿಯಲ್ಲಿ ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳು ಕುಮಾರವ್ಯಾಸನ ಕಾಲ, ಮತ, ಮಹಿಮೆ ಆತನ ಮಹಾಕಾವ್ಯದ ಗುಣಗಳು, ಪಾತ್ರಗಳು, ಶೈಲಿ ಮುಂತಾದ ವಿಷಯಗಳ ಕುರಿತು ಬೆಳಕು ಚೆಲ್ಲಿದ್ದಾರೆ. ಬಿ.ಎಂ.ಶ್ರೀ.ಯವರು ಮುನ್ನುಡಿಯಲ್ಲಿ ಹೇಳುವಂತೆ "ಕನ್ನಡದ ಹೊಸ ಹುಟ್ಟಿನಲ್ಲಿ ಹೊಸ ಮಾರ್ಗಕ್ಕೆ ಹೊಸಶಕ್ತಿಗೆ ದಿಕ್ಸೂಚಿ, ಧ್ರುವತಾರೆ, ವೇದವ್ಯಾಸರ ಪ್ರೇಮಕುಮಾರ, ಕುಮಾರವ್ಯಾಸನೆಂದರೂ ಸರಿ. ವೀರನಾರಾಯಣ, ಪ್ರೇಮಕಿಂಕರ, ನಮ್ಮ ನೆಚ್ಚಿನ ನಾರಾಯಣಪ್ಪನೆಂದರೂ ಸರಿ. ಕನ್ನಡಿಗನ ಹೃದಯದಲ್ಲಿ ಒಗ್ಗಟ್ಟಿನ ಮೇಲೆ ಬಿಂಬಿಸಿ ನಿಲ್ಲುವ ಚಿತ್ರ, ಆಕಾರ, ವ್ಯಕ್ತಿತ್ವ, ಇದು ಈ ಕುಮಾರವ್ಯಾಸ ಪ್ರಶಸ್ತಿ ಸೂಕ್ಷ್ಮ ವಿಮರ್ಶಕರ ಯಂತ್ರಗಳಿಂದ ಸಿದ್ಧಿಸುವ ಸಿದ್ಧಿ"[೭] ಎಂದು ಹೇಳುತ್ತಾರೆ. ಕುಮಾರವ್ಯಾಸ ಯಾವ ಕಾಲದವನು ಎಂದು ಹಲವರು ಚರ್ಚೆ ಮಾಡಿದ್ದಾರೆ. ಆದರೆ ಕುಮಾರವ್ಯಾಸನ ರಾಜಕೀಯ, ಸಾಮಾಜಿಕ ಪ್ರಜ್ಞೆ ಸತ್ವಕ್ಕೆ ಮಾನದಂಡವಿರದು. ಕೃಷ್ಣನನ್ನು ನಾಯಕನಾಗಿ, ಪಾಂಡವರು–ಕೌರವರ ರಾಜಕೀಯ ಪ್ರಗತಿ ವಿಶ್ಲೇಷಣೆಯ ಕಥಾವಸ್ತುವಾಗಿದೆ. ಈ ಹಿನ್ನೆಲೆಯಿಂದ ವಿಜಯನಗರ ಹಾಗೂ ಇತರೆ ರಾಜಮನೆತನಗಳ ವೈಭವವನ್ನು ಅರ್ಥ ಮಾಡಿಕೊಳ್ಳಬಹುದು. ಏಕೆಂದರೆ ವಿಜಯನಗರ ರಾಜರುಗಳನ್ನು ನಾವುಗಳು ಗ್ರಹಿಸಬಹುದು. ಹಾಗೆಯೇ ಇತರೆ ರಾಜಮನೆತನಗಳ ರಾಜವೈಭೋಗದ ಪರಿಕಲ್ಪನೆಯನ್ನು ಕುಮಾರವ್ಯಾಸ ಕಥಾವಸ್ತು ನಿರೂಪಣೆ ವ್ಯಕ್ತಗೊಂಡಿದೆ. ಪಂಪನ ಕಾವ್ಯಶೈಲಿ, ಕುಮಾರವ್ಯಾಸನ ಕಾವ್ಯಶೈಲಿ ವಿಭಿನ್ನವಾದರೂ ಕರ್ನಾಟಕದ ರಾಜಮನೆತನಗಳನ್ನು ಕಾವ್ಯಗಳ ಮೂಲಕ ಅರ್ಥ ಮಾಡಿಕೊಳ್ಳಬಹುದಾಗಿದೆ.

'ಹದಿಬದೆಯ ಧರ್ಮ' ಕೃತಿಗೆ ಬಿ.ಎಂ.ಶ್ರೀ. ಅವರು ಮುನ್ನುಡಿ ಬರೆದಿದ್ದಾರೆ. ಕನ್ನಡ ಸಾಹಿತ್ಯ ಲೋಕದ ಪರಂಪರೆಯಲ್ಲಿ ಮೊದಲಿಗೆ ಅಕ್ಕಮಹಾದೇವಿ ಬಿಟ್ಟರೆ ಎರಡನೇಯವಳಾಗಿ ಸಂಚಿ ಹೊನ್ನಮ್ಮ ಮುಖ್ಯರಾಗುತ್ತಾರೆ. ಏಕೆಂದರೆ ಸರ್ವಾಂತರ್ಯಾಮಿಯಾಗಿ ದೇವರನ್ನು ಎಲ್ಲೆಲ್ಲೂ ಕಂಡು ಶಿವನೇ ಗಂಡನೆಂದು ತನ್ನ ಆತ್ಮವನ್ನು, ಜೀವನವನ್ನು ಶಿವಕಾರ್ಯಕ್ಕೆ ಅರ್ಪಣೆ ಮಾಡಿ ದೊಡ್ಡ ಧರ್ಮ ಚಳುವಳಿಯನ್ನು ಹುಟ್ಟಿಸಿದವಳು. ಅಕ್ಕಮಹಾದೇವಿಗೆ ಮನೆಗಿಂತ ನಾಡು ದೊಡ್ಡದಾಯಿತು.

ಸಂಚಿಹೊನ್ನಮ್ಮ ಮನೆ, ಮಕ್ಕಳು, ಗಂಡ ಹೆಂಡಿರ, ಗೃಹಸ್ಥಾಶ್ರಮದ ಧರ್ಮ ಬಾಳಿನ ಚೆಲುವನ್ನು ಹೆಣ್ಣುಮಕ್ಕಳ ಹಾಡಿನಲ್ಲಿ ಹಾಡಿ ನಿತ್ಯಸಂಸಾರದ ನಿಷ್ಕಾಕರ್ಮವೇ ಭಗವಂತನ ಪಾದವನ್ನು ಸೇರುವ ಹಾದಿ ಅಂತ ಹಾಡಿದವಳು ಎಂದು ಬಿ.ಎಂ.ಶ್ರೀಯವರು ಬರೆದಿರುವ ಮುನ್ನುಡಿಯಲ್ಲಿ ವ್ಯಕ್ತಗೊಂಡಿದೆ. ಸಂಚಿ ಹೊನ್ನಮ್ಮ ಒಡೆಯರ ಕಾಲದ ಪ್ರಮುಖವಾಗಿ ಮಹಿಳಾ ಸಂವೇದನೆಯನ್ನು ವ್ಯಕ್ತಪಡಿಸಿದ್ದಾಳೆ.

ಮಹಿಳೆಯರ ಸ್ಥಾನಮಾನಗಳು ಮನೆಯ ಜೊತೆಗೆ ಸಮಾಜದ ಕುರಿತಂತೆ ಅರಿವು ಮೂಡಿಸಿದವರು.

"ಪೆಣ್ಣಲ್ಲವೆ ತಮ್ಮ ನೆಲ್ಲಪಡೆದ ತಾಯಿ?
ಪೆಣ್ಣಲ್ಲವೆ ಪೊರೆದವಳು?
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು?"[೮]

ಎಂದು ಒಡೆಯರ ಕಾಲದ ಮನುಷ್ಯತ್ವವಿಲ್ಲದ ಪುರುಷರಿಗೆ ಸವಾಲು ಹಾಕುತ್ತಾಳೆ. ಹೊನ್ನಮ್ಮ ಕಾವ್ಯದ ಮೂಲಕ ತನ್ನ ಅಸಹಾಯಕತೆಯನ್ನು, ಹೆಣ್ಣಿನ ಸಂವೇದನೆಯನ್ನು ಹೊರಹಾಕಿದ್ದಾಳೆ.

ಗ್ರೀಕರ ತತ್ವಶಾಸ್ತ್ರಸಾರ ಸಂಗ್ರಹಕ್ಕೆ ಬರೆದ ಮುನ್ನುಡಿ(೧೯೪೧)ಯಲ್ಲಿ ಬಿ.ಎಂ.ಶ್ರೀ.ಯವರು ಗ್ರೀಕರ ತತ್ವಶಾಸ್ತ್ರ ಯಾವ ನೆಲೆಯಲ್ಲಿ ರೂಪಗೊಂಡಿತು ಎಂಬುದನ್ನು ಚರ್ಚೆ ಮಾಡುತ್ತಾರೆ. ಜೊತೆಗೆ ಗ್ರೀಕರ ಸಾಹಿತ್ಯದ ತತ್ವ ಯಾವುದಾಗಿತ್ತು, ನಾವು ಗ್ರಹಿಸುವ ವಿಧಾನ ಯಾವ ನೆಲೆಯಿಂದ ಕೂಡಿರಬೇಕು ಎಂಬುದನ್ನು ಕುರಿತು "ಪೂರ್ವ ಕಾಲದ ಗ್ರೀಕರ ಸರ್ವತೋಮುಖವಾದ ಸಾಹಿತ್ಯದ ಪರಿಚಯ ಅತ್ಯಾವಶ್ಯಕ. ಇತಿಹಾಸ ಕಾವ್ಯವೆ, ನಾಟಕವೆ, ಭಾವಗೀತೆಯೆ, ಚರಿತ್ರೆಯೆ, ತತ್ವವೆ, ವಾಗ್ಮಿತೆಯೆ, ರಂಜನ ಕಥೆಯೆ, ರಾಜಕೀಯ ಆದರ್ಶಗಳೆ, ಧಾರ್ಮಿಕ ಸೂಕ್ಷ್ಮತೆಯೆ, ವ್ಯಾವಹಾರಿಕ ವಿವೇಕವೆ, ಕಲೆಯೆ, ಶಿಲ್ಪವೆ, ಚಿತ್ರವೆ, ಸಂಗೀತವೆ, ವಿಜ್ಞಾನವೆ, ಕುಶಲಕಲೆಯೆ, ನಿತ್ಯಜೀವನದ ಸೊಬಗೆ, ವ್ಯಾಯಾಮವೆ, ಆರೋಗ್ಯವೆ, ವಿನೋದವೆ, ಗಂಭೀರತೆಯೆ, ದ್ಯಾವಾ ಪೃಥ್ವಿಯ ವಿಶ್ವ ವರ್ತನೆಯಲ್ಲಿ ಸಕಲ ಸೌಭಾಗ್ಯಗಳಿಗೂ ಪುರಾತನ ಹೆಲಸ್ ತವರು ಮನೆಯಾಗಿತ್ತು"[೯] ಎಂದು ಹೇಳುತ್ತಾರೆ. ಭಾರತದ ಪುರಾತನ ಸಾಹಿತ್ಯ, ಚರಿತ್ರೆಯನ್ನು ಗಮನಿಸಬೇಕಾದರೆ ಗ್ರೀಕರ ಪುರಾತನವನ್ನು ಕುರಿತಂತೆ ಓದಲೇಬೇಕು. ನಮ್ಮ ಸಾಹಿತ್ಯದ ಮೇಲೆ ಪಾಶ್ಚಾತ್ಯರ ಪ್ರಭಾವ ಒಳಗೊಂಡಿದೆ. ಅಂದರೆ ಅದು ಗ್ರೀಕರ ತತ್ವಶಾಸ್ತ್ರ ಎಂದು ಹೇಳಬಹುದು. ಈ ಹಿನ್ನೆಲೆಯಿಂದ ಅಖಂಡ ಭಾರತೀಯ ಹಾಗೂ ಪ್ರಾಪಂಚಿಕ ದೃಷ್ಟಿಕೋನವನ್ನು ಗ್ರೀಕ್ ಸಾಹಿತ್ಯ ತೋರಿಸಿಕೊಡುತ್ತದೆ. ಅಲ್ಲಿ ಹೋಮರ್, ಹೆಲಸ್, ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್, ಹೆರೊಡೊಟಸ್ ಇವರ ಜೊತೆಗೆ ನಮ್ಮ ಸಾಹಿತ್ಯ ಚಿಂತನೆ ಸೇರುತ್ತವೆ ಎನ್ನುವುದು ಮರೆಯುವಂತಿಲ್ಲ.

'ವಚನಧರ್ಮಸಾರ' ಕೃತಿಗೆ ಬಿ.ಎಂ.ಶ್ರೀ.ಯವರು ಮುನ್ನುಡಿ ಬರೆಯುತ್ತಾರೆ. ೧೨ನೇ ಶತಮಾನದ ಸಾಮಾಜಿಕ ಚಳುವಳಿಯಲ್ಲಿ ಸುಮಾರು ವಚನಕಾರರಿಂದ ಸಾವಿರಾರು ವಚನಗಳು ಹುಟ್ಟಿಕೊಂಡಿವೆ. ಅವುಗಳು ಸಾಮಾಜಿಕ ಚಿಂತನೆಯಲ್ಲಿ ಆಗಿವೆ. ವಿಶ್ವವ್ಯಾಪ್ತಿಯುಳ್ಳ ಸಂಚಾರವನ್ನು

ಹರಡಿಕೊಂಡಿವೆ. ವಚನಗಳು ಧರ್ಮದ ತಿರುಳನ್ನು ತೆಗೆಯಲು ಹಾಗೂ ಮೂಢನಂಬಿಕೆಯನ್ನು ತೆಗೆಯಲು ಪ್ರಯತ್ನಿಸುತ್ತಿವೆ. ವಚನಗಳು ಶಾಸ್ತ್ರಗಳಾಗಿವೆ. ಸಾಹಿತ್ಯವೂ ಆಗಿದೆ. ಕನ್ನಡ ಸಾಹಿತ್ಯದ ಮೀಮಾಂಸೆಗಳಾಗಿವೆ. ಕನ್ನಡ ನುಡಿಯ ಚಿಂತನೆಗಳಾಗಿವೆ. ಈ ಕೃತಿಯಲ್ಲಿ ವಚನ ಸಾಹಿತ್ಯದ ತಾತ್ವಿಕತೆಯನ್ನು ಗುರುತಿಸಿದೆ. ಶರಣರ ವ್ಯಕ್ತಿತ್ವ, ನೀತಿ, ಸ್ತ್ರೀಯರ ಸ್ಥಾನಮಾನಗಳು, ಸಮಾಜದ ಬಗ್ಗೆ ನಿಲುವುಗಳು, ಕಾವ್ಯಾತ್ಮಕ ಚಿಂತನೆಗಳು ಈ ಕೃತಿಯಲ್ಲಿ ವ್ಯಕ್ತಗೊಂಡಿವೆ. ಈ ಕೃತಿಯ ಮುನ್ನುಡಿಯಲ್ಲಿ ಬಿ.ಎಂ.ಶ್ರೀ.ಯವರು ಹೇಳುವಂತೆ "ಲೋಕದ ಮತಗಳಲ್ಲಿ ಕೇವಲ ಮತ ತತ್ವವಿಚಾರಗಳು, ಮತೀಯಾಂಶಗಳು, ಪುರಾಣ ಕಥೆಗಳು, ಪುರಾತನರ ಜೀವನ ಚರಿತ್ರೆಗಳು, ತತ್ವ ವಿಚಾರಗಳಲ್ಲಿ ವೈಶಿಷ್ಟ್ಯಗಳು, ಸಂಸ್ಕಾರ ಪ್ರಕ್ರಿಯೆಗಳು ಮುಂತಾದ ವಿಚಾರಗಳು ಸೇರುತ್ತವೆ"[೧೦] ಎಂದಿರುವರು. ಮನುಷ್ಯ ತನ್ನ ಅಸ್ತಿತ್ವಕ್ಕಾಗಿ ಏನೆಲ್ಲಾ ಮಾಡಲು ಸಿದ್ಧನಿರುತ್ತಾನೆ. ಆದರೆ ತನ್ನತನವನ್ನು ಬಿಟ್ಟು ಕೊಡಲು ಸಿದ್ಧನಾಗುವುದಿಲ್ಲ. ಏಕೆಂದರೆ ಅವನಿಗೆ ನನಗಿಂತ ಶ್ರೇಷ್ಠ ಯಾರೂ ಇಲ್ಲ ಎಂಬ ಭಾವನೆ ಬರಬಹುದು. ಅಲ್ಲಿ ಆರ್ಥಿಕ, ಸಾಮಾಜಿಕ, ಧಾರ್ಮಿಕ ಘನತೆ ಕೂಡ ಅವನಲ್ಲಿ ಕಾಡಬಹುದು. ಈ ಹಿನ್ನೆಲೆಯಿಂದ ಲೋಕದ ಮತ, ಧರ್ಮಗಳಲ್ಲಿ ವಿರಸ ಉಂಟಾಗಬಹುದು. ಸಮಾಜ ಒಡೆಯುವ ಲಕ್ಷಣಗಳು ಕೂಡ ಬರಬಹುದು. ಹಾಗಾಗಿ ವಚನಕಾರರು ಯಾವುದೇ ಧರ್ಮ, ಜಾತಿ ಎನ್ನದೇ ಸಮಾಜದಲ್ಲಿ ತಮ್ಮ ವಚನಗಳ ಮೂಲಕ ಜಾಗೃತಿಯನ್ನು ಮೂಡಿಸಿದರು. ಆದರೆ ಪ್ರಸ್ತುತವಾಗಿ "ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕೆ ಅಳಿವಿಲ್ಲ" ಎಂಬ ಮಾತಿನಿಂದ ವಚನಕಾರರನ್ನು ಮತಗಳಿಗೆ ಕಟ್ಟಿ ಹಾಕಲಾಗಿದೆ.

> "ದೇವನೊಬ್ಬ ನಾಮ ಹಲವು
> ದಯವಿಲ್ಲದ ಧರ್ಮ ಯಾವುದಯ್ಯ?
> ಅಯ್ಯಾ ಎಂದೆಡೆ ಸ್ವರ್ಗ, ಎಲವೊ ಎಂದರೆ ನರಕ
> ನೊಂದ ನೋವ ನೋಯದವರೆತ್ತ ಬಲ್ಲರು"[೧೧]

ಬಿ.ಎಂ.ಶ್ರೀ. ಅವರು ಮುನ್ನುಡಿಯಲ್ಲಿ ಹೇಳುವಂತೆ "ಮಾನವನು ಮಾನವ ಕುಲಕ್ಕೆ ಹೊಂದಿಕೊಂಡು ತನ್ನ ಆತ್ಮಶುದ್ಧಿಯನ್ನು, ಎಲ್ಲ ಕ್ಷೇಮಸಂಬಂಧವನ್ನು ಬೆಳೆಸಿಕೊಂಡು ಅಲ್ಲಿಯೂ, ಇಲ್ಲಿಯೂ ಸಲ್ಲುವಂತೆ ಬಾಳುವುದೇ ಮುಖ್ಯ ಗುರಿಯಾಗಿರಬೇಕು"[೧೨] ಎಂದಿದ್ದಾರೆ. ವಚನಗಳನ್ನು, ವಚನಕಾರರನ್ನು ನಾವು ನೋಡುವ ದೃಷ್ಟಿಕೋನ ಬದಲಾವಣೆಯಾಗಬೇಕು. ಸತ್ಯದಿಂದ ಸೌಂದರ್ಯ, ಸ್ವಾತಂತ್ರ್ಯ, ಸಹಾನುಭೂತಿ, ಸರ್ವಸಮಾನತೆ ಎಲ್ಲವನ್ನು ಒಳಗೊಳ್ಳಬೇಕಾಗಿದೆ. ಆದರೆ ಮತಕ್ಕಾಗಿ, ಧರ್ಮಕ್ಕಾಗಿ, ವ್ಯಕ್ತಿ ಬೇಕು. ಆದರೆ ವ್ಯಕ್ತಿಯ ತತ್ವ ಬೇಡವೇ? ಪ್ರಸ್ತುತವಾಗಿ ಬಸವಣ್ಣ ಬೇಕು. ಕನಕದಾಸರು ಬೇಕು. ಅವರ ತತ್ವಗಳು ಬೇಡವೇ? ಎಂಬ ಈ ನಿಲುವು ಸಮಾಜಕ್ಕೆ ಬೇಕಾಗಿದೆ. ನಾವು ಯಾವುದನ್ನು ಅರ್ಥ ಮಾಡಿಕೊಳ್ಳಬೇಕು ಎನ್ನುವುದು ತಿಳಿದುಕೊಳ್ಳಬೇಕಾಗಿದೆ.

ಬಿ.ಎಂ.ಶ್ರೀ. ಅವರು ಶ್ರೀಮತಿ ಘಟ್ಟ ರಾಮಸ್ವಾಮಿ ಮತ್ತು ಕೃಷ್ಣಮೂರ್ತಿಯವರು ಸಂಗ್ರಹಿಸಿದ 'ನಾಡಪದಗಳು' ಕೃತಿಗೆ ಮುನ್ನುಡಿ ಬರೆದಿದ್ದಾರೆ. ನಾಡಪದಗಳು, ಗರತಿಯ ಹಾಡುಗಳು, ಲಾವಣಿಗಳು,

ಸವಾಲು ಜವಾಬ್ ಹಾಡುಗಳು, ಹಂತಿಪದಗಳು, ಡೊಳ್ಳಿನ ಪದಗಳು ಇತ್ಯಾದಿ. ಈ ಪ್ರಕಾರಕ್ಕೆ ಸೇರಿದ ನುಡಿಗವನಗಳು ಹಳ್ಳಿಯ ಭಾಷೆ, ಸಂಸ್ಕೃತಿ, ಸಾಮರಸ್ಯತ್ವ ಹೊಂದಿವೆ. ಹಳ್ಳಿ ಸೊಗಡುತನದಿಂದ ಹಳ್ಳಿಗರ ಗಂಡು, ಹೆಣ್ಣುಗಳೆಲ್ಲರ ಜೀವನಪಾಠವನ್ನೇ ಹೊರಹೊಮ್ಮಿಸುತ್ತವೆ. ಜೊತೆಗೆ ಈ ಹಾಡುಗಳಿಂದ ಹಳ್ಳಿಗರನ್ನು ತನ್ನಲ್ಲಿ ಹುರಿದುಂಬಿಸುವಂತೆ ಒಳಗೊಂಡಿವೆ. ಬಿ.ಎಂ.ಶ್ರೀ.ಯವರು ಹೇಳುವಂತೆ "ಇವೆಲ್ಲಾ ಸಮಾಜ ಜೀವನ, ಭಾವನೆ ಮತ್ತು ಸಂಸ್ಕೃತಿಗಳನ್ನು ಪ್ರತಿಬಿಂಬಿಸುತ್ತವೆ. ಈ ಕವನಗಳನ್ನು ಇಂತಹ ಇತರ ಕವನಗಳ ಜೊತೆಗೆ ವಿಮರ್ಶಾತ್ಮಕವಾಗಿ ಅಭ್ಯಾಸ ಮಾಡಬೇಕು"[೧೩] ಎಂದಿರುವರು. ಈ ನಾಡಪದಗಳು ಹಳ್ಳಿಯ ಸಂಸ್ಕೃತಿಯನ್ನು ಕೇಂದ್ರೀಕರಿಸಿದ್ದರಿಂದ ಅಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಿನ್ನೆಲೆಯಿಂದಲೇ ರೂಪಿತಗೊಂಡಿರುತ್ತವೆ. ಹಾಗಾಗಿ ಮೈಸೂರು ಸಂಸ್ಥಾನ ಇತರ ರಾಜಮನೆತನಗಳ ಬಗ್ಗೆ ಒಂದು ದೃಷ್ಟಿಕೋನ ನಮಗೆ ಕಾಣಿಸುತ್ತದೆ. ಹಾಗೆಯೇ ಹೆಂಗಸರ ಕರುಣಾಕಥೆಗಳು, ಧಾರ್ಮಿಕ ಭಾವನೆಯ ಕಥೆಗಳು ಇತರೆ ಚಿಂತನೆಗಳನ್ನು ಇಂತಹ ನಾಡಪದಗಳ ಮೂಲಕ ಗ್ರಹಿಸಬಹುದಾಗಿದೆ.

ಬಿ.ಎಂ.ಶ್ರೀ. ಅವರು ಶ್ರೀ ಸಿ.ರಾಜಗೋಪಾಲಚಾರಿಯವರ 'ಸಾಕ್ರಟೀಸ್' ಎಂಬ ತಮಿಳು ಕೃತಿಯ ಕನ್ನಡ ಅನುವಾದ ಗ್ರಂಥಕ್ಕೆ ಮುನ್ನುಡಿ ಬರೆದಿದ್ದಾರೆ. ಈ ಕೃತಿಯ ಮುನ್ನುಡಿಯಿಂದ ಮಾನವನ ತೇಜಸ್ಸು, ನಂಬಿಕೆ, ವಿಶ್ವಾಸ, ಆತ್ಮದಿಂದ ಕೂಡಿರುವ ಅಂಶಗಳು ವ್ಯಕ್ತಗೊಂಡಿವೆ. ಹಾಗಾಗಿ ಸಮಾಜದಲ್ಲಿ ಆದರ್ಶ ವ್ಯಕ್ತಿಗಳನ್ನು ಆಗಾಗ ಗಮನಿಸಿರುತ್ತೇವೆ. ಅದು ದೇಶದ ಸೇವೆಯಾಗಿರಬಹುದು ಅಥವಾ ಆಶ್ರಯ, ಸಹಾಯ, ಇತರೆ ಪ್ರಶಂಸೆಗಳು ನಡೆದಿರಬಹುದು. ಇಲ್ಲಿ ಬಿ.ಎಂ.ಶ್ರೀ.ಯವರು ಸಾಕ್ರಟೀಸ್‌ನ ಜೀವನ ವೃತ್ತದ ಜೊತೆಗೆ ನಮ್ಮ ದೇಶದ ಮಹಾತ್ಮರನ್ನು ನೆನೆಯುವುದು ತೋರಿಸಿದ್ದಾರೆ. ಉದಾ:- ಮಹಾತ್ಮಗಾಂಧೀಜಿ ಯಾಕೆ ನಮಗೆ ಆದರ್ಶಪ್ರಿಯರು ಎಂದು ಹೇಳಿದಾಗ ಅವರಿಂದ ಚಾರಿತ್ರಿಕ ಕಥನ ಹೊಂದಿರುತ್ತದೆ ಎಂಬುದನ್ನು ಗಮನಿಸಬಹುದು. ಇಲ್ಲಿ ಸಾಕ್ರಟೀಸ್ ಜೀವನ ವೃತ್ತಾಂತದ ಜೊತೆಗೆ ಮಹಾತ್ಮಗಾಂಧೀಜಿಯ ಜೀವನ ವೃತ್ತಾಂತವನ್ನು ಗ್ರಹಿಸಬಹುದು. "ವಿಚಾರವಿಲ್ಲದ ಬಾಳು ಬಾಳಲ್ಲ. ತಿಳುವಳಿಕೆಯಿಂದ ನಡೆಯದ ನಡತೆ ನಡತೆಯಲ್ಲಿ ಜ್ಞಾನವೇ ಶೀಲ"[೧೪] ಎಂದು ಸಾಕ್ರೆಟೀಸ್ ಒತ್ತಿ ಒತ್ತಿ ಹೇಳುತ್ತಿದ್ದನು ಎಂಬುದು ಬಿ.ಎಂ.ಶ್ರೀಯವರು ಈ ಮುನ್ನುಡಿಯಲ್ಲಿ ಉಲ್ಲೇಖಿಸಿದ್ದಾರೆ. ಮನುಷ್ಯ ವಿಚಾರವಂತನಾಗಿರಬೇಕು. ಸಮಾಜವನ್ನು ಗ್ರಹಿಸಬೇಕು. ಮನುಷ್ಯನ ಮಾತು ಮಂಥನ ಮುಖ್ಯ. ಅದೇ ಅವನ ಜ್ಞಾನ. ಅಕ್ಷರಜ್ಞಾನವಿಲ್ಲದಿದ್ದರೂ ವಿಚಾರಜ್ಞಾನ ಹೊಂದಿರಬೇಕು ಎಂಬುದು ನಿಲುವಾಗಿದೆ. ಬಿ.ಎಂ.ಶ್ರೀ.ಯವರು ಸಾಕ್ರಟೀಸ್ ಜೀವನ ಕುರಿತು ಹೀಗೆ ಹೇಳುತ್ತಾರೆ. "ಸತ್ಯ ಯಾವುದು? ಧರ್ಮ ಯಾವುದು? ಎಂಬ ನಿಷ್ಪಕ್ಷಪಾತವಾದ ವಿಚಾರ. ಅಂತಹ ವಿಚಾರದಿಂದ ಒಂದು ನಿರ್ಣಯಕ್ಕೆ ಬಂದ ಜ್ಞಾನ. ಆ ಜ್ಞಾನದಿಂದ ಪರಿಷ್ಕೃತವಾದ ಆತ್ಮ ಎಲ್ಲಾ ನಡೆ, ನುಡಿ, ಬಗೆ, ಗುರಿಗಳಲ್ಲಿ ಅಂತಹ ಆತ್ಮವೇ ಕಾಣಿಸಿಕೊಳ್ಳುತ್ತಿರುವ ಜೀವನ, ರಾಗದ್ವೇಷಗಳನ್ನು ಬಿಟ್ಟು, ಕಷ್ಟ ಸುಖಗಳಲ್ಲಿ ಸಮಚಿತ್ತವನ್ನಿಟ್ಟು ಸೆರೆಮನೆಗೂ ಕಡೆಗೆ ಸಾವಿಗೂ ಹೆದರದೆ ಕರ್ತವ್ಯವನ್ನು ನೆರವೇರಿಸುವ ಸತ್ಯ ಸಂಕಲ್ಪ, ಅಹಿಂಸೆ, ದಯೆ ಇದು ಆ

ಮಹಾತ್ಮನ ಜೀವನ ಚರಿತ್ರೆಯ ಸಾರ"[೧೫] ಎಂದು ಹೇಳಿರುವರು. ಹಾಗಾಗಿ ಸಾಕ್ರಟೀಸ್ ಜೀವನದ ನಿಲುವನ್ನು ಅರ್ಥ ಮಾಡಿಕೊಳ್ಳುವುದರ ಜೊತೆಗೆ ನಮ್ಮ ಜೀವನದ ಮೌಲ್ಯವನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ.

ಒಟ್ಟಾರೆಯಾಗಿ ಬಿ.ಎಂ.ಶ್ರೀ.ಯವರು ಕನ್ನಡ ಸಾಹಿತ್ಯವನ್ನು ಯಾವ ಯಾವ ನೆಲೆಯಿಂದ ನೋಡಬೇಕಾಗಿದೆ, ಗ್ರಹಿಸಬೇಕು ಎಂಬುದು ಹಳಗನ್ನಡ ಸಾಹಿತ್ಯ, ನಡುಗನ್ನಡ, ಹೊಸಗನ್ನಡ ಸಾಹಿತ್ಯ, ನಾಡಪದಗಳು, ಹಾಗೆಯೇ ವ್ಯಕ್ತಿಯಾಗಿ ರನ್ನ, ಕುಮಾರವ್ಯಾಸ, ಸಾಕ್ರಟೀಸ್ ಇನ್ನಿತರ ಕುರಿತಂತೆ ಮುನ್ನುಡಿಯ ಚಿಂತನೆಯನ್ನು ಗ್ರಹಿಸಬೇಕಾಗಿದೆ.

**೫.೨. ಕುವೆಂಪು**

ಕನ್ನಡ ಸಾಹಿತ್ಯ ಲೋಕದಲ್ಲಿ ಕುವೆಂಪು ಅವರು ಅಗ್ರಮಾನ್ಯರು. ಅವರ ಕೃತಿಗಳನ್ನು ಓದಿದ ಮೇಲೆ ಹೃದಯದಲ್ಲಿ ಅಚ್ಚಳಿಯದೆ ಅಚ್ಚುಗೊಳ್ಳುವ ಕುವೆಂಪು ಅವರ ಸಾಹಿತ್ಯ ಕಾವ್ಯ, ನಾಟಕ, ಕಾದಂಬರಿ, ವಿಮರ್ಶೆ ಆಡು ಮುಟ್ಟಿದ ಸೊಪ್ಪಿಲ್ಲ ಎನ್ನುವಂತೆಯೇ ಕುವೆಂಪು ಅವರು ಬರೆಯದ ಸಾಹಿತ್ಯ ಇಲ್ಲ. ಅವರ ಬರವಣಿಗೆಯ ಶ್ರೇಣಿ ಜೀವಾಳವೆಂಬಂತೆ ನಮ್ಮ ಮುಂದೆ ನಿಲ್ಲುತ್ತದೆ. ಅವರ ಪ್ರಕೃತಿ ಸೌಂದರ್ಯೋಪಾಸನೆ ಮತ್ತು ಆಧ್ಯಾತ್ಮ ದೃಷ್ಟಿ, ವೈಚಾರಿಕ ದೃಷ್ಟಿ ಅವರ ಸಾಹಿತ್ಯದಲ್ಲಿ ಕಂಡುಕೊಳ್ಳುತ್ತೇವೆ. ಇಲ್ಲಿಯ ಉದ್ದೇಶ ಕುವೆಂಪು ಅವರು ಕೂಡ ಅನೇಕ ಕೃತಿಗಳಿಗೆ ಮುನ್ನುಡಿ ಬರೆದಿದ್ದಾರೆ. ಆ ಮುನ್ನುಡಿಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಅಗತ್ಯವಾಗಿದೆ. ಅವರು ಒಂದು ಕಡೆ ಹೇಳುತ್ತಾರೆ "ನಾನು ಕುಲಪತಿಯಾಗಿ ಪ್ರಸಾರಾಂಗದ ಅಧಿಕೃತ ಪುಸ್ತಕಗಳಿಗೆ ಕರ್ತವ್ಯ ಅಂಗವಾಗಿ ಬರೆದ ಮುನ್ನುಡಿಗಳನ್ನು ಬಿಟ್ಟರೆ, ವೃತ್ತಿ ಲೇಖಕರ ಕೃತಿಗಳು ಒಂದು ಕೈ ಬೆರಳೆಣಿಕೆಯಷ್ಟು ಮುನ್ನುಡಿಗಳನ್ನು ಬರೆದಿದ್ದೇನೆ"[೧೬] ಎಂದು ಹೇಳುತ್ತಾರೆ. ಆದರೆ ಕುವೆಂಪು ಅವರು ಮುನ್ನುಡಿ ಬರೆದಿದ್ದು ಕಡಿಮೆ. ದೇ.ಜ.ಗೌ. ಅವರು ಕುವೆಂಪು ಅವರ ಮುನ್ನುಡಿ ಬರಹಗಳನ್ನು 'ಮುನ್ನುಡಿ ತೋರಣ' ಎಂದು ಸಂಪಾದನೆ ಮಾಡಿದ್ದಾರೆ. ದೇ.ಜ.ಗೌ. ಅವರು ಕುವೆಂಪು ಅವರ ಏನೇ ಬರವಣಿಗೆ ಪತ್ರ, ದಿನಚರಿ, ಟಿಪ್ಪಣಿ, ಪೀಠಿಕೆ, ಮುನ್ನುಡಿಗಳು ಎಲ್ಲಾ ಬಗೆಯ ಕುವೆಂಪು ಅವರು ಬರವಣಿಗೆಯನ್ನು ಸಾಹಿತ್ಯಲೋಕಕ್ಕೆ ಗೊತ್ತುಪಡಿಸಿದ್ದಾರೆ.

'ಕರ್ಣಾಟ ಭಾರತ ಕಥಾಮಂಜರಿ' ಸಂಪಾದನೆಯ ಮೂಲಕವಾಗಿ 'ತೋರಣ ನಾಂದಿ' ಎಂಬ ಶೀರ್ಷಿಕೆಯಲ್ಲಿ ಮುನ್ನುಡಿ ಬರೆದಿದ್ದಾರೆ. ಹಳಗನ್ನಡ ಸಾಹಿತ್ಯದ ಛಾಪನ್ನು ಯಾವ ರೀತಿಯಲ್ಲಿ ಅಧ್ಯಯನ ಮಾಡಬೇಕು, ಎಂತಹ ದೃಷ್ಟಿಕೋನ ರೂಪಿಸಿಕೊಳ್ಳಬೇಕು ಎಂಬುದಾಗಿ ಸಮಷ್ಟಿರೂಪದ ಒಂದು ಸಹೃದಯ ತಾತ್ವಿಕ ವಿಮರ್ಶೆಯಾಗಿದೆ. ಕನ್ನಡ ನಾಡಿನ ಹಿರಿಯ ಲೇಖಕ, ವಿಮರ್ಶಕರ ಬರವಣಿಗೆಗಳಿಂದ ಆಯ್ದುಕೊಂಡು ವಿವರವಾಗಿ ಬಿ.ಎಂ.ಶ್ರೀ.ಯವರ ಚಿಂತನೆಯಿಂದ ಈ ಮುನ್ನುಡಿಗೆ ಮೆರುಗನ್ನು ಕುವೆಂಪು ಅವರು ಮೂಡಿಸಿದ್ದಾರೆ. ಸಾಹಿತ್ಯಲೋಕದಲ್ಲಿ ವಿಭಿನ್ನವಾದ ಕವಿಯ ಕುರಿತು ದೀರ್ಘ ಮುನ್ನುಡಿಯಲ್ಲಿ ಚರ್ಚೆ ಮಾಡುತ್ತಾ ವಿಮರ್ಶೆಗೆ ಒಳಪಡಿಸಲಾಗಿದ್ದು

ಇದೇ ಮೊದಲುಗೊಂಡಿರಬಹುದು. ಕುವೆಂಪು ಅವರು ನಾರಾಯಣಪ್ಪನ ಕುರಿತು "ಈ ನಾರಾಯಣಪ್ಪ ನಮ್ಮ ಸಧ್ಯದ ಅವಗಾಹನೆಗೆ ಬೇಕಾದವನು. ಕನ್ನಡ ಕಾವ್ಯ ದೃಷ್ಟಿಯ ಕಾಮನ ಬಿಲ್ಲಿನಲ್ಲಿ ಈತನ ನೆಲೆ ನಟ್ಟನಡು, ನೆತ್ತಿಯ ಮುಡಿ, ಹಳೆಯ, ಹೊಸಕನ್ನಡದ ತಲೆಯ ಕಿರೀಟ, ಹಳ್ಳಿ ಹಳ್ಳಿಯಲ್ಲಿ ಅಂದು ಇಂದು ಗಮಕ ಶಿರೋಮಣಿಗಳಿಂದ ನಾಡು ನಾಡೇ ಮೊಳಗಿ ರೋಮಾಂಚನಗೊಳ್ಳುವಂತೆ ರಸವನ್ನು, ಇಂಪನ್ನು, ಲಯವನ್ನು, ತಾಳವನ್ನು, ಮಾತಿನ ಅರಿವನ್ನು, ಛಂದಸ್ಸಿನ ಕುಣಿತವನ್ನು ಲೀಲಾಜಾಲವಾಗಿ ಹೊಮ್ಮಿಸಿ ಹರಿಯಿಸಿದ ಮಾಟಗಾರ. ಕನ್ನಡದ ಹೊಸ ಹುಟ್ಟಿನಲ್ಲಿ ಹೊಸಮಾರ್ಗಕ್ಕೆ ಹೊಸಶಕ್ತಿಗೆ ದಿಕ್ಸೂಚಿ"[೧೭] ಎಂದು ಕುವೆಂಪು ಅವರು ಹೇಳುತ್ತಾರೆ. ನಾರಾಯಣಪ್ಪನ ಕಾವ್ಯ ಶಕ್ತಿ ಚಿಂತನೆ, ಛಂದಸ್ಸು, ಜಾನಪದ, ಸಾಮಾನ್ಯರ ಪರವಾದ ನಿಲುವಿನೊಂದಿಗೆ ಪ್ರಸಿದ್ಧಿ ಹೊಂದಿತ್ತು.

"ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲಿ ಕುಣಿಯುವುದು? ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು![೧೮]

ಕುವೆಂಪು ಅವರು ಕುಮಾರವ್ಯಾಸನ ಸಾಹಿತ್ಯದ ಹಂಗನ್ನು ಈ ಪದ್ಯದ ಮೂಲಕ ತೋರಿಸಿಕೊಟ್ಟಿದ್ದಾರೆ. ಕವಿಯ ಕಾವ್ಯ ಚಿಂತನೆ, ಕಾವ್ಯಸೌಂದರ್ಯಕ್ಕಾಗಿ ಅವನನ್ನು ಓದುಗರು ಮೆಚ್ಚಿಕೊಂಡಿದ್ದಾರೆ. ಪಂಪನನ್ನು ಮೀರಿಸಿದನು ಎಂದರೆ ಅದು ಕುಮಾರವ್ಯಾಸನೆಂದು ಹೇಳಬಹುದು. ಶಕ್ತಿ ರೂಪಕದ ತನ್ನ "ಹಲಗೆ ಬಳಪವಂ ಪಿಡಿಯದೊಂದಗ್ಗಳಿಕೆ ಪದವಿಟ್ಟಳು ಪದೊಂದಗ್ಗಳಿಕೆ"[೧೯] ಎಂದುಕೊಂಡಿದ್ದಾನೆ. ಕುಮಾರವ್ಯಾಸನ ಕಾವ್ಯಶಕ್ತಿಯನ್ನು ಕುವೆಂಪು ಅವರು ಈ ಮುನ್ನುಡಿಯ ಮೂಲಕ ಹಿಡಿದಿದ್ದಾರೆ. ಕುವೆಂಪು ಅವರು ನಾರಾಯಣಪ್ಪನ ಕಾವ್ಯಸೌಂದರ್ಯವನ್ನು ವಿಮರ್ಶೆ ಚಿಂತನೆಯ ಒರೆಗಲ್ಲಿಗೆ ಹಚ್ಚಿದವರಲ್ಲಿ ಪ್ರಮುಖರಾಗುತ್ತಾರೆ.

ಸಿದ್ಧಯ್ಯ ಪುರಾಣಿಕರ ಗದ್ಯರೂಪದ 'ಶರಣ ಚರಿತಾಮೃತ'ಕ್ಕೆ ಕುವೆಂಪು ಅವರು ಮುನ್ನುಡಿ ಬರೆಯುತ್ತಾ, ಅಲ್ಲಿಯ ಜೀವನ ಚರಿತ್ರೆಗಳನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೆಂಬುದನ್ನು ಸ್ಪಷ್ಟಪಡಿಸಿರುತ್ತಾರೆ. ಇಲ್ಲಿಯ ಬಹುಪಾಲು ಭಾವನೆಗಳಿಂದ ತುಂಬಿರುವ ಪ್ರತಿಮಾ ವಿಧಾನ ಪ್ರತೀಕಗಳಂತಿವೆ. ಅವುಗಳಲ್ಲಿ ಎಲ್ಲದರಲ್ಲಿಯೂ ಲೋಕ ಸಂವಾದವನ್ನೇ ನಿರೀಕ್ಷಿಸಿ ತಮ್ಮ ಧ್ವನಿಗಳನ್ನು ನಂಬುವಂತೆ ಮಾಡಿ, ಅವು ಅಕ್ಷರಶಃ ಸತ್ಯಗಳೆಂದು ಭಾವಿಸಿ, ಪವಾಡವೆಂದು ತಿಳಿದುಕೊಳ್ಳುವುದು. ಅದನ್ನು ಆಧ್ಯಾತ್ಮ ದೇವರು ಎಂದು ತಿಳಿದರೆ ಮೌಢ್ಯದ ಲೋಕಕ್ಕೆ ತಮ್ಮನ್ನು ತಾವು ಅರ್ಪಿಸಿಕೊಳ್ಳಬಾರದು ಎಂದು ಎಚ್ಚರಿಕೆ ನೀಡಿದ್ದಾರೆ. ಶರಣರ ಜೀವನದ ದರ್ಶನದ ಧ್ವನಿಯನ್ನು ಗ್ರಹಿಸಿ, ವಿಚಾರ ಬುದ್ಧಿಯಿಂದ ವಿವೇಚಿಸಿದಾಗ ಮಾತ್ರ ಈ ಜೀವನ ಚರಿತ್ರೆಗಳ ಮಹತ್ವ ತಿಳಿಯುತ್ತದೆಂದು ಕುವೆಂಪು ಅವರು ಈ ಮುನ್ನುಡಿಯ ಮೂಲಕ ಪ್ರತಿಪಾದಿಸಿದ್ದಾರೆ.

ತ.ಸು.ಶಾಮರಾಯರ 'ಪ್ರಾಧ್ಯಾಪಕ ವೆಂಕಣ್ಣಯ್ಯ' ಎಂಬ ಜೀವನಚರಿತ್ರೆಗೆ ಬರೆದ ಮುನ್ನುಡಿಯಲ್ಲಿ ಇಲ್ಲಿಯವರೆಗೆ ಎಲ್ಲಿಯೂ ಬಹಿರಂಗಪಡಿಸಿದ ಭಾಗವನ್ನು ಬರೆಯತೊಡಗಿದರಂತೆ. ಆಗ ತಮ್ಮ ಕೋಣೆಯ ಕದವನ್ನು ಯಾರೋ ತಟ್ಟಿದ ಹಾಗಾಯಿತಂತೆ. ಕದ ತೆರೆದು ನೋಡಿದರೆ ಯಾರೂ ಇಲ್ಲ. ಅದೇ ಶಬ್ದ, ಮತ್ತೆ ಯಾರೂ ಇಲ್ಲ. ವೆಂಕಣ್ಣಯ್ಯನವರ ಮತ್ತು ಕುವೆಂಪು ಅವರ ವಿದ್ಯಾರ್ಥಿ, ಸ್ನೇಹಿತ, ಸಾಹಿತ್ಯಕ ಚಿಂತನೆಯಲ್ಲಿ ಇವರಿಬ್ಬರ ಅನನ್ಯತೆಯನ್ನು ದೈವಿಕ ನೆಲೆಯಲ್ಲಿ ಗುರುತಿಸಬಹುದು.

ಪ್ರಭುಶಂಕರರ 'ಅಮೇರಿಕಾದಲ್ಲಿ ನಾನು ಶಾಂತಿ' ಎಂಬ ಗ್ರಂಥಕ್ಕೆ ಬರೆದ ಮುನ್ನುಡಿಯಲ್ಲಿ ಶಿಷ್ಯವಾತ್ಸಲ್ಯ ಮೆರೆದಿದ್ದಾರೆ. ಏಕೆಂದರೆ ಪ್ರಭುಶಂಕರರ ಬಹುಮುಖ ಪ್ರತಿಭೆಯನ್ನು ಗುರುತಿಸಿದ್ದಾರೆ. ಈ ಮುನ್ನುಡಿಯ ಕೃತಿಯಿಂದ ಪ್ರವಾಸದ ಅನುಭವ, ಅಲ್ಲಿಯ ಸಂಸ್ಕೃತಿ, ನೆಲೆ, ವಾತಾವರಣ, ಅಮೇರಿಕಾದ ಎಲ್ಲ ಬಗೆಯ ಧಾರ್ಮಿಕ, ಸಾಮಾಜಿಕ, ರಾಜಕೀಯ ನೆಲೆಯನ್ನು ಗುರುತಿಸಬಹುದು. ಈ ಮುನ್ನುಡಿಯಲ್ಲಿ ಒಂದು ಪ್ರಸಂಗ ಬರುತ್ತದೆ. ಪ್ರಭುಶಂಕರರಿಗೆ ಅಮೇರಿಕಾದಲ್ಲಿ ಮೋನಿಕಾ ಎಂಬ ತರುಣಿ ಸಿಗುತ್ತಾಳೆ. ಪ್ರಭುಶಂಕರ ಮತ್ತು ಮೋನಿಕಾಳ ಮಧ್ಯೆ ಸಂವಾದ ನಡೆಯುತ್ತದೆ. ಕುವೆಂಪು ಅವರು ಈ ಮುನ್ನುಡಿಯಲ್ಲಿ ವ್ಯಕ್ತಗೊಂಡಂತೆ ಮೋನಿಕಾ ಪ್ರಭುಶಂಕರರನ್ನು ಕಾರಿನಲ್ಲಿ ಕೂಡಿಸಿಕೊಂಡು ಕಾರು ನಿಲ್ದಾಣದಲ್ಲಿ ನಿಲ್ಲಿಸಿ, ಸ್ವಲ್ಪ ಹೊತ್ತು ಬಿಟ್ಟು ಬರುತ್ತಾಳೆ. "ಮನೆ ಹತ್ತಿರ ಇದೆ ಎನ್ನುತ್ತೀರಿ. ಇಷ್ಟು ಹತ್ತಿರಕ್ಕೆ ಕಾರು ಏಕೆ ತರುತ್ತೀರಿ? ನಡೆದುಕೊಂಡು ಬರಬಾರದೆ? ಎಂದು ಇವರು ಕೇಳುತ್ತಾರೆ. ಆಗ ವಿದ್ಯಾವಂತೆ ಮೋನಿಕಾ ಹೇಳುತ್ತಾಳೆ. ನನ್ನ ತರಗತಿಗಳು ಮುಗಿದು ಮನೆಗೆ ಹೋಗುವುದಕ್ಕೆ ಸಂಜೆ ಏಳು ಅಥವಾ ಎಂಟು ಗಂಟೆ ಆಗಿಯೇ ಆಗುತ್ತದೆ. ನಾನೊಬ್ಬಳೇ ನಡೆದುಕೊಂಡು ಹೋದರೆ ನಾನು ಅತ್ಯಾಚಾರಕ್ಕೆ ಒಳಗಾಗುವುದು ಖಂಡಿತ"[೨೦] ಎಂದು ಕುವೆಂಪು ಅವರು ಮುನ್ನುಡಿಯಲ್ಲಿ ಪ್ರಸ್ತುತಪಡಿಸಿದ್ದಾರೆ. ಅಮೇರಿಕಾದಂತಹ ದೊಡ್ಡ ರಾಷ್ಟ್ರದಲ್ಲಿ ಈ ಪುಟ್ಟ ಕೃತಿಯ ಮೂಲಕ ಮಹಿಳೆಯು ಭಯದಿಂದ ಇರುವ ಸ್ಥಿತಿ ಅಲ್ಲಿದೆ. "ಅತ್ಯಾಚಾರಗಳಿಂದ ಪಾರಾಗುವ ವಿಧಾನ ಎಂಬುದರ ಮೇಲೆ ಎರಡು ಉಪನ್ಯಾಸಗಳನ್ನು ಏರ್ಪಡಿಸಿದ್ದ ಸಂಗತಿ ಕತ್ತಲಾದ ಮೇಲೆ ಈ ಆವರಣದಲ್ಲಿ ಹೆಂಗಸರು ಒಬ್ಬೊಬ್ಬರೇ ಓಡಾಡುವಂತೆಯೇ ಇಲ್ಲವಂತೆ!"[೨೧] ಎಂಬುದನ್ನು ಈ ಮುನ್ನುಡಿ ತಿಳಿಸುತ್ತದೆ. ಈ ಕೃತಿಯಲ್ಲಿ ಅಮೇರಿಕಾದ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತ ಈ ದೇಶ ಜಗತ್ತನ್ನೇ ಗೆಲ್ಲುವ ಶಕ್ತಿ ಹೊಂದಿದ್ದರೂ ತನ್ನ ನೆಲದ ಸಂಸ್ಕೃತಿಯನ್ನು ಅತ್ಯಾಚಾರಗೊಳಿಸಿದೆ ಎಂಬುದನ್ನು ಈ ಕೃತಿಯ ಮುನ್ನುಡಿಯಿಂದ ಗ್ರಹಿಸಬೇಕಾಗಿದೆ.

ಕುವೆಂಪು ಅವರು 'ಭರತೇಶ ವೈಭವ' ಸಂಗ್ರಹಕ್ಕೆ ಬರೆದಿರುವ ಮುನ್ನುಡಿಯಲ್ಲಿ ರತ್ನಾಕರವರ್ಣಿಯ ಕೃತಿಗಳ ವಿಶ್ಲೇಷಣೆ, ಭರತನ ಚರಿತ್ರೆಯನ್ನು ಮರುಚಿಂತನೆಗೊಳಿಸಲಾಗಿದೆ. ಹಾಗೆಯೇ ರತ್ನಾಕರವರ್ಣಿಯ ಕಾಲದ ವೈಶಿಷ್ಟ್ಯ, ಕೃತಿಯ ವೈಶಿಷ್ಟ್ಯವನ್ನು ಸರಿಯಾಗಿಯೇ ನಿರ್ದೇಶಿಸಿದ್ದಾರೆ. ರತ್ನಾಕರವರ್ಣಿ ಮಹಾಕವಿಗಳಲ್ಲಿ ಅಗ್ರಗಣ್ಯನಲ್ಲದಿದ್ದರೂ ಮಹಾಕವಿ ಎಂಬುದನ್ನು ಸಾಧಾರಣವಾಗಿ ಸಮರ್ಥಿಸುತ್ತಾರೆ. ಕವಿಯ ಆದರ್ಶ ಜೀವನವನ್ನು ಭರತನ ಜೀವನದಲ್ಲಿ ಓಲೈಸಿಕೊಳ್ಳುತ್ತ, ತನ್ನ ಸಮರ್ಥನೆಯನ್ನು

ತ್ಯಾಗ ಭೋಗಗಳ ಸಮುಚ್ಚಯ ಯೋಗದರ್ಶನವನ್ನು ಕವಿಯಾಗಿ ಸುಂದರವಾಗಿ ತಿಳಿಸಿಕೊಟ್ಟಿದ್ದಾರೆ. "ಕಾವ್ಯಸೃಷ್ಟಿ ಜಗತ್ತಿನ ಮತ್ತಾವ ಸಾಹಿತ್ಯದಲ್ಲೂ ಆಗಿರುವಂತೆ ಕಾಣುವುದಿಲ್ಲ ಎಂದು ಕುವೆಂಪು ಅವರು ಪೌರ್ವಾತ್ಯ, ಪಾಶ್ಚಾತ್ಯ ಸಾಹಿತ್ಯ ಗಗನದಲ್ಲಿ ಲೀಲಾಜಾಲವಾಗಿ ಹಾರಾಡಿರುವ ಮಹಾಕವಿಗಳನ್ನು ಹೇಳುವಾಗ ಕನ್ನಡಿಗರೆಲ್ಲ ಅಭಿಮಾನದಿಂದ ತಲೆಯೆತ್ತಬಹುದು"[೨೨] ಎಂದು ಮುನ್ನುಡಿಯಲ್ಲಿ ಉಲ್ಲೇಖಗೊಂಡಿದೆ. ಕುವೆಂಪು ಅವರು ವಸ್ತುನಿಷ್ಠವಾಗಿ ಜನಪ್ರಿಯಗೊಳಿಸಿದ್ದಾರೆ. ಭರತನ ಚರಿತ್ರೆ ಭಾರತೀಯ ಚರಿತ್ರೆಯಾಗಿ ಗ್ರಹಿಸಬಹುದು.

ಇದೇ ರೀತಿಯಾಗಿ ನಾ.ಕಸ್ತೂರಿಯವರ 'ಅಶೋಕ' ಎಂಬ ಜೀವನಚರಿತ್ರೆಗೆ ಬರೆದ ಮುನ್ನುಡಿಯಲ್ಲಿ ರಾಜಕೀಯ, ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ನಿಲುವುಗಳನ್ನು ವ್ಯಕ್ತಪಡಿಸುತ್ತ "ರಾಜಕೀಯ, ಧಾರ್ಮಿಕ, ಆಧ್ಯಾತ್ಮಿಕ ಇತ್ಯಾದಿಗಳು ಪರಮ ಪುರುಷಾರ್ಥ ಸಾಧನೆಗೆ ಪರಸ್ಪರ ಪೋಷಕಗಳೇ ಹೊರತು ಅನ್ಯವಲ್ಲ"[೨೩] ಎಂದು ಕುವೆಂಪು ಅವರು ಪ್ರತಿಪಾದಿಸಿದ್ದಾರೆ. ನಾವು ಆಧ್ಯಾತ್ಮಿಕ ಚಿಂತನೆಯಿಂದ ಧರ್ಮ, ರಾಜಕೀಯ, ಬೆಲೆ ಕೊಡುತ್ತಾ ಇವುಗಳಿಂದ ಒಳ್ಳೆಯ ಹಾಗೂ ಕೆಟ್ಟದ್ದು ರೂಪಗೊಂಡಿದೆ. ಆದರೆ ಮೂಲಭೂತವಾದದಿಂದ ಇವುಗಳ ಸ್ವರೂಪ ಬೇರೆ ರೀತಿಯಲ್ಲಿ ವ್ಯಕ್ತಗೊಂಡಿದೆ ಎಂದು ಹೇಳಬಹುದು. ಈ ಮುನ್ನುಡಿಯಲ್ಲಿ ಕುವೆಂಪು ಅವರ ಮಾತಿನಿಂದ "ಅಶೋಕನ ಆತ್ಮೋರ್ಜನೆಯೇ ಗಾಂಧಿಯಲ್ಲಿ ಪುನರುತ್ಥಾನ ರೂಪದಲ್ಲಿ ಉಪಾಸಣೆಗೊಂಡಿದೆ ಎಂಬ ಅವರ ಮಾತಿನಲ್ಲಿ ಕಾವ್ಯ ಸತ್ವ ಮಾತ್ರವಲ್ಲ, ವಾಸ್ತವ ಸತ್ಯವೂ ಅಡಕಗೊಂಡಿದೆ. ಅಪ್ರತಿಹತವೂ ದುರ್ದೈವವೂ ಆಗಿರುವ ಆಸುರೀಶಕ್ತಿಗಳು ಇರುವಲ್ಲಿ ಅಶೋಕ ಚಕ್ರವರ್ತಿ ಯಾವ ಧರ್ಮಶ್ರದ್ಧೆಯ ಧೈರ್ಯವನ್ನು ಲೋಕ ಬೆರಗಾಗುವಂತೆ ಪ್ರದರ್ಶಿಸಿದನೋ ಆ ಶ್ರದ್ಧಾ ಧೈರ್ಯದ ಪುನರುತ್ಥಾನ ರೂಪವಾದ ಪೂಜ್ಯ ಮಹಾತ್ಮ ಗಾಂಧೀಜಿಯವರ ದೈವೀ ಪ್ರಯತ್ನದಿಂದ ನಾಡಿಗೆ ರಾಜಕೀಯ ಸ್ವಾತಂತ್ರ್ಯ ಲಭಿಸಿದೆ ಎಂಬ ಅವರ ಬ್ರಾಹ್ಮೀ ಸತ್ಯವೆನಿಸುತ್ತದೆ"[೨೪] ಎಂದು ದೇ.ಜ.ಗೌ. ಅವರು ಹೇಳುತ್ತಾರೆ. 'ಕಾಳಿದಾಸ' ಕೃತಿಗೆ ಕುವೆಂಪು ಅವರು ಮುನ್ನುಡಿ ಬರೆಯುತ್ತ 'ಕಾಳಿದಾಸ ಕುರುಬನೆಂದು ಒಪ್ಪಿಕೊಳ್ಳುತ್ತಾರೆ'[೨೫] ಎಂದು ದೇ.ಜ.ಗೌ. ಅವರು ಹೇಳುತ್ತಾರೆ. ಹೀಗೆಯೇ ಒಮ್ಮೊಮ್ಮೆ ಜನಜನಿತವಾದ ಕಥೆಯಲ್ಲಿ ಹೆಚ್ಚು ಸತ್ಯಾಂಶ ಪ್ರಕಟವಾಗಿರುತ್ತವೆ. ಇದಕ್ಕೆ ಹೆಚ್ಚು ವಿಮರ್ಶೆ ಅಗತ್ಯವಾಗಿದೆ. ಒಟ್ಟಾರೆಯಾಗಿ ಈ ಕೃತಿಯ ಅಸಮರ್ಪಕತೆಯನ್ನು ನಿರ್ದಾಕ್ಷಿಣ್ಯವಾಗಿ ಎತ್ತಿ ತೋರಿಸಿದ್ದಾರೆ.

ತೀ.ನಂ.ಶ್ರೀ ಅವರ 'ಭಾರತೀಯ ಕಾವ್ಯ ಮೀಮಾಂಸೆ' ಕೃತಿಗೆ ಕುವೆಂಪು ಅವರು ಮುನ್ನುಡಿ ಬರೆದಿದ್ದಾರೆ. ಈ ಕೃತಿಯನ್ನು ಆಚಾರ್ಯ ಕೃತಿಯೆಂದು ಕರೆದು ಸಾಹಿತ್ಯ ವಿಮರ್ಶೆಯನ್ನು ಮೂರು ವಿಭಾಗದ ಚಿಂತನೆ ಮಾಡಿದ್ದಾರೆ. ಈ ಮೂರು ಬಗೆಯ ಚಿಂತನೆಯಿಂದ 'ಕಾವ್ಯಮೀಮಾಂಸೆ' ತನ್ನಿಂದ ತಾನೇ ಪರಿವರ್ತನೆಗೊಳ್ಳುತ್ತದೆ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾ "(೧) ಸಂಶೋಧನಾತ್ಮಕ, (೨) ವರ್ಣನಾತ್ಮಕ, (೩) ದರ್ಶನಾತ್ಮಕ ಈ ಹಿನ್ನೆಲೆಯಿಂದ ಸಾಹಿತ್ಯ ವಿಮರ್ಶೆ ಚಿಂತನೆಯಿಂದ

ಒಂದು ತಾತ್ವಿಕವಾದ ಕಾವ್ಯಮೀಮಾಂಸೆಯ ಜ್ಞಾನವೂ ಬೆಳೆದಿರಬೇಕಾಗುತ್ತದೆ"[೨೬] ಎಂದು ಹೇಳುತ್ತಾರೆ. ಈ ತೆರನಾದ ವಿಮರ್ಶೆ ಬೆಳೆಯಬೇಕಾದರೆ ಕಾವ್ಯಮೀಮಾಂಸೆ ಅನಿವಾರ್ಯವಿದೆ. ಹಾಗಾಗಿ "ಕಾವ್ಯಮೀಮಾಂಸೆ ಬೆಳೆಯದೆ ಅದರ ಪ್ರಾಯೋಗಿಕ ರೂಪವಾದ ಉತ್ತಮ ಸಾಹಿತ್ಯ ವಿಮರ್ಶೆ ಬೆಳೆಯಲು ಸಾಧ್ಯವಿಲ್ಲ"[೨೭] ಎಂದು ಹೇಳುತ್ತಾರೆ. ಸಾಹಿತ್ಯ ವಿಮರ್ಶೆ ಮುನ್ನುಡಿಯೊಂದಿಗೆ ಕಾವ್ಯ ಮೀಮಾಂಸೆ ಬೇಕಾಗಿದೆ. ಹಾಗಾಗಿ ಪಾಶ್ಚಾತ್ಯರ ಸಂಪರ್ಕದಿಂದ ನಮ್ಮ ಸಾಹಿತ್ಯ ಸೃಷ್ಟಿ ಹೊಸ ಹೊಸ ಹಾದಿಗಳಲ್ಲಿ ಹೊಸದಾದ ಹೆಜ್ಜೆಗಳನ್ನಿಡುತ್ತ ನಡೆದು ಬರಲಿದೆ ಎಂಬ ಆಶಯದೊಂದಿಗೆ ಬಿ.ಎಂ.ಶ್ರೀ. ಅವರ ಆಶಯ ಇದೇ ರೀತಿಯಾಗಿತ್ತು ಎಂದು ಹೇಳಬಹುದು.

'ಭಾರತೀಯ ಸಂಸ್ಕೃತಿ'ಗೆ ಮುನ್ನುಡಿ ಬರೆಯುತ್ತಾ "ಮಾನವನ ಉದ್ವೇಗ ಮನದ ಸಾಹಸ ದ್ವಿಮುಖಿಯಾದದ್ದು. ನಾಗರಿಕತೆ ಮತ್ತು ಸಂಸ್ಕೃತಿ ಒಂದು ಬಹಿರ್ಮುಖ. ಮತ್ತೊಂದು ಅಂತರ್ಮುಖ. ಆದರೆ ಅವುಗಳಿಗೆ ಪರಸ್ಪರ ಒಂದರ ಪ್ರಭಾವಕ್ಕೆ ಮತ್ತೊಂದನ್ನು ರೂಪಿಸುವ ಶಕ್ತಿಯಿರುತ್ತದೆ. ಮಾನವ ಕುಲದ ಈ ಸಾಹಸವೇ ಋಷಿ, ಕವಿ, ಶಿಲ್ಪಿ, ಯೋಗಿ, ಪ್ರವಾದಿ, ಮಹಾತ್ಮ, ಆಚಾರ್ಯ, ಪರಮಹಂಸಾದಿ ವಿಭೂತಿ ಪುರುಷರನ್ನು ನಿರ್ಮಿಸಿದೆ. ಅಸಂಖ್ಯಾತ ಮನಸ್ಸುಗಳ ಸಮಷ್ಟಿಯಲ್ಲಿ ಸಂಭವಿಸಿ ಪ್ರಕಟವಾಗಿ ಸಿದ್ಧವಾಗುವ ಒಂದು ದೇಶದ ಸಮಷ್ಟಿ ಮನಸ್ಸಿನ ಚಿತ್ ಶಕ್ತಿಯ ರಸಗಂಗೆಯೆ ಆದೇಶದ ಸಂಸ್ಕೃತಿ, ಮನುಷ್ಯ ಚೇತನದ ಸರ್ವತೋಮುಖವೂ, ವಿಕಾಸಮಾನವೂ ಆದ ಆತ್ಮಶ್ರೀಯನ್ನು ಸಂಸ್ಕೃತಿ ಎಂದು ಸಂಕೇತಿಸಬಹುದೆಂದು ಇಡಿಯನ್ನು ಹಿಡಿಯಲ್ಲಿ ಹಿಡಿದಿಟ್ಟಿರುವ ಸೂತ್ರಪ್ರಾಯದ ಈ ಲಕ್ಷಣ ವಿವರಣೆಗೆ ಹತ್ತಾರು ಪುಟಗಳಾದರೂ ಸಾಲವು"[೨೮] ಎಂದು ಹೇಳುತ್ತಾರೆ. ಕುವೆಂಪು ಅವರ ನಿಲುವು ದೇಹಕ್ಕೆ ಬೇಕಾದ ಸಕಲ ಶಕ್ತಿಗಳನ್ನು ಒಟ್ಟುಗೂಡಿಸಿ ತಯಾರಿಸಿದ ಗುಟುಕು ನೀರಿನಂತೆ ಸಂಸ್ಕೃತಿಯ ಗುಣಲಕ್ಷಣ ಹೊಂದಿದೆ. ಇದರಿಂದ ದೊಡ್ಡ ಸಂಪ್ರದಾಯವಾದಿಗಳ ಮಾರ್ಗವನ್ನೇ ಬಿಟ್ಟು ವೈಚಾರಿಕವಾಗಿ ವ್ಯಾಖ್ಯಾನಿಸುತ್ತಾ ಜನ ಸಂಸ್ಕೃತಿ, ನೆಲಸಂಸ್ಕೃತಿ ಎಂಬ ನೆಲೆ ಹೊಂದಿರಬೇಕು ಎಂಬುದು ನಿಲುವಾಗಿದೆ.

ಕುವೆಂಪು ಅವರು 'ಇಸ್ಲಾಂ ಸಂಸ್ಕೃತಿ'ಗೆ ಮುನ್ನುಡಿ ಬರೆದಿದ್ದಾರೆ. ಇದು ಅವರ ದೀರ್ಘ ಮುನ್ನುಡಿಯೂ ಆಗಿದೆ. ಈ ಮುನ್ನುಡಿಯಲ್ಲಿ ಭಾರತದ ಸಂಸ್ಕೃತಿ ಸಮ್ಮಿಶ್ರಣಗಳ ಬಗ್ಗೆ ಬೆಳಕು ಚೆಲ್ಲುತ್ತದೆ. 'ಭಾರತ' ನೈಸರ್ಗಿಕವಾದ ಭೂಮಿಯಾಗಿದೆ. ಇಲ್ಲಿ ಮೂಲರು ಎಂದರೆ ದ್ರಾವಿಡ ಬುಡಕಟ್ಟು ಸಮುದಾಯಗಳು ಎಂದು ಹೇಳುತ್ತವೆ. ಈ ಭಾರತದ ನೆಲದಲ್ಲಿ ಹಲವರು ಬಂದು ಹೋದವರು ಮತ್ತು ಇದ್ದವರು ಇದ್ದಾರೆ. ಅಂಥವರಲ್ಲಿ ಮೊದಲಿಗೆ ಆರ್ಯರು. ಆ ನಂತರ ಮುಸ್ಲಿಮರು, ಯುರೋಪಿಯನ್ನರು ಆಗಿದ್ದಾರೆ. ಆದರೆ ಭಾರತವನ್ನು ಹಿಡಿತದಲ್ಲಿ ತಂದುಕೊಂಡವರು ಎಂದರೆ ಪ್ರಮುಖರಾಗಿ ಆರ್ಯರು ಎಂದು ಹೇಳಬಹುದು. ಏಕೆಂದರೆ ಆರ್ಯರು ಮೂಲರನ್ನು ಓಡಿಸಿ ಆ ನೆಲವನ್ನು ತಮ್ಮ ಸಂಸ್ಕೃತಿಯಿಂದ ಬೀಜ ಹಾಕಿ ಮರ ಬೆಳೆಸಿದವರಾಗಿದ್ದಾರೆ. ಅವರು ಹಾಕಿದ ಮರದ ನೆರಳಿನಲ್ಲಿ ದ್ರಾವಿಡರು ಹಾಗೂ ಬೇರೆ ಬೇರೆ ದೇಶದ ಜನರು ಬಂದು ನೆಲೆಸಿದರು.

ಆದರೆ ಮರದ ಅಡಿಯಲ್ಲಿ ಯಾರು ಆಶ್ರಯ ಪಡೆದಿದ್ದಾರೆ? ಯಾರನ್ನು ದೂರ ಇಡಲಾಗಿದೆ. ಯಾರದು ಭರತ ಭೂಮಿ? ಎಂಬುದು ಮುಖ್ಯವಾಗಿದೆ. ಕೊನೆಗೆ ಭರತ ಭೂಮಿ ಸಂಪತ್ತನ್ನು ಯಾರು ಕೊಳ್ಳೆ ಹೊಡೆದರು. ಹಾಗೆಯೇ ನಿರಂತರವಾಗಿ ಭಾರತದ ಸಂಪತ್ತು ಕೊಳ್ಳೆ ಹೊಡೆದವರು ಇದ್ದಾರೆ. ಆದರೆ ಮುಸ್ಲಿಮರು ಭಾರತದ ಸಂಪತ್ತನ್ನು ದೋಚಿರಬಹುದು. ತದನಂತರ ತಮ್ಮ ಸಾಮ್ರಾಜ್ಯ ಸ್ಥಾಪನೆ ಮಾಡಿದವರಾಗಿದ್ದಾರೆ. ಆಗ ಮುಸ್ಲಿಂ ಸಾಮ್ರಾಜ್ಯ ಸ್ಥಾಪನೆ ಮಾಡಿದ ನಂತರ ಭಾರತದ ಮೂಲ ದ್ರಾವಿಡರು ಮುನ್ನೆಲೆಗೆ ಬರುತ್ತಾರೆ. ಏಕೆಂದರೆ ಸೂಫಿ ಸಮನ್ವಯ ದೃಷ್ಟಿಯಿಂದ ಇದು ಸಾಧ್ಯವಾಗಿದೆ. ಕುವೆಂಪು ಅವರು ಈ ಮುನ್ನುಡಿಯಲ್ಲಿ ಹೇಳುತ್ತಾ "ಭರತ ವರ್ಷವು ಇತಿಹಾಸಪೂರ್ವ ಕಾಲದಿಂದಲೂ ನಾನಾ ಜನಾಂಗಗಳ ನಾಗರಿಕತೆ ಸಭ್ಯತೆಗಳ ಸುಂದರ ಸಮನ್ವಯ ಮಂದಿರವಾಗಿದೆ. ಅವಿಚ್ಛಿನ್ನ ಇತಿಹಾಸ ಪರಂಪರೆಯಿರುವ ಪ್ರಾಚೀನ ನಾಗರಿಕತೆಯೆಂದರೆ ಪ್ರಾಯಶಃ ಚೀನವನ್ನು ಬಿಟ್ಟರೆ ಈ ಭರತ ಖಂಡದ ನಾಗರಿಕತಯೇ. ಉಳಿದ ನಾಗರಿಕತೆಗಳು ಹಲವು ಹೆಸರಿಲ್ಲದಂತೆ ಅಳಿದಿವೆ. ಈ ಭಾರತೀಯ ಆರ್ಯ ಸಂಸ್ಕೃತಿ ಉಳಿದದ್ದು ಹೆಚ್ಚಲ್ಲ. ಉಳಿದು ವರ್ಧಿಷ್ಣುವಾಗಿ ಆತ್ಮವರ್ಚಸ್ಸಿನಿಂದ ಬೆಳಗಿದುದು ಇದರ ಹಿರಿಮೆ. ಶಕ ಹೂಣಾದಿ ನೂರಾರು ಭಿನ್ನ ಭಿನ್ನ ಜನಾಂಗಗಳು ಒತ್ತಿ ಬಂದು ಸೆಣಸಿ, ರಕ್ತ ಸುರಿಸಿ, ಕೊನೆಗೆ ಈ ಸಂಸ್ಕೃತಿಗೆ ಮಾರು ಹೋಗಿ ಮಾರ್ಪಟ್ಟು ರಕ್ತಬಂಧುಗಳಾಗಿ ಲೀನವಾಗಿದೆ"[೨೯] ಎಂದು ಹೇಳುತ್ತಾರೆ. ಕುವೆಂಪು ಅವರ ದೃಷ್ಟಿಯಲ್ಲಿ ಮುಸ್ಲಿಮರು ಭಾರತೀಯ ಸಂಸ್ಕೃತಿ ಒಪ್ಪಿ ರಕ್ತಬಂಧುಗಳಾಗಿ ಲೀನರಾಗಿದ್ದಾರೆ. ಇವರಷ್ಟೇ ಅಲ್ಲ ಆರ್ಯರು ಕೂಡ ಎಂದು ಹೇಳಬಹುದು. ಏಕೆಂದರೆ ಶಂಬಾ ಜೋಶಿಯವರು ಹೇಳುವ ಹಾಗೆ 'ಆರ್ಯರು ಭಾರತದ ಸಮತಟ್ಟಾದ ಭೂಮಿಯನ್ನು ಆಯ್ಕೆ ಮಾಡಿಕೊಂಡಿದ್ದರು. ಮೂಲದ್ರಾವಿಡರನ್ನು ಆರ್ಯರು ಕಾಡಿಗೆ ಓಡಿಸಿದರು ಎಂದು ಹೇಳುತ್ತಾರೆ. ಆದರೆ ಭಾರತದ ಭೂಮಿ, ಸಂಸ್ಕೃತಿಯನ್ನು ಒಪ್ಪಿ ಉಳಿದವರು ಎಂದರೆ ಆರ್ಯರು, ಮುಸ್ಲಿಮರು ಎಂದು ಹೇಳಬಹುದು.

ಕುವೆಂಪು ಅವರು ಹೇಳುವಂತೆ "ಇಂದಿನ ಭರತಖಂಡದ ಸಂಸ್ಕೃತಿ ವಿಕಾಸಕ್ಕೆ ಪ್ರೇರಕ ಶಕ್ತಿ ಇಲ್ಲಿಯ ಹಿಂದು ಮುಸ್ಲಿಮಾದಿ ಎಲ್ಲ ಜನತೆಯ ಮಧುರ ಮೈತ್ರಿ ಸಹಕಾರಗಳೆಂಬುದರ ಅರಿವಿಲ್ಲದಿರುವುದೇ ನಮ್ಮ ಬೀಳಿಗೆ ಕಾರಣವಾಗಿದೆ. ಈ ಅಜ್ಞಾನ ಕಾರ್ಕೋಟಕ ತನ್ನ ಪ್ರತ್ಯೇಕತಾಭಾವದ ಹೆಡೆಯನ್ನೆತ್ತಿ ಇಂದು ರಾಜಕೀಯದಲ್ಲಿ ವಿರೂಪಕಾರವಾದ ಮಾರಕ ವಿಷವನ್ನು ಕಾರಿ, ಅಖಂಡ ರಾಷ್ಟ್ರ ಪುರುಷನನ್ನು ಇಬ್ಭಾಗ ಮಾಡಿದೆ. ಇದು ರಾಷ್ಟ್ರದ ದೂರದೃಷ್ಟಿ. ಭಾರತ ಮಹಾಮಾನಸದಲ್ಲಿ ಆರ್ಷೇಯ ಸಂಸ್ಕೃತಿಯೊಡನೆ ಅನ್ಯ ಸಂಸ್ಕೃತಿಗಳು ಮಧುರವಾಗಿ ಕೂಡಿಕೊಂಡು, ಕೊಟ್ಟು ಬೆಳೆದು ಬೆಳಗಿ ಬಾಳಿದುದನ್ನು ಅರಿಯದೆ ಹೋದದು ನಿಜವಾಗಿಯೂ ನಮ್ಮ ನಾಡಿನ ದೌರ್ಭಾಗ್ಯ. ವಿಚಾರಿಸಿ ನೋಡಿದರೆ ಒಂದು ರಾಷ್ಟ್ರದ ಇತಿಹಾಸದ ತಿರುಳು ಇರುವುದು ಅಲ್ಲಿ ಸಂಧಿಸಿದ ವಿವಿಧ ಜನಾಂಗಗಳ ಸಮರಸ ಜೀವನದಿಂದ ಹೊಮ್ಮುವ ಸಂಸ್ಕೃತಿಯ ಸಾರ ಸೌರಭದಲ್ಲಿ"[೩೦] ಎಂದು ಹೇಳುತ್ತಾರೆ. ನಾವು ಇಡಿಯಾಗಿ ಭಾರತವನ್ನು ಚರಿತ್ರೆಯಾಗಿ, ಸಾಮಾಜಿಕವಾಗಿ ಆತ್ಮ ವಿಮರ್ಶೆ ಮಾಡಿಕೊಂಡಾಗ ಆರ್ಯರು ತಮ್ಮ ಸಂಸ್ಕೃತಿ ವಿಕಾಸಕ್ಕಾಗಿ ಇನ್ನೊಂದು ಸಮುದಾಯವನ್ನು

ದೂರವಿಡುವುದರ ಜೊತೆಗೆ ತಮ್ಮ ಆರ್ಯ ಸಂಸ್ಕೃತಿಯನ್ನು ಹೇರಲಾಗಿದೆ. ಮುಸ್ಲಿಮರು ಸಂಪತ್ತಿಗಾಗಿ ತಮ್ಮ ರಾಜಕೀಯ ವಿಸ್ತರಣೆಗಾಗಿ ಇಲ್ಲೇ ನೆಲೆಯೂರಲು ಹಲವು ರಾಜಮನೆತನಗಳ ಜೊತೆ ರಕ್ತ ಸುರಿಸಿದರು. ಜೊತೆಗೆ ತಮ್ಮ ಸಾಮ್ರಾಜ್ಯದಲ್ಲಿ ಭದ್ರ ಪರಂಪರೆಯಾಗಿ ಕೋಟೆಕೊತ್ತಲ, ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಇದರಿಂದ ಪುರಾತತ್ವ ಸಂಸ್ಕೃತಿಯ ಜೊತೆಗೆ ಪ್ರವಾಸೋದ್ಯಮಕ್ಕೆ ಹೆಚ್ಚಿಗೆ ಅನುಕೂಲವಾಯಿತು.

ಮುಸ್ಲಿಮರ ಸಾಧನೆಯಿಂದ ಭಾರತದಲ್ಲಿ ಸೂಫಿಸಂ ನೆಲೆಯೂರಿತು. ಇದರಿಂದ ಎಷ್ಟೋ ಅಲಕ್ಷಿತ ಸಮುದಾಯಗಳ ಕಣ್ಣೀರು ಒರೆಸುವ ಕೆಲಸ ಮಾಡಿತು. ಇದು ಭಾರತದ ಬಹುದೊಡ್ಡ ಹೆಮ್ಮೆ. ಆರ್ಯರು ಮಾಡಿದ ಕಾರ್ಯಗಳೇನು? ಇನ್ನೊಂದು ಸಮುದಾಯವನ್ನು ಶೋಷಣೆಗೆ ಒಳಪಡಿಸಿದೆ. ಇದು ಚರಿತ್ರೆಯುದ್ಧಕ್ಕೂ ಮತ್ತು ನಮ್ಮ ಸಂಸ್ಕೃತಿಯಲ್ಲಿ ಬಂದಿದೆ. ಇಲ್ಲಿ ಇಸ್ಲಾಂ ಸಂಸ್ಕೃತಿಯನ್ನು ಸಮರ್ಥಿಸಿಕೊಳ್ಳುತ್ತಿಲ್ಲ. ಆದರೆ ಭಾರತೀಯ ಚರಿತ್ರೆ ಸಂಸ್ಕೃತಿಯನ್ನು ನಾವುಗಳು ಅರ್ಥ ಮಾಡಿಕೊಳ್ಳಬೇಕಾದದ್ದು ಯಾವುದು ಎನ್ನುವುದು ಮುಖ್ಯವಾಗಿದೆ. ಕುವೆಂಪು ಅವರು ಹೇಳುತ್ತಾರೆ "ಪ್ರಚಲಿತ ಭಾರತ ಇತಿಹಾಸ ಗ್ರಂಥಗಳಲ್ಲಿ ಉಲ್ಲೇಖನಾಭಾವದಿಂದಾದ ಅನಾಹುತ ಅಷ್ಟಿಷ್ಟಲ್ಲ. ಈಗ ನಮಗೆ ಬಂದಿರುವ ಸಂಸ್ಕೃತಿ ಪರಂಪರೆ ಶುದ್ಧ ಹಿಂದೂ ಸಂಸ್ಕೃತಿ. ಅದು ವಿಕಾಸಗೊಂಡಿದ್ದು ಮುಸ್ಲಿಂ ಪೂರ್ವದಲ್ಲಿ ಅಚ್ಚ ಹಿಂದು ಯುಗದಲ್ಲಿ ಎಂಬ ಅಪೂರ್ಣ ಭಾವನೆ ಅನೇಕ ಹಿಂದುಗಳಲ್ಲಿ ಮನೆ ಮಾಡಿದೆ. ಮುಸ್ಲಿಮರಿಗೂ ತಮ್ಮ ಸಂಸ್ಕೃತಿಯನ್ನು ಕುರಿತು ಇದೇ ತೆರನಾದ ಭ್ರಾಂತಿ ಬಲವಾಗಿದೆ"[೧೧] ಎಂದು ಹೇಳುತ್ತಾರೆ. ಕುವೆಂಪು ಆವರು ೨೧ನೇ ಶತಮಾನದ ಸಂದರ್ಭದಲ್ಲಿ ಹೇಳಿರುವುದು ಇಂದಿಗೂ ಪ್ರಸ್ತುತವಾಗಿದೆ ಎನ್ನಬಹುದು.

ಕುವೆಂಪು ಆವರು 'ಕಲಾ ಸುಂದರಿ' ಕವನ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಕಲಾಸುಂದರಿಯಲ್ಲಿ ಕವಿತೆಗಳು ಪ್ರಕೃತಿ ವರ್ಣನೆಯ ಸೃಷ್ಟಿಯ ಜೊತೆಗೆ ಕತೆಯನ್ನೇ ಬೋಧಿಸಿವೆ. ಈ ಬೋಧನೆಯ ಸುಂದರಿ ಇದೇ ಕಲಾಸುಂದರಿ. ಹಾಗಾಗಿ ಇಡೀ ಪ್ರಂಪಚದ ಭೂಮಿಯನ್ನು ಸಹಜ ಸ್ಥಿತಿಯಲ್ಲಿದೆ ಎಂದು ಪ್ರತಿಪಾದಿಸಿದ್ದಾರೆ. ಆದರೆ ಬುದ್ಧಿ ಎಂಬುದು ಪ್ರಧಾನವಾಗಿ ಕೆಲಸ ಮಾಡುತ್ತದೆ ಎಂಬುದು ಅವರ ನಿಲುವಾಗಿದೆ. ಅವರು ಹೇಳುವಂತೆ "ಮನುಷ್ಯ ಜಾತಿಯ ಗೌರವ ಅವರ ಬುದ್ಧಿ ಶಕ್ತಿಯಲ್ಲಿದೆ. ರಾಗ, ಪ್ರೇಮ, ಕ್ರೋಧ, ದ್ವೇಷಗಳು ಸರ್ವ ಪ್ರಾಣಿಗಳಲ್ಲಿಯೂ ಸಮಾನವಾಗಿವೆ. ಅವುಗಳೆಲ್ಲವೂ ನಮಗಿರುವ ಶಕ್ತಿಗಳೇ ಆದರೂ ಅವುಗಳನ್ನೆಲ್ಲ ಆಳುವ ಶಕ್ತಿ ಎಂದರೆ ಬುದ್ಧಿ"[೨] ಎಂದಿರುವರು. ಈ ಬುದ್ಧಿಯ ಹಿಂದಿನ ಚಿಂತನೆ ವಾಸ್ತವ ಕಲ್ಪನೆಯಾದಾಗ, ಕಲ್ಪನೆ ವಾಸ್ತವವಾದಾಗ ಅದರ ನಿಲುವು ವಿಜ್ಞಾನದಲ್ಲಿ ಪ್ರಗತಿ ಹೊಂದಿದೆ. ಉದಾ:- ನಾಟಿ ಔಷಧಗಳು ಮೆಡಿಸನ್‌ಗಳಾಗಿವೆ. ಪರಿಸರ ಸಮಾಜವನ್ನು ಒಂದು ದೃಷ್ಟಿಕೋನದಿಂದ ನೋಡಲಾಗದು. ಹಲವು ದೃಷ್ಟಿಕೋನದಿಂದ ಹಾಗೂ ಹಲವು ಚಿಂತನೆಗಳಿಂದ ಶಾಸ್ತ್ರಗಳ ರೂಪವಾಗಿ ಬದಲಾವಣೆಗೊಳಿಸುತ್ತವೆ. ಕುವೆಂಪು ಅವರು 'ಭಾರತೀಯ ಶಿಕ್ಷಣದ ಇತಿಹಾಸ', 'ಸಸ್ಯ ಸಂರಕ್ಷಣೆ',

'ಗೃಹ-ವಿಜ್ಞಾನ', 'ಪ್ರವಾಸಿ ಕಂಡ ಇಂಡಿಯಾ' ಈ ಗ್ರಂಥಗಳಿಗೆ ಮುನ್ನುಡಿ ಬರೆದಿದ್ದಾರೆ. ಇವುಗಳಲ್ಲಿ ಅವರು ವಿಶೇಷವಾಗಿ ದೇಶ ಭಾಷಾ ಮಾಧ್ಯಮ ದ್ವಿಭಾಷಾ ಸೂತ್ರವೇ ಮೊದಲಾದ ನಾಡಿನ ಪ್ರಮುಖ ಜೀವಂತ ಶೈಕ್ಷಣಿಕ ಸಮಸ್ಯೆಗಳು, ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚರ್ಚಿಸಿದ್ದಾರೆ. ಅವರ ಆಲೋಚನೆಗಳ ಚಿಂತನೆಗಳು ನಾಡಿನ ಆರೋಗ್ಯಕ್ಕೆ ಸಾಧಕ, ಶಿಕ್ಷಣ ಶಾಸ್ತ್ರಕ್ಕೆ ಪೂರಕ ನೆಲೆಯಾಗಿ ಭಾಷಾ ಶಿಕ್ಷಣ ಸಂಬಂಧವಾದ ಸಮಸ್ಯೆಗಳಿಗೆ ಇಲ್ಲಿ ಸೂಚನೆ ಹಾಗೂ ನೀಡಿರುವ ಪರಿಹಾರಗಳು ಹೊಸ ಸಮಾಜದ ತುಡಿತ ಸಾಧಿಸಲಿವೆ ಎಂದು ತಿಳಿದುಕೊಳ್ಳಬೇಕಾಗಿದೆ.

ಕುವೆಂಪು ಅವರ ಪ್ರಮುಖ ಕೃತಿ ಮತ್ತು ಯುವಪೀಳಿಗೆಗೆ ಕರೆ ನೀಡಿದ ಕೃತಿ 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ' ಕೃತಿಯ ಮುನ್ನುಡಿಯ ಕೆಲವು ಅಂಶಗಳನ್ನು ವ್ಯಕ್ತಪಡಿಸಿದ್ದಾರೆ. ಅಖಂಡ ಭಾರತಕ್ಕಾಗಿ ಮಹಾತ್ಮ ಗಾಂಧೀಜಿಯವರ ಸತ್ಯಾಗ್ರಹ, ಸಂಗ್ರಾಮಗಳು ಇತ್ಯಾದಿ ನಡೆದಿವೆ. ಹಾಗೂ ನಮ್ಮ ದೇಶದ ಅಂದು ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರನ್ನು ಹೊರಗಟ್ಟಲು ಪ್ರಯತ್ನ ನಡೆಸಲಾಗುತ್ತಿತ್ತು. ಆಗ ಇಂಗ್ಲಿಷ್ ಭಾಷೆ, ಸಾಹಿತ್ಯ, ಸಂಸ್ಕೃತಿ, ಆಡಳಿತ ಯಂತ್ರವಿದ್ಯೆ ಎಲ್ಲವನ್ನು ಬ್ರಿಟಿಷರ ನೆಲೆಯಲ್ಲಿಯೇ ಕಲಿತಿದ್ದೇವೆ. ಕೊನೆಗೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುತ್ತದೆ. ಆಗ ಸ್ವಾತಂತ್ರ್ಯೋತ್ತರ ಭಾರತ ತನ್ನ ತಾನು ಪಳಗಿಸಿಕೊಳ್ಳುವಲ್ಲಿ ವಿಫ್ತಲವಾಗಿದೆ. ಸ್ವಾತಂತ್ರ್ಯ ನಂತರ ಏನು? ಬದಲಾವಣೆ ಆಗಿದೆ. ಕುವೆಂಪು ಅವರು ಹೇಳುವಂತೆ "ನಮ್ಮಲ್ಲಿ ಸಂಸ್ಕೃತಿಯ ಹಾಗೂ ಮತದ ಹೆಸರಿನಲ್ಲಿ, ಧರ್ಮದ ಸೋಗಿನಲ್ಲಿ ಪೂರ್ವಿಕರ ಪ್ರಾಚೀನ ವೈಭವಗಳ ಕರ್ಮಕಾಂಡವನ್ನು ಮತ್ತೆ ಜೀರ್ಣೋದ್ಧಾರ ಮಾಡಿ ಪ್ರತಿಷ್ಠಾಪಿಸುವ ಸ್ವಾರ್ಥತಾ ಮೂಲವಾದ ಕುರುಡು ನೆಪದಲ್ಲಿ ಅವಿವೇಕ ಮೌಢ್ಯಗಳಿಗೆ ವೈಜ್ಞಾನಿಕತೆಯ ಮತ್ತು ವಿಚಾರದ ಚಿನ್ನದ ಮುಲಾಮು ಹಚ್ಚಿ ಜನರನ್ನು ಕಣ್ತಪ್ಪಿಸಿ ವಂಚಿಸುವ ಮಹೋದ್ಯೋಗ ನಿರ್ಲಜ್ಜೆಯಿಂದ ಸಾಗುತ್ತಿರುವುದನ್ನು ದಿನದಿನವೂ ನೋಡುತ್ತಿದ್ದೇವೆ"[೩] ಎಂದಿರುವರು. ಕುವೆಂಪು ಅವರು ಹೇಳಿರುವ ಮಾತಿನಿಂದ ಮೀಸಲಾತಿ, ಆಹಾರ, ಹುಸಿನಂಬಿಕೆ, ವಿಚಾರಗಳು, ಧರ್ಮದ, ಜಾತಿಯ ಹೆಸರಿನಲ್ಲಿ ಜನಸಾಮಾನ್ಯರನ್ನು ತುಳಿಯುವುದು ತಮ್ಮ ನಿಲುವನ್ನು ಇನ್ನೊಬ್ಬರ ಮೇಲೆ ಬಲವಂತವಾಗಿ ಹೇರುವುದು ಹಾಗೆಯೇ ಇನ್ನೊಂದು ಸಮುದಾಯಗಳನ್ನು ಹಿಂಸಿಸುವ ಕಾರ್ಯಗಳು ಪ್ರಸ್ತುತ ನಡೆದಿವೆ ಎಂದು ಹೇಳಬಹುದು.

**೫.೩. ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಕನ್ನಡ ಸಾಹಿತ್ಯ ಚಿಂತನೆಯಲ್ಲಿ ತೊಡಗಿದ ನವೋದಯ ಕಾಲಘಟ್ಟದಲ್ಲಿ ಪ್ರಮುಖರಾಗಿದ್ದಾರೆ. ಮಾಸ್ತಿಯವರು ತಮ್ಮ 'ಪೂಜನ' ಮುನ್ನುಡಿ ಸಂಕಲನದಲ್ಲಿ ತಮ್ಮ ಸಾಹಿತ್ಯ ಬರವಣಿಗೆಯಲ್ಲಿ ಈ 'ಪೂಜನ' ಕೃತಿ ಇಪ್ಪತ್ತೈದು ವರ್ಷಗಳಲ್ಲಿ ಆಗಾಗ ಬರೆದ ಮುನ್ನುಡಿಗಳ ಸಂಕಲನವಾಗಿದೆ ಎಂದು ಹೇಳಿಕೊಳ್ಳುತ್ತಾರೆ. ಮಾಸ್ತಿಯವರ ಚಿಂತನೆ ನವೋದಯ ಕಾಲದ ಸ್ಥಿತ್ಯಂತರಶೀಲ ಜೀವನದೃಷ್ಟಿ ಬದಲಾಗುತ್ತಿದ್ದ ಕಾಲ. ಅಂತಹ ಕಾಲದಲ್ಲಿ ಮಾಸ್ತಿ ತಮ್ಮ ನಡೆ ನುಡಿಯ ಬರಹಗಳ ಮೂಲಕ ನಮ್ಮ ಪರಂಪರೆ ವಿಚಾರಗಳಲ್ಲಿನ ನಮ್ಮ

ಸಂಸ್ಕೃತಿಯ ಗಟ್ಟಿ ಅಂಶಗಳು ಯಾವುದು, ಜೊಳ್ಳು ಯಾವುವು ಎಂಬುದನ್ನು ತೋರಿದವರು. ನಮ್ಮ ನಡುವೆ ಇದ್ದ ಉನ್ನತ ಸಂಸ್ಕೃತಿಯ ಅಂಶಗಳನ್ನು, ಮೌಲ್ಯಗಳನ್ನು ಜಾಗತಿಕ ಮಟ್ಟದಲ್ಲಿ ಗುರುತಿಸಿದವರಾಗಿದ್ದಾರೆ. ಪಾಶ್ಚಾತ್ಯ ಅಂಶಗಳು ಅವರ ಸಾಹಿತ್ಯದಲ್ಲಿ ಕಡಿಮೆ. ಅವರಿಗೆ ಮತ–ಧರ್ಮ, ಭಕ್ತಿ–ದೈವದ ಬಗ್ಗೆ ಹೆಚ್ಚಿನ ಶ್ರದ್ಧೆ. ಮಾಸ್ತಿಯವರ ಗಟ್ಟಿಯಾದ ಸಂಸ್ಕೃತಿಯನ್ನು ಅವರ ಸಾಹಿತ್ಯದಲ್ಲಿ ಮನಗಾಣಬೇಕಾಗಿದೆ. ಅವರ ಮುನ್ನುಡಿಗಳಲ್ಲಿ ಚಿಂತನೆಯಂತಹ ಕೆಲವು ಸಂಗತಿಗಳಿವೆ. ಹಾಗೆಯೇ ಕನ್ನಡ ಸಾಹಿತ್ಯದ ಹಲವಾರು ಚಿಂತನೆಗಳು ತಮ್ಮ ಮುನ್ನುಡಿಗಳಿಂದ ಹೊಸತನ ಪ್ರಜ್ಞೆ, ಸಾಹಿತ್ಯ ಸೃಷ್ಟಿಯಾದುದರ ಪ್ರೇರಕವಾದ ತತ್ವಗಳನ್ನು, ಆಯಾ ಕೃತಿಗಳಲ್ಲಿ ಮಾಸ್ತಿಯವರು ನೋಡಿದ್ದಾರೆ. ಹಾಗಾಗಿ ಅವರ ಯಾವ ದೃಷ್ಟಿಯಿಂದ ಅವರ ಮುನ್ನುಡಿಗಳನ್ನು ನೋಡಿದ್ದಾರೆ ಎನ್ನುವುದು ಮುಖ್ಯವಾಗಿದೆ. ಮಾಸ್ತಿಯವರ ಮುನ್ನುಡಿಗಳಲ್ಲಿ ಕಾವ್ಯ ಸಂವೇದನೆಯುಳ್ಳ ಕೌಶಲ್ಯಯುತವಾದ ಸಹೃದಯತೆ, ಕೃತಿಸಾರ, ಸದಭಿರುಚಿ, ಸೂಕ್ಷ್ಮ ಬುದ್ಧಿಯ ವೈಚಾರಿಕತೆ, ಸರಳತೆಯನ್ನು ಅವರ ಮುನ್ನುಡಿಯಲ್ಲಿ ಕಾಣಬಹುದು. ಇವರ ಮುನ್ನುಡಿಗಳಲ್ಲಿ ಸಾಹಿತ್ಯವನ್ನು ಕುರಿತ ಮೌಲಿಕ ಮಾತುಗಳು ಹೆಚ್ಚಾಗಿ ಬಂದಿವೆ. ಅವುಗಳಲ್ಲಿ ಕೆಲವನ್ನು ಆಯ್ಕೆ ಮಾಡಿ ವಿಶ್ಲೇಷಣೆಗೆ ಒಳಪಡಿಸಲಾಗುವುದು.

ಮಾಸ್ತಿಯವರ ಸಾಹಿತ್ಯದ ಕಾವ್ಯದೃಷ್ಟಿಯ ಮೂಲ ಯಾವುದು ಎಂಬುದನ್ನು ಹೇಳುವಂತೆ "ಕಾವ್ಯ ದೃಷ್ಟಿಯಲ್ಲಿಯ ಅವರು ಮೂಲವೆಲ್ಲಾ ಜೀವಗಳ ಹೃದಯದಲ್ಲಿರುವ ದಿವ್ಯಜ್ಯೋತಿ. ಈ ಜ್ಯೋತಿ ಕೆಲವರಲ್ಲಿ ಹಿರಿದಾಗಿರುತ್ತದೆ. ಕೆಲವರಲ್ಲಿ ಕಿರಿದಾಗಿರುತ್ತದೆ. ಅನೇಕರಲ್ಲಿ ಮಡಿಕೆ ಮಡಿಕೆ ಮಮತೆ ಇದಕ್ಕೆ ತೆರೆಯಾಗಿ ನಿಂತಿರುತ್ತದೆ. ಸಾವಿರಕ್ಕೆ ಲಕ್ಷಕ್ಕೆ ಒಬ್ಬರಲ್ಲಿ ಈ ರೀತಿಯಲ್ಲಿ ತೆಳ್ಳಗಿರುವುದು, ಕವಿತೆ ಚೆನ್ನಾಗಿರುವುದು. ಈ ತೆರೆ ತೆಳ್ಳಗಾಗಿದ್ದಾಗ ತನ್ನ ಜೀವನದ ಭಾವಗಳ ಅಲೆ ಅಲೆಯನ್ನು ಒಳಗಿನ ಬೆಳಕಿನಿಂದ ನೋಡಿ ಅರಿತು ಆ ಪರಿಶ್ರಮದ ಸಹಾಯದಿಂದ ಇನ್ನೊಂದು ಜೀವನದ ಭಾವದ ಅಲೆಗಳನ್ನು ಕಾಣುವುದೇ ಕವಿಯ ದೃಷ್ಟಿ. ಶ್ರೀಮತಿ ರಾಜಮ್ಮನವರಲ್ಲಿ ಈ ದೃಷ್ಟಿ ಸುಲಕ್ಷಣವಾಗಿದೆ"[೩೪] ಎಂದು ಮಾಸ್ತಿಯವರು ಸೌಭಾಗ್ಯವತಿ ಶ್ರೀಮತಿ ರಾಜಮ್ಮನವರ 'ತಪಸ್ವಿನಿ' ಕೃತಿಯ ಕುರಿತು ಹೇಳಿರುವರು. ಈ ಹಿನ್ನೆಲೆಯಿಂದ ಇದು ಕಾವ್ಯದ ಕುರಿತು ಬಹಳ ಮಹತ್ವದ ಮೌಲಿಕವಾದ ಮಾತಾಗಿದೆ. ಇದರಿಂದ ವಿಮರ್ಶಕರು, ಓದುಗರು, ಬರಹಗಾರರು ಈ ರೀತಿಯಾಗಿ ಕಾವ್ಯ, ಕಥೆ, ಕಾದಂಬರಿ, ಬರಹಗಳನ್ನು ಅರ್ಥ ಮಾಡಿಕೊಳ್ಳಬಹುದು.

ಒಂದು ಕೃತಿಯ ಕಾವ್ಯವೆನಿಸುವ ಲಕ್ಷಣಗಳ ಸ್ವರೂಪ ಎಂಥದು ಎನ್ನುವುದಕ್ಕೆ ಬೇಂದ್ರೆಯವರ 'ನಾದಲೀಲೆ'ಗೆ ಮಾಸ್ತಿಯವರು ಮುನ್ನುಡಿ ಬರೆಯುತ್ತಾರೆ. ಅದರಲ್ಲಿ ಕಾವ್ಯದ ಲಕ್ಷಣ ಹಾಗೂ ಸ್ವರೂಪ ದೊರೆಯುತ್ತದೆ. "ಒಂದು ಕೃತಿಯನ್ನು ಕಾವ್ಯವೆಂದೆನಿಸುವ ಲಕ್ಷಣಗಳು ಹಲವು. ಕೆಲವು ವೇಳೆ ಅವು ಭಾವದ ಸೊಗಸೆಂದು, ಮಾತಿನ ಸೊಗಸೆಂದು, ಕೆಲವು ವೇಳೆ ಹಲವು ರೀತಿಯ ಸೊಗಸೆಂದು ಕಾಣುತ್ತೇವೆ. ಕಾವ್ಯ ಲಕ್ಷಣಗಳೆಲ್ಲ ಈ ಮೂರು ಬಗೆಯಲ್ಲಿ ಅಡಕವಾಗುತ್ತದೆ. ಆದರೆ ಈ ಮೂರು ಬಗೆಯ ಸೊಗಸು ಒಂದುಗೂಡಿ ಮೊತ್ತವಾಗಿ ಕಾಣುವುದು ಕಾವ್ಯದ ಜೀವಗುಣ

ಇರುವಲ್ಲಿ ಮಾತ್ರ ಕವಿಯ ಮನೋಧರ್ಮ ಎಷ್ಟು ತೀವ್ರವಾಗಿ ಕಾವ್ಯ ಜಾತಿಯದಾದರೆ ಕಾವ್ಯ ಅಷ್ಟು ಸ್ಪಷ್ಟವಾಗಿ ಈ ಲಕ್ಷಣಗಳನ್ನು ತೋರಿಸುತ್ತದೆ"[೩೫] ಎಂದು ಹೇಳುತ್ತಾರೆ. ಅವರ ಸಾಹಿತ್ಯದ ಸ್ವರೂಪ ಕತೆಯಾದರೇನು, ಕಾವ್ಯವಾದರೇನು ಸ್ವರೂಪದಲ್ಲಿ ಮಾಸ್ತಿಯವರು ಬಹಳ ವಿಷಯದಲ್ಲಿ ಅವಶ್ಯಕವಾದ ಮಾತುಗಳು ಅವರ ಮುನ್ನುಡಿಗಳಲ್ಲಿ ಗೋಚರಿಸಿವೆ. "ಸ್ವರೂಪತಃ ಸಾಹಿತ್ಯವು ಹಾಡುವ ವಿಷಯ, ಹೇಳುವ ವಿಷಯ. ಬಲ್ಲವರು ಹಾಡಿದರೆ ಮತ್ತು ಇತರರು ಕೇಳುವ ವಿಷಯ"[೩೬] ಎಂದು ಆನಂದರ ಮಾಟಗಾತಿ ಮತ್ತು ಇತರ ಕತೆಗಳು ಮುನ್ನುಡಿಯಲ್ಲಿ ಹೇಳಿದ್ದಾರೆ.

ಮಾಸ್ತಿಯವರ ಸಾಹಿತ್ಯ ಸ್ವರೂಪದಲ್ಲಿ ಕತೆ, ಕಾವ್ಯ ಇತರ ಬರವಣಿಗೆಗಳು ಸಮಾಜವನ್ನು ಗ್ರಹಿಸುತ್ತವೆ. "ಕವಿಯಾದವನು ಕತೆಗಾರನೂ ಆಗಿದ್ದನೆಂಬ ಈ ಮಾತಿನಿಂದ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ. ಇದು ಸಾಹಿತ್ಯದಲ್ಲಿ ಸುಪ್ರಸಿದ್ಧವಾದ ಸಂಪ್ರದಾಯ ನಮ್ಮ ಆದಿಕಾವ್ಯ ಒಂದು ಕತೆ, ಕವಿತೆಗಳ ಮೂಲದಲ್ಲಿರುವ ದೃಷ್ಟಿ, ಶಿಕ್ಷೆ ಒಂದೇ ರೀತಿಯವು. ಕವಿಯಾದವನು ಸಾಮಾನ್ಯವಾದ ದೃಷ್ಟಿ ಹಿಡಿಯದ ವಸ್ತುವನ್ನು ವರ್ಣಿಸುತ್ತಾನೆ ಎಂದೂ, ಕತೆಗಾರನ ಸಾಮಾನ್ಯವಾದ ದೃಷ್ಟಿಗೂ ಕಾಣುವ ವಿಷಯವನ್ನು ಹೇಳುತ್ತಾನೆ ಎಂದು ನಾವು ಎಣಿಸಬಹುದು. ಆದರೆ ಇಬ್ಬರ ವಸ್ತುವು ಸಾಮಾನ್ಯ ದೃಷ್ಟಿಗೂ ಕಾಣದುದೇ. ಆದುದರಿಂದಲೇ ರವಿ ಕಾಣದ್ದನ್ನು ಕವಿ ಕಂಡನೆಂಬ ನಾಣ್ಣುಡಿಗೆ ಸಮನಾಗಿ ಕಥೆಗೆ ಕಾಲಿಲ್ಲವೆಂಬ ನಾಣ್ಣುಡಿ ಇರುವುದು"[೩೭] ಎಂದು ಕತೆಗಾರನ ತಂತ್ರಗಾರಿಕೆಯನ್ನು ಕುರಿತು ಹೇಳುತ್ತಾರೆ.

"ಎಲ್ಲ ಕವಿ, ಕತೆಗಾರರಲ್ಲಿ ನಾವು ಒಂದು ಲಕ್ಷಣವನ್ನು ಅಪೇಕ್ಷಿಸುತ್ತೇವೆ. ಅವರು ಹೇಳುವ ವಿಷಯ ನಮಗೆ ನಿಜವೆಂದು ಕಾಣಬೇಕು ಎಂದೇ ಅದು ನಮಗೆ ತಿಳಿಯುವಂತೆ ನಾವು ನೋಡಿರುವ ವಿಷಯವನ್ನು ಒಳಗೊಂಡಿರಬೇಕು. ಒಳ್ಳೆಯವರೆನಿಸಿಕೊಂಡ ಎಲ್ಲಾ ಕವಿ, ಕತೆಗಾರರಲ್ಲಿ ಈ ಲಕ್ಷಣ ಮೇಲೆದ್ದು ಕಾಣುತ್ತದೆ. ಏನೋ ಹೇಳುತ್ತಿರುವಲ್ಲಿ ಮಧ್ಯ ಒಂದು ಮಾತು, ಒಂದು ವರ್ಣನೆ ಮತ್ತು ಒಂದು ಸಂಗತಿ ಬರುತ್ತದೆ. ನಾವು ಆಹಾ! ನಿಜ, ನೋಡಿದೆಯಾ ಈತನ ಸೂಕ್ಷ್ಮತೆ ಎನ್ನುತ್ತೇವೆ. ಆಮೇಲೆ ಅವನು ಹೇಳುವ ಇತರ ವಿಷಯಗಳಲ್ಲಿ ನಮಗೆ ನೆಚ್ಚಿಗೆ ಹೆಚ್ಚುತ್ತದೆ. ಕವಿ ಅಥವಾ ಕತೆಗಾರನು ನಮ್ಮನ್ನು ಮೆಚ್ಚಿಸುವುದಕ್ಕೆ ಕುಳಿತಿದ್ದಾರೆ. ನಾವು ಅವನನ್ನು ಒಪ್ಪುವ ಹಿರಿಯರು ಎಂದೇ ತಲೆದೂಗುತ್ತಾ ನಾವು ಅವನ ಗಾರುಡಿಗೆ ಸಿದ್ಧ. ಅವನನ್ನು ನಮ್ಮ ಮನಸ್ಸಿನಲ್ಲಿ ಸೆರೆ ಮಾಡುತ್ತೇವೆ. ಕಲೋಪಾಸಕನು ತನ್ನ ಕಾರ್ಯಸಿದ್ಧಿಗೆ ಜನರಲ್ಲಿ ಇಂತ ನಂಬಿಕೆಯನ್ನು ಹುಟ್ಟಿಸುವುದು ಅವಶ್ಯಕ. ಓದುವವರಿಗೆ ಅಲ್ಲದೆ ಅವನಿಗೂ ಇದರಿಂದ ಪ್ರಯೋಜನವಿದೆ. ತನ್ನ ನೋಟ ಇನ್ನೊಂದು ನೋಟದೊಡನೆ ಬೆರೆತಿದೆ. ತನ್ನ ನುಡಿ ಇನ್ನೊಂದು ಮನಸ್ಸನ್ನು ಮುಟ್ಟಬಲ್ಲದು ಎನ್ನುವುದು ಅವನಿಗೆ ಆಗ ನಿರ್ಧಾರವಾಗುತ್ತದೆ. ಇದರಿಂದ ಅವನಿಗೆ ಆತ್ಮಪ್ರಜ್ಞೆಯು ಬರುತ್ತದೆ. ಅದು ಅವನ ಬೆಳವಣಿಗೆಗೆ ಸಹಾಯವಾಗುತ್ತದೆ. ಈ ದೃಷ್ಟಿಯಿಂದ ಈ ಕತೆಗಳಿಗೆ ಪುಟ್ಟಪ್ಪನವರ ಸಾಹಿತ್ಯೋಪಾಸನೆಯಲ್ಲಿ ಬಹುಮುಖ್ಯವಾದ ಸ್ಥಾನವನ್ನು ಕೊಡುತ್ತೇನೆ"[೩೮] ಎಂದು ಮಾಸ್ತಿಯವರು ಹೇಳುತ್ತಾರೆ.

ಕುವೆಂಪು ಅವರ ಸಾಹಿತ್ಯದ ಚಿಂತನೆ ಯಾವ ನೆಲೆಯಲ್ಲಿರಬೇಕಾಗುತ್ತದೆ ಎನ್ನುವುದಕ್ಕೆ ಕತೆಗಾರಿಕೆಯ ಕೃತಿಯನ್ನು ಕುವೆಂಪು ಅವರು ಬರೆದ 'ಸನ್ಯಾಸಿ ಮತ್ತು ಇತರ ಕಥೆಗಳು' ಕೃತಿಯ ಮುನ್ನುಡಿಯಲ್ಲಿ ಚರ್ಚಿಸಿದ್ದಾರೆ. ಏಕೆಂದರೆ ಮಲೆನಾಡಿನ ಚಿತ್ರಣ ಕಟ್ಟಿಕೊಟ್ಟಿರುವ ಅವರ ಕತೆಯ ಪರಿಕಲ್ಪನೆ ಟಾಲ್‌ಸ್ಟಾಯ್‌ರ ಬೃಹತ್ ಕಾದಂಬರಿಗಳು 'ಯುದ್ಧ ಮತ್ತು ಶಾಂತಿ' ಹಿನ್ನೆಲೆಯಲ್ಲಿ ಕುವೆಂಪು ಅವರು 'ಮಲೆಗಳಲ್ಲಿ ಮದುಮಗಳು' ಹಾಗೂ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಇಂತಹ ಕನ್ನಡ ದೊಡ್ಡ ಕಾದಂಬರಿಗಳು ಕಥಾರೂಪದಲ್ಲಿ ಮಲೆನಾಡಿನ ಚಿತ್ರಣವನ್ನು ಹೆಣೆಯಲಾಗಿದೆ. ಇಲ್ಲಿ ವಾಸ್ತವ ಇರಬಹುದು ಅಥವಾ ಕಾಲ್ಪನಿಕವಾಗಿರಬಹುದು. ಆದರೆ ಕಥೆ ಕಟ್ಟುವ ಪರಿಕಲ್ಪನೆಯನ್ನು ಎಲ್ಲ ಕವಿ ಮತ್ತು ಕತೆಗಾರರಲ್ಲಿ ನಾವು ಒಂದು ಲಕ್ಷಣ ಅಪೇಕ್ಷಿಸುತ್ತೇವೆ ಎನ್ನುವುದಕ್ಕೆ ಕತೆ, ಕಾವ್ಯ, ಕಾದಂಬರಿಗಳು ಸಾಮಾಜಿಕ ಅನನ್ಯತೆಯನ್ನು ಸಾರುತ್ತವೆ. ಮಾಸ್ತಿಯವರ ಸಣ್ಣ ಕತೆಗಳು ಸಾಮಾಜಿಕವಾಗಿ ಪಲ್ಲಟಗೊಂಡಂಥವುಗಳಾಗಿವೆ. ಹಾಗೆಯೇ ಅವರ ಮಾತಿನಲ್ಲಿಯೇ ಕತೆಗಾರಿಕೆಯ ಕಥೆಯ ವಸ್ತು ಅನಾವರಣಗೊಳ್ಳುತ್ತದೆ. ಕಥನದಲ್ಲಿ ಕೌಶಲ್ಯತೆ ಮುಖ್ಯವಾಗಿರಬೇಕು. ಉದಾ:– ನಾಲ್ಕು ಜನ ಎಲ್ಲಿಯೋ ಒಂದು ಕಡೆ ಎಂದರೆ ಬಾವಿಯ ಬಳಿ ಅಥವಾ ಹೊಲದಲ್ಲಿ, ಚಾವಡಿಯಲ್ಲಿ ಕಟ್ಟೆಯ ಮೇಲೆ ಸೇರಿದಾಗ ಒಬ್ಬರು ಯಾವುದೋ ಸಂಗತಿ ನಡೆಯಿತೆಂದು ಹೇಳಿದರೆ ಅಲ್ಲಿ ಕಥನ ಮಾದರಿ ಕಥೆ ಸಹಜವಾಗಿ ಆರಂಭವಾಗುತ್ತದೆ. ಇದನ್ನು ಹೇಳುವವರು ಸರಿಯಾಗಿ ಹೇಳಿದರೆ ಕೇಳುವವರಿಗೆ ರುಚಿ ಹುಟ್ಟುತ್ತದೆ. ಇಂತಹ ಸಂಗತಿಗಳನ್ನು ಓದುಗರಿಗೆ ನೀಡಿದಾಗ ಸಾಮಾಜಿಕವಾಗಬಹುದು. ಅವರ ಜೀವನದಲ್ಲಿ ಈ ತರಹದ ಪ್ರಸಂಗ ನಡೆದಿರಬಹುದು. ಹಾಗಾಗಿ ಮಾಸ್ತಿಯವರು ಕತೆಯ ಸ್ವರೂಪ, ಕತೆ ಕಟ್ಟುವ ಕಲೆಯನ್ನು ಚೆನ್ನಾಗಿ ಹೇಳಿದ್ದಾರೆ.

ಅ.ನ.ಕೃ. ಅವರ 'ಕಿಡಿ' ಕಥಾ ಸಂಕಲನಕ್ಕೆ ಮಾಸ್ತಿಯವರು ಮುನ್ನುಡಿ ಬರೆದಿದ್ದಾರೆ. ಆಗ ಕನ್ನಡ ಸಾಹಿತ್ಯದಲ್ಲಿ ಹೊಸ ದಾರಿಯನ್ನು ಹುಡುಕುವುದಕ್ಕೆ ಹೊಸ ಸಂವೇದನೆ ಚಳುವಳಿಯಂತಹ ಅನೇಕ ರೀತಿಯ ವಸ್ತುವನ್ನು ಅನಕೃ ಅವರ ಸಾಹಿತ್ಯ ಹೊಂದಿದೆ. ಇದಕ್ಕೆ ಪಾಶ್ಚಾತ್ಯ ಸಾಹಿತ್ಯ ಸಂಪರ್ಕ ಮುಖ್ಯವಾಗಿ ಕಾರಣವಾಯಿತೆನ್ನುವುದನ್ನು ನಾವು ಮನಗಾಣಬೇಕಾಗಿದೆ. ಮಾಸ್ತಿಯವರು ಕೂಡ ಬಿ.ಎಂ.ಶ್ರೀ.ಯವರ ಹೊಸ ಸಾಹಿತ್ಯದ ಹೆಜ್ಜೆಯನ್ನು ಒಪ್ಪಿಕೊಂಡಿದ್ದರು. ಹಾಗೆಯೇ ಅನಕೃ ಅವರ ಹೊಸ ಸಾಹಿತ್ಯ ತುಡಿತವನ್ನು ಒಪ್ಪಿದ್ದರು. ಹಾಗಾಗಿ ಕಿಡಿ ಕಥಾ ಸಂಕಲನದ ಮುನ್ನುಡಿಯಲ್ಲಿ ಕನ್ನಡ ಸಾಹಿತಿಯ ಉದ್ದೇಶ "ಕನ್ನಡ ಜನದ ಜೀವನಕ್ಕೆ ಮಾತಿನಲ್ಲಿ ರೂಪುಕೊಡುವುದು. ಅದರ ಸಹಾಯದಿಂದ ಆ ಜೀವನದ ರೂಪವನ್ನು ಹೊಸದು ಮಾಡುವುದು"[೩೯] ಎಂದು ಹೇಳುತ್ತಾರೆ. ಹಾಗೆಯೇ "ಸಾಹಿತ್ಯ ಸೇವಕ ಈ ಉದ್ದೇಶದ ಅರಿವಿಲ್ಲದೆಯೇ ತನ್ನ ಭಾಗದ ಕೆಲಸವನ್ನು ಚೆನ್ನಾಗಿ ಮಾಡುವ ಜೇನುಹುಳುವಿನ ಹಾಗೇ ಈ ಕಾರ್ಯ ಸಾಧನೆಯಲ್ಲಿ ನೆರವಾಗುತ್ತಾನೆ. ಇದರಿಂದ ಅವನ ಜನ್ಮ ಸಾರ್ಥಕವಾಗುತ್ತದೆಯಲ್ಲದೆ ಅವನ ಜನರ ಜೀವನವು ಹಸನಾಗುತ್ತದೆ"[೪೦] ಎನ್ನುತ್ತಾರೆ.

ಹೀಗೆ ಪಾಶ್ಚಾತ್ಯ ಸಂಪರ್ಕದಿಂದ ನಮ್ಮ ಸಾಹಿತ್ಯ ಮುಖ್ಯವಾಗಿ ಅದರ ಸಣ್ಣಕತೆ ಮತ್ತು ಇತರೆ ಸಾಹಿತ್ಯ ಪ್ರಕಾರಗಳು ಹೊಮ್ಮಿದರೂ ಇವು ಬರೀ ಅನುಕರಣದ ಫಲವಲ್ಲವೆಂಬುದು ಮಾಸ್ತಿಯವರ

ನಂಬಿಕೆಯಾಗಿತ್ತು. ಆದರೆ ಸ್ಥಳೀಯವಾದ ಚಿಂತನೆ ಜೊತೆಗೆ ಪಾಶ್ಚಾತ್ಯ ನಿಲುವು ಹೊಂದಿದ್ದಾರೆ ಎಂದು ಹೇಳಬಹುದು. ಮಾಸ್ತಿಯವರು ಆನಂದಕಂದರ 'ಮುದ್ದನ ಮಾತು' ಎಂಬ ಕವನ ಸಂಕಲನಕ್ಕೆ "ಈ ಕಾವ್ಯವು ಅನುಕರಣದ ಫಲವಲ್ಲ ಕವಿಯ ಹೃದಯದಿಂದ ಬಂದಿದೆ. ಇದರಲ್ಲಿ ನನಗೇನೂ ಆಶ್ಚರ್ಯ ತೋರುವುದಿಲ್ಲ. ಕನ್ನಡ ನಾಡಿನಲ್ಲಿ ಮಕ್ಕಳಿಲ್ಲವೆ? ಈಚೆಗೆ ನೈಜವಾದ ಕವಿತೆಯನ್ನು ಕಾಣದ ನಮ್ಮ ಪ್ರಾಕೃತದ ದುರವಸ್ಥೆಯಲ್ಲಿ ಕವಿಯೊಬ್ಬನು ಬಂದರೂ ನಮಗೆ ಅವನಲ್ಲಿ ಸಂದೇಹ. ಆದರೆ ನಮ್ಮಲ್ಲಿ ಕೆಲಕಾಲದಿಂದ ನೈಜವಾದ ಕಾವ್ಯವಿಲ್ಲದೆ ಹೋಗಿದ್ದರೂ ಅದರ ವಸ್ತುವಾದ ಅನುಭವಕ್ಕೆ ಶೂನ್ಯತೆ ಬಂದಿಲ್ಲ. ಆ ಅನುಭವ ನಿತ್ಯವಾದದು ಸರ್ವಜನ ಸುಲಭವಾದುದು. ಬೇಡಿದಂದು ಕಾವ್ಯವಾಗಲು ಅದು ಸದಾ ಸಿದ್ಧವಾಗಿರುವುದು"[೪೧] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಕಾವ್ಯದ ಕುರಿತ ಚಿಂತನೆ ಅವರಲ್ಲಿ ಆಶ್ವಾಸನೆ ಅವರ ಮಾತಿನಲ್ಲಿ ಮೂಡಿಬಂದು ನಮಗೆಲ್ಲ ಸ್ಫೂರ್ತಿ ಕೊಡುತ್ತದೆ. ಈ ಸತ್ಯದ ಹೊಳಹುವಿನಲ್ಲಿ ಕಾವ್ಯವಾದಗಲೆಲ್ಲ ಅದನ್ನು ಗುರುತಿಸಿ ಶ್ಲಾಘಿಸಿದವರಲ್ಲಿ ಮಾಸ್ತಿಯವರು ಮುಖ್ಯರಾಗುತ್ತಾರೆ.

ಗೊರೂರರ 'ಹಳ್ಳಿಯ ಚಿತ್ರ' ಕಥಾ ಸಂಕಲನ ಕುರಿತು ಹೀಗೆ ಹೇಳುತ್ತಾರೆ. "ಇವರು ಸುಲಭವಾಗಿ ಮಾಡುವ ವರ್ಣನೆಗಳು ನಾವು ಕನಸಿನಲ್ಲಿ ಕಂಡು ಮೆಚ್ಚಿ ನಿಜವಾದೀತೆ ಎಂದು ಆಶಿಸುವ ಒಂದು ಪ್ರಪಂಚವನ್ನು ನಮ್ಮ ಎಚ್ಚರದ ದೃಷ್ಟಿಯ ಮುಂದೆ ತಂದು ನಿಲ್ಲಿಸುತ್ತವೆ. ಈ ಊರುಗಳು, ಊರುಗಳ ಜನಗಳು, ಈ ಹೊಲಗದ್ದೆ ಪೈರುಗಳು, ಹೊಳೆ ಕೆರೆ, ದೇವಾಲಯಗಳು, ಸರಳ ಸುಂದರವಾದ ನಡೆನುಡಿ ಈ ಬಾಳು ಇವೆಲ್ಲಾ ನಮಗೆ ಹೊಸತಲ್ಲದಿದ್ದರೂ ಹೊಸದಾಗಿ ಕಂಡು ಮನಸ್ಸನ್ನು ಮುಗ್ಧವಾಗಿ ಮಾಡುತ್ತವೆ. ಭಾವನೆಯ ಉನ್ನತ ಸ್ಥಾನಗಳಲ್ಲಿ ಕುಳಿತು ಓದುವವರನ್ನು ಜೊತೆಯಲ್ಲಿ ಕರೆದುಕೊಂಡು ಅವರಿಗೆ ಶೀಲದ ಸೌಂದರ್ಯವನ್ನು ತೋರಿಸುವ ಶಕ್ತಿ ಚೆನ್ನಾಗಿದೆ"[೪೨] ಎಂದು ಹೇಳುತ್ತಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ನಮ್ಮೆಲ್ಲರ ಅಂತರಂಗದಲ್ಲಿ ಹೊಳೆಯುವ ಆಶಯಕ್ಕೆ ಮನೋಭೂಮಿಕೆಯಾಗಿ ಮಾತು ನೀಡಿದ್ದಾರೆ. ಆದರೆ ಪ್ರಸ್ತುತದ ಹಳ್ಳಿಯ ಚಿತ್ರಣ ಬೇರೆಯಾದ ಸ್ವರೂಪ ಹೊಂದಿವೆ. ಅಲ್ಲಿ ವಲಸೆಯಂತಹ ಪ್ರಕರಣಗಳು ನಡೆಯುತ್ತಿವೆ. ಜಾಗತೀಕರಣ ಅಲೆಯಲ್ಲಿ ಹಳ್ಳಿಯ ಬದುಕು ವಾಸ್ತವವಾಗಿ ಎಲ್ಲಾ ಸೌಲಭ್ಯವಾಗಿದ್ದರೂ ನಾವು ಸೌಲಭ್ಯದಿಂದ ವಂಚಿತರಾಗಿದ್ದೇವೆ. ಕಾರಣ ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ರಂಗದಿಂದ ಜನರ ಬದುಕು ಒದ್ದಾಡುವಂತಾಗಿದೆ.

ಗೊರೂರರ 'ಹಳ್ಳಿಯ ಚಿತ್ರ'ದ ಕಥಾ ಸಂಕಲನದ ಮುನ್ನುಡಿಯಲ್ಲಿ ಸಾಹಿತ್ಯದ ಭಾಷೆಯನ್ನು ಕುರಿತು ಮೌಲಿಕವಾದ ನುಡಿಗಳಿವೆ. "ಸಾಹಿತ್ಯದ ಭಾಷೆಯೆಂದರೆ ಬೇರೆ ಯಾವುದೋ ಒಂದು ಭಾಷೆಯೆಂದು ನಮ್ಮಲ್ಲಿ ಅಲ್ಲಲ್ಲಿ ವಾಡಿಕೆಯಾಗಿರುವ ಭಾವನೆ ಅಷ್ಟೇನೂ ಸರಿಯಾದುದಲ್ಲ. ಗ್ರಂಥವೆನ್ನುವುದು ಬಹುಮಟ್ಟಿಗೆ ಬರಹದ ಮೂಲಕ ಮಾಡುವ ಸಂಭಾಷಣೆ. ಜನರ ದಿನದ ಜೀವನವನ್ನು ವರ್ಣಿಸುವುದಕ್ಕೆ ಅವರ ದಿನ ದಿನದ ಭಾಷೆಯೇ ತಕ್ಕದ್ದು. ಇದನ್ನು

ಉಪಯೋಗಿಸಿರುವುದರಿಂದ ಈ ಗ್ರಂಥದಲ್ಲಿ ಈ ಜನರ ಬಾಳಿನ ಸರಳತೆ, ಸ್ವಚ್ಛತೆ, ನೇಮ, ನಗೆ ಎಲ್ಲವೂ ಸುಲಭವಾಗಿ ವ್ಯಕ್ತವಾಗಿದೆ"[೪೩] ಎಂದಿದ್ದಾರೆ.

ಸಾಹಿತ್ಯದಲ್ಲಿ ನೈತಿಕ, ಸಾಮಾಜಿಕ, ರಾಜಕೀಯ, ಆರ್ಥಿಕವಾಗಿ ಅಭಿಪ್ರಾಯದ ಪ್ರದರ್ಶನವಿರಬೇಕೆ, ಬೇಡವೆ ಎಂಬ ನೇರವಾದ ಪ್ರಶ್ನೆಗೂ ಮುನ್ನುಡಿ ಸಾಹಿತ್ಯದಲ್ಲಿ ಮಾಸ್ತಿಯವರ ಉತ್ತರವಿದೆ. ಸ್ತ್ರೀಯರು ಬರೆದಿರುವ 'ರಂಗವಲ್ಲಿ' ಕಥಾಸಂಕಲನದ ಮುನ್ನುಡಿ ಈ ನೈತಿಕ ಪ್ರಶ್ನೆಯ ಬಗ್ಗೆ ಚಿಂತನೆ ನಡೆಸಿದ್ದಾರೆ. "ಇದೇನು? ಸಾಹಿತ್ಯ ಅಭಿಪ್ರಾಯ ಪ್ರದರ್ಶಿಸಿರಿಸಲು ಹೊರಡಬೇಕೆ? ಕಲೆಗಾಗಿ ಕಲೆ, ಸಾಹಿತ್ಯಕ್ಕಾಗಿಯೇ ಸಾಹಿತ್ಯ art for arts sake ಎಂಬ ಉನ್ನತ ಧ್ಯೇಯ ನಮಗೆ ಬೇಡವೇ? ಎಂದು ಕಲೋಪಾಸಕರು ಕೇಳಬಹುದು. ಸ್ತ್ರೀಯ ದೃಷ್ಟಿಯಿಂದ ಯಾವುದು ಅಪೇಕ್ಷಣೀಯ ಎಂದು ಸೂಚಿಸುವುದು ಸಾಹಿತ್ಯದ ಕಾರ್ಯ ಎಂಬ ಮಾತು ಕಲೆಗಾಗಿ ಕಲೆ ಎಂಬುದಕ್ಕೆ ವಿರೋಧಿಯಾಗುವುದಿಲ್ಲ ಎನ್ನುವುದು ಈ ಆಕ್ಷೇಪಕ್ಕೆ ಉತ್ತರ. ಸಾಹಿತ್ಯ ಎನ್ನುವುದು ಅಪ್ಪನ ಹೆಣ ಬಾಗಿಲಲ್ಲಿ ಬಿದ್ದಿದ್ದರೂ ಸಂಬಂಧಿಸಿಯೇ ಇರುತ್ತದೆ. ಯಾವ ಕೃತಿಯೇ ಆಗಲಿ ಉನ್ನತವಾಗಬೇಕಾದರೆ ಕಲೆಯಾಗಬೇಕೆಂದೇ ಹೊರಡಬೇಕು. ಹಾಗೆ ಹೊರತು ಅದು ತನ್ನ ಗುರಿಯನ್ನು ಸಾಧಿಸಿದಾಗ ಉತ್ತಮ ಕಲೆಯಾಗುವುದಲ್ಲದೆ ಲೇಖಕನ ಭಾವವನ್ನು ಅದರ ಬಲವಾದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ರಸವಾಗಬೇಕೆಂದು ಹೊರತು ದ್ರಾಕ್ಷಿ ಆಹಾರವೂ ಆಗುವಂತೆ ಸುಂದರವಾಗಬೇಕೆಂದು ಹೊರಟ ಕಲೆ ಸತ್ಯವನ್ನು ಸಾರುತ್ತದೆ. ಸತ್ಯವಾದ ವಿಷಯವನ್ನು ಸುಂದರವಾಗಿ ಹೇಳಬೇಕೆಂಬುದೇ ಲೇಖಕನ ಧ್ಯೇಯ. ಜನರ ಏಳಿಗೆಗೆ ಸಾಧಕವಾಗುವ ತಿಳುವಳಿಕೆಯನ್ನು ಒದಗಿಸುವುದೆಂದ ಮಾತ್ರಕ್ಕೆ ಯಾವ ಲೇಖನವೂ ಕಲೆ ಎಂಬ ಪಟ್ಟದ ಬಾಸಿಂಗವನ್ನು ಕಳೆದುಕೊಳ್ಳಬೇಕಾದ್ದಿಲ್ಲ"[೪೪] ಎಂದಿದ್ದಾರೆ. ಮಾಸ್ತಿಯವರು ಈ ರೀತಿಯಾದ ಪ್ರಶ್ನೆ ಎತ್ತಿದ್ದರಿಂದ ಸಾಹಿತ್ಯ ನೈತಿಕತೆಯ ಸಿದ್ಧಾಂತ ಮಾದರಿಯ ಬದಲಾವಣೆಗಳು ಬೇಕಾಗಿದೆ. ಸಮಾಜ ಎಲ್ಲವನ್ನು ಒಳಗೊಳ್ಳುತ್ತದೆ. ಆ ಒಳಗೊಳ್ಳುವಿಕೆಯಲ್ಲಿ ನೈತಿಕ ಸಮಾಜವನ್ನು ನಿರ್ಮಿಸಬೇಕಾಗಿದೆ. ಅದು ಸಾಹಿತ್ಯ ವಲಯಕ್ಕೆ ಪ್ರಾಮುಖ್ಯತೆ ಹೊಂದಿದೆ. ಸಾಹಿತ್ಯದಲ್ಲಿ ಎಲ್ಲಾ ಪ್ರಕಾರದ ಚಿಂತನೆಗಳು ಸಮಾಜದ ಏಳಿಗೆಗೆ ಒಮ್ಮತವಾದ ಸಿದ್ಧಾಂತ ರೂಪಿಸಿಕೊಳ್ಳಬೇಕಾಗಿದೆ.

ಕನ್ನಡ ಸಾಹಿತ್ಯವನ್ನು ಹೊಸದಾಗಿ ಬಿತ್ತಿ ಬೆಳೆಸುವುದಕ್ಕೆ ಪಾಶ್ಚಾತ್ಯ ಸಾಹಿತ್ಯ ಸಿದ್ಧಾಂತ ಪ್ರಮುಖವಾಗಿದೆ. ಹಾಗೆಯೇ ನಾಟಕ ಸಾಹಿತ್ಯಕ್ಕೂ ಅದು ಪ್ರೇರಣೆಯಾಗಿದೆ. ಈ ಹಿನ್ನೆಲೆಯಿಂದ ಟಿ.ಪಿ.ಕೈಲಾಸಂ ಅವರ 'ಹುತ್ತದಲ್ಲಿ ಹುತ್ತ' ಎಂಬ ಕೃತಿಯ ಮುನ್ನುಡಿಯಲ್ಲಿ ಮಾಸ್ತಿಯವರು ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ತತ್ವ ಚಿಂತನೆಯನ್ನು ಬೇರೆ ರೀತಿಯಲ್ಲಿ ಹೇಳಿದ್ದಾರೆ. ಭಾರತೀಯ ಕಾವ್ಯ ಮೀಮಾಂಸೆಯಲ್ಲಿ 'ರಸ' ಎಂಬುದು ಪ್ರಾಮುಖ್ಯತೆ ಹೊಂದಿದೆ. ಅದೇ ಪಾಶ್ಚಾತ್ಯ ಸಾಹಿತ್ಯ ಸಮೀಕ್ಷೆ ಅಷ್ಟಾಗಿ ಮೂಡಿಬರದ 'ರಸ'ದ ವಿಷಯದಲ್ಲಿ ಮಾಸ್ತಿಯವರು ಹುರುಳು ನುಡಿಗಳನ್ನು ನುಡಿದಿದ್ದಾರೆ.

"ಶ್ರದ್ಧೆ, ದಾನ, ತಪಸ್ಸು ಇವುಗಳಲ್ಲಿ ಸಾತ್ವಿಕ, ರಾಜಸ, ತಾಮಸ ಇರುವಂತೆ ಶೃಂಗಾರ, ವೀರ, ಕರುಣೆ, ಹಾಸ್ಯಗಳಲ್ಲಿ ರಾಜಸ, ತಾಮಸವುಂಟು. ಶುದ್ಧವಾದ ಆನಂದವನ್ನು ಬಯಸುವ ಲೇಖಕನು

ಶುದ್ಧವಾದ ದೃಷ್ಟಿಯಿಂದ ಜೀವನವನ್ನು ನೋಡಿ ಶುದ್ಧವಾದ ಭಾವನೆಗೆ ರೂಪ ಕೊಟ್ಟಾಗ ನಿರ್ಮಲವಾದ ರಸವನ್ನು ಬಯಸುವ ಶ್ರೇಷ್ಠ ಸಾಹಿತ್ಯ ಆಗುತ್ತದೆ. ರಸ ನಿರ್ಮಲವಾದಷ್ಟು ಅದರ ಪರಿಣಾಮ ತೀವ್ರ ಆಗುತ್ತದೆ. ಪರಿಣಾಮಕಾರಿಯಾದ ಶೃಂಗಾರ, ಶೂರತೆ, ಕರುಣೆ ಇನ್ನೆಲ್ಲಾ ರಸವು ಮನುಷ್ಯನನ್ನು ಒಳಮುಟ್ಟಿದ ಕ್ಷಣದಲ್ಲಿ ನಾನೆಂಬ ತೊಡಕಿನಿಂದ ಬಿಡಿಸುತ್ತದೆ. ಈ ಬಿಡುಗಡೆ ಅವುಗಳ ನೈರ್ಮಲ್ಯಕ್ಕೆ ಆ ವೇಗಕ್ಕೆ ಮತ್ತು ಅವುಗಳ ಸ್ವಭಾವಕ್ಕೆ ಸಿಕ್ಕಿದ ಜೀವನ ಸಹೃದಯತೆಗೆ ಅನುಸಾರವಾಗಿರುತ್ತದೆ. ನಾನು ಎನ್ನುವುದು ಮಣಿಗಂಟಾಗಿರುವ ಮನುಷ್ಯನಿಗೆ ಈ ಬಿಡುಗಡೆ ಸುಲಭವಾಗಿ ದೊರೆಯುವುದಿಲ್ಲ. ಅಂತವನಿಗಾದರೂ ಹತ್ತಾರು ಸಲ ರಸ ತೀವ್ರವಾಗಿ ತಾಕಿದರೆ ಸಂಯೋಜನೆ ಇರಬಹುದು. ಕೈಲಾಸಂ ಅವರ ನಗೆ ಹೀಗೆ ನಿರ್ಮಲವಾದದ್ದು. ಮೇಲೆ ಮೇಲೆ ಮನವನ್ನು ಮುಟ್ಟಿ ಬಿಡುಗಡೆ ತರತಕ್ಕದ್ದು"[೪೫] ಎಂದು ಹೇಳುತ್ತಾರೆ. ಮಾಸ್ತಿಯವರು 'ರಸ'ದ ವಿಷಯ ಕುರಿತು ಕೈಲಾಸಂ ಸಾಹಿತ್ಯದ ಜೊತೆಗೆ ಕಾವ್ಯಮೀಮಾಂಸೆಯ ರಸದ ಬಗ್ಗೆ ಚರ್ಚೆ ಮಾಡಿದ್ದಾರೆ. ಇವು ಬಹು ಸ್ವಾರಸ್ಯವಾದ ಮಾತುಗಳಾಗಿವೆ. ಒಂದು ವಿಷಯವನ್ನು ಕುರಿತು ಸ್ವತಂತ್ರವಾಗಿಯೂ, ತೀವ್ರವಾಗಿಯೂ ಆಲೋಚಿಸುವ ಶಕ್ತಿ ಇಂತವರ ಕಡೆ ಮಾತ್ರ ಹೊಳೆಯಬಲ್ಲಂತವು ಎಂದು ಹೇಳಬಹುದು.

ಮಾಸ್ತಿಯವರು ಬಿ.ಎಂ.ಶ್ರೀ.ಯವರ 'ಹೊಂಗನಸುಗಳು' ಕವನ ಸಂಕಲನಕ್ಕೆ ಮುನ್ನುಡಿ ಬರೆದಿದ್ದಾರೆ. ಇದರಲ್ಲಿ "ಕನ್ನಡಕ್ಕೆ ಕೆಲಸ ಮಾಡಬೇಕು. ಆದರೆ ಅದು ಕಡಿಮೆ ಜಾತಿಯ ಜನರ ಕೆಲಸ ಎಂಬ ಹೀನಾಯಕ್ಕೆ ಗುರಿಯಾಗಬಾರದು. ಈ ಆಕಾಂಕ್ಷೆಯಿಂದ ಶ್ರೀಕಂಠಯ್ಯನವರು ಆಗ ನಡೆಸಬೇಕಾಗಿ ಬಂದ ಕ್ಷೌರಾಭಾರಾ ವ್ರತದ ಕಷ್ಟ ಅವರಿಗೆ ಗೊತ್ತು. ಹದಿನೈದು ವರ್ಷ ಒಂದೇ ಸಮನಾಗಿ ದಕ್ಷತೆಯಿಂದ ಇಂಗ್ಲಿಷ್ ಪಾಠವನ್ನು ಕಲಿಸಿದ ಮೇಲೆ ಇವರು ಕನ್ನಡ ಕವಿ ಎಂಬ ಕಾರಣದಿಂದ ಸ್ಥಾನ ಚ್ಯುತಿಯಾದೀತು ಎಂಬ ಭಯವಿಲ್ಲದಂತೆ ನಡೆಯುವ ಕಾಲ ಬಂದಿತು. ಏನು? ಇವರು ತಮ್ಮಷ್ಟಕ್ಕೆ ಆ ಸ್ಥಿತಿಯನ್ನು ಸಂಪಾದಿಸಿದರು. ಮಧ್ಯೆ ಹೆಜ್ಜೆ ತಪ್ಪಿದರೆ ಕೈ ಹಿಡಿಯುವ ಜನ ಒಬ್ಬರಿರಲಿಲ್ಲ. ಹೀಗೆ ಏಕಾಂಗಿಯಾಗಿ ತಮ್ಮ ಆತ್ಮಸಾಕ್ಷಿಯ ಹೊರತು ಬೇರೊಬ್ಬರ ಪ್ರೋತ್ಸಾಹವೇ ಇಲ್ಲವೋ ಎಂಬಂತ ನಿಸ್ಸಹೃದಯ ಕ್ಷೇತ್ರದಲ್ಲಿ ದುಡಿದು ಶ್ರೀಕಂಠಯ್ಯನವರು ಹೊಸಗನ್ನಡ ಸಾಹಿತ್ಯಕ್ಕೆ ಒಬ್ಬ ನಾಯಕರು ಬೇಕಾಗುವ ಹೊತ್ತಿಗೆ ಸಿದ್ಧರಾಗಿ ಮುಂದೆ ಬಂದರು"[೪೬] ಎಂದು ಮಾಸ್ತಿಯವರು ಹೇಳುತ್ತಾರೆ. ಇಂಗ್ಲಿಷ್ ಗೀತಗಳು ಅನುವಾದವಾಗುವ ಮೊದಲು ಬಿ.ಎಂ.ಶ್ರೀ.ಯವರಿಗೆ ಅವರ ಸಾಹಿತ್ಯದ ಸಮಕಾಲೀನರಲ್ಲಿ ಜಿಜ್ಞಾಸೆ ಕಾಡಿರಬಹುದು. ಏಕೆಂದರೆ ಹೊಸ ಸಾಹಿತ್ಯ ತುಡಿತದಲ್ಲಿ ಬಿ.ಎಂ.ಶ್ರೀ.ಯವರ ಸಾಧನೆಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಮಾಸ್ತಿಯವರು ದೇವುಡು ನರಸಿಂಹಶಾಸ್ತ್ರಿಯವರ 'ವಿಚಾರಣೆ' ಕೃತಿಗೆ ಮುನ್ನುಡಿ ಬರೆದಿದ್ದಾರೆ. ಇದು ಅನುವಾದ ಗ್ರಂಥವಾಗಿದ್ದು, ಪ್ರಸ್ತುತವಾಗಿ ಧರ್ಮ, ಜಾತಿ, ಸಮುದಾಯ ಶ್ರೇಷ್ಠತೆಗಾಗಿ ಶತ ಶತಮಾನದಿಂದ ಹೋರಾಟ ಮಾಡುತ್ತ ಬಂದಿವೆ. ಇಂತ ವಿಷಯಗಳನ್ನು ಮಾಸ್ತಿಯವರು

ಮುನ್ನುಡಿಯಲ್ಲಿ ವಿಚಾರಣೆ ಮಾಡಿದ್ದಾರೆ. "ಇತರ ಮತ ಹೇಳುವುದೇನು ಎಂದು ನಮಗೆ ಬೇಕಿಲ್ಲ. ಆದರೆ ನಮ್ಮ ಮತ ದೊಡ್ಡದಿರಬೇಕು ಎಂದು ನಮ್ಮ ಭಾವನೆ. ಅದರಲ್ಲಿ ನಾವು ಹುಟ್ಟಿದ್ದರಿಂದ ಅದು ದೊಡ್ಡದು ಎಂಬುದೇ ಪ್ರಾಯಶಃ ನಮ್ಮ ಆಂತರ್ಯದ ನಂಬಿಕೆ ಎಂಬಂತೆ ಕಾಣುತ್ತದೆ. ಹೀಗೆ ನಾವಲ್ಲಿ ನಮ್ಮ ನಮ್ಮ ಮತಗಳಿಗೆ ನಮ್ಮ ಅಭಿಮಾನದ ಗೊಂಗಡಿಗಳನ್ನು ಹಾಕಿ ಸತ್ಯದ ದೇವರಿಗೆ ಕತ್ತಲದಣತೆಯನ್ನು ಹಚ್ಚಿಟ್ಟು ಪೂಜೆ ಮಾಡುತ್ತೇವೆ"[೪೭] ಎಂದು ಹೇಳುತ್ತಾರೆ. ನಾವು ಮತಕ್ಕಾಗಿ, ದೇವರಿಗಾಗಿ ಕಂಡ ಕಂಡಲ್ಲಿ ನಮ್ಮ ದೇವರು ಎಂದು ಭಾವಿಸಿ, ನಮ್ಮ ದೇವರುಗಳು ದೊಡ್ಡ ಮಟ್ಟದಲ್ಲಿವೆ ಎಂದು ಹೇಳುತ್ತೇವೆ. ಆದರೆ ಬೇರೆ ಸಮುದಾಯಗಳಿಗೆ ಬೇರೆ ಜನರಿಗೆ ಗುಮ್ಮನಾಗಿ ಕಾಣಬಹುದು. ಮಾಸ್ತಿಯವರು ಹೇಳುವಂತೆ "ವಿಶ್ವ ಧರ್ಮವಾಗಬೇಕೆಂದು ಹೊರಟ ಸನಾತನ ಧರ್ಮಲತೆ ಮಧ್ಯೆ ಎಲ್ಲೋ ಮುರುಟುಕೊಂಡಿತು ನಿಜ. ಈಗ ಅದು ಇದೇ ಮತಗಳ ಮಾತು ಹಾಗಿರಲಿ, ತನ್ನೊಳಗೆ ತಾನೇ ಜಗಳವನ್ನು ಮಾಡಿಕೊಂಡಿದೆ"[೪೮] ಎಂದು ವ್ಯಕ್ತಪಡಿಸುತ್ತಾರೆ. ಮಾಸ್ತಿಯವರು ಸತ್ಯವನ್ನು ಮಾತನಾಡಿದ್ದಾರೆ. ನಾವುಗಳು ಯಾವುದೋ ಸನಾತನ ಧರ್ಮ ಭಾವಿಸಿದ್ದೇವೆಯೋ ಅಲ್ಲಿ ಯಾವ ಸನಾತನ ಧರ್ಮ ಯಾವುದು? ಯಾರ ಸನಾತನ ಧರ್ಮ ಎಂದು ಪ್ರಶ್ನೆ ಹಾಕಿಕೊಂಡಿದ್ದೇವೆ. ಹಾಗಾದರೆ ಸನಾತನ ಧರ್ಮದಲ್ಲಿ ಯಾವ ಯಾವ ಸಮುದಾಯಗಳು ಕಂಡುಬಂದಿವೆ. ಅವು ಲೆಕ್ಕವಿಲ್ಲದಷ್ಟು ಕಂಡುಬರುತ್ತವೆ. ನಮ್ಮೊಳಗಿನ ಸನಾತನವನ್ನು ಹೋಗಲಾಡಿಸಬೇಕಾಗಿದೆ. "ಇದು ಸನಾತನ ಧರ್ಮಕ್ಕೆ ಈಚೆಗೆ ಬಂದ ಒಂದು ಅವಸ್ಥೆ ಮಾತ್ರ ಅದು ಸದಾ ಕಾಲವು ಇರಲಾರದು"[೪೯] ಎಂದು ಮಾಸ್ತಿಯವರು ಹೇಳುತ್ತಾರೆ. ಆದರೆ ಸನಾತನ ಧರ್ಮ ಆಶಾಭಾವನೆಯಾಗಿರಬಹುದು. ಕೆಲವರು ತಮ್ಮ ಸನಾತನ ಧರ್ಮ ಶ್ರೇಷ್ಠ ಎಂದು ಹೇಳುವವರಿದ್ದಾರೆ. "ನಮ್ಮ ಧರ್ಮವನ್ನು ನಾವು ಹೇಗೆ ಸಣ್ಣದು ಮಾಡಿದರೂ ಅದು ಹಿಮಾಲಯದಂತೆ ಶುಭ್ರವಾಗಿ ಅಚಲವಾಗಿ ನಿಂತಿದೆ"[೫೦] ಎಂದು ವ್ಯಕ್ತಪಡಿಸುತ್ತಾರೆ. ಆದರೆ ಹಿಮಾಲಯದಷ್ಟು ಶುಭ್ರವಾಗಿ ನಿಂತಿರಬಹುದು. ಆದರೆ ಹಿನ್ನೆಲೆಯಲ್ಲಿ ಮಳೆ ಬಂದರೆ ಶುಭ್ರದ ಜೊತೆಗೆ ಅಲ್ಲಿ ಜನರ ಜೀವನ ಅಸ್ತವ್ಯಸ್ತಗೊಳ್ಳುವುದು ಮರೆಯಬಾರದು. ಆದರೆ ಹಿಮಾಲಯದಂತೆ ಶುಭ್ರವಾಗಿ ನಿಂತಿದೆ ಎನ್ನುವುದಕ್ಕೆ ರೂಪಕ ಅಷ್ಟೇ. ಅದರ ಜೊತೆಗೆ ಬುದ್ಧಧರ್ಮ ಬೇರೆಯಲ್ಲ. ಕ್ರಿಸ್ತಧರ್ಮವೂ ಬೇರೆಯಲ್ಲ. ಮಹಮ್ಮದನ ಧರ್ಮ ಬೇರೆಯಲ್ಲ. ಆದರೆ ಬೌದ್ಧಿಕವಾಗಿ ಬುದ್ಧಿ ಬಂದಾಗ ನಾವು ಅವರ ಧರ್ಮದ ಭಾವನೆಗಳನ್ನು ಅನುಷ್ಠಾನ ಮಾಡುತ್ತೇವೆ. ಆಗ ಎಲ್ಲ ಬುದ್ಧ, ಕ್ರಿಸ್ತ, ಇಸ್ಲಾಂ ಈ ಧರ್ಮಗಳಲ್ಲಿ ಆಚಾರ, ವಾತ್ಸಲ್ಯ, ವೈಶಾಲ್ಯತೆ, ಪ್ರೀತಿ, ವಿಶ್ವಾಸ, ನಂಬಿಕೆ ಅರ್ಹತೆಗಳನ್ನು ಸೇರಿಸಿಕೊಳ್ಳುತ್ತೇವೆ. ಆಗ ಸನಾತನ ಧರ್ಮವು ನಾವು ಉದ್ದೇಶಿಸಿದಂತೆ ವಿಶ್ವಧರ್ಮವಾಗುತ್ತದೆ. ಆಗ ಯಾವ ಧರ್ಮವಾದರೂ ಹಿಂದುಗಳು, ಕ್ರಿಸ್ತರು, ಮಹಮ್ಮದೀಯರು, ಬೌದ್ಧರು, ಇತರ ಎಲ್ಲ ಮತಗಳ ಜನರು ತಮ್ಮ ತಮ್ಮ ಮತವನ್ನು ಕಾಣುವರು. ಆಗ ಲೋಕದ ಎಲ್ಲಾ ಸಜ್ಜನರ ಕನಸು ನಿಜವಾಗುವುದು. ಈ ಎಲ್ಲಾ ಧರ್ಮಗಳಲ್ಲಿ ಹೂಗಳಂತೆ ಎಲ್ಲರೂ ಇಂದು ಒಂದು ಚೊಂಬು ನೀರು ಬಿಡುವ ಕೆಲಸ ಮಾಡಬೇಕು ಎಂದು ಅನಿಸಿದೆ. ಹಾಗಾಗಿ ಮಾಸ್ತಿಯವರು ಸಾಹಿತ್ಯ

ಕಲೆಯಿಂದ ಧರ್ಮಗಳನ್ನು ಕುರಿತು ಮೌಲಿಕವಾದ ವಿಷಯದ ಜೊತೆಗೆ ವ್ಯಕ್ತಪಡಿಸಿದ್ದಾರೆ ಎಂಬುದನ್ನು ಬಹು ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದೆ. ಮಾಸ್ತಿಯವರು ಹೇಳುವಂತೆ "ಒಂದು ನಾಡಿನ ಮಕ್ಕಳು ಒಬ್ಬರನ್ನು ಕುರಿತು ಒಬ್ಬರು ಛಲದ ಮಾತನಾಡುವುದು ಸಲ್ಲದು. ಸ್ಪರ್ಧೆ ಇರಲಿ, ಆದರೆ ಸೇವೆ ಮಾಡುವುದರಲ್ಲಿರಲಿ ಮರ್ಯಾದೆಗಾಗಿ ಕಾಡುವುದರಲ್ಲಿ ಬೇಡ, ಸಹೋದರರಲ್ಲಿ ವಿವಾದ ಸಲ್ಲದು. ವಿವಾದ ಒಂದಕ್ಕೇ ಆದರೆ ಅಲ್ಲಿ ಸೋಲಲ್ಲಿ ಗೆಲುವಿದೆ. ಇದೇ ಬದುಕುವ ದಾರಿ"[೫೧] ಎಂದಿದ್ದಾರೆ.

ಮಾಸ್ತಿಯವರು ಅನೇಕರಿಗೆ ಮುನ್ನುಡಿ ಬರೆದಿದ್ದಾರೆ. ಮುನ್ನುಡಿಯಲ್ಲಿ ಕೃತಿಯ ತಾತ್ವಿಕ ಚಿಂತನೆಯನ್ನು ಮಾಡಿದ್ದಾರೆ. ಸಾಹಿತ್ಯದಲ್ಲಿ ಎಷ್ಟೋ ಕವಿಗಳು, ವಿಮರ್ಶಕರು, ಚಿಂತಕರ ಕೃತಿಗಳು ಮುನ್ನುಡಿ ಸಾಹಿತ್ಯ ಹೊಂದಿವೆ. ಆದರೆ ಮಾಸ್ತಿಯವರ ಮುನ್ನುಡಿಗಳು ವಿಶೇಷವಾಗಿವೆ. ಯಾವುದೇ ಕೃತಿಯ ಮುನ್ನುಡಿ ಲೇಖಕನು ರಚಿಸಿದ ಕೃತಿಯಲ್ಲಿನ ಗುಣವನ್ನು ತೆರೆದು ತೋರಿಸುವುದು. ಈ ವಿಷಯದಲ್ಲಿ ವಿಮರ್ಶಕರಾಗಿ ಮಾಸ್ತಿಯವರು ಹಿರಿತನದ ಹೆಜ್ಜೆ ಇಟ್ಟಿದ್ದಾರೆ.

### ೫.೪. ಅ.ನ.ಕೃಷ್ಣರಾಯ

ಅ.ನ.ಕೃ. ಅವರು ಕನ್ನಡ ಪ್ರಗತಿಶೀಲ ಸಾಹಿತ್ಯದಲ್ಲಿ ಪ್ರಮುಖರಾಗಿ ಗುರುತಿಸಿಕೊಂಡವರು. ಅ.ನ.ಕೃ. ಅವರು ಸಾಮಾಜಿಕ ಚಿಂತನೆಯಲ್ಲಿ ಹಲವು ಆಯಾಮಗಳ ಮೂಲಕ ಹೊಸ ಹೊಸ ವಸ್ತುವಿಷಯದ ಕುರಿತು ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ. ಅವರು ನವೋದಯದ ಚಿಂತನೆಗೆ ಒಳಗಾಗದೆ, ಪಾಶ್ಚಾತ್ಯದ ಸಿದ್ಧಾಂತದ ಮಾದರಿಗಳ ಮೂಲಕ ಸ್ಥಳೀಯ ಸಂವೇದನೆಯನ್ನು ರೂಢಿಸಿಕೊಂಡು ಸ್ಥಳೀಯ ರಾಜಕೀಯ ಮಾಡುವ, ಅನಾಚಾರ, ಸಮಾಜದ ಪಿಡುಗುಗಳನ್ನು ಕಾದಂಬರಿಗಳ ಮೂಲಕ ಹೊರತಂದರು. ತಮ್ಮ ಸಮಕಾಲೀನ ವಿರೋಧವನ್ನು ಎದುರಿಸಿದವರು. ಅನಕೃ ಅವರು ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು ಕಾದಂಬರಿಗಳು ಬರೆದು ವೇಶ್ಯಾವೃತ್ತಿಯ ವಿವಿಧ ಮುಖಗಳನ್ನು ತೋರಿದವರು. 'ನಗ್ನಸತ್ಯ' ಕಾದಂಬರಿಯಲ್ಲಿ ಆರ್ಥಿಕ ಸಮಸ್ಯೆ, ರಾಜಕೀಯ ಅನಾಚಾರಗಳು, ಸಾಮಾಜಿಕ ಸಮಸ್ಯೆಗಳ ಪರಿಣಾಮಗಳನ್ನು ಎತ್ತಿತೋರಿಸಿದ್ದಾರೆ. ಅನಕೃ ಅವರು ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು ಕಾದಂಬರಿಗಳು ಪ್ರಕಟಗೊಂಡಾಗ "ಕೆಲವು ಕನ್ನಡ ಪತ್ರಿಕೆಗಳು ಮುಖ್ಯವಾಗಿ(ಪ್ರಜಾವಾಣಿ, ಚಿತ್ರಗುಪ್ತ, ಕರ್ಮವೀರ) ನಗ್ನಸತ್ಯ, ಶನಿಸಂತಾನ ಕಾದಂಬರಿಗಳ ಮೇಲೆ ಕಟುಟೀಕೆಯ ಸುರಿಮಳೆಯನ್ನು ಅವುಗಳ ಲೇಖಕನಾದ ನನ್ನ ಮೇಲೆ ಅಪಪ್ರಚಾರದ ಶರವರ್ಷವನ್ನು ಕರೆದವು. ಈ ವಿಮರ್ಶೆ, ಟೀಕೆಗಳಿಗೆ 'ಸಂಜೆಗತ್ತಲು' ಹಿನ್ನುಡಿಯಲ್ಲಿ ಉತ್ತರ ಕೊಡಬೇಕೆಂದಿದ್ದೆ. ನಾನು ಸಾಹಿತ್ಯ ಮತ್ತು ಕಾಮಪ್ರಚೋದನೆ(೧೯೫೨) ಎಂಬ ಗ್ರಂಥವನ್ನು ಬರೆದು ಪ್ರಕಟಿಸಬೇಕಾಯಿತು"[೫೨] ಎಂದು ಅನಕೃ ಅವರು ಸಂಜೆಗತ್ತಲು ಮುನ್ನುಡಿಯಲ್ಲಿ ಹೇಳುತ್ತಾರೆ. ಅ.ನ.ಕೃ. ಅವರು ಸಮಾಜದ ವಿಕೃತವಾದ ವಾಸ್ತವವನ್ನು ವೇಶ್ಯಾವೃತ್ತಿಯೆಂಬ ರೂಪಕದ ಮೂಲಕ ದೇಶದ ವ್ಯವಸ್ಥೆಯ ವಿರುದ್ಧ ಕಾದಂಬರಿಗಳಲ್ಲಿ ಹೊರಹಾಕಿರುವರು. ಆದರೆ ಅ.ನ.ಕೃ. ಅವರ ಮೇಲೆ

ಸಮಕಾಲೀನರಲ್ಲಿ ಅಸೂಯೆ ಇದ್ದಿರಬಹುದು. ಏಕೆಂದರೆ ಅಂದು ಗಾಂಧೀಜಿ ಚಳುವಳಿಗಳು ನಡೆಯುತ್ತವೆ. ಆ ಚಳುವಳಿಗೆ ರೂಪ ಕೊಡಬೇಕಾಗಿದೆ. ಕೆಲವರು ಬ್ರಿಟಿಷರ ಪರವಾದವರ ವಿರುದ್ಧ ವೇಶ್ಯಾಸಮಸ್ಯೆಯಂತ ಪ್ರಸಂಗವನ್ನು ಅ.ನ.ಕೃ. ಅವರು ಕಾದಂಬರಿಯಲ್ಲಿ ಮೂಡಿಸಿದ್ದಾರೆ. ದೇಶವನ್ನು ಇಬ್ಭಾಗ ಮಾಡುವಾಗ ದೇಶವೇ ಬೆತ್ತಲೆಯಾಗಿದೆ. ಪ್ರಸ್ತುತ ನಗ್ನಸತ್ಯದಂತಹ ಕಾದಂಬರಿಯಲ್ಲಿ ದೇಶವನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಪ್ರಗತಿಶೀಲರಲ್ಲಿ, ಅ.ನ.ಕೃ. ಅವರು ನವೋದಯದವರ ಸಾಹಿತ್ಯಕ್ಕಿಂತ ಭಿನ್ನವಾಗಿ ಬರೆದವರು. ಹಾಗಾಗಿ ಕಟುವಿಮರ್ಶೆ, ಟೀಕೆ ಎದುರಿಸಿರುವರು. ಪತ್ರಿಕೆಗಳಲ್ಲಿ ಅಪಪ್ರಚಾರ ಗುಲ್ಲೆಬ್ಬಿಸಿದವರು ಪಿಸುಮಾತಿನ ಅಪಪ್ರಚಾರ ಮಾಡಲಾಯಿತು ಎಂದು ಹೇಳಲಾಗುತ್ತದೆ. ಅ.ನ.ಕೃ. ಅವರು ಕುರಿತಂತೆ ನಗ್ನಸತ್ಯ, ಶನಿಸಂತಾನ ಕಾದಂಬರಿಗಳು ಅಶ್ಲೀಲವೆಂದು ಪರಿಗಣಿಸಲ್ಪಟ್ಟು ಸರಕಾರದಿಂದ ಮುಟ್ಟುಗೋಲು ಹಾಕಿಸಿಕೊಂಡಿವೆ. ಸಂಜೆಗತ್ತಲು ಬರೆಯಕೂಡದೆಂದು ಅ.ನ.ಕೃ. ಅವರಿಗೆ ಎಚ್ಚರ ಕೊಡಲಾಗಿದೆ. ಸಂಜೆಗತ್ತಲು ಪ್ರಕಟವಾಗುವುದಿಲ್ಲ. "ಅ.ನ.ಕೃ. ಕಮ್ಯುನಿಸ್ಟ್ ಪಕ್ಷದ ಹಾಗೂ ರಷ್ಯಾದ ವಿರೋಧಿಗಳಾಗಿದ್ದಾರೆ. ಅವರು ಅಮೆರಿಕನ್ ಪಕ್ಷ ವಹಿಸಿದ್ದಾರೆ. ವೇಶ್ಯಾ ಸಮಸ್ಯೆ ಅಲ್ಪಸಂಖ್ಯಾತರಿಗೆ ಸಂಬಂಧಪಟ್ಟ ಪ್ರಶ್ನೆ. ಭಾರತದಲ್ಲಿ ಅನೇಕ ಸಮಸ್ಯೆಗಳಿರುವಾಗ ಈ ಸಣ್ಣ ಸಮಸ್ಯೆಗೆ ಇಷ್ಟೊಂದು ಮಹತ್ವ ಕೊಡುವುದೇಕೆ?"[೫೩] ಎಂದು ಪತ್ರಿಕೆಗಳಲ್ಲಿ ವರದಿಯಾಗಿರುವ ಅ.ನ.ಕೃ. ಅವರ ವಿರುದ್ಧ ಇದ್ದ ಮುಖ್ಯ ಸಂಗತಿಗಳು.

ಆಗ ಅ.ನ.ಕೃ. ಅವರು ಈ ಸಮಸ್ಯೆಗಳಿಗೆ ಪ್ರತ್ಯುತ್ತರವಾಗಿ ಟಾಂಗ್ ಕೊಡುತ್ತಾರೆ. "ನಗ್ನಸತ್ಯ, ಶನಿಸಂತಾನ ಕಾದಂಬರಿಗಳನ್ನು ಅಶ್ಲೀಲವೆಂದೂ, ಕಾಮ ಪ್ರಚೋದಕವೆಂದೂ ಪರಿಗಣಿಸುವವರ ವಿಚಾರ ವೈಖರಿ ಹಾಸ್ಯಾಸ್ಪದವಾಗಿದೆ. ಅನೀತಿ ಜೀವನದ ಪರಿಣಾಮವನ್ನು ಇಷ್ಟು ಉಗ್ರವಾಗಿ ಚಿತ್ರಿಸಿ ಜನತೆಯ ಲಕ್ಷ್ಯವನ್ನು ಸಮ್ಯಕ್ ಬೋಧ, ಸಮ್ಯಕ್ ಚಾರಿತ್ರ್ಯ, ಸಮ್ಯಕ್ ಜ್ಞಾನದ ಕಡೆಗೆ ಸೆಳೆದಿರುವ ನೀತಿ ಪ್ರಕಾರದ ಪ್ರಬಲ ಸಾಧನಗಳೆಂದು ತಾನು ಧೈರ್ಯವಾಗಿ ಹೇಳಬಲ್ಲೆ. ಸರಕಾರ ಈ ಕಾದಂಬರಿಗಳನ್ನು ಮುಟ್ಟುಗೋಲು ಹಾಕಿಕೊಂಡಲ್ಲಿ ಸಂಜೆಗತ್ತಲು ಬರೆಯಕೂಡದೆಂದು ಎಚ್ಚರಿಕೆ ಕೊಟ್ಟರು ಎನ್ನುವುದಕ್ಕೆ ಸಂಜೆಗತ್ತಲು ಪ್ರಕಟವಾಗಿರುವುದೇ ಸಾಕ್ಷಿ. ಭಾರತದ ಮೇಲೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಪ್ರಭಾವ ಬೀರುತ್ತಿರುವ ಅಮೆರಿಕನ್ ರಾಜಕಾರಣವನ್ನು ನಾನು ನನ್ನ ಕಮ್ಯುನಿಸ್ಟ್ ಮಿತ್ರರಿಗಿಂತಲೂ ಹೆಚ್ಚು ಉಗ್ರವಾಗಿ ಖಂಡಿಸಿದ್ದೇನೆ"[೫೪] ಎಂದಿರುವರು. ಈ ಸಂಜೆಗತ್ತಲು ಕಾದಂಬರಿಯ ಮುನ್ನುಡಿಯಲ್ಲಿ ಭಾರತದ ಪ್ರಜೆಗಳ ಮೇಲೆ ಪರೋಕ್ಷ ದಾಳಿ ಮಾಡುವ ಅಂದರೆ ಜಾಗತೀಕರಣ, ಖಾಸಗೀಕರಣ ಆಶ್ವಾಸನೆಯನ್ನಿರಿಸಿದ ಸಂಗತಿಗಳನ್ನು ಕಾದಂಬರಿಗಳಲ್ಲಿ ಖಂಡಿಸಿದ್ದಾರೆ. ಅ.ನ.ಕೃ. ಅವರು ಹೇಳುವಂತೆ "ಆಧುನಿಕ ಶಿಷ್ಟ ಸಾಹಿತ್ಯ ಯಾವ ಮಟ್ಟಕ್ಕಿಳಿದಿದೆಯೆಂದು ನೋಡಿಸಿದ್ದೇನೆ. ಲೆನಿನ್, ಸ್ಟಾಲಿನ್, ರಷ್ಯಾಗಳ ಆರಾಧಕರಾಗಿ ಭಾರತಕ್ಕೆ ಹಲವು ಬಗೆಯಲ್ಲಿ ದ್ರೋಹ ಬಗೆಯುತ್ತಿರುವ ಕಮ್ಯುನಿಷ್ಟರನ್ನು ನಿರ್ದಾಕ್ಷಿಣ್ಯವಾಗಿ ನನ್ನ ಲೇಖನಗಳಲ್ಲಿ, ಭಾಷಣಗಳಲ್ಲಿ ಖಂಡಿಸಿದ್ದೇನೆ"[೫೫] ಎಂದಿರುವರು. ಅಮೆರಿಕ, ರಷ್ಯಾ ನಿಲುವಿಗೆ ಭಾರತ ತನ್ನ ಕುತ್ತಿಗೆಯನ್ನು ತಾನೇ ಹಿಸುಕಿಕೊಳ್ಳುತ್ತಿದೆ. ಅ.ನ.ಕೃ ಅವರ ಮಾತಾಗಿರಬಹುದು. ಪ್ರಸ್ತುತವಾಗಿಯಾದರೂ ಭಾರತ ಸರಕಾರ ಜಾಗತಿಕ ಮಟ್ಟದಲ್ಲಿ

ಗುರುತಿಸಿಕೊಳ್ಳಲು ಪ್ರಬಲ ರಾಷ್ಟ್ರಗಳ ಕಾಲ ಕೆಳಗೆ ಅಡಿಯಾಳು ಎನ್ನುವ ರೀತಿಯಲ್ಲಿ ವರ್ತಿಸುತ್ತಿವೆ. ಭಾರತವೊಂದೇ ಅಲ್ಲ ಬೇರೆ ಬೇರೆ ದೇಶಗಳ ದುಸ್ಥಿತಿಯೂ ಆಗಿದೆ. ಅ.ನ.ಕೃ. ಅವರು ಈ ರೀತಿಯ ವ್ಯವಸ್ಥೆಯನ್ನು ಒಪ್ಪುತ್ತಿರಲಿಲ್ಲ. ಭಾರತದ ಬಗ್ಗೆ ಚಿಂತನೆಯಾಗಬೇಕಾಗಿರುವುದು. "ಭಾರತಕ್ಕೆ ಬೇಕಾದುದು ಸಾಮ್ಯವಾದದ ತಳಹದಿಯ ಮೇಲೆ ಕಟ್ಟಲ್ಪಟ್ಟಿರುವ ರಾಜ್ಯ ಘಟನೆ, ಈ ದೇಶದ ಪ್ರಜೆಯಾದ ಪ್ರತಿಯೊಂದು ವ್ಯಕ್ತಿಗೂ ಅನ್ನ, ವಸತಿ, ವಿಹಾರ, ಶಿಕ್ಷಣ ಸೌಕರ್ಯವಿರಬೇಕು. ಆದರೆ ಸಂತುಷ್ಟ ಭಾರತ ನಿರ್ಮಾಣಕ್ಕೆ ನಾವು ಚೀನಾದಷ್ಟು, ಅಮೆರಿಕಾ ದೇಶಗಳ ಮೊರೆಹೊಕ್ಕು ಅವರ ಎಂಜಲುಗೂಳಿಗೆ ಕೈ ನೀಡಿದರೆ ನಮ್ಮ ಸ್ವಾತಂತ್ರ್ಯವನ್ನು ನೀಗಿಕೊಂಡು ಮತ್ತೆ ಪರಕೀಯರ ಪದತಲದಲ್ಲಿ ಕೊಳೆಯಬೇಕಾಗುತ್ತದೆ. ಅಮೆರಿಕದ ಹಿಮ್ಮಡಿಯಲ್ಲಿ ಭಾರತವನ್ನು ಕೆಡವಬೇಕೆಂದು ಭಾರತದ ಬಂಡವಾಳಿಗರು ಪ್ರಯತ್ನಿಸುತ್ತಿರುವಂತೆ ರಷ್ಯಾದ ಹಿಮ್ಮಡಿಯ ಕೆಳಗೆ ಭಾರತವನ್ನು ಹಾಕಬೇಕೆಂದು ಭಾರತದ ಕಮ್ಯುನಿಷ್ಟರು ಪ್ರಯತ್ನಿಸುತ್ತಿದ್ದಾರೆ. ಕಳೆದ ಮಹಾಯುದ್ಧದಲ್ಲಿ ಫ್ರಾನ್ಸ್ ದೇಶದಲ್ಲಿ ವೇಗಾತೀತವಾಗಿ ಯಾವ ಪಾತ್ರ ವಹಿಸಿದರೋ ಅದೇ ಪಾತ್ರ ಭಾರತದಲ್ಲಿ ವಹಿಸಲು ನಮ್ಮ ಕಮ್ಯುನಿಷ್ಟರು ಪ್ರಯತ್ನಿಸುತ್ತಿದ್ದಾರೆ. ಈ ಎರಡು ದುಷ್ಟಶಕ್ತಿಯನ್ನು ಎದುರಿಸಬೇಕಾದುದು ಭಾರತದ ಸತ್ಪ್ರಜೆಯ ಪವಿತ್ರ ಕರ್ತವ್ಯ"[೫೭] ಎಂದು ತಿಳಿಸಿರುವರು. ಅ.ನ.ಕೃ ಅವರು ನಮ್ಮ ದೇಶದಲ್ಲಿನ ರಾಜಕಾರಣಿಗಳು, ಪ್ರಬಲ ಸಮುದಾಯದವರು, ಚಿಂತಕರು ಭಾರತದ ಅಸ್ತಿತ್ವವನ್ನು, ಜನರು ತಮ್ಮತನವನ್ನು ಇನ್ನೊಬ್ಬರಿಗೆ ಮಾರಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಭಾರತದಲ್ಲಿ ವಿಶ್ವಬಂಡವಾಳ ಹೂಡಿಕೆದಾರರ ಸಮಾವೇಶದಂತಹ ಕಾರ್ಯಕ್ರಮಗಳು, ಜಾಗತೀಕರಣ ಮಾರುಕಟ್ಟೆಗಳು ಭಾರತದ ಅಭಿವೃದ್ಧಿಯ ಹೆಸರಿನಲ್ಲಿ ಕೊಳ್ಳೆ ಹೊಡೆಯುತ್ತಿವೆ. ಭಾರತದ ರೈತ ಸಮೂಹ, ದಲಿತ ಸಮೂಹ ತಮ್ಮ ಕತ್ತನ್ನು ತಾವೇ ಹಿಸುಕಿಕೊಳ್ಳುವ ಸ್ಥಿತಿ ಅವರ ಬದುಕಿನಲ್ಲಿ ಬಂದೊದಗಿದೆ. ಈ ಹಿನ್ನೆಲೆಯಿಂದ ಬಲ, ಎಡ ಪಂಥೀಯ ಚಿಂತನೆಗಳಾಗಿವೆ. ಇದರ ಸದುಪಯೋಗ ಪಡೆಯುತ್ತಿರುವ ಬಂಡವಾಳಶಾಹಿಗಳು ಭಾರತವನ್ನು ಮಾರಾಟ ಮಾಡುವ ಸ್ಥಿತಿ ಬರುತ್ತದೆ.

ಅ.ನ.ಕೃ. ಅವರು ರಷ್ಯಾದ ನಿಲುವನ್ನು ಒಪ್ಪಿಕೊಳ್ಳುತ್ತಾರೆ. "ಕೆಲವು ಸಾಮಾಜಿಕ ಸಮಸ್ಯೆಗಳನ್ನು ಬಿಡಿಸಿ ನಿರ್ಮೂಲ ಮಾಡುವುದರಲ್ಲಿ ರಷ್ಯಾ ಹಾಕಿಕೊಟ್ಟಿರುವ ಮೇಲ್ಪಂಕ್ತಿಯನ್ನು ನಾನು ಓದುಗರ ಗಮನಕ್ಕೆ 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' ಗ್ರಂಥದಲ್ಲಿ ತಂದಿದ್ದೇನೆ. ರಾಜಕೀಯ, ಸಾಮಾಜಿಕ, ಸಾಹಿತ್ಯ ಕಲಾರಂಗಗಳಲ್ಲಿ ರಷ್ಯಾ ಮಾಡುತ್ತಿರುವ ಪ್ರಯೋಗಗಳನ್ನು ನಾನು ಶ್ರದ್ಧೆಯಿಂದ, ಕುತೂಹಲದಿಂದ, ಗೌರವದಿಂದ ನೋಡುತ್ತಿದ್ದೇನೆ. ಆದರೆ ಅದೇ ಪ್ರಯೋಗ ತಂತ್ರವನ್ನು, ಧೋರಣೆಯನ್ನು ಭಾರತಕ್ಕೆ ಆಮದು ಮಾಡಿಕೊಳ್ಳಬೇಕೆಂಬ ತತ್ವವನ್ನು ಮಾತ್ರ ನಾನು ಪ್ರಬಲವಾಗಿ ವಿರೋಧಿಸುತ್ತೇನೆ"[೫೮] ಎಂದು ಹೇಳುತ್ತಾರೆ. ರಷ್ಯಾ ನೀತಿಯ ಕೆಲವನ್ನು ಮಾತ್ರ ಆಯ್ದುಕೊಳ್ಳಬೇಕು. ರಷ್ಯಾ ನೀತಿ ಭಾರತದಲ್ಲಿ ಅಳವಡಿಸಿಕೊಂಡರೆ ಭಾರತದಲ್ಲಿ ಮಿನಿ ರಷ್ಯಾ ನೋಡಬೇಕಾಗಿದೆ.

ಆನಂದಕುಮಾರ ಅವರು ೧೯೦೯ರಲ್ಲಿ ಹೇಳುತ್ತಾ 'ಅಖಂಡ ಭಾರತವನ್ನು ಶೈಕ್ಷಣಿಕವಾಗಿ ಕಟ್ಟಬೇಕಾದರೆ ಸಾಹಿತಿಗಳು, ಕಲಾವಿದರು, ಚಿಂತಕರು ಮಾತ್ರ ಸಮಗ್ರ ರೀತಿಯಲ್ಲಿ ಕಟ್ಟಬೇಕು.

ಒಂದು ವೇಳೆ ರಾಜಕಾರಣಿಗಳು, ಬಂಡವಾಳಶಾಹಿಗಳು ಭಾರತವನ್ನು ಸಮಗ್ರವಾಗಿ ಕಟ್ಟಿದ್ದೇ ಆದರೆ ಮುಂದಿನ ೫೦೦ ವರ್ಷಗಳಲ್ಲಿ ಭಾರತ ಪೂರ್ಣವಾಗಿ ನವವಸಾಹತುಶಾಹಿ ಬಂಡವಾಳಿಗರ, ರಾಜಕಾರಣಿಗಳ ಕಪಿಮುಷ್ಟಿಯಿಂದ ದೇಶೀಯ ದಲಿತರು, ಮಹಿಳೆಯರು, ರೈತರ ಜೀವನ ದುರದೃಷ್ಟಕರವಾಗುತ್ತದೆ' ಎಂದು ಹೇಳುತ್ತಾರೆ. ಪ್ರಸ್ತುತ ರಾಜಕಾರಣಿಗಳು, ಬಂಡವಾಳಶಾಹಿಗಳು ಮಾಡುವ ಕೆಲಸಕ್ಕೆ ರೈತ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಲಾಗುತ್ತಿದೆ. ಅದಕ್ಕೆ ಅ.ನ.ಕೃ. ಅವರು ರಷ್ಯಾ ನೀತಿ, ಅಮೆರಿಕ ನೀತಿಗಳನ್ನು ಬಲವಾಗಿ ವಿರೋಧಿಸುತ್ತಿದ್ದರು. ಸ್ಥಳೀಯವಾಗಿ ಅವರ ಸಮಕಾಲೀನರ ಶಿಷ್ಟಪರವಾದ ನೀತಿಯನ್ನು ಒಪ್ಪಿದ್ದರಿಂದ ಅ.ನ.ಕೃ. ಅವರ ಸಾಹಿತ್ಯದ ಮೇಲೆ ವಿಮರ್ಶೆ, ಟೀಕೆ ಮಾಡಲಾಗಿದೆ.

ಅ.ನ.ಕೃ. ಅವರು ಕಾದಂಬರಿಗಳ ಮುಖ್ಯ ಧೋರಣೆಗಳನ್ನು ಗುರುತಿಸುತ್ತಾ ಅವರೇ ಹೇಳುವಂತೆ "ಒಂದು ಸಮಸ್ಯೆಯನ್ನು ನಾವು ಮೊದಲು ಅರ್ಥ ಮಾಡಿಕೊಳ್ಳಬೇಕು. ಅವುಗಳ ಪರಿಹಾರ ಮಾರ್ಗವನ್ನು ನಾವೇ ನಿರ್ದೇಶಿಸಬೇಕು. ಭಾರತೀಯರ ಬಡತನ ಹೋಗಲಾಡಿಸುವುದಕ್ಕೆ ಅಮೆರಿಕದಿಂದ ಗೋಧಿ ಬೇಡುವುದು ಎಷ್ಟು ಹೀನಾಯವೋ ಭಾರತೀಯ ಸಮಸ್ಯೆಯ ಬಿಡುಗಡೆಗೆ ರಷ್ಯಾದ ಬುದ್ಧಿಯನ್ನು ಬಯಸುವುದು ಅಷ್ಟೇ ಅವಿವೇಕ. ಭಾರತೀಯ ಅಚ್ಚ ಭಾರತೀಯನಾಗಬೇಕು. ಆರಂಭ ಕಾಲದಲ್ಲಿ ತಪ್ಪುಗಳಾಗುವುದು ಸಹಜ. ನಮ್ಮ ತಪ್ಪುಗಳನ್ನು ನಾವೇ ತಿದ್ದಿಕೊಳ್ಳಬೇಕು. ಇತರರ ನೆರವು ಕೋರುವುದು ನಮ್ಮ ದಾಸ್ಯದ ಚಿಹ್ನೆ. ಭಾರತ ಆರ್ಥಿಕ, ರಾಜಕೀಯ ದಾಸ್ಯದಿಂದ ಬಿಡುಗಡೆ ಹೊಂದಿದರೆ ಸಾಲದು. ಭಾವ ದಾಸ್ಯದಿಂದ, ವಿಚಾರ ದಾಸ್ಯದಿಂದ, ಸಂಪ್ರದಾಯದ ಹೊರೆಯಿಂದ ಮುಕ್ತಿ ಪಡೆಯಬೇಕು"[೫೮] ಎಂದು ಗಂಭೀರವಾಗಿ ತಿಳಿಸಿರುವರು.

ಅ.ನ.ಕೃ. ಅವರ 'ಸ್ತ್ರೀಮುಖವ್ಯಾಘ್ರ' ಕಾದಂಬರಿಯ ಮುನ್ನುಡಿಯಲ್ಲಿ ಸಮಾಜದ ವ್ಯಕ್ತಿಗಳ ವ್ಯಕ್ತಿತ್ವದ ಬಗ್ಗೆ ಸಾಮಾಜಿಕವಾಗಿ ಹೇಳಲಾಗುತ್ತದೆ. "ಧರ್ಮ, ಸತ್ಯ, ನ್ಯಾಯ, ಋಜುತ್ವಗಳು ಮಾನವನ ಆದರ್ಶವಾಗಿದ್ದಾಗ ಮಾತ್ರ ಮಾನವ ಸ್ವಯಂಸಂಪೂರ್ಣನಾದ 'ಏಕೈಕ' ವ್ಯಕ್ತಿಯಾಗಿದ್ದ. ಆ ಆದರ್ಶ ಮೂಲೆಗುಂಪಾದ ಮೇಲೆ ಅವನು 'ಅನೇಕ'ನಾದ. ಒಬ್ಬ ಮಾನವನಲ್ಲಿ ಇಂದು ಸಹಸ್ರಾರು ಮಾನವರು, ದೇವತೆಗಳು, ರಾಕ್ಷಸರು ಅಡಗಿದ್ದಾರೆ. ಕಾಲ ಕಾಲಗಳಲ್ಲಿ ಅವರು ಅಭಿವ್ಯಕ್ತಿಗೊಂಡು ತಮ್ಮ ಪ್ರತಾಪ ತೋರಿಸುತ್ತಾರೆ. ಮಾನವನ ಸಮ್ಯಕ್ ಜೀವನ ಕಾಣದೆ, ಅವನ ಒಂದು ಅಂಶದ ಅಭಿವ್ಯಕ್ತಿಯನ್ನು ಕಂಡು ನಾವು ಅವನನ್ನು ಅಳೆಯಲಾರಂಭಿಸುತ್ತೇವೆ. ಇವನು ಬಹಳ ಧರ್ಮಿಷ್ಠ, ಇವನು ಮಹಾನೀಚ, ಇವನು ಪರಮೋದಾರಿ ಎನ್ನುತ್ತೇವೆ. ವ್ಯಕ್ತಿಯ ಅಭಿವ್ಯಕ್ತಿಯನ್ನು ನೋಡುವಾಗ ಅದರ ಹಿಂದಿರುವ ಮನೋಧರ್ಮವನ್ನು ಪರಿಗಣಿಸುವಲ್ಲಿ ತಾಳ್ಮೆ, ವಿವೇಕ ನಮಗಿರುವುದಿಲ್ಲ"[೫೯] ಎಂದು ಅ.ನ.ಕೃ. ಅವರು ಹೇಳುತ್ತಾರೆ. ಈ ಹಿನ್ನೆಲೆಯಿಂದ ಅ.ನ.ಕೃ. ಅವರು ಸಮಕಾಲೀನ ಲೇಖಕರಿಗೆ ಹೇಳಿದ ಮಾತುಗಳಾಗಿರಬಹುದು ಅಥವಾ ರಾಜಕಾರಣಿಗಳು, ಮೂಲಭೂತವಾದಿಗಳು ಮಾಡುವ ಅನಾಚಾರಗಳು ದೇಶದ ಸ್ಥಿತಿಯನ್ನು ಬದಲಾಯಿಸುವ

ಪ್ರಕ್ರಿಯೆಯಾಗಿರಬಹುದು. ಇದರಿಂದ ವ್ಯಕ್ತಿಗಳಿಗೆ ಆದರ್ಶವಾಗಿದ್ದ ಧರ್ಮ, ಸತ್ಯ, ನ್ಯಾಯ ಇವೆಲ್ಲಾ ಬೇರೆ ದೃಷ್ಟಿಯಿಂದ ಕಾಣಲಾಗುತ್ತಿದೆ. ಗಾಂಧೀಜಿಯನ್ನು ಕೊಂದ ಗೋಡ್ಸೆಯನ್ನು ಸಮರ್ಥಿಸಿಕೊಳ್ಳುವ ಮನಸ್ಥಿತಿ ಬಂದಿದೆ ಎಂದರೆ ಆದರ್ಶಗಳು, ಸತ್ಯ, ನ್ಯಾಯವೆಲ್ಲಿ ಹೋದವು. ಇದಕ್ಕೆಲ್ಲಾ ಕಾರಣ ರಾಜಕಾರಣಿಗಳ ಗುಂಪುಗಾರಿಕೆ, ತಂತ್ರ, ಅವರ ಸಂಘ ಪರಿವಾರಗಳು, ಇವುಗಳಿಂದ ಜನರ ಸಮಾಜದ ಮನಸ್ಥಿತಿ ಬೇರೆ ಸ್ವರೂಪ ಪಡೆದುಕೊಳ್ಳುತ್ತಿದೆ.

ಸ್ತ್ರೀಮುಖವ್ಯಾಘ್ರ ಕಾದಂಬರಿಯಲ್ಲಿ ಬರುವ ಗಣೇಶನ್, ಸದಾಶಿವಂ, ವೇಲಾಯುಧನ್, ಶ್ರೀನಿವಾಸರಾಯ ಇವರೆಲ್ಲಾ ದ್ವಿಮುಖ ಜೀವನಪದ್ಧತಿಯನ್ನು ರೂಢಿಸಿಕೊಂಡವರು. ಸಂದರ್ಭಕ್ಕೆ ತಕ್ಕಂತೆ ನಟನೆ ಮಾಡುತ್ತಾ, ಸಮಾಜದ ಜನರ ಮನಸ್ಥಿತಿಯನ್ನು ಬದಲಾವಣೆ ಮಾಡುತ್ತಾರೆ. ಧರ್ಮ, ನೀತಿ, ರಾಜಕೀಯ ಈ ಮೂರು ರಂಗಗಳಲ್ಲಿ ಈ ಪಾತ್ರಗಳು ದ್ವಿಮುಖ ಚಲನೆ ಹೊಂದಿವೆ. ಈ ಕಾದಂಬರಿಯ ಮೂಲಕ ಅ.ನ.ಕೃ. ಅವರು ಹೇಳುವಂತೆ "ಇಂದು ಈ ಜಗತ್ತಿನಲ್ಲಿ ಬಾಳಲು ಸಾಧ್ಯವೇ? ಋಜುತ್ವಕ್ಕೆ ಬೆಲೆಯಿಲ್ಲವೇ? ಪ್ರಶ್ನೆಗಳಿಗೆ ಉತ್ತರಿಸಬೇಕಾದುದೂ ಸಮಸ್ಯೆಗಳನ್ನು ಪರಿಹರಿಸಬೇಕಾದದ್ದು ಕಾದಂಬರಿಕಾರನ ಕರ್ತವ್ಯವಲ್ಲ. ರಾಷ್ಟ್ರಕರು ಆ ಕರ್ತವ್ಯ ನಿರ್ವಹಿಸಬೇಕು"[೬೦] ಎಂದಿರುವರು. ಈ ಹಿನ್ನೆಲೆಯಲ್ಲಿ ಸ್ತ್ರೀಮುಖವ್ಯಾಘ್ರ ಕಾದಂಬರಿಯಲ್ಲಿ ಮಹಾಪ್ರಶ್ನೆ ಎತ್ತಿದ್ದಾರೆ. ಆದರೆ ದೇಶವನ್ನು ಮುನ್ನಡೆಸುವವರು ಜನತೆಗಾಗಿ, ಸಮಾಜಕ್ಕಾಗಿ ಕೆಲಸ ಮಾಡಬೇಕು. ಸತ್ಯ, ಆದರ್ಶ, ಮಾನವೀಯತೆ ನೆಲೆಯಿಂದ ನಿರ್ವಹಿಸಬೇಕು. ಸಮಾಜದಲ್ಲಿರುವ ಜನತೆ ಕೂಡ ಮಾನವೀಯತೆ ರೂಢಿಸಿಕೊಳ್ಳಬೇಕಾಗಿದೆ.

ಅ.ನ.ಕೃ. ಅವರು 'ಗೃಹಲಕ್ಷ್ಮಿ' ಕಾದಂಬರಿಗೆ ಮುನ್ನುಡಿ ಬರೆಯುತ್ತಾ ಗೃಹಲಕ್ಷ್ಮಿಯಲ್ಲಿ ಬರುವ ಪಾತ್ರಗಳ ಮೂಲಕ ನಮ್ಮ ಪರಂಪರೆಯ ತಲೆಮಾರಿನ ಜನತೆಯನ್ನು ವಿವರಿಸುತ್ತಾ ಅವರ ಅನನ್ಯತೆ ಬದುಕು, ಚಿಂತನೆ ಪ್ರಸ್ತುತ ಎಷ್ಟು ಮುಖ್ಯವಾಗಿದೆ ಎನ್ನುವುದಕ್ಕೆ ಅ.ನ.ಕೃ. ಅವರು ಮೂಲಭೂತ ಪ್ರಶ್ನೆಗಳನ್ನು ಮುನ್ನುಡಿಯಲ್ಲಿ ಹಾಕಿದ್ದಾರೆ. "ಇಂದು ಈ ಸಂಪ್ರದಾಯ ಜನತೆಗಷ್ಟು ಪ್ರಿಯವಾಗಿಲ್ಲ. ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳುತ್ತಿರುವ ಜನ ಪರಂಪರಾಗತ ಆಚಾರ-ವಿಚಾರಗಳನ್ನು ಆದರಿಸುವುದು ದುಸ್ಥರ. ಮೂಲಭೂತ ಸಮಸ್ಯೆಯನ್ನು ನಾವು ಕೆದಕಿ ನೋಡೋಣ. ಈ ವೈಜ್ಞಾನಿಕ ಮನೋಭಾವ ನಮ್ಮನ್ನೆಲ್ಲ ಕರೆದೊಯ್ಯುತ್ತಿದೆಯೇ? ರಾಷ್ಟ್ರ ಬಲಗೊಳ್ಳುತ್ತಿದೆಯೇ? ಪ್ರಾಚೀನ ಪರಂಪರೆ ತಿರಸ್ಕರಿಸಲು ಸಿದ್ಧವಾಗುತ್ತಿರುವ ನಾವು ಅದರ ಸ್ಥಾನದಲ್ಲಿ ಯಾವುದನ್ನು ಪ್ರತಿಷ್ಠಾಪಿಸಲು ಸಿದ್ಧರಾಗಿದ್ದೇವೆ. ಅಮೇರಿಕಾದ ಡಾರಿಸಮ್ಮ್, ರಷ್ಯಾದ ಕಮ್ಯುನಿಸಂ"[೬೧] ಎಂದು ಹೇಳುತ್ತಾರೆ.

ನಮ್ಮ ಪರಂಪರೆಯಲ್ಲಿ ಯಾವುದನ್ನು ಉಳಿಸಿಕೊಳ್ಳಬೇಕು, ಯಾವುದನ್ನು ಬೆಳೆಸಬೇಕು? ಪುರೋಹಿತಶಾಹಿ ಚಿಂತನೆ ಎಷ್ಟು ಮುಖ್ಯವೋ? ಪಂಪ, ರನ್ನ, ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ,

ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫರು, ಸರ್ವಜ್ಞ ಇವರು ಅಷ್ಟು ಮುಖ್ಯ. ನಮ್ಮ ಪರಂಪರೆಯಲ್ಲೂ ಮರುಚಿಂತನೆ ಮಾಡಬೇಕಾಗಿದೆ. ಆದರೆ ಇನ್ನೊಂದು ಕಡೆ ವಸಾಹತುಶಾಹಿ ದಬ್ಬಾಳಿಕೆ. ತಮ್ಮ ದೇಶದ ಧೋರಣೆ ಇನ್ನೊಂದು ದೇಶದ ಮೇಲೆ ಹೇರುವುದು ಇದು ಹೊಸ ಪರಂಪರೆಯಾಗಿದೆ. ಈ ಪರಂಪರೆಯಲ್ಲಿ ಹೊಸ ಸಮಾಜದ ಕನಸಿಗೆ ನಮ್ಮ ಪರಂಪರೆ, ಸಂಪ್ರದಾಯ ಮುರಿಯುತ್ತಿದ್ದೇವೆ ಅಥವಾ ಮರೆಯುತ್ತಿದ್ದೇವೆ. ಪ್ರಪಂಚದ ದೊಡ್ಡ ರಾಷ್ಟ್ರಗಳು ಇತರೆ ರಾಷ್ಟ್ರಗಳನ್ನು ತಮ್ಮ ಗುಲಾಮಗಿರಿಗೆ ಬಳಸಿಕೊಳ್ಳುತ್ತಿರುವ ಕ್ರಮ ಎಷ್ಟು ಸರಿ ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಇದರಿಂದ ಸಮಾಜ ರಾಷ್ಟ್ರ ಯಾವ ರೀತಿಯಲ್ಲಿ ಬಲಗೊಳ್ಳುತ್ತಿವೆಯೋ ಸಂಘಟಿತವಾಗುತ್ತಿವೆಯೇ? ಇದನ್ನು ಒಟ್ಟಾರೆಯಾಗಿ ಸಾಹಿತ್ಯ, ವಿಜ್ಞಾನ, ಕಲೆ, ಧರ್ಮ ಅಂತಿಮ ಗುರಿ ದೇಶೀಯವಾಗಿ ಮಾನವ ಕಲ್ಯಾಣ ಸಾಧನೆಯಾಗಿದೆ. ಅಪಾರವಾದ ಮಾನವ ಕ್ಷೇಮಾಭಿವೃದ್ಧಿ ಬೆಳೆಸುವ ಪ್ರಾಚೀನ ಪರಂಪರೆಯ ಕೆಲವು ಆವಿಷ್ಕಾರಗಳನ್ನು ನಾವು ಉಳಿಸಿಕೊಳ್ಳಬೇಕಾಗಿದೆ. ಗೃಹಲಕ್ಷ್ಮಿ ಕಾದಂಬರಿಯಲ್ಲಿ ಬರುವ ರಂಗಮ್ಮ, ರುಕ್ಮಿಣಮ್ಮ, ಅಚ್ಯುತಪ್ಪ, ಷರೀಫ, ಜವರೇಗೌಡ ಪ್ರಾಚೀನ ಸಂಸ್ಕೃತಿಯ ವಿಕಾಸದ ಕುಸುಮಗಳಾಗಿವೆ. ಇದೇ ಪರಂಪರೆಯನ್ನು ಅಪಾರ್ಥ ಮಾಡಿಕೊಂಡಿದ್ದ ರಾಘವೇಂದ್ರರಾಯ, ಸೋಮೇಶ, ವೆಂಕಣ್ಣ ಇವರು ವಿಪರ್ಯಾಸಗಳಾಗಿ ಕಾಣುತ್ತಾರೆ. ನಮ್ಮ ನಾಡಿನ ಸಂಸ್ಕೃತಿ ಉಳಿಸಿ ಬೆಳೆಸಬೇಕಾದದ್ದು ನಮ್ಮ ಕೈಯಲ್ಲಿದೆ. ಆದರೆ ಯಾವ ಗೊಡ್ಡು ಸಂಸ್ಕೃತಿಗೆ ತಲೆದೂಗುವುದರಿಂದ ಏನಿದೆ? ನಾವು ನಮ್ಮಲ್ಲಿನ ಮನಸ್ಥಿತಿಯನ್ನು ಬೇರೆ ರೀತಿಯಾಗಿ ಯಾಂತ್ರಿಕ ಸಂಸ್ಕೃತಿಯಾಗಿ ರೂಪಿತಗೊಳಿಸಿದ್ದಾರೆ.

ಅ.ನ.ಕೃ. ಅವರು 'ನರಬಲಿ' ಕಾದಂಬರಿಯ ಮುನ್ನುಡಿಯಲ್ಲಿ ನಮ್ಮ ಪರಂಪರೆ ಬದುಕನ್ನು ವಿವೇಚಿಸಿದ್ದಾರೆ. "ಗತಕಾಲದ ಸಾರ್ವಜನಿಕ ಜೀವನ ಯಾವಾಗಲೂ ಕುತೂಹಲಕಾರಿ. ಒಂದು ಕಾಲದಲ್ಲಿ ನಮ್ಮ ಹಿರಿಯರು ಹೇಗೆ ಬಾಳಿದರು? ಅವರ ಆಶಯಗಳೇನು? ಅಭಿರುಚಿ ಎಂತದು, ಅವರ ಜೀವನದ ಮೌಲ್ಯಗಳು ಯಾವುದು ಎಂಬುದನ್ನರಿಯಲು ನಾವು ಆಶಿಸುತ್ತೇವೆ."[೬] ಆದರೆ ಈ ಜ್ಞಾನದಿಂದ ನಮ್ಮಲ್ಲಿ ಉಳಿಯಬಾರದು. ಹಿರಿಯರ ಜೀವನದಿಂದ ನಮ್ಮ ಜೀವನಕ್ಕೆ ಅತ್ಯವಶ್ಯಕವಾದ ಧೃತಿ, ಬೆಳಕು, ಸತ್ವ ಉಳಿಯುತ್ತಿದೆಯೇ? ಈ ಹಿನ್ನೆಲೆಯಿಂದ ನಮ್ಮ ಪೂರ್ವಿಕ ಜೀವನ ಪರೀಕ್ಷಿಸಿ ನೋಡಿದರೆ ನೈತಿಕ ಮೌಲ್ಯಗಳ ಅವನತಿ ಹಂತ ತಲುಪಿವೆ. ಇದರಿಂದ ಸಮಾಜ ಪ್ರಜ್ಞೆಯುಳ್ಳ ವಿಚಾರವಂತರು ನಾವುಗಳು ಈ ಕಾರಣಗಳ ಮೂಲಕ ಮೌಲ್ಯಗಳು ಪುನರ್ ಪ್ರತಿಷ್ಠಾಪನೆಗೆ ಪ್ರಯತ್ನಿಸಬೇಕು. ಇದರಿಂದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕವಾಗಿ ಸಾಂಸ್ಕೃತಿಕವಾದ ಹಿನ್ನೆಲೆಯಿಂದ ಮಾನವೀಯ ನೆಲೆಯಾಗಿ ರೂಪವಾಗಿ ಪುನಾರಚಿಸಬೇಕಾಗಿದೆ. ಅ.ನ.ಕೃ. ಅವರ ಮುನ್ನುಡಿಗಳು ಸಾಮಾಜಿಕವಾಗಿ ಜನರ ಮೌಲ್ಯದ ನ್ಯಾಯಕ್ಕಾಗಿ ಬರವಣಿಗೆ ರೂಪಗೊಂಡಿವೆ. ಅವರ ಮುನ್ನುಡಿಗಳು ಸಾಂಸ್ಕೃತಿಕ ಚಿಂತನೆಯಿಂದ ಜನರಲ್ಲಿನ ಎಚ್ಚರಿಕೆಯ ದೃಷ್ಟಿಕೋನ ಹೊಂದಿದೆ.

## ೫.೫. ಜಿ.ಎಸ್.ಶಿವರುದ್ರಪ್ಪ

ಜಿ.ಎಸ್.ಶಿವರುದ್ರಪ್ಪನವರು ಕನ್ನಡದ ಸಾಹಿತ್ಯದಲ್ಲಿ ನವೋದಯ ಕಾಲದಿಂದ ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯದ ಮನೋಧರ್ಮದ ಬರವಣಿಗೆಯನ್ನು ಕರಗತವಾಗಿ ರಚಿಸಿಕೊಂಡವರು. ಹಾಗಾಗಿ ಜಿ.ಎಸ್.ಎಸ್. ಸಾಹಿತ್ಯ ಬರವಣಿಗೆ ಎಲ್ಲಾ ಕಾಲವನ್ನು ಪ್ರತಿನಿಧಿಸುತ್ತದೆ. ಆದರೂ ನವೋದಯ ಕನ್ನಡ ಸಾಹಿತ್ಯ ಪರಂಪರೆಗೆ ಹೆಚ್ಚು ಒತ್ತುಕೊಟ್ಟವರು. ಹಾಗೆಯೇ ಪ್ರಾಚೀನ ಸಾಹಿತ್ಯ, ನವೋದಯ, ಪ್ರಗತಿಶೀಲ, ನವ್ಯ ಬಂಡಾಯ, ಚಳುವಳಿ, ಮಹಿಳೆ, ಪಾಶ್ಚಾತ್ಯ ಸಾಹಿತ್ಯದ ಚಿಂತನೆ, ಚಿತ್ರಕಲೆ ಹಲವು ವಿಭಿನ್ನ ಬರವಣಿಗೆಯಲ್ಲಿ ತೊಡಗಿದ್ದವರು. ಇದರ ಜೊತೆಗೆ ಬೇರೆ ಬೇರೆ ಸಂದರ್ಭದಲ್ಲಿ ಇತರರಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಮುನ್ನುಡಿಯನ್ನು ಕುರಿತು ಕೆಲವು ಮಾತುಗಳನ್ನು ವ್ಯಕ್ತಪಡಿಸಿದ್ದಾರೆ. ಮುಖ್ಯವಾಗಿ ಯಾವುದೇ ಕೃತಿಗೆ ಮುನ್ನುಡಿ ಬರೆಯಬೇಕಾದರೆ ಕೃತಿಕಾರನಿಗೆ 'ಸಮಾಧಾನ', ನನಗೆ 'ಸಂತೋಷ' ಇವುಗಳನ್ನು ತಂದುಕೊಡುವುದಕ್ಕಿಂತ ಉತ್ತಮ ಕೆಲಸ ಏನಿದೆ ಎಂದು ಪ್ರಶ್ನೆ ಮಾಡಿದ್ದಾರೆ.

"ಒಂದು ಹೊಸ ಕವನಸಂಗ್ರಹ ಬಂದಾಗ ಅದನ್ನು ನೋಡುವ ದೃಷ್ಟಿಯಲ್ಲಿಯೂ ಹಲವು ರೀತಿಗಳುಂಟು. ಆಗ ತಾನೇ ಕಾವ್ಯಲೋಕಕ್ಕೆ ಕಾಲಿಡುತ್ತಿರುವ ತರುಣ ಕವಿಯೊಬ್ಬನ ಪ್ರಥಮ ಕವನ ಸಂಕಲನವನ್ನು ನೋಡುವ ದೃಷ್ಟಿಗೂ, ರೀತಿಗೂ ಆಗಲೇ ಹಲವಾರು ಕವನಸಂಗ್ರಹ ಪ್ರಕಟಿಸಿ 'ಪ್ರಸಿದ್ಧ'ನಾದ ಕವಿಯೊಬ್ಬನ ಇತ್ತೀಚಿನ ಕವನಸಂಗ್ರಹಗಳನ್ನು ನೋಡುವ ದೃಷ್ಟಿಗೂ, ರೀತಿಗೂ ವ್ಯತ್ಯಾಸವಿರಬೇಕಾದದ್ದು ಅಗತ್ಯ ಎಂದು ನಾನು ಭಾವಿಸುತ್ತೇನೆ"[೬] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಜಿ.ಎಸ್.ಎಸ್. ಅವರು ಮುನ್ನುಡಿ ಸಾಹಿತ್ಯದ ಒಳಚಿಂತನೆಯ ದೃಷ್ಟಿಕೋನ ಏನೆಂದು ಹೇಳುತ್ತಾರೆ. ಏಕೆಂದರೆ ಯಾವುದಾದರೂ ವಿಷಯ ಕುರಿತು ವಿಮರ್ಶೆ ಮಾಡಬಹುದು. ಆದರೆ ಹೊಸ ಲೇಖಕ, ಹಳೆಯ ಲೇಖಕ, ಓಡುವ ಕುದುರೆಯಂತಹ ಲೇಖಕರ ಬರವಣಿಗೆಯನ್ನು, ಕಾವ್ಯ, ಕಥೆ ಏನೇ ಆಗಿರಬಹುದು, ಮೊದಲು ಕವಿಯ ಮನೋಧರ್ಮದ ಬಗ್ಗೆ ಅರ್ಥ ಮಾಡಿಕೊಳ್ಳಬೇಕು ಎಂಬುದು ಜಿ.ಎಸ್.ಎಸ್. ಅವರು ಮನೋಧೋರಣೆಯಾಗಿತ್ತು. ಇವರು ಅನೇಕ ಕೃತಿಗಳಿಗೆ ಮುನ್ನುಡಿ ಬರೆದಿದ್ದು ೭೦ರಿಂದ ೯೦ರ ದಶಕದಲ್ಲಿ ಎಂದು ಹೇಳಬಹುದು. ಹಾಗಾಗಿ ಅವರು ಬರೆದ ಮುನ್ನುಡಿಗಳನ್ನು ಅವಲೋಕಿಸಲಾಗಿದೆ.

ಸಿ.ಪಿ.ಕೆ.ಯವರ ತಾರಾಸಖ(೧೯೬೦) ಕವನ ಸಂಕಲನಕ್ಕೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆದಿದ್ದಾರೆ. ಸಿ.ಪಿ.ಕೆ.ಯವರ ಕಾವ್ಯದ ಮನೋಧರ್ಮವನ್ನು ಕುರಿತು ಹೀಗೆ ವ್ಯಕ್ತಪಡಿಸಿದ್ದಾರೆ. "ಈ ಕವಿಯ ಸುತ್ತಲಿನ ಪರಿಸರದ ಬಗೆಗೆ ಸೂಕ್ಷ್ಮ ಸಂವೇದನೆಯುಳ್ಳವರು. ಯಾವ ಬಹಿರಂಗದ ರಭಸಗಳ ಸೆಳೆತಕ್ಕೆ ಸಿಕ್ಕಿಹಾಕಿಕೊಳ್ಳದೆ ತನ್ನ 'ಸ್ವಧರ್ಮ' ಏನೆಂಬುದನ್ನು ಕಂಡುಕೊಳ್ಳುವ ಪ್ರವೃತ್ತಿಯುಳ್ಳವರು. ಕವಿತೆ ಬದುಕಿಗೆ ಹತ್ತಿರವಿರಬೇಕೆಂಬ, ಅದರ ಅನುಭವದಿಂದ ತನ್ನ ಬದುಕು ಮಿತ್ರರಾಗಬೇಕೆಂಬ ಹಂಬಲವುಳ್ಳವರು. ಇಂತ ಮನೋಧರ್ಮ ಇನ್ನಷ್ಟು ಸತ್ವಯುತವಾದ ಬೆಳಕಿನ ಬೆಳೆಯನ್ನು

ಬೆಳೆಯಬಲ್ಲುದು ಎಂಬ ಭಾವನೆಯನ್ನು ಈ ಸಂಗ್ರಹ ಮೂಡಿಸುತ್ತದೆ"[೬೪] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಕವಿತೆಗಳು ನವ್ಯದ ಮನೋಧೋರಣೆಯನ್ನು ವ್ಯಕ್ತಪಡಿಸಿವೆ. ಏಕೆಂದರೆ ಬದುಕಿನ ಪ್ರಶ್ನೆ, ಹಾಗೆಯೇ ತಮ್ಮ ಪ್ರವೃತ್ತಿ ಕಂಡುಕೊಳ್ಳುವ ಹಂಬಲ. ಹೀಗಾಗಿ ಕವಿಯ ಕವಿತೆಯ ಮನೋಧರ್ಮದ ಸುತ್ತಲಿರುವ ವ್ಯಕ್ತಿತ್ವ ಅದರಲ್ಲಿ ಅಸ್ತಿತ್ವದ ಪ್ರಶ್ನೆಯಾಗುತ್ತದೆ. ಹಾಗಾಗಿ ಸತ್ಯ ಕಾಲಕ್ಕೆ ಸೇರಿದೆ ಎಂದು ಹೇಳಬಹುದು.

ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ ಅವರ 'ವೃತ್ತ'(೧೯೬೮) ಕವನ ಸಂಕಲನಕ್ಕೆ ಜಿ.ಎಸ್.ಎಸ್. ಮುನ್ನುಡಿ ಬರೆದಿದ್ದಾರೆ. ಈ ಮುನ್ನುಡಿಯಲ್ಲಿ ನಿರಾತಂಕವಾದ ಮನೋಧರ್ಮವನ್ನು ಗುರುತಿಸಿದ್ದಾರೆ. ಅಂದರೆ ಯಾವುದೇ ಕವಿ ಸಾಹಿತ್ಯದ ಪಂಥಗಳಿಗೆ ಸೇರಿರುವನೋ ಎಂಬ ಆತಂಕ ಇರುವುದು ಸಹಜ. ಕವಿತೆಯ ವಸ್ತು, ವಿಷಯ ಏನಾಗಿದೆ ಎನ್ನುವುದು ಮುಖ್ಯ. ಹಾಗೆಯೇ ಕವಿ ಪ್ರಚಲಿತ ವಸ್ತು ವಿಷಯಕ್ಕೆ ಅಭಿವ್ಯಕ್ತಿಸಿ ಸಾಮಾಜಿಕ ಪ್ರಕ್ರಿಯೆಯನ್ನು ಸಹಜ ರೀತಿಯಲ್ಲಿ ವ್ಯಕ್ತಪಡಿಸಿದರೆ ನನ್ನನ್ನು ಇತರೆ ಲೇಖಕರು, ವಿಮರ್ಶಕರು, ಕವಿಗಳು, ಮುಖ್ಯವಾಗಿ ಓದುಗರು ಯಾವುದೇ ಸಾಹಿತ್ಯಕ್ಕೆ ಸೇರದ ಕವಿತೆಯನ್ನು ಹಾಗೂ ಆಮೇಲೆ ತನ್ನನ್ನು ಕೇಳುವವರು ಯಾರು ಎಂಬ ಇನ್ನೊಂದು ಆತಂಕ ಕವಿಗಳಲ್ಲಿ, ಬರಹಗಾರರಲ್ಲಿ ಕಂಡುಬರುತ್ತದೆ. ಹೀಗಾಗಿ ಕೃತಿಯ ಮುನ್ನುಡಿಯ ಮೂಲಕ ಒಬ್ಬ ಕವಿಯ ಮನೋಧೋರಣೆ ನಿರಾತಂಕವಾದ ರೀತಿಯಲ್ಲಿ ವ್ಯಕ್ತಗೊಂಡಿರುವುದನ್ನು ಕಾಣಬಹುದು. ಜಿ.ಎಸ್.ಎಸ್. ಅವರು ಹೇಳುವಂತೆ "ಸಾಹಿತ್ಯ ಕ್ಷೇತ್ರದಲ್ಲಿ ಒಂದು 'ಗುಂಪುಗಾರಿಕೆ' ಉಳಿದೆಲ್ಲ ಕ್ಷೇತ್ರಗಳಲ್ಲಿಯಂತೆಯೇ ಮನೆ ಮಾಡಿಕೊಂಡಿದೆ. ಗುಂಪುಗಾರಿಕೆಯನ್ನು ಪ್ರತಿಭಟಿಸಿದವರೂ ಸಹ ತಾವು ಒಂದು ಗುಂಪಾಗಿ ಬಿಡುವುದು. ಅದನ್ನು ಸಾಹಿತ್ಯೇತರ ಮನೋಧರ್ಮಗಳಿಗೆ ವೇದಿಕೆಯನ್ನಾಗಿ ಮಾಡಿಕೊಳ್ಳುವುದು ಒಂದು ದುರಂತ ವಿನೋದವಾಗಿದೆ. ಸಮಾನ ಮನೋಧರ್ಮವುಳ್ಳ ಜನ ವೈಚಾರಿಕ ಜಾಗೃತಿಗಾಗಿ ಒಂದು ಗುಂಪಾಗುವುದು ಸಹಜವಾದರೂ ಬರುಬರುತ್ತಾ ತಮ್ಮ ತಮ್ಮ ವೈಯಕ್ತಿಕ ಸ್ವತಂತ್ರ ವಿಚಾರಶೀಲತೆಯನ್ನು ಬೆಳೆಸಿಕೊಳ್ಳಬೇಕೆನ್ನುವ ಬದಲು ಆ ಗುಂಪಿನ ಮುಖವಾಣಿಯಾಗಿ ಸಾಮೂಹಿಕವಾಗಿ ಆಲೋಚಿಸತೊಡಗುತ್ತದೆ"[೬೫] ಎಂದಿರುವರು. ಜಿ.ಎಸ್.ಎಸ್. ಅವರು ಮುಖ್ಯವಾಗಿ ಸಾಹಿತ್ಯ ಪಂಥಗಳನ್ನುದ್ದೇಶಿಸಿ ಹೇಳಿರಬಹುದು. ಯಾವುದೇ ಸಾಹಿತ್ಯ ಪ್ರಕಾರದ ಚಿಂತನೆ ಇದು ನವೋದಯದ ಚಿಂತನೆ. ಇದು ಪ್ರಗತಿಶೀಲ, ನವ್ಯ, ದಲಿತ ಹೀಗೆ ಕೆಲವು ಪಂಥಗಳ ಮೂಲಕ ಅಥವಾ ಸಿದ್ಧಾಂತಗಳ ಮೂಲಕ ಇತರೆ ಸಾಹಿತ್ಯ ಕ್ಷೇತ್ರದಲ್ಲಿ ನಡೆಯುವ ಗುಂಪುಗಾರಿಕೆ ಎಂದು ಹೇಳಲಾಗುತ್ತದೆ. ಜಿ.ಎಸ್.ಎಸ್. ಅವರ ನಿಲುವು ಸಾಹಿತ್ಯದಲ್ಲಿ ಗುಂಪುಗಾರಿಕೆಯಲ್ಲಿ ವ್ಯಕ್ತಿಗೆ ಹಾಗೂ ಪಂಥಕ್ಕೆ ಯಾವುದೇ ಗುಂಪಿಗೆ ಅಕ್ಷರಶಃ ತಾವು ಬದ್ಧರಾಗಿದ್ದೇವೆ. ನಾವು ಸ್ವತಂತ್ರವಾಗಿ ಆಲೋಚಿಸುತ್ತೇವೆ. ಅದನ್ನು ಧೈರ್ಯವಾಗಿ ಪ್ರಕಟಿಸುತ್ತೇವೆ ಎಂದು ಹೇಳುವವರು ಸಾಹಿತ್ಯದಲ್ಲಿ ಕಡಿಮೆ. ಆದರೆ ಸಾಹಿತ್ಯ ಚಿಂತನೆ ಬರಹಗಳು ಆಯಾ ಕಾಲವನ್ನು ಒಳಗೊಳ್ಳುತ್ತವೆ. ಹೀಗಿರುವಾಗ ಸಾಹಿತ್ಯ ಕ್ಷೇತ್ರದಲ್ಲಿ ಗುಂಪುಗಾರಿಕೆ ಸಲ್ಲದು. ಅಲ್ಲಿ ವಿಚಾರವಿದೆ. ಸ್ವಂತಿಕೆಯಿದೆ. ಕಾಲ ಹಾಗೂ ಸ್ಥಳವಿದೆ. ಬರವಣಿಗೆಯು ಸ್ವತಂತ್ರವಾಗಿ ಇರುವುದು ಪ್ರಸ್ತುತ ದಿನಗಳಲ್ಲಿ ಕಂಡುಬರುತ್ತದೆ.

ಅದು ಬಂಡಾಯ ಕಾಲದಿಂದಲೂ ಒದಗಿಬಂದಿದೆ. ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ 'ಸೀಮಂತಿನಿ' ಕವಿತೆ ತಾಯ್ತನಕ್ಕೆ ಸಿದ್ಧಳಾಗಿ ನಿಂತ ಹೆಣ್ಣನ್ನು ಕುರಿತು

"ಯಾರಿವಳು
ಇದ್ದಕ್ಕಿದ್ದಂತೆ ಪಕ್ವದೆಲೆ ಬದಲಾದವಳು?"[೬೬]

ಎಂಬ ಕವಿತೆಯನ್ನು ಸಾಹಿತ್ಯದ ಬದಲಾವಣೆಯ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗಿದೆ. ಇಲ್ಲಿ ಹೆಣ್ಣಿನ ರೂಪಕ ಬಳಸಿ ಸಾಹಿತ್ಯ ಚಿಂತನೆ ಹಳಗನ್ನಡ, ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿದೆ. ಭಾಷೆ, ಸಂಸ್ಕೃತಿ ಬದಲಾದುದರ ನೆಲೆಗಳನ್ನು ಈ ಪ್ರಕಾರದಲ್ಲಿ ಗುರುತಿಸಿಕೊಳ್ಳಬಹುದು.

ಎಚ್.ಎಸ್.ವೆಂಕಟೇಶಮೂರ್ತಿಯವರ 'ಸಿಂದಬಾದನ ಆತ್ಮಕಥೆ'ಗೆ ಜಿ.ಎಸ್.ಶಿವರುದ್ರಪ್ಪನವರು ಮುನ್ನುಡಿ ಬರೆಯುತ್ತಾರೆ. ಈ ಮುನ್ನುಡಿಯು ಕಥನ ಕವನಗಳಾಗಿದ್ದರಿಂದ ಆಯಾಕಾಲದ ಮುಖ್ಯ ಸ್ಥಿತಿಗತಿಗಳ ಬಗ್ಗೆ ವಿವರಣೆ ಕೊಡುತ್ತದೆ. ಇಲ್ಲಿ ವೃತ್ತಿ, ಸಾಹಿತ್ಯ, ಚಿಂತನೆ, ಕಾಲ, ಸ್ಥಳ, ಸಂಸ್ಕೃತಿ ಮುಖ್ಯವಾಗಿ ಕಂಡುಬರುತ್ತದೆ. ಹಾಗಾಗಿ ಇದು ದಲಿತ ಬಂಡಾಯದ ಹೋರಾಟಗಳು, ಚಳುವಳಿಗಳ ಉನ್ನತ ಸ್ಥಿತಿಯಲ್ಲಿದ್ದು ರೂಪಗೊಂಡಿದೆ. ಹಾಗೆಯೇ ೧೯೭೩ರ ತುರ್ತುಪರಿಸ್ಥಿತಿಯು ಈ ಕೃತಿಯ ವಸ್ತುವಾಗಿದೆ. ಇಲ್ಲಿ ಮುಖ್ಯವಾಗಿ ಸಾಮಾಜಿಕ ಪ್ರಜ್ಞೆ, ಸಾಮಾಜಿಕ ಚಿಂತನೆ, ಸಾಮಾಜಿಕ ಎಚ್ಚರ ಇವುಗಳ ನೆಲೆಯಿಂದ ಸಾಹಿತ್ಯದ ದಿಕ್ಕನ್ನು ಬದಲಾವಣೆಗೆ ಒಳಪಡಿಸಲಾಗಿದೆ. ಹಾಗಾಗಿ ಹಿಂದಿನ ನವೋದಯ, ನವ್ಯ ಮತ್ತು ದಲಿತ ಬಂಡಾಯದ ಅನೇಕ ಕಾವ್ಯಗಳ ದಶಕಗಳಾಗಿ ಧುಮುಕಿವೆ. ಆಗ ಎಚ್.ಎಸ್.ವೆಂಕಟೇಶಮೂರ್ತಿಯವರ 'ಸಿಂದಬಾದನ ಆತ್ಮಕಥೆ' ರೂಪಗೊಂಡದ್ದು ಸಮಾಜ ಬದಲಾದುದರ ಪರಿಸ್ಥಿತಿಯಲ್ಲಿ. ಇದೇ ಕಾಲಮಿತಿಯಲ್ಲಿ ಚಂಪಾ ಅವರ 'ಗಾಂಧಿ ಸ್ಮರಣೆ' ಅಡಿಗರ ಕವಿತೆಗಳು ಅನೇಕ ಸಾಮಾಜಿಕ ಚಲನವಲನಗಳನ್ನು ತಿದ್ದುವ ಸ್ಥಿತಿಯಲ್ಲಿವೆ. ಈ ಸಂದರ್ಭದಲ್ಲಿ ಸಾಮಾಜಿಕ ಎಚ್ಚರದಿಂದ ದಲಿತ-ಬಂಡಾಯದ ನೆಲೆಯಿಂದ ಎಚ್.ಎಸ್. ವೆಂಕಟೇಶಮೂರ್ತಿಯವರು ಕಾವ್ಯರಚನೆ ಮಾಡಿದ್ದಾರೆ. ಜಿ.ಎಸ್.ಎಸ್. ಅವರು ಮುನ್ನುಡಿಯಲ್ಲಿ ಹೇಳುತ್ತಾ "ಕುವೆಂಪು, ಬೇಂದ್ರೆ ಇವರ ತಲೆಮಾರಿನ ಲೇಖಕರಿಗೆ ಇದೆಲ್ಲದರ ಬಗೆಗೆ ಇದ್ದ 'ದಿವ್ಯ ನಿರ್ಲಕ್ಷ್ಯ'ವನ್ನು ಈಗ ಎಲ್ಲಿಂದ ತರೋಣ?"[೬೭] ಎಂದು ತಿಳಿಸಿರುವರು. ಈ ಮುನ್ನುಡಿಯಲ್ಲಿ ಬೇಂದ್ರೆ, ಕುವೆಂಪು ಅವರ ಕಾವ್ಯದ ಬಗ್ಗೆ ಅಂದಿನ ಸಾಮಾಜಿಕ ಪ್ರಜ್ಞೆಯಿತ್ತು. ಆದರೆ ಹೊಸತಲೆಮಾರಿನ ಲೇಖಕರಿಗೆ ಕುವೆಂಪು, ಬೇಂದ್ರೆಯವರನ್ನು ಮೀರಿ ಸಾರ್ವಜನಿಕ ಎಚ್ಚರಿಕೆ ಕೊಟ್ಟಿದ್ದಾರೆ ಎಂಬ ಸಮರ್ಥನೆ ಜಿ.ಎಸ್.ಎಸ್. ಅವರದು. ಏಕೆಂದರೆ ದಿವ್ಯ ನಿರ್ಲಕ್ಷ್ಯದ ಕಾರಣವಾಗಿ ಜಿ.ಎಸ್.ಎಸ್. ಅವರು ಹೇಳುವಂತೆ "ಕನ್ನಡ ಕಾವ್ಯ ಮುಂದೇನು ಎಂಬ ಸಂದೇಹದ ಸ್ತಬ್ಧ ನೆಲೆಗೆ ನಿಂತ ಈ ಕೆಲವು ವರ್ಷಗಳಲ್ಲಿ ಸಾಮಾಜಿಕ ಕಳಕಳಿಯನ್ನು ಕೇಂದ್ರವಾಗಿರಿಸಿಕೊಂಡ ಒಂದು ಅಭಿವ್ಯಕ್ತಿಯ ಚಳುವಳಿ ಹುಟ್ಟಿಕೊಂಡಿದ್ದು ವಿಶೇಷ ಸಂಗತಿಯಾಗಿದೆ"[೬೮] ಎಂದು ಹೇಳುತ್ತಾರೆ. ಈ ಮುನ್ನುಡಿಯ ಸಂದರ್ಭದಲ್ಲಿ ನವೋದಯ, ನವ್ಯ

ಕಾವ್ಯ ಉತ್ತುಂಗ ಸ್ಥಿತಿಯಲ್ಲಿತ್ತು. ಹಾಗೆ ಒಂದು ದೊಡ್ಡತನ ಅಲ್ಲಿ ಒಳಗೊಂಡಿದ್ದ ಕಾಲವದು. ಆದರೆ ೭೦ರ ದಶಕದಲ್ಲಿ ಇದ್ದಕ್ಕಿದ್ದಂತೆ ದಲಿತಪ್ರಜ್ಞೆ, ಸಾಮಾಜಿಕ ಪ್ರಜ್ಞೆ ಚಿಂತನೆಗಳು ಕಂಡುಬರುತ್ತವೆ. "ಇನ್ನಾರೂ ಘೋಷಣೆಗಳನ್ನು ಕೂಗಲೇಬಾರದು ಎಂದುಕೊಂಡು ಕೆಲವರು ದಲಿತ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ ಇತ್ಯಾದಿಗಳನ್ನು ಒಂದು ಬಗೆಯ ಗುಮಾನಿಯಿಂದ ನೋಡಿದ್ದಿರಬಹುದು. ಆದರೆ ಸಾಮಾಜಿಕ ಪ್ರಜ್ಞೆ, ದಲಿತ ಪ್ರಜ್ಞೆ ಇತ್ಯಾದಿಗಳು ವಾಸ್ತವವಾಗಿ ಯಾರ ಘೋಷಣೆಯ ವಿಷಯಗಳೂ ಅಲ್ಲ. ಅವುಗಳು ಬದಲಾದ ಪರಿಸರದ ವಾಸ್ತವ ಸಂಗತಿಗಳು. ನಿಜವಾದ ಅರ್ಥದಲ್ಲಿ ಇದು ನಮ್ಮ ಸಮಾಜವು ಒಂದು ತಿರುವನ್ನು ಪಡೆಯುತ್ತಿರುವ ಕಾಲವಾಗಿದೆ"[೧೯] ಎಂದು ಜಿ.ಎಸ್.ಎಸ್. ಅವರು ವೈದಿಕ ಪುರೋಹಿತಶಾಹಿ ನಿಲುವುಗಳಿಗೆ ಹಾಗೂ ವಸಾಹತುಶಾಹಿ ನಿಲುವುಗಳಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ೭೦-೮೦ರ ದಶಕದ ದಲಿತ ಬಂಡಾಯದ ಹೋರಾಟ ಮಾಡುವವರ ಕುರಿತು ಹೇಳುವಾಗ ಟಾಂಗ್ ನೀಡಿದ್ದಾರೆ. ಈ ಸಿಂದಬಾದನ ಆತ್ಮಕಥೆ ಕೃತಿಯ ವಸ್ತು ಮುಖ್ಯವಾಗಿ ಆಧುನಿಕ ಮಾನವನ ಸಮಸ್ತ ತಾಕಲಾಟಗಳನ್ನೇ ಈ ವಸ್ತುಗಳ ಮೂಲಕ ಅಭಿವ್ಯಕ್ತಿಸಲಾಗಿದೆ. ಈ ಕೃತಿಯಲ್ಲಿ ನಮ್ಮ ನಿಮ್ಮ ಒಂಟಿತನದ ಬದುಕನ್ನು ಹೊಸ ರೀತಿಯಲ್ಲಿ ಕಂಡುಕೊಳ್ಳುವುದಕ್ಕೆ ಈ ಕೃತಿ ಸ್ಫೂರ್ತಿಯಾಗಿದೆ.

ನಟರಾಜ ಬೂದಾಳು ಅವರ 'ಕಪ್ಪು ಹುಡುಗನ ಬೆಳಗು'(೧೯೮೦) ಕವನ ಸಂಕಲನಕ್ಕೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆಯುತ್ತಾರೆ. ಈ ಮುನ್ನುಡಿಯಲ್ಲಿ ದಲಿತ ಬಂಡಾಯ ಧೋರಣೆಗಳು ವ್ಯಕ್ತಗೊಂಡಂತೆ ಕಂಡುಬರುತ್ತದೆ. ಹಾಗೆಯೇ ಕೃತಿಗಳು ಇದುವರೆಗಿನ ಸಾಹಿತ್ಯ ಚಳುವಳಿ ಮತ್ತು ದಲಿತ ಬಂಡಾಯದ ಚಳುವಳಿಗಳು ಒಬ್ಬ ಓದುಗರ ಮುಂದೆ ಹೇಗೆ ಎದುರುಗೊಳ್ಳುತ್ತವೆ ಎಂಬುದು ಮುಖ್ಯ. ಹಾಗಾಗಿ ೮೦ರ ದಶಕದ ಹೋರಾಟಗಳು ಯಾವ ನೆಲೆಯಲ್ಲಿವೆ ಹಾಗೂ ಸಮಾಜ ಸಂವೇದನೆ, ಗ್ರಾಮೀಣ ಭಾರತದ ಸಂವೇದನೆಗಳು ಕಂಡುಬಂದಿವೆ. ಅಂದಿನ ಸಂದರ್ಭದಲ್ಲಿ ಬೂದಾಳು ಅವರ 'ಕಪ್ಪು ಹುಡುಗನ ಬೆಳಗು' ಕವನ ಸಂಕಲನ ಇಡಿಯಾಗಿ ದಲಿತ ಸಂವೇದನೆಯ ಹೊಸ ಎಚ್ಚರದ ಪ್ರತೀಕವಾಗಿ ನಿಲ್ಲುತ್ತದೆ. ವಾಸ್ತವವಾಗಿ ಈ ಕೃತಿಯನ್ನು ಓದುಗರು ಹೊಸ ನೆಲೆಯಲ್ಲಿ ಆರ್ಥಿಕ, ಸಾಮಾಜಿಕ, ಹಿಂದುಳಿದ, ದಲಿತ ಸಮುದಾಯ ಪರವಾಗಿ ಹೊಸ ಎಚ್ಚರದ ಪ್ರತೀಕವಾಗಿ ನಿಲ್ಲುತ್ತದೆ ಎಂಬುದನ್ನು ಗ್ರಹಿಸಬೇಕಾಗಿದೆ.

"'ಕಪ್ಪು' ಅನ್ನುವುದು ಕತ್ತಲೆಗೆ, ಮರೆವಿಗೆ, ನೋವಿಗೆ ಹಾಗೂ ಫಲವಂತಿಕೆಗೆ ಸಂಕೇತವಾಗಿದೆ. ಶತಮಾನಗಳ ಕಾಲ ಕತ್ತಲೆಯಲ್ಲಿದ್ದ ಕಾರಣದಿಂದ ಮತ್ತು ಅದರಿಂದಾಗಿಯೇ ಮರೆವಿಗೆ ಅಥವಾ ನಿರ್ಲಕ್ಷ್ಯಕ್ಕೆ ಒಳಗಾದ ಈ ನೆಲದ ಅತ್ಯಂತ ಫಲವತ್ತಾದ ಸ್ತರವೊಂದು ಅದುಮಿಟ್ಟು ಅಥವಾ ಅದುಮಿಡಲ್ಪಟ್ಟ ಅನುಭವಗಳನ್ನು, ವೇದನೆಗಳನ್ನು, ಸಂವೇದನೆಗಳನ್ನು ಅದರ ಪಾಲಿಗೆ ಒದಗಿದ ಬೆಳಕಿನೊಳಗೆ ಬಿಚ್ಚಿ ಹರಹುತ್ತಿದೆ. ಇಂತಹ ನೆಲದ ಕಪ್ಪು ಹುಡುಗನಿಗೆ ಇದೀಗ ಮುಂಜಾನೆ ಅಥವಾ ಬೆಳಗು ಪ್ರಾರಂಭವಾಗಿದೆ. ಇದೊಂದು ಚಾರಿತ್ರಿಕ ಅನಿವಾರ್ಯತೆ ಕೂಡ"[೨೦] ಎಂದು ಜಿ.ಎಸ್.ಎಸ್.

ಅವರು 'ಕಪ್ಪು ಹುಡುಗ'ನ ರೂಪಕ ಪ್ರತಿಮೆಗಳ ಮೂಲಕ ಇಡಿಯಾದ ದಲಿತ, ಅಲ್ಪಸಂಖ್ಯಾತರ, ಹಿಂದುಳಿದ, ಆರ್ಥಿಕ, ಸಾಮಾಜಿಕ ಸ್ತರದ ನೋವಿನ ಸಂಗತಿಗಳು ಶತಶತಮಾನದ ತುಳಿತಕ್ಕೊಳಪಟ್ಟ ಸಮುದಾಯದ ಕುರಿತು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹಾಗಾಗಿ ಯಾವಾಗ ದಲಿತ ಮತ್ತು ಬಂಡಾಯ ಚಳುವಳಿ ಹೋರಾಟ ಪ್ರಾರಂಭವಾಗಿ ಅದರಿಂದ ಅಷ್ಟು ಇಷ್ಟು ಒಳಿತಾಗಿದ್ದರೆ ಅದು ಕಪ್ಪು ಹುಡುಗನ ಮುಂಜಾನೆ ಅಥವಾ ಬೆಳಕಾಗಿದೆ ಎಂದು ಹೇಳಬಹುದು. ಸಿದ್ಧಲಿಂಗಯ್ಯನವರ ಕವಿತ್ವದಿಂದ ಹಾಗೂ ಡಿ.ಎಸ್.ಎಸ್. ರಚನೆಯ ದೇವನೂರ ಮಹಾದೇವ ಅವರಿಂದ ಹೊಸತನದ ಪ್ರಜ್ಞೆ ಮೂಡಿಸಲಾಗಿದೆ ಎಂದು ವಾಸ್ತವ ದಿನಗಳಲ್ಲಿ ಅರ್ಥ ಮಾಡಿಕೊಳ್ಳಬಹುದು. ಆದರೆ ಪ್ರಸ್ತುತವಾಗಿ ದಲಿತರು ಎಂದರೆ ಅತಿ ಹಿಂದುಳಿದವರಾಗಿರಬಹುದು ಹಾಗೂ ಆರ್ಥಿಕವಾಗಿ ಕೆಲವು ವೇಳೆ ಹೀನ ಸ್ಥಿತಿಗೆ ಬಂದವರಿಂದಲೂ ದಲಿತ ಪ್ರಜ್ಞೆ ಕಾಡಿದೆ. ಇನ್ನೊಂದು ಚರ್ಚೆಯೆಂದರೆ ಜಾಗತಿಕವಾಗಿ ಎಲ್ಲಾ ಸಮುದಾಯಗಳನ್ನು ರಾಜಕೀಯ ದಾಳಕ್ಕೆ ಸಿಲುಕಿಸಿ ತಮ್ಮ ಅವಶ್ಯಕತೆಗೆ ಅನುಗುಣವಾಗಿ ಯಾರು ಜಾಗತೀಕರಣ, ಖಾಸಗೀಕರಣಕ್ಕೆ ಸಿಕ್ಕಿ ನಲುಗಿ, ಹಲವು ಮೂಢನಂಬಿಕೆಗಳಿಗೆ ಒಳಗಾಗಿ ಹೀಗೆ ಯಾರು ಶೋಷಣೆ ಅನುಭವಿಸುತ್ತಾರೋ ಅವರೆಲ್ಲರೂ ದಲಿತ ಸಂವೇದನೆ ಹೊಂದಿದ್ದವರು. ಹಾಗಾಗಿ ಈ ಹಿನ್ನೆಲೆಯಿಂದ ಕಪ್ಪು ಹುಡುಗನು ಎಲ್ಲವನ್ನು ಮೀರಿ ಆದರ್ಶ ಹೊಂದಿದ್ದರೆ ಅವನು ನಿಜವಾಗಿಯೂ ಬೆಳಕನ್ನು ಕಂಡಿದ್ದಾನೆ ಎಂದು ಹೇಳಬಹುದು.

ಕನ್ನಡ ಸಾಹಿತ್ಯಲೋಕದ ಜನರ ಬದುಕಿನ ಭಾಷೆಯನ್ನು ಕವಿತೆಯಾಗಿ ಬರೆದ ದ.ರಾ.ಬೇಂದ್ರೆ ಅವರ ಮಗ ವಾಮನ ಬೇಂದ್ರೆಯವರ 'ಅನಂತಧಾರೆ' ಕವನ ಸಂಕಲನಕ್ಕೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆದಿದ್ದಾರೆ. ಈ ಮುನ್ನುಡಿಯಲ್ಲಿ ಬೇಂದ್ರೆಯವರು ತೀರಿಹೋದ ಬಳಿಕ ಅವರ ನೆನಪು, ಸಾಹಿತ್ಯ, ಚಿಂತನೆಯು ಸಾಹಿತ್ಯ ಓದುಗರಲ್ಲಿ ಒಡಮೂಡಿದೆ. ಹೀಗಾಗಿ ಅವರು ಕವಿತೆ ಹೀಗೆ ಇದೆ.

> "ಬರ್‍ರಿ ಬರ್‍ರಿ ನೀವು ಒಳಗೆ ಬನ್ನಿರಿ
> ಬೇಂದ್ರೆ ಇನ್ನಿಲ್ಲಿ ಅನ್ನಬ್ಯಾಡರಿ
> ಬಟ್ಟಲ ಸಕ್ಕರ್‍ಯಾಗಿ ಸಿಹಿ ಹಂಚತಾನ
> ಮನಸ್ಸಿದ್ದರೆ ಕೈಹಾಕರಿ"[೭೦] (ಪುಟ ೪೮)

ಇಲ್ಲಿ ಮುಖ್ಯವಾಗಿ ಬೇಂದ್ರೆಯವರನ್ನು ಕುರಿತು ಓದುರಿ ಮತ್ತು ಸಂಶೋಧನೆಯಲ್ಲಿ ತೊಡಗಿಕೊಳ್ಳಿ ಎಂಬುದಾಗಿದೆ. ಹಾಗೆಯೇ ಬೇಂದ್ರೆಯವರ ಕುರಿತು ಕವಿತೆಗಳು ಕಂಡುಬರುತ್ತವೆ. ಈ ಕವನ ಸಂಕಲನದ ಮುನ್ನುಡಿಯಲ್ಲಿ ಜಿ.ಎಸ್.ಎಸ್. ಅವರ ಕವಿತೆಗಳು "ಸಮಕಾಲೀನ ಬದುಕಿನ ಅಸಾಂಗತ್ಯಗಳನ್ನು ಕುರಿತವುಗಳಾಗಿವೆ. ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ಕ್ಷೇತ್ರಗಳೊಳಗಿನ ಏರಿಳಿತ ಮತ್ತು ಅಪಮೌಲ್ಯಗಳನ್ನು ಕುರಿತ ಸಾತ್ವಿಕ ಸಂತಾಪವೊಂದು ಈ ಕವಿತೆಗಳ ಹಿನ್ನೆಲೆಯಲ್ಲಿದೆ. ಹೀಗಾಗಿ ಸಾರ್ವಜನಿಕ ಬದುಕಿನ ಬಗ್ಗೆ ಕ್ಷೇಮ ಕಾತರವಾದ

ಕಾಳಜಿಗಳು ಇಲ್ಲಿನ ಸಂವಾದದ ನೆಲೆಯಾಗಿದೆ"[೮] ಎಂದು ಹೇಳುತ್ತಾರೆ. ಈ ನೆಲೆಯಲ್ಲಿ ಜನಸಾಮಾನ್ಯರ ಬದುಕಿನ ಸ್ಥಿತ್ಯಂತರ ಕುರಿತು ಹೇಳಿದೆ. ಬೇಂದ್ರೆ, ವಾಮನ ಬೇಂದ್ರೆ ಜೊತೆಗೆ ಕುವೆಂಪು, ಎಲ್ಲಾ ಸಾಹಿತ್ಯ ಪ್ರಕಾರಗಳ ಸಂವೇದನೆಯನ್ನು ಆಯಾಕಾಲಕ್ಕೆ ಅರ್ಥ ಮಾಡಿಕೊಳ್ಳಬಹುದು.

ಸುಮತೀಂದ್ರ ನಾಡಿಗ್ ಅವರ 'ಕಾವ್ಯವೆಂದರೇನು?' ಕೃತಿಗೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆಯುತ್ತಾ ಕೆಲವು ಚಾರಿತ್ರಿಕ ಪ್ರಶ್ನೆಗಳನ್ನು ಎತ್ತುತ್ತಾ ಕಾವ್ಯದ ನೆಲೆಯೇನೆಂದು ವಿಶ್ಲೇಷಿಸಿದ್ದಾರೆ. ಕಾವ್ಯವೆಂದರೆ ಒಂದು ಕಾಲದಲ್ಲಿ ಮೆರೆದಿದ್ದು, ನವೋದಯ ಕಾಲಕ್ಕೆ ಪಾಶ್ಚಾತ್ಯ ಪ್ರೇರಣೆ ಪ್ರಭಾವಗಳಿಂದ ಕನ್ನಡ ಸಾಹಿತ್ಯದಲ್ಲಿ ಹಲವು ಪ್ರಕಾರಗಳು. ಈಗ ಕಾವ್ಯವೆಂದರೆ ಸಾಹಿತ್ಯದ ಹಲವು ಪ್ರಮುಖ ಪ್ರಕಾರಗಳ ನಡುವೆ ತಾನೂ ಒಂದು ಎಂದು ಹೇಳುವ ಪರಿಸ್ಥಿತಿ ಬಂದಿದೆ. ಆದರೆ ಒಂದು ಕಾವ್ಯ ಎನ್ನುವುದಕ್ಕಿಂತ ಸಾಹಿತ್ಯ ಓದುವ, ಗ್ರಹಿಸುವ, ಅಧ್ಯಯನ ಮಾಡುವ ದೃಷ್ಟಿಯಿಂದ ಹಲವು ಪ್ರಕಾರಗಳು ಮುಖ್ಯವಾಗಿವೆ. ಆದರೆ ಕಾವ್ಯವೆಂದರೆ ಹಿಂದಿನ ದಿನಗಳಲ್ಲಿ ಮಹತ್ವ ಇದೆ. ಈಗಲೂ ಮಹತ್ವವಿದೆ. ಹಾಗಾಗಿ ಕಾವ್ಯದ ಚಿಂತನೆ ಹಾಗೂ ಗ್ರಹಿಸುವ ಭಾಷೆಯಲ್ಲಿ ಕಾವ್ಯ ಕಟ್ಟುವ ನೆಲೆಯನ್ನು ಓದುಗರು ಹುಡುಕಬೇಕಾಗಿದೆ.

ಜಿ.ಎಸ್.ಎಸ್. ಅವರು ಹೇಳುವಂತೆ "ಕಾವ್ಯದ ಇತರ ನಿಯೋಗಗಳೇನೆ ಇರಲಿ ನಿಷ್ಠುರ ಹಾಗೂ ವಾಸ್ತವ ಜಗತ್ತಿಗೆ ಪ್ರಾಯೋಜನಿಕ ಏಕತಾನಕ್ಕೆ ಸಿಕ್ಕಿಕೊಳ್ಳದ ಹಾಗೆ, ತುಕ್ಕು ಹಿಡಿಯದ ಹಾಗೆ ಕನಸುಗಳನ್ನು ಹಾಗೂ ಮನುಷ್ಯ ಏರಲು ಆಶಿಸುವ ಎತ್ತರದ ಹಂಬಲಗಳನ್ನು ಕಳೆದುಕೊಳ್ಳದ ಹಾಗೆ ಜೀವನ ಪ್ರೀತಿಯಲ್ಲಿ ನಮ್ಮನ್ನು ತೊಡಗಿಸುತ್ತ ನಮ್ಮನ್ನು ಸೃಜನಾತ್ಮಕವಾಗಿ ಉಳಿಸುವುದು ಕಾವ್ಯ ಬೇರೆ ಮಾತಿನಲ್ಲಿ ಹೇಳಬೇಕೆಂದರೆ ಕಾವ್ಯವನ್ನು ಬರೆಯುವುದಾಗಲೀ ಅದರ ನಿಜವಾದ ಆಸ್ವದ ಹಾಗೂ ಅಧ್ಯಯನವಾಗಲೀ ಅಥವಾ ಅದನ್ನು ಕುರಿತ ಚರ್ಚೆಯಾಗಲೀ ಮೂಲತಃ ಸೃಜನಾತ್ಮಕ ಚಟುವಟಿಕೆಗಳೇ ಆಗಿವೆ. ಇಂತ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಅಪೇಕ್ಷಿಸುವ ತರುಣ ಚೇತನಗಳಿಗೆ ಗೆಳೆಯ ಸುಮತೀಂದ್ರ ನಾಡಿಗರ ಈ ಕಿರುಕೃತಿ ಖಂಡಿತವಾಗಿಯೂ ಮಾರ್ಗದರ್ಶಕವಾಗಬಲ್ಲವೆಂಬುದು ನನ್ನ ತಿಳುವಳಿಕೆಯಾಗಿದೆ"[೭೩] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಕಾವ್ಯ ಬರೆದರೆ, ತಾನು ಕವಿತೆ, ಕಾವ್ಯ ಬರೆದಿದ್ದೇನೆಂದು ಹೇಳುವವರು ಇದ್ದಾರೆ. ಆದರೆ ಆ ಕಾವ್ಯ ಜನರಿಗೆ ಹೇಗೆ ತಲುಪುತ್ತಿದೆ ಎಂಬುದು ಮುಖ್ಯ. ಹಾಗಾಗಿ ಹಿಂದಿನ ಪ್ರಾಚೀನ ಕಾವ್ಯಗಳು ಭಾಷೆ, ವಸ್ತು, ರಸಾನುಭವಗಳು, ಲಯಬದ್ಧತೆಯಿಂದ ಕೂಡಿರುತ್ತಿದ್ದವು. ಆದರೆ ಪ್ರಸ್ತುತ ಕಾವ್ಯಗಳ ಗುಣಗಳು ಹೇಗಿವೆ? ಯಾವ ಸ್ವರೂಪ ಪಡೆದಿವೆ ಎನ್ನುವುದು ಮುಖ್ಯವಾಗಿದೆ.

ವಿಕ್ರಮ ವಿಸಾಜಿಯವರ 'ತಮಾಷಾ'(೨೦೦೦) ಕವನಸಂಕಲನಕ್ಕೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆಯುತ್ತಾ ಪ್ರಸ್ತುತ ಕಾವ್ಯ ಪರಿಣಾಮಗಳ ಕುರಿತು ಕಾಲದ ಗತಿಯಲ್ಲಿ ಕಾವ್ಯದ ತಾತ್ವಿಕ ನೆಲೆಯನ್ನು ತಿಳಿಸುತ್ತದೆ ಎಂದಿದ್ದಾರೆ. ಸುಮತೀಂದ್ರ ನಾಡಿಗರ 'ಕಾವ್ಯವೆಂದರೇನು?' ಕೃತಿಯ ನಿಲುವು ವಿಕ್ರಮ ವಿಸಾಜಿಯವರ ತಮಾಷಾದಲ್ಲಿನ ನಿಲುವು ಒಂದೇ ಎನಿಸಿದರೂ ಕಾವ್ಯ

ಬರೆಯುವ ಕಾಲಘಟ್ಟ ಓದುಗರ ಒರೆಗಚ್ಚುವ ಚಿಂತನೆಯಲ್ಲಿ, ಜಾಗತೀಕರಣದಲ್ಲಿ ಕಾವ್ಯದ ಮಹತ್ವವನ್ನು ಕುರಿತಂತೆ ಈ ಮುನ್ನುಡಿಯಲ್ಲಿ ತಿಳಿಸಲಾಗಿದೆ. ಜಿ.ಎಸ್.ಎಸ್. ಅವರು ಹೇಳುವಂತೆ "ಕನ್ನಡ ಕಾವ್ಯಕ್ಕೆ ಇದೊಂದು ಆತಂಕದ ಕಾಲ, ನಿರೀಕ್ಷೆಯ ಕಾಲ ಕಳೆದ ಅರ್ಧ ಶತಮಾನದಲ್ಲಿ ಹಲವು ಚಳುವಳಿಗಳ ಮೂಲಕ ಹಾದುಬಂದ ಕನ್ನಡದ ಸಮೃದ್ಧಿ ಹಾಗೂ ವೈವಿಧ್ಯತೆಯ ಕಾವ್ಯ ಪ್ರತಿಭೆ ಈಗಾಗಲೇ ಒಂದು ಬಗೆಯ ನಿಲುಗಡೆಗೆ ಬಂದು ಹೊಸ ಹುಡುಕಾಟಗಳಲ್ಲಿ ತೊಡಗಿದ ಕಾಲ. ಕನಸುಗಳಿಲ್ಲದ, ವಿಸ್ಮಯಗಳಿಲ್ಲದ ಮಹತ್ವಾಕಾಂಕ್ಷೆಗಳಿಲ್ಲದ ಕಾಲ ಇದು. ವಾಣಿಜ್ಯ ಸಂಸ್ಕೃತಿಯ ಆಕ್ರಮಣದ ಎದುರು ನಮ್ಮ ಸೃಜನಶೀಲತೆ ಹಾಗೂ ವೈಚಾರಿಕತೆಗಳು ತತ್ತರಿಸುತ್ತ ನಿಂತ ಕಾಲ ಇದು"[೭೪] ಎಂದಿರುವರು. ಈ ಹಿನ್ನೆಲೆಯಿಂದ ಕಾವ್ಯ, ಕತೆ, ಕಾದಂಬರಿ ಬರೆಯುವವರು ಕಡಿಮೆ. ಹಾಗಾಗಿ ಕಾವ್ಯ ಕಟ್ಟುವ ಸ್ಥಿತಿ ಯಾವಾಗ ಬರುತ್ತದೆ. ಮನುಷ್ಯನಿಗೆ ಕನಸುಗಳು ಇಲ್ಲ ಎಂಬುದಕ್ಕೆ ತನ್ನನ್ನು ತಾನು ಹುಡುಕುವ ಸಾಫ್ಟ್‌ವೇರ್ ಕಾಲದಲ್ಲಿ ಮನುಷ್ಯ ಒತ್ತಡದಲ್ಲಿ ಬದುಕುತ್ತಿದ್ದಾನೆ. ಹಾಗಾಗಿ ಕವಿತೆ, ಕಥೆ, ಕಾದಂಬರಿ ಬರೆಯುವ ಸ್ಥಿತಿ ಎಲ್ಲಿದೆ. ಆದರೂ ಸಾಹಿತ್ಯ ಹುಟ್ಟುತ್ತವೆ. ಅದು ವೈಚಾರಿಕ ನೆಲೆಯ ಬರಹ ಇದ್ದ ಸಾಹಿತ್ಯವನ್ನು ವಸಾಹತೋತ್ತರ ಚಿಂತನೆಗಳಾಗುತ್ತಿವೆಯೇ ಹೊರತು ಸೃಜನಶೀಲ ಬರವಣಿಗೆ ಕಡಿಮೆ ಎಂಬ ಭಾವನೆ ವ್ಯಕ್ತಗೊಂಡಿದೆ. ಆದರೂ ಕವಿತೆಗಳು ಗಂಭೀರವಾಗಿ ಹುಟ್ಟುವುದು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಂಡುಬರುತ್ತವೆ. ಏಕೆಂದರೆ ಕನ್ನಡ ಕಾವ್ಯದ ಹಿಂದಿನ ಕಾಲಘಟ್ಟದಲ್ಲಿ ಸಿದ್ಧಾಂತ, ಪ್ರತಿಮೆ, ರೂಪಕಗಳು ಕಂಡುಬರುತ್ತವೆ. ಆದರೆ ಪ್ರಸ್ತುತವಾಗಿ ಕಾವ್ಯ ಮುಕ್ತಛಂದದಿಂದ ಬೇರೆ ಸ್ವರೂಪ ಹೊಂದಿ ಅಭಿವ್ಯಕ್ತಿಗೆ ಸ್ವಾತಂತ್ರ್ಯ ಲಭಿಸಿದೆ ಎಂದು ಹೇಳಬಹುದು.

ಎಂ.ಡಿ.ವಕ್ಕುಂದ ಅವರ 'ಮಗು ಮಲಗಿದೆ ಎದೆ ಮೇಲೆ' ಎಂಬ ಕವನಸಂಕಲನಕ್ಕೆ ಜಿ.ಎಸ್.ಎಸ್. ಅವರು ಮುನ್ನುಡಿ ಬರೆದಿದ್ದಾರೆ. ಈ ಕೃತಿಯ ವಸ್ತು ಪ್ರಸ್ತುತ ವಿಷಯಕ್ಕೆ ಪ್ರತಿಕ್ರಿಯೆ ನೀಡಿದೆ. ಹಾಗೆಯೇ ಈ ಮುನ್ನುಡಿಯಲ್ಲಿಯೂ ಕೂಡ ಮಾನವನ ಸಂಘರ್ಷ ನೆಲೆಗಳನ್ನು ಹಿಂಸೆ ಮತ್ತು ಶಾಂತಿಯ ಪ್ರತೀಕಗಳಾಗಿ ಗುರುತಿಸಲಾಗಿದೆ. ಮುಖ್ಯವಾಗಿ ಕಳೆದ ಎರಡು ದಶಕಗಳ ಕಾಲಮಾನದಲ್ಲಿ ನಮ್ಮ ಸಾಂಸ್ಕೃತಿಕ ಭಾರತವನ್ನು ಒಳಗೊಂಡಂತೆ ಈ ಜಗತ್ತು ಧಾರ್ಮಿಕ ಮೂಲಭೂತವಾದಿಗಳ ಮತ್ತು ಶಕ್ತಿ ರಾಜಕಾರಣದ ಹಿನ್ನೆಲೆಯಿಂದ ಅಮಾನವೀಯವಾದ ಸಂಘರ್ಷ ಮತ್ತು ಹಿಂಸೆಗಳಿಗೆ ಒಳಗಾಗುತ್ತಿರುವ ದುರಂತವನ್ನು ಅಸಹಾಯಕವಾಗಿ ನಾವೆಲ್ಲರಿಗೂ ಎದುರುಗೊಳ್ಳುವ ಪರಿಸ್ಥಿತಿಯೊಂದು ಪ್ರಾಪ್ತವಾಗಿದೆ. ಸಾಮಾಜಿಕ ಅಸಮಾನತೆ, ಶೋಷಣೆ, ವ್ಯಾಪಕವಾದ ಭ್ರಷ್ಟಾಚಾರ, ಕೋಮುವಾದ ಇತ್ಯಾದಿಗಳಿಗೆ ಸಹಜವಾಗಿ ಮತ್ತು ನಿರಾತಂಕವಾಗಿ ಪ್ರತಿಕ್ರಿಯಿಸುವ ನಮ್ಮ ಜನಸಮೂಹ ತಮ್ಮ ಪ್ರಜ್ಞೆಯಲ್ಲಿಯೇ ಇಟ್ಟುಕೊಂಡು ಸಮಯ ಬಂದಾಗ ಮತ, ಧರ್ಮ, ರಾಜಕಾರಣ ಹಾಗೂ ಕೋಮುವಾದಿ ಸ್ವರೂಪದ ಹಿಂಸೆಗಳನ್ನು ಕುರಿತು ಸಂದರ್ಭಕ್ಕೆ ಪ್ರತಿಕ್ರಿಯಿಸುವ ನಿಲುವು ಹಾಗೂ ಹಿಂಜರಿಕೆಯ ನಿಲುವುಗಳನ್ನು ಹೊಂದಿವೆ. ಇಲ್ಲಿ ಭಾವನೆಗಳು ಸ್ವಾರ್ಥತೆಯನ್ನು ಹೊಂದಿವೆ. ಆದರೂ ತಾವು ಕಂಡುಕೊಂಡ ನೆಲೆಯನ್ನು ಮೀರಬಲ್ಲ ವಿಚಾರವಂತ ಸಂಘಟನೆಯ ಮನಸ್ಸುಗಳಿವೆ.

ಹಾಗಾಗಿ ಇಂತಹ ಸ್ಥಿತಿ ೭೦ರಿಂದ ೮೦ರ ದಶಕದಿಂದ ದಲಿತ ಮತ್ತು ಬಂಡಾಯ ಕಾಲವಾಗಿ ಪ್ರಸ್ತುತದಲ್ಲಿ ಕಾರ್ಪೋರೇಟ್ ಜಗತ್ತು ಶಕ್ತಿ ರಾಜಕಾರಣವನ್ನು ಎದುರಿಸಬೇಕಾಗಿದೆ. ಜೊತೆಗೆ ಮನುಷ್ಯನ ಅಸ್ತಿತ್ವವನ್ನು ಕಿತ್ತುಕೊಳ್ಳುವ ಹಗೆತನದ ಪ್ರವೃತ್ತಿ ಇಂದಿನ ದಿನಮಾನಗಳಲ್ಲಿ ನಡೆಯುತ್ತಿವೆ. ಎಂ.ಡಿ.ವಕ್ಕುಂದ ಅವರ ಅಂಜಿಕೆ ಕವನ ಹೀಗಿದೆ:

"ಬೆಟ್ಟದ ಮೇಲೊಂದು
ಮನೆಯ ಮಾಡಿರುವೆ
ಮೃಗಗಳ ಚಿಂತೆಯಿಲ್ಲ
ಮನುಷ್ಯರದೇ ಅಂಜಿಕೆ"[೭೫] (ಅಂಜಿಕೆ ಪು.೧೯)

ಈ ಕವನ ಅಕ್ಕಮಹಾದೇವಿ ವಚನದ ತರಹವಿದ್ದರೂ ಪ್ರಸ್ತುತವಾಗಿ ಮನುಷ್ಯ ಮನುಷ್ಯರ ಮಧ್ಯೆ ಮಾನವೀಯ ಸಂಬಂಧವಿಲ್ಲವೆಂದಾಗಿದೆ. ಜಿ.ಎಸ್.ಎಸ್. ಅವರು ಹೇಳುವಂತೆ "ಮನುಷ್ಯ ಮನುಷ್ಯರ ನಡುವೆ ಏರ್ಪಡುವ ಸಂಘರ್ಷಗಳಿಂದಾಗಿ ಮಾನವೀತೆಯ ಮಾರಣ ಹೋಮದೆದುರು ಸಮಸ್ತ ಇಂದ್ರಿಯಗಳೂ ಸ್ತಬ್ಧವಾಗಿ ಗ್ರಹಿಕೆಗೆ ಅತೀತವಾದ ನೋವೊಂದು ಹದ್ದಿನ ಹಾಗೆ ಎರಗಿ ಕುಕ್ಕುತ್ತಿದೆ. ಈ ಅಸ್ವಸ್ಥ ವರ್ತಮಾನದ ಹದ್ದುಗಳಿಂದಾಗಿ ಮನುಷ್ಯನ ಎದೆಯ ಮೇಲೆ ಮಲಗಿರುವ ಮಗು(ಮುಗ್ಧತೆ) ನಿದ್ದೆ ಮಾಡಲು ಸಾಧ್ಯವಾಗುತ್ತಿಲ್ಲ"[೭೬] ಎಂದಿರುವರು. ಈ ಹಿನ್ನೆಲೆಯಿಂದ ಸಮಾಜದ ನೋವಿನ, ಅಂಚಿನ ಸಮುದಾಯಗಳು ಆರ್ಥಿಕವಾಗಿ ಹಿಂದುಳಿದ ಜನಸಮೂಹ ಈ ನೋವಿನ ಅಲೆಯಲ್ಲಿ ಮುಳುಗಿವೆ ಎಂದು ಹೇಳಬಹುದು. ಹಾಗಾಗಿ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಕವಿತೆಗಳು ಕಥೆ, ಕಾದಂಬರಿಗಳು ವೈಚಾರಿಕ ಲೇಖನಗಳು ಸಾಮಾಜಿಕ ಸ್ಥಿತಿಯನ್ನು ಕುರಿತು ಚಿಂತಿಸಬೇಕಾಗಿವೆ. ಆದರೆ ಭರತಭೂಮಿಯಲ್ಲಿ ಬುದ್ಧ, ಬಸವ, ಅಂಬೇಡ್ಕರ್, ಗಾಂಧಿ, ಲೋಹಿಯಾ ಇವರೆಲ್ಲರ ಚಿಂತನೆ ಸಮಾಜವನ್ನು ಸೌಹಾರ್ದಯುತ ನೆಲೆಯಲ್ಲಿ ಕಟ್ಟುವುದಾಗಿತ್ತು. ಆದರೆ ಇಂದಿನ ಸ್ಥಿತಿ ಸಮಾಜವನ್ನು ಆಳುವ ನೀತಿಯಿಂದ ಜನರನ್ನು ಮತದ ಹಿನ್ನೆಲೆಯಿಂದ ಒಡೆದು ಆಳುವ ನೀತಿಯನ್ನು ಅನುಸರಿಸಿವೆ. ಕೊನೆಗೆ ಬುದ್ಧ, ಗಾಂಧಿ ಇತರೆ ಮಹನೀಯರು ಶಾಂತಿಯನ್ನು ಬಯಸಿದವರು. ಎಂ.ಡಿ.ವಕ್ಕುಂದ ಅವರ ಕವಿತೆ

"ಅವರು ಬೆಂಕಿ ಹಚ್ಚುತ್ತಿದ್ದಾರೆ
ನಾವು ಭಿನ್ನ ದೀಪ ಹಚ್ಚೋಣ"[೭೭]

ಈ ಕವನ ಮತ್ತೆ ಶಾಂತಿಯನ್ನು ಬಯಸುತ್ತಿದೆ ಎಂದು ಹೇಳಬಹುದು.

ಕುವೆಂಪು ಅವರ ಸಮಗ್ರ ಕವಿತೆಯ ಸಂಪುಟಕ್ಕೆ ಜಿ.ಎಸ್.ಎಸ್. ಅವರು ಬರೆದಿರುವ ಮುನ್ನುಡಿ ತುಂಬಾ ಮಹತ್ವದ ಬರವಣಿಗೆಯಾಗಿದೆ. ಈವರೆಗೆ ಕುವೆಂಪು ಅವರ ಕಾವ್ಯಕ್ಕೆ ಬಿಡಿಯಾದ ಬರಹವಾಗಿ ಪ್ರತಿಕ್ರಿಯಿಸಿದ ಜಿ.ಎಸ್.ಎಸ್. ಅವರು ಈ ಮುನ್ನುಡಿಯಿಂದ ಕುವೆಂಪು ಅವರ ಕಾವ್ಯವನ್ನು ಸಮಗ್ರ ರೀತಿಯಲ್ಲಿ ಗ್ರಹಿಸಿ ಅರ್ಥತೆಯನ್ನು ವಿಶ್ಲೇಷಿಸಿರುವುದನ್ನು ಕಾಣುತ್ತೇವೆ.

ಕುವೆಂಪುಯವರ ಸಮಗ್ರ ಕಾವ್ಯವನ್ನು ಹಾಗೂ ಅವರ ಕೊಡುಗೆಯನ್ನು ಅರ್ಥ ಮಾಡಿಕೊಳ್ಳಲು ಈ ಮುನ್ನುಡಿ ಬರೆದ ಅನೇಕ ಕಾರಣಗಳಿಗೆ ಉಪಯುಕ್ತವಾಗಿದೆ. ಹಾಗೆಯೇ ಆರಂಭದಲ್ಲಿ ಇಂಗ್ಲಿಷ್ ಭಾಷೆಯಲ್ಲಿಯೇ ಬರೆಯಲು ತೊಡಗಿದ ಕುವೆಂಪು ಅವರನ್ನು ಪ್ರಾರಂಭಿಕ ಹಂತದಲ್ಲಿ ಕಾವ್ಯದತ್ತ ಸೆಳೆದುಕೊಂಡಿದ್ದು ಮತ್ತು ಅವರ ಮೇಲೆ ಪ್ರೇರಣೆಯಾಗಿದ್ದು ಪಾಶ್ಚಾತ್ಯ ಕಾವ್ಯವೇ. ಹಾಗೆಯೇ ಅವರನ್ನು ಪ್ರಭಾವಿಸಿದ ಇನ್ನೊಂದು ಸಂಗತಿ ಪಾಶ್ಚಾತ್ಯ ತತ್ವಜ್ಞಾನವೇ ಆಗಿದೆ. ಈ ಎರಡು ಅಂಶಗಳು ಕುವೆಂಪು ಅವರ ಕಾವ್ಯದ ಮೇಲೆ ಹೇಗೆ ಪ್ರಭಾವ ಬೀರಿದವು ಎಂಬುದನ್ನು ಜಿ.ಎಸ್.ಎಸ್. ಅವರು ಇಲ್ಲಿ ಸ್ಪಷ್ಟವಾಗಿ ಗುರುತಿಸಿದ್ದಾರೆ.

ಜಿ.ಎಸ್.ಎಸ್. ಅವರು ಹೇಳುತ್ತಾ "ತಮ್ಮ ನಿಸರ್ಗ ಕವಿತೆಗಳ ಮೂಲಕ ಪಶ್ಚಿಮದ ರೊಮ್ಯಾಂಟಿಕ್ ಕವಿಗಳನ್ನು ಕುವೆಂಪು ನೆನಪಿಗೆ ತರುವಂತೆ ತೋರಿದರೂ ಅವರಿಂದ ನಿಸರ್ಗ ಸೌಂದರ್ಯಾನುಭವಕ್ಕೆ ಕಾವ್ಯ ರೂಪದಲ್ಲಿ ಆಕಾರವನ್ನು ನೀಡುವ ವಿಧಾನವನ್ನು ಕಲಿತುಕೊಂಡರೂ ಪಶ್ಚಿಮದ ರೊಮ್ಯಾಂಟಿಕ್ ಕವಿಗಳಂತೆ ಬದುಕಿನ ಬವಣೆಗೆ ಬೇಸತ್ತು ಅಥವಾ ಕೈಗಾರೀಕರಣ, ಯಾಂತ್ರೀಕರಣ, ನಗರೀಕರಣ ಇತ್ಯಾದಿ ಆಧುನಿಕ ಯುಗ ನಿರ್ಮಿತ ಗೋಜಿಗೆ ಹಾಗೂ ಭ್ರಮೆಗಳಿಂದ ಪಾರಾಗಿ ಸಮಾಧಾನವನ್ನು ಕಂಡುಕೊಳ್ಳಲು ನಿಸರ್ಗದ ಕಡೆ ತಿರುಗಿದವರಲ್ಲಿ ಇವರೊಬ್ಬರು. ಹಾಗೆ ನೋಡಿದರೆ ಕುವೆಂಪು ಬರೆಯುವ ಕಾಲಕ್ಕೆ ಪಶ್ಚಿಮದ ರೊಮ್ಯಾಂಟಿಕ್ ಕವಿಗಳಿಗೆ ಅಂದು ಇದ್ದಂತಹ ಪರಿಸ್ಥಿತಿ ನಮ್ಮಲ್ಲಿನ್ನೂ ಉಂಟಾಗಿರಲಿಲ್ಲ. ನಿಸರ್ಗದ ಬಗೆಗಿದ್ದ ಅವರ ಅಮರಶಕ್ತಿ ಸದಾ ಅವರ ಕೃತಿಯ ಒಂದು ಭಾಗವಾಗಿ ನಿರಂತರ ಕಾಡುವ ಹಸಿವಾಗಿ ದಾಹವಾಗಿ ತನ್ನ ವ್ಯಕ್ತಿತ್ವದ ಒಂದು ವಿಸ್ತರಣೆಯಂತೆ ಕಣ್ಣೆದುರು ಬಾಚಿಕೊಂಡ ನಿಸರ್ಗದಲ್ಲಿ ಅವರನ್ನು ಏಕಾಂಗಿಯ ರಸಯಾತ್ರಿಕನನ್ನಾಗಿ ಪರಿವರ್ತಿಸಿತು"[೭೮] ಎಂದು ಜಿ.ಎಸ್.ಎಸ್. ಅವರು ಗುರುತಿಸಿದ್ದಾರೆ. ಹೀಗೆ ಪಶ್ಚಿಮದ ರೊಮ್ಯಾಂಟಿಕ್ ಕವಿಗಳ ನಿಸರ್ಗ ಆರಾಧನೆಗೂ ಕುವೆಂಪು ಅವರ ನಿಸರ್ಗಪ್ರೇಮಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸುತ್ತಾ, ಮಲೆನಾಡಿನ ಘೋರ ಕಾನನದ ಚೆಲುವನ್ನು ಗ್ರಹಿಸುತ್ತಲೇ ಅದರ ಭೀಕರತೆ, ಜೀವ ವೈವಿಧ್ಯತೆಗಳ ಸೂಕ್ಷ್ಮತೆ, ಜನಸಾಮಾನ್ಯರ ಜೀವನಕ್ರಮ, ಸಂಘರ್ಷಗಳು ಕುವೆಂಪು ಸಾಹಿತ್ಯ ಒಳಗೊಂಡಿದೆ ಎನ್ನುವುದನ್ನು ಈ ಮುನ್ನುಡಿ ತಿಳಿಸಿಕೊಡುತ್ತದೆ.

ಕುವೆಂಪು ಅವರು ಆರಂಭದಿಂದಲೂ ಪ್ರಭುತ್ವ ಮತ್ತು ಪುರೋಹಿತಶಾಹಿಯ ವಿರುದ್ಧ ಸೆಣಸಿದರು ಎಂಬುದನ್ನೂ ಇಲ್ಲಿ ಚರ್ಚಿಸಿದ್ದಾರೆ. ವೈದಿಕ ಮತ್ತು ಪ್ರಭುತ್ವಗಳ ವಿರುದ್ಧ ನಮ್ಮ ಸಾಹಿತ್ಯ ಪರಂಪರೆಯ ಉದ್ದಕ್ಕೂ ಕೇಳಿ ಬಂದ ಧ್ವನಿಯೇ ಕುವೆಂಪು ಅವರಲ್ಲಿ ಮತ್ತೆ ಸ್ಪಷ್ಟವಾಗಿ ಕೇಳುತ್ತದೆ ಎಂಬುದನ್ನು ಜಿ.ಎಸ್.ಎಸ್. ಅವರು ಈ ಮುನ್ನುಡಿಯಲ್ಲಿ ಚರ್ಚಿಸಿದ್ದಾರೆ. ನಮ್ಮ ಪರಂಪರೆಯ ಹಾದಿಯ ಕವಿಗಳ ಜೊತೆ ತಮ್ಮನ್ನು ಗುರುತಿಸಿಕೊಳ್ಳಲಿಲ್ಲ ಎಂಬ ಕುತೂಹಲದ ಪ್ರಶ್ನೆಯನ್ನು ಇಲ್ಲಿ ಎತ್ತಲಾಗಿದೆ. ಆದರೆ ಈ ಪ್ರಶ್ನೆಗೆ ಕಂಡುಕೊಂಡಿರುವ ಉತ್ತರ ಮಾತ್ರ ಪೂರ್ಣ ತೃಪ್ತಿಯನ್ನು ಕೊಡುವುದಿಲ್ಲ ಎಂಬುದನ್ನೂ ಗಮನಿಸಬಹುದು. ಏಕೆಂದರೆ ಕುವೆಂಪು ಅವರು ಇಂಗ್ಲಿಷ್‌ನಲ್ಲಿ

ವಿವೇಕಾನಂದ, ರಾಮಕೃಷ್ಣರ ಕೃತಿಗಳನ್ನು ಓದಿದ್ದು ಇದಕ್ಕೆ ಕಾರಣ ಇರಬಹುದು. ಹಾಗಾಗಿ ವಚನಕಾರರನ್ನು ಓದಿ ಅವರ ವೈಚಾರಿಕತೆಯನ್ನು ತಿಳಿಯುವ ಮುನ್ನವೇ ಕುವೆಂಪು ಅವರು ಇಂಗ್ಲಿಷ್‌ನಲ್ಲಿ ವಿವೇಕಾನಂದರ ಕೃತಿಗಳನ್ನು ಓದಿದ್ದರು. ಹೀಗಾಗಿಯೇ ಅವರ ಮೇಲೆ ವಚನಕಾರರ ಪ್ರಭಾವ ಅಷ್ಟಾಗಿ ಆಗಲಿಲ್ಲ ಎಂಬುದಕ್ಕೆ ವಚನಕಾರರ ಚಳುವಳಿ ಕುವೆಂಪು ಅವರಲ್ಲಿ ರೋಮಾಂಚನವನ್ನು ಉಂಟುಮಾಡಲಿಲ್ಲ ಎಂಬುದನ್ನು ಜಿ.ಎಸ್.ಎಸ್.ಯವರು ತಿಳಿಸುತ್ತಾರೆ. "ಕುವೆಂಪು ಅವರ ಇಡೀ ಸಾಹಿತ್ಯ ಈ ದೇಶದ ಸ್ವಾತಂತ್ರ್ಯಪೂರ್ವದ ಆಶೋತ್ತರಗಳ ಪ್ರತಿನಿಧಿಯೂ, ಸ್ವಾತಂತ್ರ್ಯೋತ್ತರ ಭಾರತದ ವಿಮರ್ಶೆಯೂ ಆಗಿದೆ"[೫೮] ಎಂಬ ಅಂಶವು ಇಲ್ಲಿ ಚರ್ಚೆಯಲ್ಲಿ ವ್ಯಕ್ತಗೊಂಡಿದೆ.

ಜಿ.ಎಸ್.ಎಸ್. ಅವರ ಮುನ್ನುಡಿಗಳು ಸಮಕಾಲೀನ ಕವಿಗಳಿಗೆ ಬರೆದಿರುವ ಮುನ್ನುಡಿಗಳಾದರೂ ಮುಖ್ಯವಾಗಿ ಸಣ್ಣ ವಯಸ್ಸಿನ ತಲೆಮಾರಿನವರ ಕೃತಿಗಳಿಗೆ ಬರೆದಿರುವ ಮುನ್ನುಡಿಗಳಾಗಿರುವ ಕಾರಣ ಇಂತ ಸೂಚನೆಗಳು, ಸಲಹೆಗಳು ತೀರ ಉಪಯುಕ್ತವಾಗಿ ಚಿಕ್ಕ ವಯಸ್ಸಿನವರ ಆತ್ಮವಿಶ್ವಾಸವನ್ನು ಹುರಿದುಂಬಿಸುತ್ತಿವೆ. ಜೊತೆಗೆ ಕೃತಿಕಾರನ ಪ್ರತಿಭೆ ಎಷ್ಟು ಪ್ರಖರವಾದದ್ದು? ಅದರ ಸಾಮರ್ಥ್ಯ, ಆಳ, ವಿಸ್ತಾರಗಳು ಎಷ್ಟು? ಆ ಪ್ರತಿಭೆ ಎಷ್ಟು ದೂರ ಸಾಗಬಲ್ಲದು? ಅದರ ಒಳ ಅರ್ಥಗಳು ತನ್ನನ್ನು ತಾನು ಹುಡುಕುವ ಕೃತಿಯ ಮತ್ತು ವಸ್ತು ಎಂತದ್ದು ಎನ್ನುವುದನ್ನು ಮಿತಿಯಲ್ಲಿ ಚರ್ಚಿಸಲಾಗಿದೆ.

### ೫.೬. ಕೆ.ಪಿ.ಪೂರ್ಣಚಂದ್ರ ತೇಜಸ್ವಿ

ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರ ಕನ್ನಡ ಸಾಹಿತ್ಯದ ಪ್ರಮುಖ ಬರಹಗಾರರಲ್ಲಿ ಒಬ್ಬರಾಗಿದ್ದಾರೆ. ಹಾಗೆಯೇ ವಿಶಿಷ್ಟ ಸ್ವಭಾವದ ವ್ಯಕ್ತಿಯಾಗಿ ಕನ್ನಡ ಚಿಂತನೆಯನ್ನು ವಿಸ್ತರಿಸಿದವರು. ಬೌದ್ಧಿಕವಾಗಿ ಓದುಗರನ್ನು ಬೇಗನೆ ಸೆಳೆಯುವ ನೇರನುಡಿಯ ವ್ಯಕ್ತಿಯಾಗಿ ಅವರ ಸಾಹಿತ್ಯದ ಮೂಲಕ ಮನೋಲೋಕಕ್ಕೆ ಚಿಕಿತ್ಸಕರಾಗಿ, ಪರಿಸರ ಪ್ರೇಮಿಯಾಗಿ ನಗರೀಕರಣವನ್ನು ಧಿಕ್ಕರಿಸಿ, ಹಳ್ಳಿಯ ಪ್ರೇಮಿಯಾಗಿ ಇನ್ನೊಬ್ಬರ ಮೇಲೆ ಅವಲಂಬನೆ ಹೊಂದದೆ ವಾಸ್ತವ ಬದುಕಿನಲ್ಲಿ ತಮಗೆ ಅನಿಸಿದ್ದನ್ನು ಹೇಳುವ ಮನೋಭಾವದವರು. ಹಾಗೆಯೇ ಸಮಾಜದ ವ್ಯಕ್ತಿಯಾಗಿ, ಸಾಹಿತಿಯಾಗಿ ತನ್ನ ವ್ಯಕ್ತಿಪ್ರಜ್ಞೆಯಿಂದ ಸಮಾಜದ ಜೀವನಾನುಭವದ ನಿಜವನ್ನು ಅದರ ಅರ್ಥಪೂರ್ಣತೆಯನ್ನು ವಿಶ್ಲೇಷಿಸುವುದು, ಶೋಧಿಸುವುದನ್ನು ಅವರ ಸಾಹಿತ್ಯದಲ್ಲಿ ಮುಖ್ಯವಾಗಿ ಕಾಣುತ್ತೇವೆ.

ತೇಜಸ್ವಿ ಅವರ 'ಅಬಚೂರಿನ ಪೋಸ್ಟಾಫೀಸು' ಕೃತಿಯ 'ಹೊಸ ದಿಗಂತದೆಡೆಗೆ' ಮುನ್ನುಡಿಯಲ್ಲಿ ಸಾಹಿತ್ಯದಲ್ಲಿರುವ ಹೊಸತನದ ಚಿಂತನೆ ಮಾಡಿದ್ದಾರೆ. ಇವರು ನವ್ಯದ ಕಾಲದಲ್ಲಿ ಲೇಖಕರಾಗಿ ಗುರುತಿಸಿಕೊಂಡವರು. ಆದರೆ ಅವರು ನಂತರ ನವ್ಯಮಾರ್ಗವನ್ನು ಧಿಕ್ಕರಿಸುತ್ತಾರೆ. "ಕನ್ನಡದ ನವ್ಯ ಸಂಪ್ರದಾಯವನ್ನು ಸಂಪೂರ್ಣವಾಗಿ ತೊರೆದು ಹೊಸ ದಿಕ್ಕಿನಲ್ಲೀಗ ನಾವು ಅನ್ವೇಷಿಸಬೇಕಾಗಿದೆ. ಇದಕ್ಕೆ ಕಾರಣ ಹೊಸ ಸಾಹಿತ್ಯ ಸೃಷ್ಟಿಸಬೇಕೆಂಬ ಹಂಬಲವಲ್ಲ ಅಥವಾ ಹೊಸ ಪಂಥ ಒಂದರ ಸೃಷ್ಟಿಕರ್ತನಾಗಬೇಕೆಂಬ ಆಕಾಂಕ್ಷೆಯೂ ಅಲ್ಲ. ಕಳೆದ ಹದಿನೈದು ಇಪ್ಪತ್ತು ವರ್ಷಗಳಲ್ಲಿ ನವ್ಯ

ಸಾಹಿತಿಗಳು ಪ್ರಾಮಾಣಿಕತೆಯ ಹೆಸರಿನಲ್ಲಿ ಅಭ್ಯಸಿಸಿದ ಅಪ್ರಾಮಾಣಿಕತೆ, ವಿಮರ್ಶೆಯ ಹೆಸರಿನಲ್ಲಿ ನಡೆಸಿದ ಪುಢಾರಿ ರಾಜಕಾರಣ, ಅನುಭವ ಕ್ಷೇತ್ರವನ್ನು, ಅಭಿವ್ಯಕ್ತಿ ಸಾಮರ್ಥ್ಯವನ್ನು ವಿಸ್ತರಿಸುವ ಹೆಸರಿನಲ್ಲಿ ಕುಗ್ಗಿಸಿದುದು ಇವೆಲ್ಲಾ ಈ ಮಾರ್ಗದ ಬರಹಗಾರರಿಗೆ ಹಿಡಿದ ಶನಿಗಳಾಗಿವೆ"[೮೦] ಎಂದು ಮುನ್ನುಡಿಯಲ್ಲಿ ಹೇಳುತ್ತಾರೆ. ತೇಜಸ್ವಿಯವರು ಬಂಡಾಯದ ಮನೋಭಾವನ್ನು ವ್ಯಕ್ತಪಡಿಸುತ್ತ, ನವ್ಯ ಸಂಪ್ರದಾಯವನ್ನು ಏಕೆ ಧಿಕ್ಕರಿಸುತ್ತಾರೆ? ಅವರು ಹೊಸ ಸಾಹಿತ್ಯ ಪ್ರಕಾರದ ಪ್ರವರ್ತಕರಾಗಲು ಹೋಗುವುದಿಲ್ಲ. ನವ್ಯ ಸಾಹಿತಿಗಳು ಪ್ರಾಮಾಣಿಕತೆಯನ್ನು ಹೇಳುವುದು, ಅಪ್ರಾಮಾಣಿಕತೆ ವಿಮರ್ಶೆಯ ಹೆಸರಿನಲ್ಲಿ ಪುಢಾರಿ ರಾಜಕಾರಣ ಮಾಡುವುದು ಅವರಿಗೆ ಇಷ್ಟ ಆಗುವುದಿಲ್ಲ. ನವ್ಯ ಸಾಹಿತ್ಯ ತೇಜಸ್ವಿಯವರ ದೃಷ್ಟಿಯಲ್ಲಿ ವಿಮರ್ಶೆಗೆ ಒಳಗಾಗಿದೆ, ಹೇಗೆ ಎನ್ನುವುದನ್ನು ಮುನ್ನುಡಿಯಲ್ಲಿ ಹೇಳುತ್ತಾರೆ. "ನವ್ಯ ಸಾಹಿತ್ಯ ಸಂಪೂರ್ಣ ನಿಸ್ತೇಜಗೊಂಡಿದೆ. ಬದಲಾಗುತ್ತಿರುವ ಪರಿಸ್ಥಿತಿಗೆ ಪ್ರತಿಸ್ಪಂದಿಸಲು ಅದಕ್ಕೆ ಅಸಾಧ್ಯವಾಗಿದೆ. ಏಕೆಂದರೆ ಮೊದಲನೆಯದಾಗಿ ಯಾಂತ್ರಿಕವಾಗಿರುವ ಅದರ ಸಾಂಕೇತಿಕ ಸಿದ್ಧ ಶೈಲಿ ಮತ್ತು ತಂತ್ರಗಳು, ಎರಡನೆಯದಾಗಿ ಕೇವಲ ಉಪಾಧ್ಯಾಯರಿಂದಲೇ ತುಂಬಿರುವ ಅದರ ಸಾಹಿತಿ ವರ್ಗ, ಮೂರನೆಯದಾಗಿ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡಿರುವ ಅದರ ಕ್ರಾಂತಿಕಾರಕತನ"[೮೧] ಎಂದು ಹೇಳುತ್ತಾರೆ. ಈ ಮೂರು ಕಾರಣಗಳಿಂದ ಅವರು ನವ್ಯ ಸಂಪ್ರದಾಯವನ್ನು ಧಿಕ್ಕರಿಸುತ್ತಾರೆ. ಹಾಗಾಗಿ ನವ್ಯದ ಅವನತಿಯ ಧೋರಣೆಗಳನ್ನು ಹೀಗೆ ಗುರುತಿಸಿರುವುದು.

ನವ್ಯ ಮಾರ್ಗದ ಸಾಂಕೇತಿಕ ಶೈಲಿ ಮತ್ತು ತಂತ್ರಗಳು ಸಾಹಿತ್ಯದ ಅನೇಕ ಸಾಹಿತಿಗಳಲ್ಲಿ ಸಾಮಾಜಿಕ ಜವಾಬ್ದಾರಿಗಳ ಬಗ್ಗೆ ಇರುವ ಅಜ್ಞಾನವಾಗಿದೆ. ಇಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ನಡೆದ ಘಟನೆಯಾಗಿದ್ದರಿಂದ ಸಾಹಿತಿಗಳಿಗೆ ಸಾಮಾಜಿಕ ಪ್ರಜ್ಞೆ ಮುಖ್ಯವಾಗಿದೆ. ಅಲ್ಲಿ ತನ್ನತನದ ಹುಡುಕಾಟಕ್ಕಾಗಿ ಸಾಂಕೇತಿಕ ಬದುಕು ಪ್ರಾರಂಭವಾಗಿದೆ. ಹಾಗಾಗಿ ಸಾಮಾಜಿಕ ಬರವಣಿಗೆಗಳಲ್ಲಿ ತಿರಸ್ಕಾರಗಳು ಕಂಡುಬರುತ್ತವೆ.

ನಮ್ಮ ದೇಶದ ಉತ್ಪಾದನೆಯ ಬಹುಪಾಲನ್ನು ಉಚ್ಚವರ್ಗ ಮತ್ತು ಜಾತಿಗಳು ತಿಂದು ಹಾಕುತ್ತಿರುವುದರಿಂದ ಸಾಕ್ಷರತೆ ನಿರೀಕ್ಷಿತ ಗತಿಯಲ್ಲಿ ಇಲ್ಲವೆಂದು ವ್ಯಕ್ತಪಡಿಸುವುದರಿಂದ ಪ್ರಸ್ತುತವಾಗಿಯೂ ಇದನ್ನು ಅರ್ಥ ಮಾಡಿಕೊಳ್ಳಬಹುದು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿ ೨೦ ವರ್ಷವಾಯಿತು. ಆದರೆ ಕೆಲವು ಸಮುದಾಯಗಳ ಮೂಲಭೂತ ಸಮಸ್ಯೆಗಳು ಹಾಗೆಯೇ ಇವೆ. ಸಮಾಜದ ನಿರ್ಗತಿಕರಿಗೆ ಅಷ್ಟೇನೂ ಶಿಕ್ಷಣ ದೊರಕಿಲ್ಲವೆಂದರೆ ಶಿಕ್ಷಣ ಸಂಪತ್ತು ದೊರಕಿದ್ದು ಯಾರಿಗೆ? ಕೆಳಸಮುದಾಯಗಳಿಗೆ ಇನ್ನೂ ಶಿಕ್ಷಣ ಸಿಕ್ಕಿಲ್ಲವೆಂದಾಯಿತು. "ಭಾರತದಲ್ಲಿನ ಗ್ರಾಮಗಳಲ್ಲಿ ಕೇವಲ ಹೆಬ್ಬೆಟ್ಟೊತ್ತುವ ನಿರಕ್ಷರ ಕುಕ್ಷಿಗಳ ಸಮುದಾಯವೊಂದನ್ನು ನಿರ್ಮಾಣ ಮಾಡುತ್ತಿದ್ದೇವೆ"[೮೨] ಎಂದು ಹೇಳುತ್ತಾರೆ. ಹಾಗಾದರೆ ಪ್ರಸ್ತುತವಾಗಿ ಹೆಬ್ಬೆಟ್ಟೊತ್ತುವ ಸಂಸ್ಕೃತಿ ಕೈ ಹಿಡಿದು ಹೆಬ್ಬೆಟ್ಟು ಒತ್ತಿಸಿಕೊಳ್ಳುವವರು ಯಾರಾಗಿದ್ದಾರೆ. ಅವರಿಗೆ ಶಿಕ್ಷಣ ದೊರೆತಿಲ್ಲ. ಸಾಹಿತಿಗಳ ಧೋರಣೆ ಏನಾಗಿತ್ತೆನ್ನುವುದರಲ್ಲಿ ಇದನ್ನು ಪ್ರಶ್ನೆ ಮಾಡದೆ

ತಮ್ಮ ಅಸ್ತಿತ್ವಕ್ಕಾಗಿ ಪರದಾಡುತ್ತ ಬರೀ ಬದುಕಿನ ಸಾಂಕೇತಿಕ ಬರವಣಿಗೆ ಹಾಗೂ ಪಾಶ್ಚಿಮಾತ್ಯರ ಸಿದ್ಧಾಂತಗಳನ್ನು ಒಳಗೊಂಡಿದ್ದರಿಂದ ಭಾರತೀಯ ಸಮಾಜದ ಪರಿಸ್ಥಿತಿ ಭಾರತೀಯನ ಬದುಕು, ಅವರ ಜಾನಪದ ಸೊಗಡು ಏನಾಗಿದೆ ಎಂಬುದನ್ನು ಅರಿಯಬೇಕಾಗಿದೆ. ಹಾಗಾಗಿ ತೇಜಸ್ವಿಯವರು ಬದಲಾವಣೆ ಕುರಿತಂತೆ ಚಿಂತನೆ ಮಾಡುತ್ತಾರೆ.

"ಸಾಹಿತ್ಯ ಸಂಸ್ಕೃತಿಗಳು ಕೇವಲ ಮೇಲ್ಜಾತಿಯವರ ಸೊತ್ತಾಗಿಯೇ ಉಳಿಸುವ ಯತ್ನ ನಮ್ಮ ವಿದ್ಯಾಭ್ಯಾಸ ಯೋಜನೆಗಳು ಮತ್ತು ವಿದ್ಯಾಭ್ಯಾಸ ಕ್ರಮ ಇವೆಲ್ಲಾ ಭಾಷೆ ಮತ್ತು ಸಾಹಿತ್ಯ ಇಂದು ಹೀಗೆ ಉಳ್ಳವರ ಸ್ವತ್ತಾಗಿ ತೊಡಗಿದೆಯೆಂದರೆ ಇನ್ನು ಭಾಷೆಯಲ್ಲಿ ಆಲೋಚನೆ ಮತ್ತು ಅಭಿವ್ಯಕ್ತಿ ಬಯಸುವುದೇ ಮೋಸಗಾರಿಕೆ ಎನ್ನುವಂತೆ ಭಾಸವಾಗತೊಡಗಿದೆ"[೮೩] ಎಂದು ಹೇಳುತ್ತಾರೆ. ಇಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದ್ದು ಕೆಳಸಮುದಾಯವನ್ನು ಅಲಕ್ಷಿಸಿ ಮೇಲ್ವರ್ಗಗಳ ಮಣೆ ಹಾಕುತ್ತಿರುವುದು ನಮ್ಮ ಬದುಕಿನ ಸಾಹಿತ್ಯವು ಕೂಡ ಸಮಾಜದ ಅಂಚಿನ ಸಮುದಾಯವನ್ನು ಕಡೆಗಣಿಸಿರುವುದು ಕಂಡುಬಂದಿದೆ. ಇದಕ್ಕೆ ಸರಕಾರವು ಕೂಡ ಹೊರತಲ್ಲ. ಅಂದರೆ ನವ್ಯದವರ ಧೋರಣೆಯು ಒಂದಾಗಿದೆ. ಹಾಗೆಯೇ ಶಿಕ್ಷಣದಿಂದ ನಮ್ಮಲ್ಲಿ ಬೇಡವಾದ ವಿವಿಧ ಸಮುದಾಯದ ಮೇಲೆ ಇನ್ನೊಂದು ಸಂಪ್ರದಾಯವನ್ನು ಹೇರುವುದು. ಇಲ್ಲಿ ಮುಖ್ಯವಾಗಿ ನವ್ಯದವರ ಸಾಹಿತ್ಯ ರಚನೆಯಲ್ಲಿ ಗೊಡ್ಡು ಸಂಪ್ರದಾಯಕ್ಕೆ ಮಣೆ ಹಾಕಿರಬಹುದು. ಆದರೆ(ಅನಂತಮೂರ್ತಿಯವರನ್ನೇ ಮಣೆ ಹಾಕಿದ್ದಾರೆಂದು ಹೇಳಲು ಬರುತ್ತಿಲ್ಲ. ಸಂಸ್ಕಾರ ಕಾದಂಬರಿಯಲ್ಲಿ ಈ ಸಂಪ್ರದಾಯವನ್ನು ಪ್ರಶ್ನೆ ಮಾಡಿದ್ದಾರೆ) ತೇಜಸ್ವಿಯವರು ಕೆಲವರನ್ನು ಹೊರತುಪಡಿಸಿದ್ದಾರೆ. ಇಲ್ಲಿ ಸಾಹಿತ್ಯ ರಚನೆ, ಸಮಾಜ ರೋಗಗ್ರಸ್ತವಾಗಿ ರೂಪಗೊಂಡಿರಬಹುದಾಗಿದೆ. ಹಾಗಾಗಿ ತೇಜಸ್ವಿಯವರು ನವ್ಯದವರ ಸಾಹಿತ್ಯದ ನಿಲುವನ್ನು ಧಿಕ್ಕರಿಸುತ್ತಾರೆ.

ನವ್ಯ ಕಾಲದ ಸಂದರ್ಭದಲ್ಲಿ ಸಾಹಿತ್ಯ ರಚನೆಯಲ್ಲಿ ಬಹುಪಾಲು ತೊಡಗಿರುವುದು ಉಪಾಧ್ಯಾಯ ಸಮುದಾಯ ಆಗಿದೆ. ಈ ಉಪಾಧ್ಯಾಯರ ಚಿಂತನೆ ನಿಲುವು ಏನಾಗಿದೆ ಎಂದರೆ "ಇಡೀ ಒಂದು ಭಾಷಾ ಸಮುದಾಯದವೇ ಅಭಿವ್ಯಕ್ತಿಯಾಗಬೇಕಾದ ಸಾಹಿತ್ಯ ಕೇವಲ ಪಾಠ ಹೇಳುವವರ ಕುಲಕಸುಬಿನಂತಾದರೆ, ಅದು ಎಷ್ಟು ಸಹಜವಾಗಿಯೇ ಸಂಭವಿಸಿದ್ದರೂ ಅನಾಗರಿಕತೆ ರೋಗಗ್ರಸ್ತವಾದುದು"[೮೪] ಎಂದು ತೇಜಸ್ವಿಯವರು ಮುನ್ನುಡಿಯಲ್ಲಿ ಹೇಳುತ್ತಾರೆ. ಉಪಾಧ್ಯಾಯ ಸಮುದಾಯ ಸಮಾಜದ ಪ್ರಜ್ಞೆ ಹೊಂದಿರಬೇಕು. ಆದರೆ ಪಾಠ ಮಾಡುವುದಕ್ಕೆ ಸೀಮಿತವಾದರೆ, ತಮ್ಮ ಅಸ್ತಿತ್ವಕ್ಕಾಗಿ, ಹಣಕ್ಕಾಗಿ ಸೀಮಿತಗೊಂಡಿದ್ದಾರೆಂಬುದಾಗುತ್ತದೆ. ಆದರೆ ತೇಜಸ್ವಿಯವರ ನಿಲುವು ಉಪಾಧ್ಯಾಯರ ಮೇಲೆ ಆರೋಪ ಅಲ್ಲ. ಅವರು ಕೂಡ ಉಪಾಧ್ಯಾಯರ ಮೂಲಕ ವಿದ್ಯೆ ಕಲಿತವರಾಗಿದ್ದಾರೆ.

ತೇಜಸ್ವಿಯರು ಹೇಳುವಂತೆ ಉಪಾಧ್ಯಾಯರು ಪಾಠ ಹೇಳುವುದಕ್ಕೆ ಸೀಮಿತವಲ್ಲ. "ಭಾರತೀಯ ಸಂದರ್ಭದಲ್ಲಿ ಒಬ್ಬನ ವೃತ್ತಿಯು ಕನ್ನಡ ಜಾನಪದದ ಒಟ್ಟು ಅನುಭವದ ವಿಸ್ತೀರ್ಣದಲ್ಲಿ ಎಷ್ಟನ್ನು

ಒಳಗೊಳ್ಳಬಹುದೆಂಬ ಪ್ರಶ್ನೆ"[೮೫] ಎಂದಿರುವರು. ಇಲ್ಲಿ ಮುಖ್ಯವಾಗಿ ಪಾಠ ಹೇಳುವ ಉಪಾಧ್ಯಾಯನಿಗೆ ಎಷ್ಟು ಅನುಭವವಾಗಿದೆ, ಏನನ್ನು ತಿಳಿದುಕೊಂಡಿದ್ದಾರೆ ಎಂಬುದಾಗಿದೆ. ಇವರು ಪಾಶ್ಚಾತ್ಯರ ಸಿದ್ಧಾಂತಗಳನ್ನು ಅಳವಡಿಸಿಕೊಂಡಿದ್ದಾರೆ ಎಂಬುದನ್ನು ತೇಜಸ್ವಿಯವರು ಪರೋಕ್ಷವಾಗಿ ಟೀಕಿಸುತ್ತಾರೆ. ಪಾಶ್ಚಾತ್ಯ ಸಿದ್ಧಾಂತ ಭಾರತದಲ್ಲಿ ಬೇಕೆ? ನಮ್ಮ ಜಾನಪದ ಭಾಷೆ, ಸಾಹಿತ್ಯ ಬೇಕಾಗಿದೆ ಎಂದು ಸಮರ್ಥಿಸಿಕೊಳ್ಳುತ್ತಾರೆ. "ಉಪಾಧ್ಯಾಯರು ಜನ ವಿದ್ವತ್‌ಗೋಷ್ಠಿಗಳಲ್ಲಿ, ವಿಮರ್ಶೆಯಲ್ಲಿ, ಚರ್ಚೆ ಸಮಾವೇಶಗಳಲ್ಲಿ ಅತೀ ನಾಜೂಕಿನ ವಾತಾವರಣ ಒಂದನ್ನು ಸೃಷ್ಟಿ ಮಾಡಿ ಕೇವಲ ಆತ್ಮಗೋಚರ ಮಾತ್ರವಾದ ಪಾರಿಭಾಷಿಕ ಪದಸಮುಚ್ಚಯಗಳನ್ನು ಸೃಷ್ಟಿಸಿ ನೇರವಾಗಿ ಸರಳವಾದ ಅನ್ಯಕ್ಷೇತ್ರದ ವ್ಯಕ್ತಿಗಳು ಸಾಹಿತ್ಯ ಕ್ಷೇತ್ರದ ಹತ್ತಿರ ಸುಳಿಯದೆ ಸಂಕೋಚದಿಂದ ಓಡಿ ಬಿಡುವಂತೆ ಅತಿ ಸಂಸ್ಕೃತಿಯ ಮೆಣಸಿನ ಹೊಗೆ ಹಾಕಿದ್ದಾರೆ"[೮೬] ಎಂದು ತೇಜಸ್ವಿಯವರು ಹೇಳಿರುವರು. ಇಲ್ಲಿ ಉಪಾಧ್ಯಾಯರು ಮಾಡುವ ಕಾಯಕ ಪಾಶ್ಚಿಮಾತ್ಯ ಸಿದ್ಧಾಂತಗಳ ಪಾರಿಭಾಷಿಕ ಪದಗಳನ್ನು ಸೃಷ್ಟಿಸಿ ಸಾಹಿತ್ಯ ಸಮಾವೇಶ, ಗೋಷ್ಠಿಗಳಲ್ಲಿ ಇಲ್ಲಸಲ್ಲದ ಸಂಸ್ಕೃತೀಕರಣಗೊಳಿಸಿ ಹೇಳುವುದು. ಅದು ಅನ್ಯಕ್ಷೇತ್ರದ ಸಾಹಿತ್ಯ ಅಭಿರುಚಿ ಹೊಂದುತ್ತಿರುವ ಯುವ ಸಮುದಾಯಕ್ಕೆ ಅರ್ಥವಾಗುವುದಿಲ್ಲ. ನಮಗೆ ಬೇಕಾಗಿರುವ ಭಾರತೀಯತನ ಹೊಂದಿರುವ ಸ್ಥಳೀಯ ಸಂಸ್ಕೃತಿ ಚಿಂತನೆಯ ಸಿದ್ಧಾಂತಗಳು ಬೇಕಾಗಿದೆ ಎನ್ನುವುದು ತೇಜಸ್ವಿಯವರ ನಿಲುವಾಗಿತ್ತು.

ತೇಜಸ್ವಿಯವರು ಇನ್ನೊಂದು ರೀತಿಯ ಬದಲಾವಣೆ ಬಯಸುತ್ತಾರೆ. ನವ್ಯದವರನ್ನು ಒಳಗೊಂಡಂತೆ ಹಾಗೂ ಸಮಾಜದ ಜನರ ದೃಷ್ಟಿಯಿಂದ, ಏಳ್ಗೆಯಿಂದ ತೇಜಸ್ವಿಯವರು ಸಮಾಲೋಚನೆ ಮಾಡಿಕೊಳ್ಳುತ್ತಾರೆ. ಮುಖ್ಯವಾಗಿ ನವ್ಯದ ಚಳುವಳಿ ತಮಿಳುನಾಡಿನಲ್ಲಿ ಆದ ಚಳುವಳಿ. ಕರ್ನಾಟಕದಲ್ಲಿ ಆಗಲಿಲ್ಲ. ಅದಕ್ಕೆ ಕಾರಣ ಸಾಹಿತ್ಯದಲ್ಲಿ ಪಾಶ್ಚಾತ್ಯ ಸಿದ್ಧಾಂತ ಮಾದರಿಗಳನ್ನು ಅಳವಡಿಸಿಕೊಂಡಿದ್ದು, ನವ್ಯ ಕಾವ್ಯದಲ್ಲಿ ಸ್ಫೂರ್ತಿಯ ಮೂಲಗಳಾಗಿದ್ದವು. ಆದರೆ ತೇಜಸ್ವಿಯವರು ಹೇಳುವಂತೆ ಕನ್ನಡ ಚಳುವಳಿಗಳು ವಿಸ್ತೃತ ವ್ಯಾಪ್ತಿ ಹೊಂದಿಲ್ಲ ಎನ್ನುವುದಕ್ಕೆ "ಕನ್ನಡದ ಹಲವು ಕ್ರಾಂತಿಗಳು ಇದೇ ರೀತಿ ಮುಗ್ಗರಿಸಿದುದಕ್ಕೆ ಮೂಲಕಾರಣ ಅವುಗಳು ಮುಂಚೂಣಿಯಲ್ಲಿ ಚುಕ್ಕಾಣಿ ಹಿಡಿದಿದ್ದವರು ಬ್ರಾಹ್ಮಣರು. ಆದ್ದರಿಂದಲೇ ಹಳೆಯ ಸಾಹಿತ್ಯಕ್ಕೂ, ಹೊಸ ಸಾಹಿತ್ಯಕ್ಕೂ ಸಂಭವಿಸಿದ ಘರ್ಷಣೆ ಹಾಗೂ ಹಳೆಯ ಸಂಪ್ರದಾಯದ ಆಚಾರ, ಪದ್ಧತಿ ಮುಂತಾದವುಗಳೆಲ್ಲದರ ವಿರುದ್ಧದ ಆಂದೋಲನವಾಗಲಿಲ್ಲ"[೮೭] ಎಂದಿರುವರು. ಇಲ್ಲಿ ನವ್ಯದವರನ್ನು ಟೀಕಿಸುತ್ತಾ ಅವರ ಚಿಂತನೆ, ಸಂಪ್ರದಾಯ ಆಚಾರಪದ್ಧತಿಯನ್ನು ಉಳಿಸಿಕೊಳ್ಳುವುದರಲ್ಲಿ ಇತ್ತು ಎನ್ನುವುದಕ್ಕೆ ಬ್ರಾಹ್ಮಣರನ್ನೇ ಉದ್ದೇಶಿಸಿ ಮಾತನಾಡುತ್ತಾರೆ. ಹಳೆಯದರಿಂದ ಹೊಸತನ ಬಯಸಿಲ್ಲ. ಆದರೆ ಹಳೆಯ ಸಾಹಿತ್ಯವನ್ನು ಸಮರ್ಥಿಸಿಕೊಂಡರು. ಹಾಗಾಗಿ ಚಳುವಳಿಗಳು ಆಗಲಿಲ್ಲ, ಆದರೆ ಎಚ್ಚೆತ್ತರು. ತಮಿಳುನಾಡಿನಲ್ಲಿ ನವ್ಯ ಚಳುವಳಿ ಸಂದರ್ಭ ಭಾಷೆ, ಜಾತಿಪದ್ಧತಿ, ತತ್ವಚಿಂತನೆ, ರಾಜಕೀಯ ಆಂದೋಲನ ಎಲ್ಲ ಕ್ಷೇತ್ರಕ್ಕೆ ಚಳುವಳಿಯಾಗಿ ಬದಲಾವಣೆ ಬಯಸಿತ್ತು. ಆದರೆ ಕರ್ನಾಟಕದಲ್ಲಿ "ನವ್ಯ ಮಾರ್ಗದ ಹಿರಿಯರು, ಅಗ್ರಗಣ್ಯರೂ ಆದ ಕೆಲವರು ಸಾಹಿತ್ಯ ಕ್ರಾಂತಿಗಳಾದರು. ಜಾತಿಪದ್ಧತಿ, ವರ್ಣಾಶ್ರಮ, ಧರ್ಮ ಮುಂತಾದವುಗಳನ್ನು ಪ್ರತಿಪಾದಿಸಿದರು"[೮೮]

ಎಂದು ತೇಜಸ್ವಿಯವರು ಹೇಳುತ್ತಾರೆ. ಏಕೆಂದರೆ ಚಳುವಳಿಯ ಮುಂಚೂಣಿಯಲ್ಲಿದ್ದವರು ಬ್ರಾಹ್ಮಣರು ಅಲ್ಲಿ ಸಂಪ್ರದಾಯವನ್ನು ಮುಂದುವರಿಸಿದರು. ಹಾಗೆಯೇ ಪಾಶ್ಚಾತ್ಯರ ಸಿದ್ಧಾಂತಗಳು ಒಳಗೊಂಡಿದ್ದರಿಂದ ಸಂಪ್ರದಾಯ ಆಚರಣೆ ನವ್ಯದವರಲ್ಲಿಯೂ ಬದಲಾವಣೆಯಾಗಲಿಲ್ಲ. ಮುಖ್ಯವಾಗಿ ಕನ್ನಡ ಕಾವ್ಯವನ್ನು ಜನರ ಬಳಕೆಯ ಆಡುಭಾಷೆಯಲ್ಲಿ ಬರೆಯಬೇಕೆಂದಿರುವ, ನವ್ಯದಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಒತ್ತು ಕೊಡಲಾಯಿತು.

ಇಲ್ಲಿ ಜನಸಾಮಾನ್ಯರು ಜಾತಿಪದ್ಧತಿ, ಸ್ತ್ರೀ ಅಸಮಾನತೆ, ಅಸ್ಪೃಶ್ಯತೆ, ಸತಿಪದ್ಧತಿ ವಿರುದ್ಧ ಆಂದೋಲನವಾಗಲಿಲ್ಲ ಎನ್ನುವುದು ತೇಜಸ್ವಿಯೊಬ್ಬರ ಕೂಗಲ್ಲ. ಇದು ಅಂದಿನ ಜನಸಾಮಾನ್ಯರ ಕೂಗಾಗಿತ್ತು. ಪ್ರಸ್ತುತವಾಗಿ ಕೂಡ ಇದೇ ರೀತಿಯಾದ ಆಂದೋಲನವಾಗಬೇಕಾಗಿದೆ. ಆಹಾರ, ಸಂಸ್ಕೃತಿ, ಮೀಸಲಾತಿ, ಜಾತಿಪದ್ಧತಿ ಇನ್ನೂ ಹಲವು ಸಮಸ್ಯೆಗಳು ತಾಂಡವವಾಡುತ್ತಿದೆ. ಹಾಗಾಗಿ ತೇಜಸ್ವಿ ಹೇಳುತ್ತಾ "ನವ್ಯ ಸಾಹಿತ್ಯದ ಈಚಿನ ಕವನಗಳು ಬಹುಪಾಲು ಧಾರ್ಮಿಕ ಅಥವಾ ರಿಲಿಜಿಯಸ್ ಆಗಿರುವುದೇ ಹೆಚ್ಚು."[೮] ಭಾರತದಲ್ಲಿ 'ರಿಲಿಜಿಯಸ್' ಆಗುವ ಕವಿ ಜನತಾದ್ರೋಹಿಯಾಗುತ್ತಾನೆಂದರೆ ಭಾರತದ ಬಹುಪಾಲು ಧರ್ಮಗಳು ಮಾನವೀಯತೆಯ ವಿರೋಧಿಗಳಾಗಿವೆ ಎಂದು ಹೇಳುವುದು ಎಷ್ಟು ಅಸಮರ್ಥವಾಗಿದೆಯೋ ಏನೋ? ಆದರೆ ತೇಜಸ್ವಿಯವರು ಜನಪರವಾದ ಮಾನವೀಯತೆಯ ಪರವಾದ ದೃಷ್ಟಿಯಿಂದ ಪ್ರತಿಪಾದಿಸುತ್ತಾರೆ. ಹಾಗೆ ನೋಡಿದರೆ ಇಲ್ಲಿ ಮತಧರ್ಮಗಳ ಧೋರಣೆಗಳು ಜನಪರವಾಗಿ ಮಾನವೀಯತೆ ಪರವಾದ ನಿಲುವನ್ನು ಮಂಡಿಸಿವೆ. ಆದರೆ ನಮ್ಮಲ್ಲಿ ಮತಧರ್ಮಗಳ ಪರಿಕಲ್ಪನೆಗಳು ಇಂದಿನ ನಮ್ಮ ಹಲವು ಕಾರಣವಾದಿಗಳಿಂದ ಪರಿಕಲ್ಪನೆಯಲ್ಲಿ ಭಿನ್ನತೆಯಾಗಿ ಕಾಣಿಸುತ್ತವೆ. ಹಾಗಾಗಿ ಜನಪರವಾದ ಮಾನವೀಯತೆಯ ನಿಲುವು ಕಳಕಳಿಯಿಂದ ತೇಜಸ್ವಿ ಸೇರಿದಂತೆ ಹಲವಾರು ಕವಿಗಳು ಭಾರತದ 'ರಿಲಿಜಿಯಸ್' ರಾಜಕಾರಣದಿಂದ ಕೂಡಿರುವುದನ್ನು ವಿರೋಧಿಸುವುದು ಸಹಜವಾಗಿದೆ.

ತೇಜಸ್ವಿಯವರು ನವ್ಯ ಸಂಪ್ರದಾಯದ ಕಾವ್ಯಮಾರ್ಗವನ್ನು ಬಿಟ್ಟು ಹೊಸ ಮಾರ್ಗ ಚಳುವಳಿ ಸಾಹಿತ್ಯ ರಚನೆಯ ಕಾರ್ಯದಲ್ಲಿ ತೊಡಗಿ ಸಮಾಜದ ಏಳ್ಗೆ, ಜನಪರವಾದ ಸಾಹಿತ್ಯ ರಚನೆ ಮಾಡಿದರು. ಹಾಗಾಗಿ "ಲೋಹಿಯಾ ಅವರ ತತ್ವಚಿಂತನೆ, ಕುವೆಂಪು ಅವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆ ಈ ಮೂರೇ ನನ್ನ ಈಚಿನ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿದೆ"[೧೦] ಎಂದು ಹೇಳುತ್ತಾರೆ. ನಮ್ಮ ಸಾಹಿತ್ಯ ರಚನೆ, ಚಿಂತನೆ, ತತ್ವಗಳು, ಸಿದ್ಧಾಂತಗಳು ಯಾವ ನೆಲೆಯಲ್ಲಿರಬೇಕು ಎನ್ನುವುದಕ್ಕೆ ಈ ಮೂರು ಮಹತ್ವದ ತತ್ವ, ಜೀವನ, ಕಲಾ ತೃಪ್ತಿಯಿಂದ ಅವರಲ್ಲಿ ಬದಲಾವಣೆಯಾಗಿ ನವ್ಯ ಸಾಹಿತ್ಯದ ಅವನತಿ ಬಗ್ಗೆ 'ಅಬಚೂರಿನ ಪೋಸ್ಟಾಫೀಸು' ಕೃತಿಗೆ ದೀರ್ಘ ಮುನ್ನುಡಿಯನ್ನು ಬರೆದರು. ಹಾಗೂ ಅಂದಿನ ಕೃತಿಯ ಚಿಂತನೆ ಹಲವು ಜೀವನವಿಧಾನ ಗ್ರಹಿಸುವ ಕ್ರಮ ಹಾಗೂ ಸಾಮಾಜಿಕ ಅನನ್ಯತೆಯಾಗಿತ್ತು. ಒಟ್ಟಾರೆಯಾಗಿ ಸಮಗ್ರ ಬದಲಾವಣೆ ಬಯಸಿದೆ.

## ೫.೭. ಪಿ.ಲಂಕೇಶ್

ಪಿ.ಲಂಕೇಶ್ ಅವರು ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಚಿಂತಕರು. ಅವರು ಕಥೆ, ಕಾದಂಬರಿ, ನಾಟಕ, ವಿಮರ್ಶೆ ಮತ್ತು ಪ್ರಮುಖವಾಗಿ ನಾಡಿನ ಸಾಂಸ್ಕೃತಿಕ ರಾಜಕಾರಣದ ವಸ್ತುಸ್ಥಿತಿಯನ್ನು 'ಲಂಕೇಶ್ ಪತ್ರಿಕೆ'ಯ ಮೂಲಕ ನೀಡಿದವರು. ಪಿ.ಲಂಕೇಶರು ನವ್ಯ ಸಾಹಿತ್ಯದಲ್ಲಿ ತಮ್ಮ ಛಾಪು ಮೂಡಿಸಿಕೊಂಡವರು. ಆದರೆ ಒಂದೊಂದು ಬಾರಿ ನವ್ಯ ಸಂಪ್ರದಾಯ ಮಾದರಿಯನ್ನು ಮೀರಿದವರಾಗಿದ್ದಾರೆ. ಎಷ್ಟೇ ಆದರೂ ನವ್ಯ ವಿಮರ್ಶೆ ಮಾರ್ಗದ ತುಡಿತ ಅವರಲ್ಲಡಗಿದೆ. ಹಾಗೆಯೇ ಅನೇಕ ಕೃತಿಗಳಿಗೆ ಮುನ್ನುಡಿಯನ್ನು ಬರೆದಿದ್ದಾರೆ. ಹಾಗಾಗಿ ಅವರ ಮುಖ್ಯವಾದ ೧೯೭೦ರ ದಶಕದಲ್ಲಿ 'ಅಕ್ಷರ ಹೊಸ ಕಾವ್ಯ' ಎಂಬ ನವ್ಯ ಕವನಗಳು ಪ್ರಾತಿನಿಧಿಕ ಸಂಕಲನಕ್ಕೆ ಬರೆದ ಮುನ್ನುಡಿ ಇಂದಿಗೂ ಕನ್ನಡ ವಿಮರ್ಶೆಯ ಮುಖ್ಯ ಪಠ್ಯವಾಗಿ ಗುರುತಿಸಿಕೊಂಡಿದೆ. ಕನ್ನಡದಲ್ಲಿ ನವ್ಯ, ಬಂಡಾಯ, ದಲಿತ, ಹಿಂದಿನ ಕಾಲಮಾನದ ಕಾವ್ಯ ಮುಂತಾದ ಅನೇಕ ಬಗೆಯ ಕಾವ್ಯ ಸಂಗ್ರಹಗಳು, ಎಂದೆಂದಿಗೂ ಅವು ಯಾವುವು ಎಂಬುದನ್ನು ಲಂಕೇಶರ 'ಅಕ್ಷರ ಹೊಸ ಕಾವ್ಯ'ದ ಪ್ರಾತಿನಿಧಿಕ ಸ್ವರೂಪವನ್ನು ಪಡೆಯಲಾಗಲಿಲ್ಲ. ಪಿ.ಲಂಕೇಶರ ವಿಮರ್ಶಾ ಪ್ರಜ್ಞೆ, ಅಕ್ಷರ ದಕ್ಷತೆ, ಆಯ್ಕೆಯ ಅಭಿರುಚಿ ಹಾಗೂ ನವ್ಯ ಕಾವ್ಯವನ್ನು ಅವರು ವಿವರಿಸುವ ರೀತಿಯಿಂದಾಗಿ 'ಅಕ್ಷರ ಹೊಸ ಕಾವ್ಯ'ಕ್ಕೆ ಮುನ್ನುಡಿಯ ವಿಶ್ಲೇಷಣೆಯಿಂದ ಈ ಯಶಸ್ಸು ದೊರಕಿರಬಹುದು. ಅಕ್ಷರ ಹೊಸ ಕಾವ್ಯದ ಸಂಕಲನದಲ್ಲಿ ಕಾವ್ಯ ಗುಣವಿಲ್ಲದ ಪದ್ಯ ಯಾವುದೂ ಇಲ್ಲ. ಆದರೆ ಅವರೇ 'ಅಕ್ಷರ ಹೊಸ ಕಾವ್ಯ'ವನ್ನು ಮತ್ತೆ ತೊಂಬತ್ತರ ದಶಕದಲ್ಲಿ ಮರುಮುದ್ರಿಸಿದಾಗ ಆ ಸಂಕಲನದಲ್ಲಿ ಕಾವ್ಯದ ಅಂಶ ಕಡಿಮೆ ಇರುವ ಕೆಲ ಹೊಸ ಕವನಗಳನ್ನು ಸೇರಿಸಿದ್ದಾರೆ. ಆದರೆ ಸೇರಿಸಿರುವ ಕವನಗಳು ಅವರಿಗೆ ಅತೃಪ್ತಿಯನ್ನು ತಂದಿದ್ದವು ಎಂದು ಹೇಳಲಾಗುತ್ತದೆ. ನಟರಾಜ್ ಹುಳಿಯಾರ್ ಅವರು ಈ ಬಗ್ಗೆ ಲಂಕೇಶರನ್ನು ಕೇಳಿದಾಗ "ಆ ಬಗ್ಗೆ ಆರಂಭದಲ್ಲಿ ಅವರಿಗೆ ಒರಟು ವಿಶ್ವಾಸವಿದ್ದರೂ ಕೊನೆ ಕೊನೆಗೆ ಅಲ್ಲಿನ ಕೆಲವು ಹೊಸ ಆಯ್ಕೆಗಳನ್ನು 'ಕಿತ್ತು ಹಾಕಬೇಕು ಕಣ್ರಯ್ಯ' ಎಂದು ಅವರೇ ಗೊಣಗಿದ್ದರು"[೧] ಎಂದು ಹೇಳುತ್ತಾರೆ.

ಏಕೆಂದರೆ ಲಂಕೇಶರು ಎರಡನೇ ಆವೃತ್ತಿಗೆ ಸೇರಿದ ಕವನಗಳ ಕುರಿತು ಅವರಿಗೆ ಗುಮಾನಿಯಿತ್ತು. ಆದ್ದರಿಂದ ಅದು ಹೊಸ ಟ್ರೆಂಡ್. ಈ ಕವನ, ಕವಿಗಳಲ್ಲಿ ತತ್ವದ ಸಿದ್ಧಾಂತ ಇಲ್ಲ ಎನ್ನುವುದಾಗಿತ್ತು. ಆದರೆ ಹೊಸದಾಗಿ ಸೇರಿದ ಕವಿಗಳಲ್ಲಿ ಎಚ್.ಎಸ್.ಶಿವಪ್ರಕಾಶ್, ಪ್ರತಿಭಾ ನಂದಕುಮಾರ್, ಸರ್ವಮಂಗಳಾ, ಕೆ.ಎಚ್.ಶ್ರೀನಿವಾಸ್ ಅವರ ಕವನಗಳನ್ನು ಹೊಸ ಟ್ರೆಂಡ್ ಹುಟ್ಟು ಹಾಕುವ ಶಕ್ತಿ ಕವಿ/ಕವಯಿತ್ರಿಯರಲ್ಲಿ ಕಾವ್ಯದ ಶಕ್ತಿ ಇದೆ ಎಂದು ವ್ಯಕ್ತಪಡಿಸುತ್ತಾರೆ. ಏಕೆಂದರೆ ಅವರ ಕಾವ್ಯದಲ್ಲಿ ರೂಪಕ, ಉಪಮೆ, ವಸ್ತು ಸಾಮಾಜಿಕವಾಗಿ ಹೊಸದಾಗಿದ್ದರೂ ಮನುಷ್ಯಪ್ರಜ್ಞೆಯನ್ನು ರೂಪಿಸುತ್ತದೆ. ಎಚ್.ಎಸ್.ಶಿವಪ್ರಕಾಶ್ ಅವರ 'ಸಮಗಾರ ಭೀಮವ್ವ' ಕವನ ಆಗಿರಬಹುದು, ಪ್ರತಿಭಾ ನಂದಕುಮಾರರ 'ನಾವು ಹುಡುಗಿಯರೇ ಹೀಗೆ' ಕವನ, ಸರ್ವಮಂಗಳಾ ಅವರ 'ಗೊಂಬೆ' ಕವನ ಹಾಗೂ

ಕೆ.ಎಚ್.ಶ್ರೀನಿವಾಸ್ ಅವರ 'ಕಾನೂಗೋಡು ಮನೆ' ಕವನಗಳು ಹೊಸತನವನ್ನು ಬಯಸುತ್ತವೆ ಎಂದು ಪಿ.ಲಂಕೇಶರು ಮುನ್ನುಡಿಯಲ್ಲಿ ವ್ಯಕ್ತಪಡಿಸಿದ್ದಾರೆ.

ಪಿ.ಲಂಕೇಶರು ಮುನ್ನುಡಿಯಲ್ಲಿ ಹೇಳುತ್ತಾರೆ. "'ಅಕ್ಷರ ಹೊಸ ಕಾವ್ಯ'(ಮರುಮುದ್ರಣದ ಮುನ್ನುಡಿ) ರೂಪಿಸುವಾಗ ನಾನು ಕವನದ ಜೀವನಕ್ಕಾಗಿ, ಲವಲವಿಕೆಗಾಗಿ, ನುಡಿಕಟ್ಟಿನ ಹೊಸತನಕ್ಕಾಗಿ ಹುಡುಕಿದ್ದೇನೆ"[೨] ಎಂದಿದ್ದಾರೆ. ಪಿ.ಲಂಕೇಶರು ಕಾವ್ಯ, ಕವಿತೆ, ಕವಿಗಳು ಹೀಗೆ ಇರಬೇಕು ಎಂದು ಹೇಳಿದವರಲ್ಲ. ಹೀಗೆ ಬರೆಯಬೇಕಿತ್ತು ಎಂಬ ಅಭಿಲಾಷೆ ಹೊಂದಿದವರಲ್ಲ. ಆದರೆ ಕವನ, ಕವಿತೆ ಓದುಗನನ್ನು ಮತ್ತೆ ಮತ್ತೆ ಆಹ್ವಾನಿಸಬೇಕು. ಇದು ಮಾತ್ರ ಕಾವ್ಯವನ್ನು ಉಳಿಸುತ್ತದೆ. ಬೆಳಗುತ್ತದೆ. ಓದುಗನಲ್ಲಿ ಕಾವ್ಯ ಅಭಿರುಚಿ, ಕಾವ್ಯದ ಬಗ್ಗೆ ಉತ್ಸಾಹ ಮತ್ತು ವಾಸ್ತವ ಸಂಗತಿ ಜೊತೆಗೆ ತಳುಕು ಹಾಕಿಕೊಂಡು ಸಮಾಜದ ಪ್ರಜ್ಞೆ, ಮಾನವೀಯ ಪ್ರಜ್ಞೆಯನ್ನು ರೂಪಿಸುತ್ತಿರಬೇಕು ಎಂಬುದು ಲಂಕೇಶರ ಅಭಿಪ್ರಾಯವಾಗಿತ್ತು.

ಮೊದಲನೇ ಆವೃತ್ತಿಯ 'ಹೊಸ ಕವಿ, ಹೊಸ ಕಾವ್ಯ' ಶೀರ್ಷಿಕೆಯ ಮುನ್ನುಡಿಯಲ್ಲಿ ಪ್ರಮುಖ ಸಂಗತಿಗಳನ್ನು ವ್ಯಕ್ತಪಡಿಸುತ್ತಾರೆ. ಪ್ರತಿಯೊಬ್ಬ ಸಂಪಾದಕರು ತಾನು ಗ್ರಹಿಸುವ, ತನಗೆ ಸಂತೋಷವಾಗುವ ಮತ್ತು ಸಮರ್ಥನೆ ಕೊಡುವ ಕಾವ್ಯಪ್ರೇಮಿಯಾಗಿ ಕವಿತೆಗಳನ್ನು ಇಷ್ಟಪಡುತ್ತಾನೆ. ಲಂಕೇಶ್ ಅವರು ಹೇಳುವಂತೆ "ವಿಚಿತ್ರವೆಂದರೆ ಒಂದು ತಲೆಮಾರಿನ ಕವನಗಳು ಒಂದರ ಮೇಲೊಂದು ಬೆಳಕು ಚೆಲ್ಲಿ ಗುಣದೋಷಗಳ ದೃಷ್ಟಿಯಿಂದ ಕೆಲವು ಹೊಂದಾಣಿಕೆ ಮಾಡಿಕೊಳ್ಳುತ್ತವೆ. ಈ ಅರ್ಥ ಕವನಗಳ ಮಂಡನೆಯೇ ಒಂದು ಬಗೆಯ ವಿಮರ್ಶೆ"[೩] ಎಂದಿರುವರು. ಆದರೆ ನವೋದಯ, ನವ್ಯ, ದಲಿತ, ಬಂಡಾಯ ಕಾಲದಲ್ಲಿ ಅತಿ ಹೆಚ್ಚಾಗಿ ಕವಿತೆಗಳು ಬಂದವು. ಅವು ಸಮಾಜದ ಸಾಂಸ್ಕೃತಿಕವಾದ ಭಿನ್ನತೆಗಳನ್ನು ತಿಳಿಸಿದವು. ಅವುಗಳೇ ವಿಮರ್ಶೆಯಾಗಿ ಪರಿಣಮಿಸಿವೆ. ಈ ಮುನ್ನುಡಿಯಲ್ಲಿ ನವ್ಯಕಾವ್ಯದ ಮುನ್ನುಡಿಗಳು ಹೆಚ್ಚಾಗಿ ಸೇರಿಸಲಾಗಿದೆ. ಹಾಗೆಯೇ ಭಾಷೆಯ ರಚನೆಯಲ್ಲಿ ಪಲ್ಲಟಗಳಾಗಿದ್ದು ಅಡಿಗರಿಂದ. ಇವರನ್ನು ಬಿಟ್ಟರೆ ಕಂಬಾರ ಅವರಿಂದ ಎಂದು ಹೇಳಬಹುದು. ನವ್ಯ ಸಾಹಿತ್ಯದ ಮೂಲ ವಿ.ಕೃ.ಗೋಕಾಕ್ ಎಂದು ಹೇಳಲಾಗುತ್ತದೆ. ಆದರೆ ಪಿ.ಲಂಕೇಶರು ಹೇಳುವಂತೆ "ಗೋಕಾಕರು ಕೆಲವು ಅಂಶಗಳಿಗಾಗಿ ನಮ್ಮ ಮೊದಲ ನವ್ಯಕವಿಯೆಂಬ ನಂಬಿಕೆ ಕೆಲವರಲ್ಲಿದ್ದರೂ ಆ ಅಂಶಗಳೆಲ್ಲ ಹೆಚ್ಚು ಜೀವಂತವಾಗಿ ಗಂಗಾಧರ ಚಿತ್ತಾಲ ಮತ್ತು ಅಲ್ಲಲ್ಲಿ ಮೊಕಾಶಿಯವರಲ್ಲಿ ವ್ಯಕ್ತವಾಗಿದೆ"[೪] ಎಂದಿರುವರು. ಈ ಕಾವ್ಯ ಸಂಪಾದನೆಯ ಪ್ರಮುಖ ಘಟ್ಟವಾಗಿ ಪರಿಣಮಿಸಿದೆ. ಏಕೆಂದರೆ ಕಾವ್ಯ ಬರಹ, ಓದು ಎಂದರೆ ಕುವೆಂಪು, ಬೇಂದ್ರೆ, ಪುತಿನ ಎಂದು ಹೇಳುತ್ತೇವೆ. ನವ್ಯ ಕಾಲದಲ್ಲಿಯೂ ಕೂಡ ಉತ್ತಮವಾದ ಕಾವ್ಯರಚನೆಯಾಗಿ ಭಾಷಾರಚನೆಯಲ್ಲಿ ಹೊಸತನವನ್ನು ಹೇಳಿವೆ. ಹಾಗೆ ವಿ.ಕೃ.ಗೋಕಾಕ್ ಅವರು ನವೋದಯ ನಿಲುವಿನ ಭಿನ್ನತೆಯನ್ನು ವ್ಯಕ್ತಪಡಿಸಿರಬಹುದು. ಆದರೆ ಗೋಕಾಕರ ಮುಂಚೆ ಇತರ ಕವಿಗಳು, ಬರಹಗಾರರು ನವ್ಯತೆಯನ್ನು ವ್ಯಕ್ತಪಡಿಸಿದ್ದಾರೆ.

ನವ್ಯಕಾವ್ಯದ ಸಂಪಾದನೆಯ ಹಿಂದೆ ಇರುವ ಮುಖ್ಯ ಉದ್ದೇಶವೇನು ಎಂದು ಪಿ.ಲಂಕೇಶರು ಹೇಳಿದಾಗ "ಹೊಸ ಕವಿಗಳು ಬಂದಾಗಲೆಲ್ಲ ಅಳುಬುರುಕು ಅರಳುಮರಳುಗಳು ಗೋಳೋ ಎಂದು ಅಳುವಂತೆ ಇಂದೂ ಹೊಸ ಕಾವ್ಯ ಮುಗುಚಿಕೊಂಡಿರುವುದಾಗಿ ಜನಪ್ರಿಯ ಭಾಷಣಕಾರರು ಹೇಳತೊಡಗಿದ್ದಾರೆ"[೫] ಎಂದು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಸಾಹಿತ್ಯ ಬದಲಾದಂತೆ, ಮನುಷ್ಯನ ಪ್ರವೃತ್ತಿ ಬದಲಾಗುತ್ತದೆ. ಹಾಗೆಯೇ ನವೋದಯ ಸಂಪ್ರದಾಯ ಆಚರಣೆ, ನಾಡುನುಡಿ ಚಿಂತನೆ, ರಾಷ್ಟ್ರೀಯ ಪ್ರಜ್ಞೆಯು ನವ್ಯರಲ್ಲಿ ಬೇರೆ ರೀತಿಯಾಗಿ ಉದ್ಭವಗೊಳ್ಳುತ್ತದೆ. ಏಕೆಂದರೆ ಕಾವ್ಯ ಪ್ರಸ್ತುತ ಕಾಲದಲ್ಲಿ ಬದುಕುವಂತದ್ದಾಗಿದೆ. ಹಾಗಾಗಿ ಹೊಸ ಸಂವೇದನೆ ಹುಟ್ಟಿಕೊಳ್ಳುತ್ತದೆ. ಹಳೆಯ ಕಾವ್ಯ ಮರೆತಿದೆ ಎಂದು ಅಲ್ಲಿ ಹೇಳುವುದರ ಜೊತೆಗೆ ಹೊಸತನವನ್ನು ಸೃಷ್ಟಿಸಿಕೊಳ್ಳುತ್ತದೆ. ಕುವೆಂಪು ಅವರು "ಖಡ್ಗಗಳಿಗೆ ಹೋಲಿಸಿದರೆ ಹರಿವಜ್ರಸಾಣೆ, ನಮ್ಮ ಲೇಖನಿಗಿಂತ ಬರಸಿಡಿಲ ಕಾಣೆ"[೬] ಹೇಳುತ್ತಾರೆ. ಕವಿಗೆ ನಂಬಿಕೆ ಮತ್ತು ಅಭಿವ್ಯಕ್ತಿ ಹಳೆಯ ಕಾಲದಲ್ಲಿ ಸುಲಭವಾಗಿತ್ತು. ಕುವೆಂಪು ಅವರ ಕಾಲದಲ್ಲಿ ಕೂಡ ಹಳಬರ ಬಗ್ಗೆ ಆತ್ಮವಿಶ್ವಾಸ ಹೊಂದಿದ್ದರು ಎಂದು ಹೇಳಬಹುದು. ಆದರೆ ನವ್ಯ, ದಲಿತ, ಬಂಡಾಯದ ಅಥವಾ ಪ್ರಸ್ತುತ ಸಂದರ್ಭಗಳಲ್ಲಿ ಕುವೆಂಪು ಅವರ ಹೇಳಿಕೆ ಬೇರೆ ರೀತಿಯಾಗಿ ಕಾಣುತ್ತದೆ. ಏಕೆಂದರೆ ಕವಿಗಳಿಗೆ ಈಗ ಅದೆಲ್ಲ ಇಲ್ಲ. ನಮ್ಮ ಸಮಾಜವ್ಯವಸ್ಥೆ ಸಂಕೀರ್ಣತೆಗೆ ಬಂದಂತೆ ಹಳೆಯ ರೀತಿಯ ನಂಬಿಕೆಗಳು ಹೊರಟುಹೋಗುತ್ತವೆ. ಕವಿಯ ಚಿಂತನೆಯಲ್ಲಿ ಬದಲಾವಣೆಗಳಾಗುತ್ತವೆ.

೧೯೫೨ರಲ್ಲಿ 'ನಡೆದುಬಂದ ದಾರಿ' ಕವನಸಂಕಲನದ ಮುನ್ನುಡಿಯಲ್ಲಿ ಗೋಪಾಲಕೃಷ್ಣ ಅಡಿಗರು "ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕ ಇದ್ದ ವಾತಾವರಣ ಈಗ ಪರಿವರ್ತನೆಗೊಂಡಿದೆ. ಮೋಡವಾಗಿ ಮೇಲೇರಿದ್ದ ಮನಸ್ಸು ಮಳೆಯಾಗಿ ಮತ್ತೆ ಹಳ್ಳಕೊಳ್ಳಗಳಲ್ಲಿ ತುಂಬಿಕೊಂಡಿದೆ. ತಳದಲ್ಲಿ ಕೂತಿದ್ದ ಕೊಳೆ, ಕಸ ರಾಡಿಯಲ್ಲಿ ಈಗ ಮೇಲೆದ್ದು ಬಂದು ಕನ್ನಡಿಯಂತ ನೀರು ಕಲಕಿದೆ"[೭] ಎಂದಿರುವರು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ಪೂರ್ವದಲ್ಲಿ ಇದ್ದ ವಾತಾವರಣ ದೇಶಕ್ಕೆ ಭದ್ರತೆ ಬೇಕು ಎಂಬುದಾಗಿತ್ತು. ಮೂಲಭೂತ ಸೌಕರ್ಯ ನೀಡಿ ಅಂಬೇಡ್ಕರ್ ಮಂಡಿಸಿದ ಸಂವಿಧಾನದ ಪ್ರಕಾರ ಬದುಕಲು ಅವಕಾಶ ಕೊಡಿ ಎಂದು ಸ್ವಾತಂತ್ರ್ಯ ಬಂದ ನಂತರ ಹೋರಾಟ ಚಳುವಳಿಗಳೂ ನಡೆದಿವೆ. ಈ ಹಿನ್ನೆಲೆಯಿಂದ ಸಾಹಿತ್ಯದ ವಸ್ತುವಾಗಿ ಮೂಡಿಬಂದ ಸಾಹಿತ್ಯ ರಚನೆಯ ಕವಿತೆಗಳನ್ನು ಪಿ.ಲಂಕೇಶರು ಸಂಪಾದಿಸಿದ 'ಅಕ್ಷರ ಹೊಸ ಕಾವ್ಯ'ಕ್ಕೆ ಬರೆದ 'ಹೊಸ ಕವಿ, ಹೊಸ ಕಾವ್ಯ' ಮುನ್ನುಡಿಯಲ್ಲಿ ಕಾವ್ಯ ಅಧ್ಯಯನ, ಸಮೀಕ್ಷೆ, ಓದು, ಬರಹ ಎಲ್ಲವನ್ನು ತಿಳಿಸುವ ಪ್ರಮುಖ ಚಿಂತನೆಯಿದೆ.

### ೫.೮. ಯು.ಆರ್.ಅನಂತಮೂರ್ತಿ

ಕನ್ನಡ ಸಾಹಿತ್ಯದ ವಿಮರ್ಶಕ, ಕಥೆಗಾರ, ಕಾದಂಬರಿಕಾರ ಇವೆಲ್ಲಕ್ಕಿಂತ ಹೆಚ್ಚಾಗಿ ತತ್‌ಕ್ಷಣದ ಪ್ರತಿಕ್ರಿಯೆ ನೀಡಬಲ್ಲ ವ್ಯಕ್ತಿತ್ವ ಡಾ.ಯು.ಆರ್. ಅನಂತಮೂರ್ತಿಯವರದು. ಇವರು ನವ್ಯ ಸಾಹಿತ್ಯ

ಚಿಂತಕರಲ್ಲಿ ಪ್ರಮುಖರಾಗಿ ಕಾಣುತ್ತಾರೆ. "ಈ ಲೇಖಕ ಸಾಹಿತ್ಯವಲ್ಲದ್ದನ್ನು ಎಂದೂ ಬರೆಯಲಾರರು"[೯೮] ಎಂದು ಗೋಪಾಲಕೃಷ್ಣ ಅಡಿಗರು ಯು.ಆರ್.ಅನಂತಮೂರ್ತಿಯವರನ್ನು ಕುರಿತು 'ಎಂದೆಂದೂ ಮುಗಿಯದ ಕತೆ'(೧೯೫೫) ಕಥಾಸಂಕಲನದ ಮುನ್ನುಡಿಯಲ್ಲಿ ಹೇಳಿದ್ದಾರೆ. ಹಾಗೆಯೇ "ಎಲ್ಲ ಪ್ರಭಾವಗಳಿಗೂ ಮುಕ್ತವಾಗಿ ತೆರೆದುಕೊಂಡ ಮನಸ್ಸು. ಜೊತೆಗೆ ನಿಷ್ಠುರವಾದ ಖಾಸಗಿತನ, ಬರೆದದ್ದು ಜೀವಂತ ಕನ್ನಡವಾಗಬೇಕೆಂಬ ಕಾಳಜಿ ನಮ್ಮ ಅತ್ಯುತ್ತಮ ಕನ್ನಡ ಲೇಖಕರ ಲಕ್ಷಣವೆಂದು ನಾನು ತಿಳಿದಿದ್ದೇನೆ"[೯೯] ಎಂದು 'ಆವೆ' ಕೃತಿಯ ಮುನ್ನುಡಿಯಲ್ಲಿ ಎಚ್.ಎಂ.ಚನ್ನಯ್ಯನವರು ಹೇಳುತ್ತಾರೆ. ಅನಂತಮೂರ್ತಿಯವರು ನವ್ಯ ಸಾಹಿತ್ಯದಲ್ಲಿ ಅವರ ಬರವಣಿಗೆ ಒಂದು ಶೈಲಿಯ ಕ್ರಾಂತಿಯಾಗಿ ಅವರ ಜೀವನದೃಷ್ಟಿಯ ಕ್ರಾಂತಿಯಾಗಿತ್ತು. ಗೋಪಾಲಕೃಷ್ಣ ಅಡಿಗರು ಮತ್ತು ಚನ್ನಯ್ಯನವರ ಮುನ್ನುಡಿಯಲ್ಲಿ ಹೇಳುವಂತೆ ಕತೆ, ಕಾದಂಬರಿ, ವಿಮರ್ಶೆ ಮಟ್ಟಿಗೆ ಪ್ರಬುದ್ಧತೆಯಲ್ಲಿ ವಿಪರೀತಕ್ಕೆ ಹೋದ ನವ್ಯತೆಯ ಅನುಸಂಧಾನದ ಅಪಾಯಗಳನ್ನು ಕುರಿತು ಅನಂತಮೂರ್ತಿಯವರು ತಮ್ಮ ಕೃತಿ 'ಪ್ರಜ್ಞೆ ಮತ್ತು ಪರಿಸರ'ದಲ್ಲಿ ಚಿಂತಿಸಿದ್ದರು. ಅಂದಿನಿಂದ ಅವರು ಕನ್ನಡದಲ್ಲಿ ಅಡಿಗರ 'ಭೂಮಿಗೀತ' ಕೃತಿಗೆ ಮುನ್ನುಡಿ ಬರೆದು ನವ್ಯದ ಪ್ರಸ್ತುತತೆಯನ್ನು ಪರಿವರ್ತಿಸುತ್ತ, ಸಂಸ್ಕೃತಿಯ ಆಂತರಿಕ ವಿಮರ್ಶಕರಾಗಿ ಬೆಳೆದಿದ್ದಾರೆ. ಕನ್ನಡದ ಕೆಲವು ಲೇಖಕರು ಭಾರತೀಯ ಲೇಖಕನೊಬ್ಬ ತನ್ನ ಪರಂಪರೆಗೆ ಅನ್ಯರಾದ ಏಟ್ಸ್, ಟಾಲ್‌ಸ್ಟಾಯ್, ಸಾತ್ರೆ, ಚಿನುವಾಅಚಿಬೆಯಂತ ಲೇಖಕರಿಂದ ಪ್ರೇರಣೆ ಪಡೆದಿರಬಹುದು. ಆದರೆ ಅನಂತಮೂರ್ತಿಯವರು ಇದನ್ನು ಒಪ್ಪುವುದಿಲ್ಲ. ಅದಕ್ಕೆ ತಮ್ಮ ನಿಲುವನ್ನು ನವೋದಯ ಲೇಖಕರಿಂದ ಕಲಿತ ಪಾಠ ಪ್ರೇರಣೆಯನ್ನು ಹೀಗೆ ವ್ಯಕ್ತಪಡಿಸುತ್ತಾರೆ.

'ಭೂಮಿಗೀತ' ಮುನ್ನುಡಿಯಲ್ಲಿ ವ್ಯಕ್ತಪಡಿಸುವಂತೆ ಕನ್ನಡ ಸಾಹಿತ್ಯ ಸಂಕಲನವೊಂದನ್ನು ಸಂಪಾದಿಸಿರುವ ಅನಂತಮೂರ್ತಿಯವರು ಹಳಗನ್ನಡ, ನಡುಗನ್ನಡ ಸಾಹಿತ್ಯವನ್ನು ಅಧ್ಯಯನ ಮಾಡಿಲ್ಲ ಎನ್ನುವಂತಿಲ್ಲ. ಆದ್ದರಿಂದ ಅನಂತಮೂರ್ತಿಯವರು ಪರಿಷ್ಕರಿಸಿದ ವಾಕ್ಯವನ್ನು ಇದ್ದಂತೆ ಒಪ್ಪಿಕೊಳ್ಳುವುದು ಕಷ್ಟ. ಹಾಗಾಗಿ "ಅರಳು ಮರಳು ಸಂಗ್ರಹಕ್ಕಿಂತ ಹಿಂದಿನ ಬೇಂದ್ರೆ, ಇನ್ನೂ ಜೀವಂತ ಕಾವ್ಯ ರಚಿಸುತ್ತಿರುವ ಅಡಿಗ ಈ ಇಬ್ಬರೇ ಕನ್ನಡದ ಅತೀ ಶ್ರೇಷ್ಠ ಕವಿಗಳು ಎಂಬ ವಾಕ್ಯದಲ್ಲಿ ಕನ್ನಡ ಎಂಬುದು 'ಹೊಸಗನ್ನಡ' ಎಂದು ತಿದ್ದಿ ಕೊಳ್ಳುತ್ತೇನೆ"[೧೦೦] ಎಂದು ಅನಂತಮೂರ್ತಿ ಹೇಳುತ್ತಾರೆ. ಹೀಗಾಗಿ ಅನಂತಮೂರ್ತಿಯವರು ಹಳಗನ್ನಡದಿಂದ ನವೋದಯ, ಪ್ರಗತಿಶೀಲ, ನವ್ಯದವರನ್ನು ಚೆನ್ನಾಗಿ ಓದಿಕೊಂಡವರು. ಆದರೆ ಯಾರು ಪಾಶ್ಚಿಮಾತ್ಯ ಕವಿಗಳ ಪ್ರಭಾವ ಎಂದು ಹೇಳಿದವರಿಗೆ ಅವರು ಬೇಂದ್ರೆ, ಅಡಿಗರು ಶ್ರೇಷ್ಠರಾಗಿ ಯುರೋಪಿನ ಸಾಹಿತ್ಯ ವಸ್ತುವನ್ನು ನವ್ಯ ಸಾಹಿತ್ಯ ಚಳುವಳಿಯಲ್ಲಿ ಪ್ರಯೋಗ ಮಾಡಿದ್ದಾರೆ.

ಭೂಮಿಗೀತದ ಮುನ್ನುಡಿಯಲ್ಲಿ ವ್ಯಕ್ತಪಡಿಸುವಂತೆ ಇದು ಕನ್ನಡದ ಒಬ್ಬ ಶ್ರೇಷ್ಠ ಕವಿ ಹಾಗೂ 'ನವ್ಯ ಸಾಹಿತ್ಯಲೋಕದ' ವಿಮರ್ಶಕನ ಮುಖಾಮುಖಿಯಿದೆ. ಹಾಗೆಯೇ ಅನಂತಮೂರ್ತಿಯವರು

ಇಂಗ್ಲಿಷ್ ಅಧ್ಯಾಪಕರಾಗಿ ಚಿಕ್ಕ ವಯಸ್ಸಿನಲ್ಲಿ ಈ ಮುನ್ನುಡಿಯನ್ನು ಬರೆದರು. ಇದೇ ಕನ್ನಡ ವಿಮರ್ಶೆಯನ್ನು ಬೆಳೆಯಿಸಿದ ವಿಮರ್ಶೆ ಮಾತ್ರವಾಗದೇ ಹೊಸಗನ್ನಡ ವಿಮರ್ಶೆಯ ಬೆರಳೆಣಿಕೆಯಲ್ಲಿ ಮುನ್ನೆಲೆಗೆ ಬರುತ್ತದೆ. ಈ ಮುನ್ನುಡಿಯ ಐತಿಹಾಸಿಕ, ಸಾಂಸ್ಕೃತಿಕ ಮಹತ್ವವನ್ನು ಕನ್ನಡ ವಿಮರ್ಶೆ ಈಗಾಗಲೇ ಗುರುತಿಸಿದೆ. ಈ ಮುನ್ನುಡಿಯಲ್ಲಿ ಅನಂತಮೂರ್ತಿಯವರು "ಇವರ ಕಾವ್ಯದಲ್ಲಿ ಎಲ್ಲೆಲ್ಲೂ ಸತ್ವತಮಗಳ ನಡುವಿನ ರಿಲಿಜಿಯಸ್ ಎನ್ನಿಸುವಂತಹ ಹೋರಾಟವನ್ನು ನೋಡಬಹುದು. ಇಂಗ್ಲೆಂಡಿನ ನವ್ಯಕಾವ್ಯದ ಪರಂಪರೆಯನ್ನಷ್ಟೇ ಅರಿತವರಿಗೆ ಅಡಿಗರ ಈಗಿನ ಕವನಗಳಲ್ಲಿ ಶೇಕಡಾ ಹತ್ತರಷ್ಟು ಮಾತ್ರ ಅರ್ಥವಾದೀತು. ಉಳಿದ ತೊಂಬತ್ತಂಶ ತಿಳಿಯಲು ನಮ್ಮ ಆರ್ಯ ಸಂಪ್ರದಾಯ ಅರ್ಥವಾಗಿರಲೇಬೇಕು. ಅಡಿಗರದು ಮುಖ್ಯವಾಗಿ ಆರ್ಷ ದೃಷ್ಟಿ"[೧೦೧] ಎಂದಿರುವರು. ಇದು ಅಡಿಗರ 'ಆರ್ಷ ದೃಷ್ಟಿ' ಎಂಬ ಪದ ಅಡಿಗರ ಕಾವ್ಯದ ಪೌರಾಣಿಕ ಪ್ರತಿಮೆಗಳು, ಧ್ವನಿಶಕ್ತಿ ಹಾಗೂ ಕಾಣಿಕೆಗಳಾಗಿ ಸೂಚಿಸುತ್ತದೆ. ಅಡಿಗರ ಭಾಷೆಯಲ್ಲಿ ಭಾವಾಭಿನಯ ಹಾಗೂ ಎಲ್ಲವನ್ನು ಒಳಗೊಳ್ಳುವ ಶಿಲ್ಪದ ವರವಾಗಿ, ಸಾಮಗ್ರಿಯಾಗಿ ಅನಂತಮೂರ್ತಿಯವರು ಪರಿಕರಗಳಾಗಿ ವಿಮರ್ಶೆಗೆ ಒಳಪಡಿಸಿಕೊಂಡಿದ್ದಾರೆ. ಹಾಗೆಯೇ ಅಡಿಗರ ಕಾವ್ಯದಲ್ಲಿ ಸಾಹಿತ್ಯ ವಿಮರ್ಶೆಗೆ ಥಟ್ಟನೆ ಹೊಳೆಯುವ ಗುಣ ಈ ಕವಿ ಕನ್ನಡ ಭಾಷೆಯನ್ನು ಬಳಸಿಕೊಳ್ಳಲು ಶ್ರಮ ಹಾಗೂ ಪ್ರತಿಮೆ, ರೂಪಕ, ವಸ್ತುನಿಷ್ಠತೆ ಓದುಗರಲ್ಲಿ ಬೇಗ ಅರ್ಥ ಮಾಡಿಕೊಳ್ಳದೆ ಇರುವವರು ಹೆಚ್ಚು. ಆದರೆ ಬೇಂದ್ರೆಗಿಂತ ಪ್ರಮುಖ ಕವಿ ಎಂದು ಹೇಳಬಹುದು. ಏಕೆಂದರೆ ಬೇಂದ್ರೆಯವರು ತಮ್ಮ ಗರಿಯ ಮುನ್ನುಡಿಯಲ್ಲಿ ನಮ್ಮ ಕಾವ್ಯದ ಭಾಷೆ ಯಾವುದಾಗಿರಬೇಕು ಎಂಬ ನಿಲುವು ವ್ಯಕ್ತಪಡಿಸುವಾಗ ಅಡಿಗರ ತಮ್ಮ ಕಾವ್ಯದ ಭಾಷೆಯನ್ನು ಬೇಂದ್ರೆಯವರಿಗಿಂತ ಹೆಚ್ಚಾಗಿ ಕನ್ನಡ ಭಾಷೆಯನ್ನು ಬಳಸಿಕೊಂಡಿದ್ದಾರೆ.

ಅನಂತಮೂರ್ತಿಯವರು ಮುನ್ನುಡಿಯಲ್ಲಿ ಹೇಳುವಂತೆ "ನಾವು ಆಡುವ ಮಾತಿನ ಪರಿಪಾಠದ ಪರಿಮಿತಿಯಲ್ಲಿ ತಮ್ಮ ಅನುಭವದ ಪರಿಪೂರ್ಣಾವತಾರಕ್ಕೆ ಈ ಕವಿ ನಡೆಸುವ ಪ್ರಯತ್ನ ಸದ್ಯದ ಕನ್ನಡ ಸಾಹಿತ್ಯದಲ್ಲಿ ಅನನ್ಯ ರೀತಿಯದು. ಭಾಷೆಯಲ್ಲಿ ಸಂಭವಿಸದಿರುವುದು ಕಾವ್ಯದಲ್ಲಿ ಎಂಬ ಕಲಾಸೃಷ್ಟಿಯ ಅಗ್ನಿದಿವ್ಯವನ್ನು ಒಪ್ಪಿಕೊಂಡ ಈ ಕವಿ ಎಂದೂ ಅಪ್ರಾಮಾಣಿಕನಾಗಲಾರ. ಎಂದರೆ ಭಾಷೆಯ ಬಗ್ಗೆ ಈ ತೀವ್ರ ದೃಷ್ಟಿ ತಾಳಿದವನು ಅಂತಃಕರಣ ಪ್ರಾಮಾಣ್ಯವಿಲ್ಲದ ಎರವಲು ತಂದ ಅನುಭವಗಳನ್ನು ಸುಂದರವೆನ್ನಿಸುವ ಅಥವಾ ಭವ್ಯವೆನ್ನುವ ಭ್ರಮೆ ಹುಟ್ಟಿಸುವ ಶೈಲಿಯ ಮುಸುಕು ಕಳೆದು ಕಾವ್ಯವೆಂದು ವಂಚಿಸಲಾರ. ಈ ವಂಚನೆ ಪರವಂಚನೆಗಿಂತ ಹೆಚ್ಚಾಗಿ ಆತ್ಮವಂಚನೆ. ಆದ್ದರಿಂದ ಅಡಿಗರ ಪ್ರಯತ್ನ ಸಾರ್ಥಕವಾಗಲಿ, ಸೋಲಲಿ ಸಾಹಿತ್ಯ ವಿಮರ್ಶಕ ಇಂತಹ ಕವಿಯ ಹೋರಾಟವನ್ನು ಎಚ್ಚರದಿಂದ ಪರಿಶೀಲಿಸುತ್ತಾನೆ."[೧೦೨] ಇಲ್ಲಿ ಭಾಷೆಯ ಪರಿಧಿಯ ಒಳಗೆ ವಿಮರ್ಶಕ ಚಿಂತಿಸಬೇಕಾಗಿರುವುದು ಸಾಹಿತ್ಯ ವಸ್ತು ಪರಿಕರ ಮತ್ತು ನೋಡುವ ದೃಷ್ಟಿಕೋನ. ಯಾವುದೇ ಸಾಹಿತ್ಯದ ವಸ್ತು ಭ್ರಮೆ ಹುಟ್ಟಿಸಲಾರದು. ಅದು ವಾಸ್ತವ ಸಂಗತಿಗಳ ಹತ್ತಿರವಿರುತ್ತದೆ ಎಂಬ ಅಭಿಪ್ರಾಯ ವ್ಯಕ್ತಗೊಂಡಿದೆ. ಅಡಿಗರ ಕಾವ್ಯದ ವಸ್ತು ಯಾವುದು? ಯಾವ ನೆಲೆಯಲ್ಲಿ ರೂಪಗೊಂಡಿದೆ ಎಂಬುದನ್ನು ತಿಳಿಯುತ್ತಾ ಅವರ ಮನೋಭೂಮಿಕೆಯ ಸೂಕ್ಷ್ಮ ಪರಿಶೀಲಿಸಬಹುದಾಗಿದೆ.

ಅಡಿಗರ ಕವನಗಳಲ್ಲಿ ಆತ್ಮವ್ಯಂಜಕ ಮತ್ತು ಸಾಮಾಜಿಕ ಎಂದು ಅರ್ಥ ಮಾಡಿಕೊಳ್ಳಲು ಸರಳವಾಗುತ್ತಿದ್ದವು. ಸಾಮಾಜಿಕ ಪ್ರಜ್ಞೆ ಹೇಗೆ ಪೂರ್ಣ ಬಾಹ್ಯವಲ್ಲ. ಆತ್ಮವ್ಯಂಜಕವೋ ಅಷ್ಟೇ ಅಂತರಂಗ ಮಾತ್ರಕ್ಕೆ ಸಂಬಂಧಪಟ್ಟದ್ದಲ್ಲ ಎಂಬ ನಿಲುವಿಗೆ ಅನಂತಮೂರ್ತಿಯವರು ಬರುತ್ತಾರೆ. ಆದರೆ ಅಡಿಗರ ಕೆಲವು ಕವನಗಳು ಸಂಕೀರ್ಣತೆಯನ್ನು ಹೆಚ್ಚಿಸಿವೆ. ಭೂಮಿಗೀತ ಕವನಗಳು 'ಓಡಲೆಳೆಸುತಿಹುದು ಜೀವ', 'ಒಳತೋಟ', 'ಮೋಹನ ಮುರಲಿ', 'ಅತಿಥಿಗಳು', 'ಹಿಮಗಿರಿಯ ಕಂದರ' ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವ ಕವನಗಳು ಜೀವನದ ಸಾಮಾಜಿಕ ಸಂಕೀರ್ಣತೆಯನ್ನು ಹೊಂದಿವೆ ಎಂಬುದು ಅನಂತಮೂರ್ತಿಯವರ ಅಭಿಪ್ರಾಯವಾಗಿದೆ.

"ನರ್ಸುಗಳು ಡಾಕ್ಟರರು ಹೆರಿಗೆ ಮನೆಯೊಳಹೊರಗೆ
ಅವರ ಬೆನ್ನಿಗೆ ಸದಾ ನಾಲ್ಕು ಮಂದಿ,
ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ

ಜಾತಕ ಕರ್ಮದಿನಿರತ ಈ ಪುರೋಹಿತ ಭಟ್ಟ ಅಪರಪ್ರಯೋಗದಲ್ಲಿ ಪಾರಂಗತ"[೧೦೩] (ಭೂಮಿಗೀತ ಪು.೨೬೪)

ಎಚ್.ಎಂ.ಚನ್ನಯ್ಯನವರ 'ಆಮೆ' ಕವನ ಸಂಕಲನಕ್ಕೆ ಯು.ಆರ್.ಅನಂತಮೂರ್ತಿಯವರು ಮುನ್ನುಡಿ ಬರೆಯುತ್ತಾ ಕೆಲವು ಪ್ರಶ್ನೆಗಳನ್ನು ಹಾಕುತ್ತಾರೆ. ನವ್ಯ ಸಾಹಿತ್ಯದಲ್ಲಿ 'ಕಾಮ' ಕುರಿತಂತೆ ಏಕೆ ಇದೆ ಎಂಬ ವಿಷಯ ಕುರಿತು ಜನರಲ್ಲಿಯೂ, ಓದುಗರಲ್ಲಿಯೂ ಮೂಡಿದ ಪ್ರಶ್ನೆಯಾಗಿದೆ. ಹಾಗಾಗಿ 'ಕಾಮ' ಎನ್ನುವುದು ಸಾಹಿತ್ಯ ವಿಮರ್ಶೆಯ ಸೋಗಿನಲ್ಲಿ ವ್ಯಕ್ತಿಗತ ಸಂಕೋಚಗಳು ಅಡಗಿವೆ. ಹಾಗಾಗಿ ಸಂಕೋಚ ಕೂಡ ಕಾಮದಷ್ಟೆ ಸಾಮಾಜಿಕ ಮನುಷ್ಯನ ಅಗತ್ಯವಾದುದರಿಂದ ಉಡಾಫೆ ಮನೋಭಾವ ಹೊಂದಿರುವುದು ತಪ್ಪು. ಹಾಗಾಗಿ ಕನ್ನಡ ಸಾಹಿತ್ಯ ವಿಮರ್ಶಕರು ಕಾಮ ಕುರಿತಂತೆ ಹೇಳುವುದಾದರೆ "ಯಾವ ವಿಷಯವೇ ಆಗಲಿ, ತೀವ್ರವಾಗಿ, ಗಂಭೀರವಾಗಿ, ಆಳವಾಗಿ ಕೃತಿಯಲ್ಲಿ ಶೋಧಿತವಾಗಬೇಕಾದರೆ ಕೃತಿಕಾರನಲ್ಲೂ, ಓದುಗನಲ್ಲೂ ನಿರ್ಲಿಪ್ತತೆ ಅವಶ್ಯ. ಹೀಗೆ ನಿರ್ಲಿಪ್ತವಾಗಿ ಶೋಧಿತವಾದದ್ದು ಒಡಮೂಡಿದ್ದು ಅಶ್ಲೀಲವಾಗಲಾರದು. ಕಾಮುಕತೆ ಎಷ್ಟು ಈ ನಿರ್ಲಿಪ್ತತೆಗೆ ಅಡ್ಡವಾದೀತೋ ಅಷ್ಟೇ ಸಂಕುಚಿತವಾದ 'ಮರ್ಯಾದೆ'ಯ ಕಲ್ಪನೆ ಕೂಡ ಜೀವನಾನುಭವದ ದಟ್ಟವಾದ ಅಭಿವ್ಯಕ್ತಿಗೆ ಕಂಟಕಪ್ರಾಯವಾದೀತು. ಕಾಮದ ಬಗೆಗಿನ ನಮ್ಮ ನೈತಿಕ ಧೋರಣೆ ಕೂಡ ಪರೀಕ್ಷೆಗೆ ಒಳಗಾಗಬೇಕಾದ್ದು ಆಗಿದೆ. ಮನುಷ್ಯ ಸಾಮಾಜಿಕನಾಗಿ ಬದುಕಲು ಸಂಕೋಚಗಳು ಅತ್ಯಗತ್ಯ. ನಮ್ಮ ನೋವಿಗೆ, ಸುಖಕ್ಕೆ ಕಾರಣವಾಗುವ ಕಾಮದ ಸುತ್ತ ಈ ಸಂಕೋಚಗಳು ಬೆಳೆದುಕೊಳ್ಳುವುದು ಅನಿವಾರ್ಯ. ಎಲ್ಲ ಸಮಾಜದಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಈ ಸಂಕೋಚಗಳು ಇದ್ದೇ ಇರುತ್ತವೆ"[೧೦೪] ಎಂದು ಅನಂತಮೂರ್ತಿಯವರು ಹೇಳುತ್ತಾರೆ. ಇಲ್ಲಿ ಕಾಮ ಎನ್ನುವ ಪ್ರತಿಮೆ, ರೂಪಕಗಳು ಸಾಮಾಜಿಕ ಪ್ರಶ್ನೆ, ಸಂಕೋಚ ಭಾವನೆಗಳು ಹಿರಿಯರ ಸಂಪ್ರದಾಯಕ್ಕೆ ಬದ್ಧತೆಯಾಗಿರುವುದು. ಜಾತಿ ಪದ್ಧತಿ ವ್ಯವಸ್ಥೆಯ ಪಿತೂರಿಗಳು ಇವೆಲ್ಲವುಗಳು

ಮನಸ್ಥಿತಿಯಲ್ಲಿ ಕೂಡಿರುವುದರಿಂದ 'ಕಾಮ' ಎನ್ನುವ ಹಿನ್ನೆಲೆಯಿಂದ ಬಿಡುಗಡೆಗೊಳ್ಳಬೇಕು ಎನ್ನುವ ನೆಲೆ ಹೊಂದಿವೆ. ಇಲ್ಲಿ ಚನ್ನಯ್ಯನವರ ಕವಿತೆಗಳು ಮನುಷ್ಯ ಸ್ವಭಾವದ ನೆಲೆ ಹೊಂದಿವೆ. ಅವರ ರೀತಿ ರಿವಾಜುಗಳು ಬದಲಾವಣೆ ಹೊಂದುತ್ತ ಮುಕ್ತಭಾವನೆ ಹೊಂದಿರುವುದು ಮುಖ್ಯ ಉದ್ದೇಶವಾಗಿದೆ. ಹಾಗಾಗಿ ಅನಂತಮೂರ್ತಿಯವರು "ಈ ಸಮಾಜ ನಮ್ಮ ಸಾಹಿತ್ಯದಲ್ಲಿ ಭಾಷೆ ಕಲಿಸಿಕೊಂಡು ಬಿಡುವುದನ್ನು ಉಚ್ಚವರ್ಗದಲ್ಲಿರುವವನಲ್ಲೂ ಕಾಮಪ್ರವೃತ್ತಿಯಿದೆ ಎಂಬುದನ್ನು ಗುರುತಿಸುವುದನ್ನು ಅಸಹನೆಯಿಂದ ಕಾಣುವುದು ಸಹಜವಾದದ್ದೇ. ಆದ್ದರಿಂದ ಈಗ ತಾನೆ ಮೇಲ್ವರ್ಗಕ್ಕೇರಿ ನವೀನ ಬ್ರಾಹ್ಮಣರಾದವರು ಮತ್ತು ಸನಾತನಿಗಳು ನವ್ಯ ಸಾಹಿತ್ಯವನ್ನು ಟೀಕಿಸುವಾಗ ಎಷ್ಟರಮಟ್ಟಿಗೆ ತಮ್ಮ ನೈತಿಕ ಧೋರಣೆಗಳು ಗಣ್ಯತೆ ಕಲ್ಪನೆಯಿಂದ ಹುಟ್ಟಿದವು, ಅನಿವಾರ್ಯ ಸಂಕೋಚಗಳಿಂದ ಉದ್ಭವವಾದವು, ಜಾತಿಪದ್ಧತಿಯಿಂದ ಬೆಳೆದವು, ಇತ್ಯಾದಿ ಪ್ರಶ್ನೆಗಳನ್ನು ತಮಗೆ ತಾವೇ ಕೇಳಿಕೊಂಡು ಸಾಕಷ್ಟು ನಿರ್ಲಿಪ್ತರಾಗಿ ಬರೆಯುವುದು ಅವಶ್ಯ"[೧೧೫] ಎಂದಿರುವರು. ಇಲ್ಲಿ ಸಾಮಾಜಿಕವಾಗಿ ಹಿಂದಿನಿಂದ ಬಂದ ಕಟ್ಟಾ ಸಂಪ್ರದಾಯವಂತಿಕೆಯಿಂದ ಬೇಸತ್ತು ಕೆಲವು ಸಮುದಾಯಗಳಿಗೆ, ಜನರಿಗೆ ಇದರಿಂದ ಅತೃಪ್ತಿತನವಿದೆ. ಹಾಗಾಗಿ ನಿರ್ಲಿಪ್ತರಾಗಿ ಬೆರೆಯುವುದು ಅವು ಕಾಮ, ಪ್ರೇಮ ವಿಷಯದಲ್ಲಿ ಮುಕ್ತತೆಯ ಸಮಾಜಕ್ಕೆ ಈ ಬರವಣಿಗೆಯನ್ನು ನೋಡಬಹುದು. ಎಚ್.ಎಂ.ಚನ್ನಯ್ಯನವರ ಕವನ.

"ಹಾರೈಸಿದ್ದೆ ಅವನ ಬಲಿಷ್ಠ ಚಂಚು ಪಕ್ಷಗಳ
ಮೃತ್ಯ ಬಂಧನಕ್ಕೆ ಪಂಜರದ
ಪ್ರಣಯ ಕೇಳಿಯ ಬಲಾತ್ಕಾರಕ್ಕೆ ಕನಸಲ್ಲೆಲ್ಲ
ಆಕಳಿಸಿದೀ ಹುಣ್ಣಿನೊಳಕ್ಕೆ ಹೊಕ್ಕು ಕಡೆದಂತೆ
ಮಂದರ ಬಯಸಿ ಬಾಯ್ಬಿಟ್ಟ"[೧೧೬] (ನಾನು)

ಹೀಗೆ ಕವನಗಳನ್ನು ನವ್ಯ ಸಾಹಿತ್ಯದಲ್ಲಿ ಅತೃಪ್ತಿತನದಿಂದ ತೃಪ್ತಿಗಾಗಿ ತಮ್ಮ ಅಸ್ತಿತ್ವಕ್ಕಾಗಿ ನೆಲೆ ಹುಡುಕುವ ಪ್ರವೃತ್ತಿಗಳು ಕಂಡುಬರುತ್ತವೆ.

ಗಂಗಾಧರ ಚಿತ್ತಾಲ ಅವರ 'ಹರಿವ ನೀರಿದು' ಕವನಸಂಕಲನ ಕೃತಿಗೆ ಯು.ಆರ್. ಅನಂತಮೂರ್ತಿಯವರು ಮುನ್ನುಡಿ ಬರೆಯುತ್ತಾ 'ಇಲ್ಲಿ ಅಡಿಗರ ಕಾವ್ಯ ಭಾಷೆಗಿರುವ ಕ್ರಾಂತಿ ಶಕ್ತಿಯನ್ನು ಬದಲಿಸುವ ಸಂವೇದನಾಕ್ರಮ ಹಾಗೂ ಹೊಸ ಕಾವ್ಯಮಾರ್ಗವನ್ನು ಸೃಷ್ಟಿಸುವ ಶಕ್ತಿಯು ಗಂಗಾಧರ ಚಿತ್ತಾಲರ ಕಾವ್ಯ ಭಾಷೆಗಿಲ್ಲವಾದರೂ ಅಡಿಗರ ಸಮಕಾಲೀನರಲ್ಲಿ ಜೀವನಾನುಭವವನ್ನು ಚಿತ್ತಾಲರಷ್ಟು ಸಂಪೂರ್ಣವಾಗಿ, ಮೂಲಭೂತವಾಗಿ ಪರೀಕ್ಷಿಸಿ ಅಭಿವ್ಯಕ್ತಿಸಲು ಪ್ರಯತ್ನಿಸಿದ ಕವಿಗಳಿಲ್ಲ. ಆದರೆ ನವೋದಯ ನವ್ಯ ಮಾರ್ಗಗಳ ತಿಕ್ಕಾಟಗಳಲ್ಲಿ ಎದೆಗುಂದದೆ ಹೊಸ ಕಾವ್ಯ ಪ್ರಯೋಗಗಳಿಂದ ಕಲಿಯಬೇಕಾದದ್ದನ್ನು ಕಲಿತು ಸ್ವಂತಿಕೆಯ ದೃಷ್ಟಿಕೋನದಿಂದ ತನ್ನ ಸಮಕಾಲೀನ ಕಾವ್ಯಕ್ಕಿಂತ ತನ್ನದೇ ಆದ ತಾತ್ವಿಕ ನಿಲುವು, ಧಾಟಿಗಳನ್ನು ಕಾವ್ಯದಲ್ಲಿ ಪಡೆದು ಸಾರ್ವಕಾಲಿಕ ಸಾರ್ವತ್ರಿಕ

ಸಮಸ್ಯೆಗಳನ್ನು ಅತ್ಯಂತ ವೈಯಕ್ತಿಕವಾದ ನಿಲುವಿನಿಂದ ಅಭಿವ್ಯಕ್ತಿಸುವ ಪ್ರತಿಭೆ ಚಿತ್ತಾಲರಲ್ಲಿ ಮೂಡಿದೆ' ಎನ್ನುತ್ತಾರೆ. ಅನಂತಮೂರ್ತಿಯವರು ಬೇಂದ್ರೆ ಮತ್ತು ಅಡಿಗರ ಮಧ್ಯ ತೌಲನಿಕವಾಗಿ ಇತರ ಕವಿಗಳನ್ನು ಪರಿಶೀಲಿಸುವುದನ್ನು ಕಾಣುತ್ತೇವೆ. ಏಕೆಂದರೆ ಭಾಷೆ ರೂಪಕ ಪ್ರತಿಮೆಗಳಲ್ಲಿ ಬೇಂದ್ರೆ, ಅಡಿಗರು ಪ್ರಮುಖರಾಗಿದ್ದರಿಂದ ಚಿತ್ತಾಲರನ್ನು ಈ ದೃಷ್ಟಿಕೋನದಿಂದ ನೋಡಲಾಗಿದೆ. ಗಂಗಾಧರ ಚಿತ್ತಾಲರ ಕಾವ್ಯ "ವ್ಯಂಗ್ಯ, ವಕ್ರತೆ, ಕಟುತ್ವ, ಪರವಶ ಹೀಗೆ ಹಲವಾರು ಮೂಡುಗಳ ನಾಟಕದಲ್ಲಿ ಏರಿಳಿಯುತ್ತ ಸಾಗುವ ಲಯಕ್ಕೆ ಬದಲಾಗಿ ಚಿತ್ತಾಲರು ಅತ್ಯಂತ ಗಂಭೀರರಾದಾಗ ಘೋಷ ಲಯವೊಂದೆ ನಮ್ಮ ಕಿವಿ ತುಂಬಿ ನಿಲ್ಲುತ್ತದೆ"[೧೦೭] ಎಂದು ಅನಂತಮೂರ್ತಿಯವರು ಕೆಲವರು ಆರೋಪದ ಅಥವಾ ಅನುಮಾನದ ರೀತಿಯಲ್ಲಿ ಕಂಡವರಿದ್ದಾರೆ. ಅವರ ಎರವಲು ಭಾಷೆ ಪ್ರಯೋಗದಿಂದ ಹೇಳಬಹುದು. ಆದರೆ ಗಂಗಾಧರ ಚಿತ್ತಾಲರ 'ದುಃಖ ಗೀತೆ' ಕವಿತೆ ಓದಿದರೆ ಕವಿತೆಯಿಂದ ಆತ್ಮವಿಮರ್ಶೆ ಒಳಗಾಗುತ್ತದೆ ಎನ್ನುವುದಕ್ಕೆ

"ಆಹಾ ದಾರಿಯ ನಡೆದೆ ಭರವಸೆಯನೇನಂಬ
ಜಗಕೆ ಜಗ ಸಿಕ್ಕರೂ ಭರವಸೆಯನೇ ನಂಬಿ
ಬಂಧು ಹೀಯಾಳಿಸಿದ, ಬಳಗ ಕಡೆಗಣಿಸಿದರೂ
ಭರವಸೆಯನ್ನೆ ನಂಬಿ"[೧೦೮] (ದುಃಖಗೀತೆ)

ಈ ಕವಿತೆಯಿಂದ ಅನುಮಾನಪಡುವವರಿಗೆ ಎದುರೇಟು ನೀಡಿದ್ದಾರೆ ಎಂದು ಹೇಳಬಹುದು. ನವ್ಯಕಾವ್ಯದಲ್ಲಿ ಎಷ್ಟೆಷ್ಟೋ ಕುತೂಹಲಕಾರಿಯಾದ ಪ್ರಯೋಗಗಳನ್ನು ಮಾಡಿದವರು ಸಿಗುತ್ತಾರೆ. ಆದರೆ ಹಿಂದಿನ ನವೋದಯ ಕವಿಗಳು ತಮ್ಮ ಮಾತಿನ ಶೈಲಿ, ಗಾಂಭೀರ್ಯಕ್ಕೆ ತಾವೇ ತಲೆತೂಗಿದ್ದರು. ನವ್ಯದವರು ಹಾಗಲ್ಲ. ತಮ್ಮ ಬರವಣಿಗೆಯ ಜಾಣತನಕ್ಕೆ ತಾವೇ ಬೆರಗಾದವರು. ಹಾಗೆಯೇ ತಮ್ಮ ಅನುಭವದ ಸೆರಗಿನಲ್ಲಿ ನಾಜೂಕಾಗಿ ಮುದುಡಿಕೊಂಡವರು ಹೆಚ್ಚು. ಆದರೆ ಗಂಗಾಧರ ಚಿತ್ತಾಲರು ಅಂದಂದಿನ ವಾಸ್ತವಕ್ಕೆ ಪೂರಕವಾಗಿ ಹೆಚ್ಚು ಕಾಳಜಿ ತೆಗೆದುಕೊಂಡು ಬರೆಯುವವರಾಗಿದ್ದರು ಎಂದು ಅನಂತಮೂರ್ತಿಯವರು ಚಿತ್ತಾಲರ ಕುರಿತಂತೆ ವ್ಯಕ್ತಪಡಿಸಿದ್ದಾರೆ.

ಕೆ.ಸದಾಶಿವರ 'ಅಪರಿಚಿತರು' ಕಥಾಸಂಕಲನಕ್ಕೆ ಅನಂತಮೂರ್ತಿಯವರು ಮುನ್ನುಡಿ ಬರೆಯುತ್ತಾ ಕೆ.ಸದಾಶಿವರ ಕತೆಗಳ ಕುರಿತು ಹೇಗೆ ಗ್ರಹಿಸಬೇಕು? ಸಮಾಜದಲ್ಲಿ ಮಾನವನ ಬದುಕಿನ ಸ್ವಭಾವದ ಗುಣಗಳು ಹಾಗೂ ಮೌಲ್ಯಗಳು ಹೇಗೆ ಕೂಡಿಕೊಂಡಿರುತ್ತವೆ ಎನ್ನುವುದಕ್ಕೆ ಹಳ್ಳಿಯ ವಾತಾವರಣ, ಬಡ ಮಧ್ಯಮವರ್ಗದ ನಗರ ಜೀವನ ಎಲ್ಲವನ್ನು ತಮ್ಮ ಪಕ್ವತೆಯಿಂದ ಕತೆಯಲ್ಲಿ ನಿರೂಪಣೆಗೊಂಡಿದೆ ಎಂದು ಹೇಳುತ್ತಾರೆ. ಅವರಿಗೆ ಪ್ರಸಿದ್ಧಿಯನ್ನು ತಂದ ಕತೆ 'ನಲ್ಲಿಯಲ್ಲಿ ನೀರು ಬಂದಿತು.' ಇದು ಸಂಕೇತವಾದರೆ ನಿಜ ಜೀವನದ ನೆಲೆಯಲ್ಲಿ ನೀರು ಬರುವ ಘಟನೆ ಕತೆಯ ಕೊನೆಯಲ್ಲಿ ಹೃದಯ ಪರಿವರ್ತನೆಯನ್ನು ಪ್ರಕಟಿಸುವ ಕ್ರಮವು ಯೋಜಿತವಾದದ್ದು. ನಲ್ಲಿಯಲ್ಲಿ ನೀರು ಬಂದಿತು ಎನ್ನುವುದರ ಹಿಂದೆ ಸಾಮಾಜಿಕ ಸಂವೇದನೆಯನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಇದೇ

ರೀತಿಯಾಗಿ 'ಸರಳುಗಳ ನಡುವೆ' ಕತೆಯು ಸ್ವಾರಸ್ಯವಾಗಿ ಸಿನಿಮೀಯವಾಗಿ ವಿವರ ಕೊಡುತ್ತವೆ. ಆದರೆ ಓದುಗರಲ್ಲಿ ಕುತೂಹಲ ಹುಟ್ಟಿಸುವ ಪ್ರಸಂಗ 'ಕಳ್ಳ ಒಳಹೊಕ್ಕಾಗ' ಶುರುವಾಗುವ ರಾಧಳ ಹೆರಿಗೆ ನೋವು ದಿಗಿಲು ಹುಟ್ಟಿಸುತ್ತದೆ ಎಂದಲ್ಲ. ಇಲ್ಲಿ ಮನುಷ್ಯ ಪ್ರವೃತ್ತಿ ಸಂಬಂಧಗಳನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಇದೇ ರೀತಿ 'ಮಗು ಮಲಗಿತ್ತು, ತೋಳಬಂತು ತೋಳ' ಕತೆಗಳು. ಅನಂತಮೂರ್ತಿಯವರು "ಕತೆಗಳ ರುಚಿ ಹತ್ತಿದ ಓದುಗ ನಿಜವಾದ ಭಾವನೆಗಳಿಗೆ ಪ್ರತಿಕ್ರಿಯೆ ತೋರಿಸದೇ ಹೋಗಬಹುದು. ಭಾವನಾವಶವಾಗುವ ಓದುಗನ ಶಕ್ತಿಯನ್ನು ಕತೆಗಾಗಿ ದೋಚುತ್ತಾ ಹೋಗುವುದು ಅಪಾಯದ ಮಾರ್ಗವೆನ್ನುವುದಕ್ಕೆ ಇಂತಹ ಕತೆಗಳು ಉದಾಹರಣೆ"[೧೦೯] ಎಂದಿರುವರು.

ಈ ಹಿನ್ನೆಲೆಯಿಂದ ಸಾಮಾಜಿಕ ಪ್ರಸಂಗವು ಓದುಗರಲ್ಲಿ ಪ್ರಜ್ಞೆಯನ್ನು ಮೂಡಿಸುತ್ತದೆ. ಹಾಗೆಯೇ ಸದಾಶಿವರ ಕತೆಗಳು ಸುಲಭದ ರೀತಿಯಲ್ಲಿ ವಿಶ್ಲೇಷಣೆಯಾಗಿ ಅರ್ಥ ಮಾಡಿಕೊಳ್ಳದ ಜೀವನ ದುರಂತವನ್ನು ಅಡಗಿಸಿಕೊಂಡಿವೆ. ಹಾಗಾಗಿ ಮನೋವಿಜ್ಞಾನಿಯಾಗಿ ಸದಾಶಿವ ಅವರು ಮೂಡಿಬರುತ್ತಾರೆ ಎನ್ನುವುದಕ್ಕೆ "ಹೆಳವನ ಹೆಗಲ ಮೇಲೆ ಕುರುಡ ಕೂತಿದ್ದಾನೆ" ಕತೆ ಒಳ್ಳೆಯ ಉದಾಹರಣೆಯಾಗಿ ಕಾಣುತ್ತದೆ. ಸದಾಶಿವರ ಕತೆಗಳು ಸೂಕ್ಷ್ಮ ಪ್ರಜ್ಞೆಯುಳ್ಳದ್ದಾಗಿವೆ. ಅವರ ಪ್ರಸಿದ್ಧ ಕತೆ 'ರಾಮನ ಸವಾರಿ ಸಂತೆಗೆ ಹೋದದ್ದು'. ಈ ಕತೆಯ ಪ್ರಾರಂಭದಲ್ಲಿ ಬರುವ ಸಂತೆಗೆ ಹೊರಡುವ ಪ್ರಸಂಗ ವರ್ಣನಾತ್ಮಕವಾಗಿದೆ. ಅಲ್ಲಿ ಹಾಸ್ಯ, ವಿಡಂಬನೆ, ದುಃಖ ಎಲ್ಲವೂ ಅಡಗಿಕೊಂಡಿದೆ. ಇದು ಒಬ್ಬ ಬಾಲಕನ ಮೂಲಕ ನೋಡುವ ಸ್ಥಿತಿಯು ಸಾಮಾಜಿಕ ಪ್ರಜ್ಞೆಯನ್ನು ಹೊರಡಿಸಿದೆ ಎಂದು ಹೇಳಬಹುದು.

ಯು.ಆರ್.ಅನಂತಮೂರ್ತಿಯವರ ಸಾಹಿತ್ಯದ ಪ್ರಮುಖ ಲೇಖನ 'ಕವಿ ಏಟ್ಸ್'. ಇದರಲ್ಲಿ ನವ್ಯ ವಿಮರ್ಶೆಯ ಚೌಕಟ್ಟನ್ನು ಮೀರಿ ಸಂಸ್ಕೃತಿನಿಷ್ಠವಾದ ಅಂತರ್‌ಶಿಸ್ತಿನ ವಿಮರ್ಶೆಯನ್ನು ಅನಂತಮೂರ್ತಿಯವರು ಬರೆದಿದ್ದಾರೆ. ಇವರು ಬರೆಯುವುದರಲ್ಲಿ, ಮಾತನಾಡುವುದರಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಳ್ಳುತ್ತಿದ್ದರು. ಇತರರಿಗೆ ಬರೆದ ಮುನ್ನುಡಿಗಳಲ್ಲಿ "ನಾನು ಒಬ್ಬ ಸಂಸಾರವಂತಿಗ ಮಧ್ಯಮ ವರ್ಗದವ, ಲೌಕಿಕ"[೧೧೦] ಎಂದು (ಎಸ್.ಎಸ್.ಲಕ್ಷ್ಮೀನಾರಾಯಣ ಭಟ್ಟರ 'ಚಿನ್ನದ ಹಕ್ಕಿಗೆ') ಹೇಳಿಕೊಳ್ಳುತ್ತಾರೆ. ಇಲ್ಲಿ ತಮ್ಮನ್ನು ಆತ್ಮ ವಿಮರ್ಶೆಗೆ ಒಳಗಾಗುವುದು ಕಾಣುತ್ತೇವೆ. ಹಾಗಾಗಿ ಅವರು ಇತರರಿಗೆ ಬರೆದ ಮುನ್ನುಡಿ ವಿಮರ್ಶೆ ಸ್ವತಃ ಕೃತಿಗಳನ್ನು ಅರ್ಥೈಸುವಂತಿರುತ್ತದೆ. ಅವರು 'ಏಟ್ಸ್' ಬಗ್ಗೆ ಬರೆದಿರುವ ಮುನ್ನುಡಿಯಲ್ಲಿ ಅವರ 'ಅವಸ್ಥೆ', 'ಸೂರ್ಯನ ಕುದುರೆ' ಈ ಕತೆಗಳ ಓದನ್ನು ಹೆಚ್ಚು ಅರ್ಥಪೂರ್ಣವಾಗಿಸುತ್ತದೆ. ಅನಂತಮೂರ್ತಿಯವರು "ಏಟ್ಸ್‌ನ ಪದ್ಯಗಳಲ್ಲಿ ಸತ್ಯ ದರ್ಶನವಾಗುವುದು ಬಿಪೋನರಿಗೆ, ರಂಡೆಯರಿಗೆ, ಉನ್ಮಾದದ ಮುದಿಯರಿಗೆ, ನಾಗರಿಕತೆಗೆ ಮುಖ ತಿರುಗಿಸಿಬಿಟ್ಟ ಆರಣ್ಯಕರಿಗೆ ಸಭ್ಯ ಗೃಹಸ್ಥರಿಗಂತೂ ಅಲ್ಲ"[೧೧೧] ಎಂದಿರುವರು. ಅನಂತಮೂರ್ತಿಯವರು ಏಟ್ಸ್‌ನ ಬಗ್ಗೆ ಬರೆದಷ್ಟೇ ಕಾವ್ಯ ಕುತೂಹಲದಿಂದ ಬೇಂದ್ರೆ ಬಗ್ಗೆ ಬರೆದಿದ್ದಾರೆ. ಅವರ 'ಪೂರ್ವಾಪರ'ದಲ್ಲಿರುವ 'ಯುಗದ ಬೇಂದ್ರೆ' ಎಂಬ ಲೇಖನ ಇದಕ್ಕೆ

ಉದಾಹರಣೆಯಾಗಿದೆ. ಇದರಲ್ಲಿ ಜಾನಪದ ಸೊಗಡು, ಆಶಯಗಳನ್ನು ಒಳಗೊಂಡಿವೆ. ಹಾಗೆಯೇ ಜಾನಪದದ ಮೂಲಕ ದಲಿತರು ಮತ್ತು ಬಡವರ ಬದುಕಿನ ಬಗ್ಗೆ ಚರ್ಚೆ ಮಾಡಿದ್ದಾರೆ. ಕನ್ನಡ ಕಾವ್ಯದ ಪೂರ್ವಾಪರ ನಿಲುವುಗಳನ್ನು ಚರ್ಚಿಸಿದ್ದಾರೆ. ಕವಿ ಏಟ್ಸ್ ಬಯಸಿದ್ದ ಸಾಹಿತ್ಯ ವಸ್ತು, ಬರವಣಿಗೆ ಕ್ರಮ ಕನ್ನಡದ ಬೇಂದ್ರೆಯಲ್ಲೇ ಕಾಣುತ್ತದೆ ಎಂದು ಅನಂತಮೂರ್ತಿಯವರು ಅಭಿಪ್ರಾಯಪಡುತ್ತಾರೆ.

ಅನಂತಮೂರ್ತಿಯವರು ಕನ್ನಡ ಸಾಹಿತ್ಯದ ಸೂಕ್ಷ್ಮಮತಿ ಎನ್ನುವುದಕ್ಕೆ ಅವರು ಕವನ ಸಂಕಲನಗಳಿಗೆ ಬರೆದಿರುವ ಇತರ ಮುನ್ನುಡಿಗಳನ್ನು ಗಮನಿಸಬಹುದು. ಗಂಗಾಧರ ಚಿತ್ತಾಲರ 'ಹರಿವ ನೀರಿದು' ಹಾಗೂ ರಾಮಚಂದ್ರ ಶರ್ಮರ 'ಆಯ್ದ ಕವನ'ಗಳಿಗೆ ಬರೆದ ಮುನ್ನುಡಿಗಳನ್ನು ನೋಡಬಹುದು. ಹರಿವ ನೀರಿದು ಮುನ್ನುಡಿಯಲ್ಲಿ "ಸಭ್ಯ ಉದಾತ್ತ ಧೀರ ವ್ಯಕ್ತಿತ್ವವೊಂದು ತನ್ನ ಸ್ವಭಾವಕ್ಕೆ ಅನ್ಯವಾದ ಮಾನವೀಯ ಮೌಲ್ಯಗಳಿಗೂ ಅನ್ಯವಾದ ದೃಷ್ಟಿಯ ಜತೆ ಸಿನಿಕತನವಲ್ಲದೆ ಮೋಹವಶನಾಗದೆ ಮುಖಾಮುಖಿಯಾಗುವುದೆ ಚಿತ್ತಾಲರ ಕಾವ್ಯದ ಮುಖ್ಯ ಗುಣ"[೧೧೨] ಎಂದು ಹೇಳುತ್ತಾರೆ. ಈಗಾಗಲೇ ಈ ಬಗ್ಗೆ ಚರ್ಚಿಸಲಾಗಿದೆ. ಆದರೆ ಇದನ್ನು ಅನಂತಮೂರ್ತಿಯವರು ಮರೆಯದೆ ಬರೆಯುತ್ತಾರೆ. ಹಾಗಾಗಿ ಅಡಿಗರ ಭೂಮಿಗೀತ, ಚಿತ್ತಾಲರ ಹರಿವ ನೀರಿದು ಸಂಕಲನಗಳಿಗೆ ಬರೆದ ಮುನ್ನುಡಿಗಳು ಆ ಕವಿಗಳು ಅನಂತರ ಬರೆದ ಕಾವ್ಯವನ್ನು ಒಳಗೊಳ್ಳುವಂತಿವೆ.

ಒಂದೇ ಕವನವನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಓದಿದಾಗ ಅದು ಬೇರೆ ಬೇರೆ ಅರ್ಥಗಳನ್ನು ನೀಡುವ ಸಾಧ್ಯತೆಯಿದೆ ಎಂಬುದನ್ನು ಅನಂತಮೂರ್ತಿಯವರು ಒಪ್ಪುತ್ತಾರೆ. ಹಾಗಾಗಿ "ಸಭೆಯಲ್ಲಿ ಕೂತಿರುವಾಗ ನಮ್ಮ ನಮ್ಮ ಖಾಸಗಿ ನಿಜಗಳನ್ನು ನೆನಪು ಮಾಡಿಕೊಡುವುದರ ಮೂಲಕ ಚುಚ್ಚಿ ಎಚ್ಚರಿಸುವ ಲಕ್ಷ್ಮಣ ರಾವ್ ಅವರ ಪದ್ಯಗಳಲ್ಲಿ ಮುಖ್ಯವಾದ ಕೆಲವು ನಮಗೆ ನಾವೇ ಓದಿಕೊಂಡಾಗ ಅಷ್ಟು ಪರಿಣಾಮಕಾರಿಯಾಗುವುದಿಲ್ಲ[೧೧೩] ಎಂದು ಬಿ.ಆರ್. ಲಕ್ಷ್ಮಣರಾವ್‌ರ ಕವಿತೆಗಳ ಮುನ್ನುಡಿಯಲ್ಲಿ ಹೇಳುತ್ತಾರೆ. ಹೀಗೆಯೇ ಶಶಿಕಲಾ ವಸ್ತ್ರದ ಅವರ ಕವನ ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಅನಂತಮೂರ್ತಿಯವರು ಮಹಿಳಾ ಸಾಹಿತ್ಯದ ಕುರಿತು "ಸಮಾಜದ ನಿಷಿದ್ಧವೆಂದು ತಿಳಿದಿದ್ದರ ಬಗ್ಗೆ ಮಾತನಾಡುವುದು ಗಂಡಸರಿಗಷ್ಟೆ ಎನ್ನಿಸುವಾಗ ಹೆಣ್ಣಿಗೆ ಅದು ಇನ್ನೂ ಹೆಚ್ಚಿನ ಸವಾಲಾಗಿ ಪರಿಣಮಿಸಬಹುದು. ತನ್ನ ಸ್ವಭಾವಗಳನ್ನು, ಅಗತ್ಯಗಳನ್ನು ಗಂಡು ಸಮಾಜ ಹೇಗೆ ಭಾವಿಸಿಕೊಂಡಿದೆಯೋ ಅದು ತನ್ನ ನಿಜ ಕೂಡ ಎಂಬಷ್ಟು ಹೊರಗಿನ ಧೋರಣೆಯನ್ನು ಒಳಪಡಿಸಿಕೊಂಡ ಹೆಣ್ಣು ನಮ್ಮ ಸಮಾಜದಲ್ಲಿ ಅತ್ಯಂತ ನಿಷ್ಠುರವಾದ 'ಪುರಾಣಭಂಜಕ'ಳಾಗಬೇಕಾಗಿದೆ. ಈ ಪುರಾಣಭಂಜನದ ಮೂಲಕ ಅವಳು ಬಿಡುಗಡೆ ತಡೆಯಬೇಕಾಗಿದೆ. ಸ್ವಂತದ ಅನಿಸಿಕೆಗಳನ್ನು ನಿರ್ಭಯವಾಗಿ ಹೇಳಿಕೊಳ್ಳುವುದರಲ್ಲೇ ಈ ಪುರಾಣಭಂಜನದ ಪ್ರಾರಂಭವಿದೆ"[೧೧೪] ಎಂದಿದ್ದಾರೆ. ಇಲ್ಲಿ ಮಹಿಳೆಯರನ್ನು ನೋಡುವ ದೃಷ್ಟಿಕೋನ ನವ್ಯದವರಲ್ಲಿ ಪುರಾಣ ವಸ್ತುವಾಗಿ ನೋಡಲಾಗಿದೆ.

ನವ್ಯ ಚಳುವಳಿಯ ಮುಖ್ಯರಾದ ಅಡಿಗರ ಕಾವ್ಯ ಗದ್ಯ ರೂಪವಾಗಿಯೂ ಇರಬಹುದು, ಪದ್ಯ ರೂಪವಾಗಿಯೂ ಇರಬಹುದು ಎಂದು ಅಭಿಪ್ರಾಯಪಟ್ಟಿದ್ದರು. ವಾಸ್ತವಕ್ಕೆ ತನ್ನ ಸ್ವಧರ್ಮದಿಂದಲೇ ಗಂಟುಬಿದ್ದ ಕಾದಂಬರಿ ಪ್ರಕಾರ ಪತ್ರಿಕಾ ವ್ಯವಸಾಯ ಮತ್ತು ಕಾವ್ಯಗಳಿಗೆ ಹುಟ್ಟಿದ ಹಡಬೆ ಎಂದು ಅನಂತಮೂರ್ತಿ ವ್ಯಾಖ್ಯಾನಿಸಿದ್ದರು. ಶ್ರೀಧರ ಬಳಗಾರರ ಕಥಾಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಅನಂತಮೂರ್ತಿಯವರು "ಗದ್ಯಕ್ಕೂ, ಪದ್ಯಕ್ಕೂ ನಡುವೆ ನಾನು ವ್ಯತ್ಯಾಸ ಮಾಡುವವನಲ್ಲ. ಈ ವಿಷಯದಲ್ಲಿ ಭಾರತೀಯ ಕಾವ್ಯಮೀಮಾಂಸೆಯ ಪರಂಪರೆಯವನು ನಾನಾದ್ದರಿಂದ ಕಾವ್ಯ ಎನ್ನುವುದು ಗದ್ಯದಲ್ಲಾಗಲೀ, ಪದ್ಯದಲ್ಲಾಗಲೀ ಸಂಭವಿಸಬಹುದು ಎಂದು ತಿಳಿದವನು"[೧೧೫] ಎಂದು ಹೇಳುತ್ತಾರೆ.

ಮಾವಿನಕೆರೆ ರಂಗನಾಥನ್‌ರ ಕಥಾಸಂಕಲನವೊಂದಕ್ಕೆ ಅನಂತಮೂರ್ತಿಯವರು ಬರೆದಿರುವ ಮುನ್ನುಡಿಯ ಶೀರ್ಷಿಕೆ 'ಬಗೆಹರಿಸುವುದೋ ಅಥವಾ ಬರೆಯುವುದೋ.' ಆ ಮುನ್ನುಡಿಯಲ್ಲಿ ಅವರು ಕಥಾಸಾಹಿತ್ಯಕ್ಕೆ ಆಶಯವಾಗುವ ವಿಮರ್ಶೆಯ ಮಾನದಂಡಗಳನ್ನು ಗುರುತಿಸಿದ್ದಾರೆ. "ಒಂದು ಸ್ಥಿತಿ ಇದೆ. ಕೆಲವು ಘಟನೆಗಳಿಂದ ಈ ಸ್ಥಿತಿ ಏರುಪೇರಾಗಿ ವಿಷಮಕ್ಕೆ ಮುಟ್ಟುತ್ತದೆ. ಹೀಗೆ ಮುಟ್ಟಿದ್ದು ಒಂದು ಮುಕ್ತಾಯಕ್ಕೆ ತಲುಪಲೇ ಬೇಕಾಗುತ್ತದೆ. ಅಂದು ಬಗೆಹರಿಯಬೇಕಾಗುತ್ತದೆ. ಆಶ್ಚರ್ಯಕಾರಕ ತಿರುವಿನಿಂದ ಬಗೆಹರಿದರೆ ಜನಪ್ರಿಯ ಕತೆ, ಕಾರ್ಯಕಾರಣಗಳ ಸಂಘಟನೆಯ ಅಂತಿಮ ಸುಸ್ತರದಲ್ಲಿ ಬಗೆಹರಿದರೆ ಮುದ್ದಾದ ಕತೆ. ಉದ್ರೇಕದಲ್ಲಿ ಬಗೆಹರಿದರೆ ಬಂಡಾಯ ಕತೆ. ಈ ಅಂತಿಮ ತೀರ್ಮಾನಗಳೆಲ್ಲ ಚರ್ವಿತ ಚರ್ವಣಗಳು. ರೆವಲ್ಯೂಶನ್ ಕಡೆಗೇ ಹೆಚ್ಚು ಕತೆಗಾರರು ಒಲಿದು ಬರೆಯುವುದು. ಆದರೆ ಘಟನೆಗಳನ್ನು ರೂಢಿಸಿಕೊಳ್ಳುತ್ತ ಸೇರಿಕೊಳ್ಳುತ್ತ ಬೆಳೆಯುವುದು ಕತೆಯ ಬಗ್ಗೆ ರೆವಲ್ಯೂಶನ್ ಒತ್ತಾಯ ತರದಂತೆ ರೆವಲ್ಯೂಶನ್ ಕಡೆ ಕೇವಲ ದರ್ಶನದ ಕಡೆ ತುಯ್ಯುವುದು ಸಾಧ್ಯವೇ ಎಂದು ಸ್ವತಃ ಒಬ್ಬ ಕತೆಗಾರನಾಗಿ ನಾನು ಹುಡುಕುತ್ತಿರುವುದರಿಂದ ಬಗೆಹರಿಸುವ ಈ ರೆವಲ್ಯೂಶನ್ ಕತೆಗಳಿಂದ ನಾನು ಬೇಸತ್ತಿದ್ದೇನೆ"[೧೧೬] ಎಂದು ಹೇಳುತ್ತಾರೆ. ಕತೆಗಳಲ್ಲಿ ದೃಢ ಮನೋಭಾವ ಹೊಂದುವುದು ಸರಿಯಲ್ಲ ಎಂಬ ನಿಲುವು ತಾಳಿದ್ದಾರೆ. ಯಾವುದೇ ಕತೆ, ಕಾದಂಬರಿ, ಕವಿತೆಗಳು ಹಲವು ಅರ್ಥಗಳನ್ನು ಕೊಡುತ್ತಿರಬೇಕು. ಅದರ ಸಂಕಲ್ಪ ಮನೋಭಾವಗಳನ್ನು ಕತೆಗಳು ಹೊಂದುವುದು ಸರಿಯಲ್ಲ ಎಂಬ ಅಭಿಪ್ರಾಯ ವ್ಯಕ್ತಗೊಂಡಿದೆ.

ಅನಂತಮೂರ್ತಿಯವರ ಹಲವು ಮುನ್ನುಡಿಗಳು ವಿಮರ್ಶೆಯ ಮಾನದಂಡಗಳ ಬಗ್ಗೆ ಹಾಗೂ ಲೇಖಕರ ಬಗ್ಗೆಯೂ ಒಳಗೊಂಡಂತಿದೆ. ಆದರೆ ನಿಷ್ಠುರತೆಯಿಂದಲ್ಲ. ಇಲ್ಲಿ ಅಡಿಗ, ಗಂಗಾಧರ ಚಿತ್ತಾಲ, ರಾಮಚಂದ್ರಶರ್ಮ, ಸುಮತೀಂದ್ರ ನಾಡಿಗ, ಸದಾಶಿವರ ಕೃತಿಗಳ ಬಗ್ಗೆ ಕರಾರುವಕ್ಕಾಗಿ ನೇರವಾಗಿ ಬರೆಯುವ ಅನಂತಮೂರ್ತಿಯವರು ತನಗಿಂತ ಕಿರಿಯರ ಬಗ್ಗೆ ಸ್ವಲ್ಪ ಉದಾರ ಮನೋಭಾವದಿಂದ ಬರೆಯುತ್ತಾರೆ. ಕವಿ ಎಸ್.ಮಂಜುನಾಥ, ಕತೆಗಾರ ಶ್ರೀಧರ ಬಳೆಗಾರ ಇತ್ಯಾದಿ. ಇಂತ ಪ್ರತಿಭಾವಂತರನ್ನು ಅವರ ಕೃತಿಗಳ ಬಗ್ಗೆ ಮುನ್ನುಡಿಯಲ್ಲಿ ಗುರುತಿಸಿದ್ದಾರೆ.

ಒಂದು ಸಾಧಾರಣ ಕೃತಿಗೆ ಮುನ್ನುಡಿ ಬರೆಯುವಾಗ ತನ್ನ ಅತಿಪ್ರಶಂಸೆಯಿಂದ ಹೊಸದಾಗಿ ಬರೆಯುವ ಲೇಖಕನಿಗೆ ಸಿಟ್ಟು ತರಿಸದೆ ಎಚ್ಚರ ವಹಿಸುತ್ತಾರೆ. ಉದಾರವಾಗಿ ಬರೆಯುವಾಗಲೂ ಅವರು ತನ್ನ ಸಾಹಿತ್ಯದ ಅಭಿರುಚಿಯನ್ನು ಅಗ್ಗಗೊಳಿಸುವುದಿಲ್ಲ. ಲೇಖಕನನ್ನು ಮುನ್ನುಡಿ ಹೊಗಳುವಾಗಲೂ ಕೃತಿಯ ಬಗ್ಗೆ ತನಗೆ ಅನ್ನಿಸಿದ್ದನ್ನು ಅವರು ಹೇಳದೇ ಬಿಡುವುದಿಲ್ಲ. ಸ್ವಲ್ಪ ಉಪಾಯವಾಗಿ ಸುತ್ತಿ ಬಳಸಿ ಬರೆಯುತ್ತಾರೆ ಎಂದು ಅವರನ್ನು ದೂರಬಹುದೋ ಏನೋ ಗೊತ್ತಿಲ್ಲ. ಒಂದು ಒಳ್ಳೆಯ ಕೃತಿ ನೀಡಿದ ಸಂತೋಷವನ್ನು ಹಂಚಿಕೊಳ್ಳುವ ಅನಂತಮೂರ್ತಿಯವರ ಗುಣ ಅವರ ಒಡನಾಡಿಗಳಿಗೆಲ್ಲ ಗೊತ್ತಿದೆ. ಡಿ.ಆರ್.ಶಶಿಧರ ಭಾಷಾಂತರಿಸಿದ ಶೇಕ್ಸ್‌ಪಿಯರ್‌ನ 'ವೆನಿಸ್‌ನ ವರ್ತಕ' ಓದಿ ಅವರು ಬರೆದಿರುವ ಮುನ್ನುಡಿಯಲ್ಲಿ "ಈ ಭಾಷಾಂತರದ ಮೊದಲಿನ ಕೆಲವು ಪುಟಗಳನ್ನು ಓದುತ್ತಿದ್ದಂತೆಯೇ ನನಗೆ ಎಷ್ಟು ಸಂತೋಷವಾಯಿತೆಂದರೆ ನನಗೆ ಸಿಕ್ಕವರಿಗೆಲ್ಲ ನನ್ನ ಸಂತೋಷವನ್ನು ಹೇಳಿಕೊಳ್ಳಲು ಶುರು ಮಾಡಿದೆ"[೧೧೭] ಎಂದು ಹೇಳುತ್ತಾರೆ.

ಯು.ಆರ್.ಅನಂತಮೂರ್ತಿಯವರ ಒಂದು ಗುಣವೆಂದರೆ ಅವರ ಸಾಹಿತ್ಯ, ವಿಮರ್ಶೆ, ಕತೆ, ಕಾದಂಬರಿ ವೇದಿಕೆಯ ಮೇಲೆ ಭಾಷಣ ಮಾಡುವ ಪ್ರಸಂಗ ಏನೇ ಮಾಡಲಿ ತಾವೇ ಹೇಳುವಂತೆ 'ಸಂಸಾರವಂತಿಗ' ಎಂಬುದನ್ನು ಮರೆಯದೆ ಓದುಗರಿಗೆ ಮರೆಯಲಾಗದಂತೆ ಮಾಡುತ್ತಾರೆ. ಇದು ಬರೀ ತನ್ನ ಮಿತಿಗಳನ್ನು ಒಪ್ಪಿಕೊಳ್ಳುವ ಮಾತಲ್ಲ. ಅವರ ಸಾಹಿತ್ಯ ವಿಮರ್ಶೆಯಲ್ಲಿ ಇದು ಮೂಲಾಧಾರವಾಗಿರುವಂತಹದ್ದು. ಅವರ ಬರವಣಿಗೆಯಲ್ಲಾಗಲೀ ಅವರ ರಾಜಕೀಯ ಪ್ರವೃತ್ತಿಯ ನೇರನುಡಿಯ ಮನುಷ್ಯನಾಗಿ, ಜೀವನ ಸ್ಥಿರ ಮನಸ್ಸುಳ್ಳವರಾಗಿ ಅವರಲ್ಲಿ ರಕ್ತಗತವಾಗಿದೆ. ಅವರಲ್ಲಿರುವ ನಿಜ ಎಂಬ ನಿಷ್ಠುರ ನಿಲುವು ಇದಾಗಿದೆ. ಅನಂತಮೂರ್ತಿಯವರೇ ಹೇಳುವಂತೆ ಇದು ಅವರು ಅಡಿಗರಿಂದ ಕಲಿತ ಪಾಠ ಎಂದು ಹೇಳುತ್ತಾರೆ. ಹಾಗಾಗಿ ೨೦೧೪ರ ೧೬ನೇ ಲೋಕಸಭಾ ಚುನಾವಣೆಯಲ್ಲಿ ಬಿಜೆಪಿ ಪಕ್ಷ ಅಧಿಕಾರಕ್ಕೆ ಬಂದರೆ ನಾನು ದೇಶ ಬಿಟ್ಟು ತೊರೆಯುತ್ತೇನೆ ಎಂದು ಹೇಳಿದ್ದರು.

ಅನಂತಮೂರ್ತಿಯವರು ತಮ್ಮ 'ಪ್ರಜ್ಞೆ ಮತ್ತು ಪರಿಸರ' ಕೃತಿಯಲ್ಲಿ ಲಂಕೇಶರಷ್ಟು ನಿರ್ಭಯವಾಗಿ, ನಿಷ್ಠುರವಾಗಿ, ನೇರವಾಗಿ ತಾನು ಬರೆಯಲಾರೆ ಎನ್ನುತ್ತಾರೆ. ಅನಂತಮೂರ್ತಿಯವರ ವಿಮರ್ಶೆಯಲ್ಲಿ ಲಂಕೇಶರ ವಿಮರ್ಶೆಯ ಒಗರು ಇಲ್ಲ ಎಂದು ಹೇಳಬಹುದು. ಕನ್ನಡ ಸಾಹಿತ್ಯದ ಅತ್ಯುತ್ತಮ ಭಾಗಗಳಲ್ಲಿ ಅನಂತಮೂರ್ತಿಯವರು ಕಾಣುವ ಗುಣ ಗದ್ದಲವಿಲ್ಲದೆ ಬದುಕನ್ನು ಅವಲೋಕಿಸುವ ಪ್ರವೃತ್ತಿಯ ಗುಣವಿದೆ. ಅವರ ವಿಮರ್ಶೆಯಲ್ಲಿ ಅರ್ಥಪೂರ್ಣವಾದ, ಸ್ವಾರಸ್ಯದ, ಆಯ ತಪ್ಪದ, ಗದ್ದಲವಿಲ್ಲದ ಗದ್ಯವಾಗಿದೆ. ಸಾಹಿತ್ಯಕ್ಕೆ ಸ್ಪಂದಿಸುವ ತೀವ್ರತೆ ಮತ್ತು ಅಭಿರುಚಿಯ ಮಟ್ಟವನ್ನು ಅನಂತಮೂರ್ತಿಯವರು ಎಂದಿಗೂ ಬಿಟ್ಟುಕೊಡುವುದಿಲ್ಲ. ಅನಂತಮೂರ್ತಿಯವರ ವಿಮರ್ಶೆಯಲ್ಲಿ ತೇಜಸ್ವಿಯವರು ಹೇಳುವ ಹಾಗೆ 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನದ ಹೊಸದಿಗಂತದೆಡೆಗೆ ಮುನ್ನುಡಿಯಲ್ಲಿ ಬರುವ 'ಅತಿ ಸುಸಂಸ್ಕೃತಿಯ ಮೆಣಸಿನ ಹೊಗೆ'[೧೧೮] ಕಾಣುವುದಿಲ್ಲ.

ಅನಂತಮೂರ್ತಿಯವರು ಬರೆದ ಮುನ್ನುಡಿಗಳು ಬಹುತೇಕವಾಗಿ ಒಂದು ಕೃತಿಯನ್ನು ವಿಮರ್ಶೆ ಮಾಡುವಾಗ ಅದರ ಸಂಕೇತ, ಸೂಚನೆ, ದ್ವಂದ್ವಾರ್ಥ ಸೂಚಕ, ಸಂಸ್ಕೃತಿಸೂಚಕವಾಗಿ ಅವರು ಸೂಕ್ಷ್ಮವಾಗಿ ಬರವಣಿಗೆಯನ್ನು ಕನ್ನಡದ ನವ್ಯ ಸಾಹಿತ್ಯದ ಕಾಲಘಟ್ಟ ಭಾರತೀಯ ಕಾವ್ಯಮೀಮಾಂಸೆಯ ನೆಲೆಯಲ್ಲಿ ರೂಪಿತಗೊಂಡಿದೆ. ಅನಂತಮೂರ್ತಿಯವರ ಪ್ರತಿಭೆ ಅವರ ವಿಮರ್ಶೆಯಲ್ಲಿ ಭಾಷೆ, ಸಾಮಾಜಿಕ ವಸ್ತು, ವಿನ್ಯಾಸ, ವೈಚಾರಿಕ ಗೊಂದಲಗಳಾಗಲೀ ಅತಿರೇಕದ ಓದುವಿಕೆಯಾಗಲೀ ಇಲ್ಲ. ಅನಂತಮೂರ್ತಿಯವರು ರಾಜಕಾರಣಿಗಳ ಒಡನಾಟದಲ್ಲಿ ಇದ್ದು ಅವರ ರೀತಿನೀತಿಗಳನ್ನು ಪ್ರಶ್ನಿಸುವ ತನ್ನ ಕಾವ್ಯದ ಅನುಯಾಯಿಗಳಿಗೆ ಹೊಸತಾದ ಸಂವೇದನೆ ತಿಳಿಸುತ್ತಾ ತನ್ನ ಓದುಗ ವಲಯವನ್ನು ವಿಸ್ತರಿಸಬಯಸುವ ಕೃತಿಕಾರನ ಹಂಬಲ ಇಲ್ಲಿದೆ.

ವಸಾಹತುಶಾಹಿ ಚರಿತ್ರೆ ಸೃಷ್ಟಿಸಿದ ಕೀಳರಿಮೆಯಿಂದ ಭಾರತೀಯ ಮುಕ್ತನಾಗುವುದು ಹೇಗೆ ಎನ್ನುವ ಪ್ರಶ್ನೆ ವಿಮರ್ಶಕ ಅನಂತಮೂರ್ತಿಯವರನ್ನು ಕಾಡಿದೆ. ಇವರ ಚಿಂತನೆ ಕರ್ನಾಟಕದ ಸಾಂಸ್ಕೃತಿಕ ರಂಗದಲ್ಲಿ ಬೀರಿದ ಪ್ರಭಾವವನ್ನು ಅಲ್ಲಗಳೆಯುವುದು ಸುಲಭವಲ್ಲ. ಅವರು ಕಾಲದ ಪ್ರಕ್ರಿಯೆಯೊಳಗೆ ಅನ್ಯಾಯಕ್ಕೆ ಪ್ರತಿಕ್ರಿಯೆ ನೀಡುವವರಾಗಿದ್ದರು.

### ೫.೯. ಎಚ್.ಎಸ್.ರಾಘವೇಂದ್ರರಾವ್

ಎಚ್.ಎಸ್.ರಾಘವೇಂದ್ರರಾವ್ ಅವರು ಕನ್ನಡ ಸಾಹಿತ್ಯದ ವಿಮರ್ಶಕರಲ್ಲಿ ಪ್ರಮುಖರಾಗಿದ್ದಾರೆ. ಇವರು ಎಪ್ಪತ್ತು ಎಂಬತ್ತರ ದಶಕದಲ್ಲಿ ಗುರುತಿಸಿಕೊಳ್ಳುತ್ತ ವಾಸ್ತವ ಸಂಗತಿಯ ಮೂಲಕ ಹಿಂದಿನ ಸಾಹಿತ್ಯದ ಜೊತೆಗೆ ಸಂವಾದ ನಡೆಸಿದವರು. ಅವರು ಐವತ್ತಕ್ಕೂ ಅಧಿಕ ಮುನ್ನುಡಿಗಳನ್ನು ಬರೆದಿದ್ದಾರೆ. ಅವರ 'ಸಂಗಡ' ಕೃತಿಯನ್ನು ಗಮನಿಸಿದರೆ ಈ ಸಂಗತಿ ಗೊತ್ತಾಗುತ್ತದೆ. ಎಚ್.ಎಸ್.ಆರ್ ಅವರ ಮುನ್ನುಡಿಗಳನ್ನು ಗಮನಿಸಿದರೆ ಅವರು ೧೯೭೦ರ ಹಿಂದಿನಿಂದ ಬರೆಯತೊಡಗಿರುವುದು ಕಂಡುಬರುತ್ತದೆ. ಒಟ್ಟು ಸಾಹಿತ್ಯ ಪರಿಸರದಲ್ಲಿ ಆಗಿರುವ ಬದಲಾವಣೆಗಳನ್ನು ಗಮನಿಸಬಹುದು. ಹಾಗೆಯೇ ಅಂದಿನಿಂದ ಇಂದಿನವರೆಗೆ ಉಳಿದುಕೊಂಡು ಬಂದಿರುವ ನಂಬಿಕೆ, ಆಚರಣೆ ಇವುಗಳ ಲಕ್ಷಣಗಳು ಮತ್ತು ಚಳುವಳಿಗಳ ಚೌಕಟ್ಟುಗಳನ್ನು ಕಟ್ಟುವುದು ಮತ್ತು ಮುರಿಯುವುದು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಎಚ್.ಎಸ್.ಆರ್. ಅವರ ಮುನ್ನುಡಿಗಳಲ್ಲಿ ವ್ಯಕ್ತಗೊಂಡಿವೆ. ಎಚ್.ಎಸ್.ಆರ್. ಅವರು "ಅವಕಾಶಗಳ ಸಮಾನತೆಗಳು ಅಪಾರವಾದ ಸಮಾಧಾನ ಮತ್ತು ಸಂತೋಷಗಳನ್ನು ಕೊಡುತ್ತವೆ. ಮತ್ತೆ ಕೆಲವು ಸಲ ಉಗುರು ಬೆಚ್ಚಗೆ ಕೂಡ ಉಳಿಯದೆ ಹೋಗಿರುವ ಹತ್ತು ಹಲವು ಚಳುವಳಿಗಳನ್ನು ನೆನಪು ಮಾಡಿಕೊಂಡರೆ ನಾವು ಐವತ್ತು ವರ್ಷಗಳಷ್ಟು ಹಿಂದೆ ಸರಿದಿದ್ದೇವೆ ಎಂಬ ಭಾವನೆಯೂ ಮನಸ್ಸನ್ನು ಕಾಡುತ್ತದೆ"[೧೯] ಎಂದಿರುವರು. ಇಲ್ಲಿ ಹಿಂದಿನ ಸಾಹಿತ್ಯ ಸಂಸ್ಕೃತಿ ಚಳುವಳಿಗಳಲ್ಲಿ ಹಲವು ನೆಲೆಗಳಲ್ಲಿ ಕಾಲಕ್ಕೆ ತಕ್ಕಂತೆ ಬದಲಾವಣೆಗಳಾಗಿವೆ. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಚಳುವಳಿಗಳ ಸ್ವರೂಪಗಳು ಬೇರೆಯಾಗಿದ್ದವು. ಆದರೆ ಇಂದಿನ ಚಳುವಳಿಗಳು ಪ್ರೇರಕ ಶಕ್ತಿಯ ನಿಯಂತ್ರಣವನ್ನು ಹೊಂದಿ ಕಳೆಗುಂದಿವೆ. ಕೈಗಾರೀಕರಣ,

ಜಾಗತೀಕರಣ, ಖಾಸಗೀಕರಣಗಳಿಂದ ಚಳುವಳಿಗಳನ್ನು ಒಬ್ಬರು ನಿಯಂತ್ರಿಸುವ ಶಕ್ತಿಗಳಾಗಿ ಸಮಾಜದ ಮನಸ್ಸನ್ನು ಬೇರೆ ಬೇರೆ ಆಸೆ, ಆಕಾಂಕ್ಷೆಗಳ, ಆಶ್ವಾಸನೆಗಳ ಕಡೆ ನಡೆಸುವ ನೆಲೆಯಾಗಿವೆ. ಹಾಗಾಗಿ ಸಮಾಜದಲ್ಲಿ ಸಾಹಿತ್ಯ ಬಹುಮುಖತ್ವ ಹೊಂದಿ ಹಲವು ಸಿದ್ಧಾಂತಗಳಲ್ಲಿ ನೆಲೆಯೂರಿವೆ. ಬಿ.ಎಂ.ಶ್ರೀ.ಯವರು ಹೇಳುವಂತೆ ಸಾಹಿತ್ಯ ಸಂಸ್ಕೃತಿ ಚಿಂತನೆಯನ್ನು ಕುರಿತು "ಬೆಳೆಯೇನೋ ಬೇಕಾದ ಹಾಗಿದೆ. ಕೊಯ್ಯುವವರು ಮಾತ್ರ ಕಡಿಮೆ"[೧೨೦] ಎಂದು ತಿಳಿಸಿರುವರು. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಸಂಸ್ಕೃತಿ ಚಿಂತನೆ ಕನ್ನಡ ನಾಡು, ನುಡಿ, ಜಾನಪದ, ಸ್ಥಳೀಯ ಸಮುದಾಯ ಸಂಸ್ಕೃತಿ ಚಿಂತನೆಯಾಗಬೇಕು. ಆದರೆ ಪಾಶ್ಚಾತ್ಯ ಸಿದ್ಧಾಂತ ಮಾದರಿಗಳು, ಕೈಗಾರೀಕರಣ, ಜಾಗತೀಕರಣ ವಸಾಹತು ಚಿಂತನೆಯಿಂದ ಕನ್ನಡ ಚಿಂತನೆಯನ್ನು ಮಾಡುವವರು ಕಡಿಮೆ ಎಂಬ ಭಾವನೆ ವ್ಯಕ್ತಪಡಿಸಿರಬಹುದು.

ಚಿ.ಶ್ರೀನಿವಾಸರಾಜು ಅವರ 'ಕನ್ನಡವೆಂಬ ಕನ್ನಡಿ' ಕೃತಿಗೆ ಎಚ್.ಎಸ್.ಆರ್. ಅವರು ಮುನ್ನುಡಿ ಬರೆಯುತ್ತಾ ಕನ್ನಡ ಓದುಗರು, ಅವರ ಅಭಿರುಚಿ ಯಾವ ದಿಕ್ಕಿನಲ್ಲಿ ಸಾಗಿದೆ ಎನ್ನುವುದಕ್ಕೆ "ಕರ್ನಾಟಕದ ಮೂಲೆ ಮುಡುಕುಗಳಲ್ಲಿ ನಮ್ಮ ತರುಣ, ತರುಣಿಯರು ಶೆಲ್ಲಿ, ವರ್ಡ್ಸ್‌ವರ್ತ್, ಲಾರೆನ್ಸ್, ಗೇಬ್ರಿಯಲ್, ಒಕಾರ, ನೆರುಡಾ, ಸೋಯೆಂಕಾ ಮುಂತಾದ ಕವಿಗಳನ್ನು ಓದುತ್ತಾರೆ. ಅವರನ್ನು ಕನ್ನಡಕ್ಕೆ ತರಬೇಕು ಎನ್ನುವಷ್ಟು ಅವರಿಂದ ಪ್ರಭಾವಿತರಾಗುತ್ತಾರೆ ಎಂದು ನಮಗೆ ಗೊತ್ತಾಗುವುದು ಬೆಚ್ಚನೆಯ ಅನುಭವ"[೧೨೧] ಎಂದು ಹೇಳುತ್ತಾರೆ. ಈ ಮುನ್ನುಡಿಯ ಮೂಲಕ ಪಾಶ್ಚಾತ್ಯ ಸಂಸ್ಕೃತಿಯ ಓದು ನಮ್ಮಲ್ಲಿ ಗಂಭೀರವಾಗಿದೆ ಎಂದುಕೊಳ್ಳಬಹುದು. ಬಿ.ಎಂ.ಶ್ರೀಯವರ ಮತ್ತು ಎಚ್.ಎಸ್.ಆರ್. ಅವರ ಮಾತುಗಳನ್ನು ಗಮನಿಸಿದರೆ ಕನ್ನಡದ್ದು ಕನ್ನಡಕ್ಕೆ ಬೇಕಾಗಿದೆ ಎಂಬ ಅನಿವಾರ್ಯ ಒದಗಿದೆ. ಯುವ ತಲೆಮಾರಿನ ಪೀಳಿಗೆಗೆ ಮುಂದಿನ ಸಾಮಾಜಿಕ ಚಿಂತಕರು ಅವರಲ್ಲಿ ನಾಡಿನ ಸಂಸ್ಕೃತಿಯನ್ನು ಚಿಂತನೆಗೊಳಿಸಬೇಕಾಗಿದೆ.

ಎಚ್.ಎಸ್.ಆರ್. ಅವರು 'ಇಪ್ಪತ್ತನೆಯ ಶತಮಾನದ ಕಾವ್ಯ' ಎಂಬ ಕೃತಿಗೆ ಮುನ್ನುಡಿ (ಪ್ರಸ್ತಾವನೆ) ಬರೆಯುತ್ತಾ ೨೦ನೇ ಶತಮಾನದ ಕಾವ್ಯದ ವೈವಿಧ್ಯತೆ ಬಗ್ಗೆ, ಶ್ರೀಮಂತಿಕೆಯ ಕುರಿತು ಚರ್ಚೆ ಮಾಡಿದ್ದಾರೆ. ಅದು ಯಾವ ನೆಲೆಯಲ್ಲಿದೆಯೆಂದರೆ

೧. ಪಾಶ್ಚಾತ್ಯರ ಪ್ರಭಾವಿತ ಕಾವ್ಯ

೨. ಜಾನಪದ ಕಾವ್ಯ

೩. ರಾಜಮನೆತನ(ಬ್ರಾಹ್ಮಣ) ಕಾವ್ಯ

ಈ ಮೂರು ನೆಲೆಗಳಲ್ಲಿ ೨೦ನೇ ಶತಮಾನದ ಕಾವ್ಯವನ್ನು ಈ ಮುನ್ನುಡಿಯ ಮೂಲಕ ಗುರುತಿಸಿಕೊಳ್ಳುತ್ತವೆ. ಈ ಮೂರು ನೆಲೆಯ ಕಾವ್ಯದ ಪ್ರಭಾವ 'ನವೋದಯ'ದ ಸುಂದರ ಪ್ರಾತಃಕಾಲದಲ್ಲಿ ಹುಟ್ಟಿಕೊಳ್ಳುತ್ತದೆ.

**೧. ಪಾಶ್ಚಿಮಾತ್ಯ ಪ್ರಭಾವಿತ ಕಾವ್ಯ:** ಈ ಕಾವ್ಯ ಹುಟ್ಟುವಿಕೆಗೆ ಕಾರಣ ನಮ್ಮ ದೇಶದಲ್ಲಿ ಆಡಳಿತದ ಪ್ರಭಾವ ಒಂದು ಕಡೆಯಾದರೆ, ಇನ್ನೊಂದು ಕಡೆ ಇಂಗ್ಲಿಷ್ ಸಾಹಿತ್ಯ ಅಧ್ಯಯನ ಮಾಡಿದವರು, ಪಾಶ್ಚಾತ್ಯ ಸಂಸ್ಕೃತಿಯನ್ನು ಪ್ರಭಾವಿಸಿದವರು ಹಾಗೂ ಪ್ರಭಾವಕ್ಕೊಳಗಾದವರು. ಈ ಹಿನ್ನೆಲೆಯಿಂದ ಸ್ವೀಕಾರದ ಸಂಸ್ಕೃತಿ ಹೊಂದಿ ಆ ಸಂಸ್ಕೃತಿಯ ಬದಲಾವಣೆ ಭಾಷೆಯ ಹಂಗಿನೊಳಗೆ ತನ್ನನ್ನು ತಾನು ಬೇರುಬಿಟ್ಟಿದೆ. ನಮ್ಮ ದೇಶದ ಪಂಡಿತ ಪರಂಪರೆಗೆ ಒಗ್ಗಿಕೊಳ್ಳದೆ ಇರುವ ಜನಸಮೂಹ ಪಾಶ್ಚಾತ್ಯ ಸಂಸ್ಕೃತಿಯನ್ನು ಒಪ್ಪಿವೆ. ಇದರ ಜೊತೆಗೆ ಕಾವ್ಯದ ಪ್ರಭಾವವೂ ಆಗಿದೆ. ಹಾಗಾಗಿ ಬಿ.ಎಂ.ಶ್ರೀ.ಯವರ 'ಇಂಗ್ಲಿಷ್ ಗೀತಗಳು' ಕನ್ನಡದಲ್ಲಿ ಗಟ್ಟಿಯಾಗಿ ನೆಲೆಯೂರಿ ಕನ್ನಡದವು ಎಂಬ ಭ್ರಮೆಯನ್ನು ಜನರು ಒಪ್ಪಿಕೊಂಡಿದ್ದಾರೆ. ಆದರೆ ಗೀತಗಳು ಕನ್ನಡದ ಭ್ರಮೆಯಲ್ಲಿ ಇಲ್ಲ. ಅವು ಹೊಸ ಸಿದ್ಧಾಂತದ ಹೊಸತನವನ್ನು ರೂಪಿಸಿವೆ. ಶತಮಾನದಿಂದ ಶತಮಾನಕ್ಕೆ ಬದಲಾಗುವ ಸಾಹಿತ್ಯ ಚಿಂತನೆ ೨೦ನೇ ಶತಮಾನದಲ್ಲಿ ಬಿ.ಎಂ.ಶ್ರೀ.ಯವರಿಂದ ಬದಲಾಗಿದೆ.

**೨. ರಾಜಮನೆತನದ ಕಾವ್ಯ:** ರಾಜಮನೆತನದ ಕಾವ್ಯವನ್ನು ಎಚ್.ಎಸ್.ಆರ್. ಅವರು ೨೦ನೇ ಶತಮಾನದ ಕಾವ್ಯದ ಮುನ್ನುಡಿಯಲ್ಲಿ ಗುರುತಿಸುವುದಾದರೆ ಕನ್ನಡ ಸಾಹಿತ್ಯದ ಮೂಲ ಪರಂಪರೆಯ ಕವಿರಾಜ ಮಾರ್ಗದಿಂದ ಪಂಪ, ರನ್ನ, ಪೊನ್ನ, ಜನ್ನ, ಕುಮಾರವ್ಯಾಸ, ಮುದ್ದಣನ ಕಾಲದವರೆಗಿನ ಕನ್ನಡ ಸಾಹಿತ್ಯ ಕಾವ್ಯಾತ್ಮಕವಾದ ನಿಲುವನ್ನು ಪ್ರತಿಪಾದಿಸಿವೆ. ಅಲ್ಲಿ ಕವಿಗಳಿಗೆ ಆಶ್ರಯ ರಾಜಮನೆತನಗಳಾಗಿವೆ. ಮೈಸೂರು ಸಂಸ್ಥಾನದಲ್ಲಿ ಅದು ಸಂಸ್ಕೃತಜನ್ಯವಿರುವ ಕನ್ನಡದ ಕಾವ್ಯ ಹುಟ್ಟಿದೆ. ಆದರೆ ಬ್ರಾಹ್ಮಣ ನೆಲೆಯಲ್ಲಿ ರೂಪಿತಗೊಂಡಿದ್ದರೂ ಅದು ಕನ್ನಡ ಸಾಹಿತ್ಯವಾಗಿದೆ. ಆದರೆ ಸಾಮಾನ್ಯರನ್ನು ಕುರಿತಾದ ಕಾವ್ಯವಲ್ಲ, ರಾಜನನ್ನು ಅಥವಾ ರಾಜರ ಮನೆತನದ ಹಾಗೂ ರಾಜರನ್ನು ಒಪ್ಪಿಕೊಳ್ಳುವ ರೀತಿಯಲ್ಲಿ ರಾಜಮನೆತನದ ಕಾವ್ಯ ಹುಟ್ಟಿಕೊಂಡಿವೆ. ಇದರ ಜೊತೆಗೆ ಜಾನಪದ ಕಾವ್ಯಗಳು ಹೆಚ್ಚಾಗಿ ಕಂಡುಬಂದರೂ ಅದು ಕಾವ್ಯವಲ್ಲ ಎಂಬ ನಿಲುವು ತಾಳುತ್ತದೆ. ಬ್ರಾಹ್ಮಣ ಒಪ್ಪಿದರೆ ಮಾತ್ರ ಅದು ಕಾವ್ಯವಾಗಿದೆ. ಹೀಗಾಗಿ ಈ ಸಂದರ್ಭದಲ್ಲಿ ರಾಜಮನೆತನದ ಕಾವ್ಯ ಜನಸಾಮಾನ್ಯರಿಗೆ, ಬುಡಕಟ್ಟು ಸಮುದಾಯಗಳಿಗೆ ಅರ್ಥವಾಗಲಿಲ್ಲ. ಹಾಗಾಗಿ ಕಾವ್ಯವೆಂದರೆ ಜನರಿಗೆ, ಸಮಾಜಕ್ಕೆ ಮುಟ್ಟಬೇಕು. ಅಂತಹ ಸಂದರ್ಭದಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ಅನೇಕ ಕನ್ನಡ ಮಹನೀಯರು ಬಿಎಂಶ್ರೀ, ಎಸ್.ಜಿ.ನರಸಿಂಹಾಚಾರ್ಯ ಇನ್ನೂ ಅನೇಕರು ಪಾಶ್ಚಿಮಾತ್ಯ ಕಾವ್ಯದ ಮೊರೆಯಿಂದ ಅನುವಾದಗೊಂಡವು. ಎಚ್.ಎಸ್.ಆರ್. ಅವರು "ಇಪ್ಪತ್ತನೆಯ ಶತಮಾನದ ಕಾವ್ಯ ಪುನಾರಚನೆಯ ಮರೆತ ದಿಕ್ಕುಗಳ ಅನ್ವೇಷಣೆಯಾಗುವುದು ಅನಿವಾರ್ಯ. ಏಕೆಂದರೆ ಸಂಸ್ಕೃತಿ ಸಂಗೋಪನದ ಹೊಣೆಯನ್ನು ಹೊತ್ತ ವರ್ಣ, ವರ್ಗಗಳಿಗೆ ಅಲ್ಲಾವುದ್ದೀನನ ಹಾಗೂ ಹೊಸದೀಪಗಳೇ ಆಕರ್ಷಕವಾದವು"[೨] ಎಂದಿರುವರು. ಕಾವ್ಯವೆಂದರೆ ಬ್ರಾಹ್ಮಣ, ಸಂಸ್ಕೃತಜನ್ಯವಾದ ರಾಜಾಶ್ರಯದಲ್ಲಿ ಇದ್ದ ಕಾವ್ಯ ಕಾವ್ಯವೇ? ಸರಳಗನ್ನಡವೇ? ಎಂಬ ನಿಲುವಿನಲ್ಲಿದ್ದಾಗ ಬಿ.ಎಂ.ಶ್ರೀ.ಯವರ ಇಂಗ್ಲಿಷ್ ಗೀತಗಳು ಕನ್ನಡಕ್ಕೆ ಅನುವಾದಗೊಂಡವು. ಇವು ಜನಸಾಮಾನ್ಯರಲ್ಲಿ, ಸಮಾಜದಲ್ಲಿ ಬೇರೆ ಹೊಸತನದಲ್ಲಿ ಮುಳುಗಿದವು. ಜನರಲ್ಲಿ ಹೊಸತನದ ಪ್ರಜ್ಞೆ ಮೂಡಿಸಿದವು ಎಂದು ಹೇಳಬಹುದು.

ಆಗ ಹಳೆಮೈಸೂರಿನ ಕಾವ್ಯ ಮೇರೆಯು ಜನಪದದೊಂದಿಗಿನ ಸಂಬಂಧವಾಗಿ ಜನರನ್ನು ಸೆಳೆಯುವುದಾಗಿದೆ. ಹತ್ತೊಂಬತ್ತನೆಯ ಶತಮಾನದ ಹಳಗನ್ನಡ ಕಾವ್ಯ ಸಾಹಿತ್ಯವು ಕೊನೆಯಾಗುವುದು ಮೈಸೂರಿನ ಚಿಕ್ಕದೇವರಾಯನ ಕಾಲಕ್ಕೆ. ಆದರೆ ಹಳಗನ್ನಡ ಕಾವ್ಯದ ಜೊತೆಗೆ ಜಾನಪದ ಹಾಡು ಸೊಗಡು, ಹೊಸ ಅವತಾರಗಳನ್ನು ಪಡೆದುಕೊಂಡು ಅನುಸಂಧಾನ ನಡೆಸಿತು.

*** ಜಾನಪದ ಕಾವ್ಯ:** ಜಾನಪದ ಕಾವ್ಯ ನಿತ್ಯಜೀವನದಲ್ಲಿ ಸಮುದಾಯ ಬದುಕಿನ ಜೊತೆಗೆ ಮಿಲನಗೊಂಡು ಸೌಂದರ್ಯಾತ್ಮಕವಾದ ನೆಲೆಗಳನ್ನು ಹೊಂದಿ ಕೇಳುಗರಲ್ಲಿ ಪರಿಚಯವಾಗಿ ತನ್ನ ಅಸ್ತಿತ್ವವನ್ನು ಜನಸಾಮಾನ್ಯರಲ್ಲಿ ಒಡಮೂಡಿದೆ. ಜಾನಪದ ಕಾವ್ಯ ನೆಲೆಗಳನ್ನು ಪ್ರಾಚೀನ ಕಾಲದಿಂದ ಗುರುತಿಸಬಹುದು. ಹಾಡು, ಕುಣಿತ, ಧಾರ್ಮಿಕ ಕ್ರಿಯೆಗಳಲ್ಲಿ ಜಾನಪದ ಪ್ರಚುರಪಡಿಸುವುದು ಹಾಗೂ ಸಂತೋಷಕ್ಕಾಗಿ ಹಾಡುವುದು ಇತ್ಯಾದಿ ಪ್ರಸಂಗಗಳಲ್ಲಿ ಕಾಣುತ್ತೇವೆ.

ಕೀರ್ತಿನಾಥ ಕುರ್ತಕೋಟಿ 'ಸಂಗ್ಯಾಬಾಳ್ಯಾ' ನಾಟಕ ಮುನ್ನುಡಿಯಲ್ಲಿ "ನಮ್ಮ ನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಜಾನಪದ ಜೀವನದ ಅನೇಕ ಚಟುವಟಿಕೆಗಳಲ್ಲಿ ಕಾವ್ಯ ತೀರ ಅವಶ್ಯವಾದ ವಸ್ತುಗಳಲ್ಲಿ ಒಂದಾಗಿದೆ. ಉಪಯುಕ್ತತೆಯನ್ನು ಮೀರಿ ಕುಶಲತೆಯನ್ನು ಮೆರೆಯುವ ಕಾವ್ಯ ಅದರಲ್ಲಿ ಮದುವೆಯ ಮನೆಗೆ ಭಜಂತ್ರಿಯ ಮೇಳ ಅವಶ್ಯವಾಗಿರುವಂತೆ ಕಾವ್ಯ ಜೀವನದ ಅನೇಕ ಕಾರ್ಯಗಳಿಗೆ ಅವಶ್ಯವಾಗಿರುತ್ತಿದ್ದ ಕಾಲವೊಂದಿತ್ತು. ಆಧುನಿಕ ಕಾಲದಲ್ಲಿ ಕಾವ್ಯ ಬಹಳಷ್ಟು ಜನರಿಗೆ ನಾಣ್ಯ ಸಂಗ್ರಹದಂತೆ ಒಂದು ಹವ್ಯಾಸ ಮಾತ್ರವಾಗಿದೆ. ಊಟ ಉಡುಗೆಯಂತೆ ಕಲೆ ಜೀವನಕ್ಕೆ ಅವಶ್ಯವಾದಾಗ ಅದು ಒಳ್ಳೆಯದು, ಕೆಟ್ಟದು ಎಂಬ ಪ್ರಶ್ನೆ ಹಾಗೂ ಅಭಿರುಚಿಯ ಪ್ರಶ್ನೆ ಏಳುವುದೇ ಇಲ್ಲ. ಆದರೆ ವೈಯಕ್ತಿಕ ಪ್ರವೃತ್ತಿಯ ಅದಮ್ಯತೆಯಿಂದ ಹುಟ್ಟುವ ಕಾವ್ಯಕ್ಕಿಂತ ಸಾಮಾಜಿಕ ಪ್ರವೃತ್ತಿಯ ಅದಮ್ಯತೆಯಿಂದ ಹುಟ್ಟು ಕಾವ್ಯ ಹೆಚ್ಚು ಗಟ್ಟಿಮುಟ್ಟಾಗಿರುತ್ತದೆ"[೧೨೩] ಎಂದು ಎಚ್.ಎಸ್.ಆರ್. ಅವರು ಉಲ್ಲೇಖಿಸಿದ್ದಾರೆ. ಈ ಹಿನ್ನೆಲೆಯಿಂದ ಕಾವ್ಯ ವೈಯಕ್ತಿಕ ನೆಲೆಯಾಗದೇ ಸಾಮಾಜಿಕ ನೆಲೆಯಾಗಿ ತನ್ನ ಪೌರುಷ ಮೆರೆಯಬೇಕು ಎಂಬ ನಿಲುವು ತಾಳುತ್ತಾರೆ. ಹಾಗಾಗಿ ದ.ರಾ.ಬೇಂದ್ರೆ, ಪುತಿನ, ಕುವೆಂಪು, ನವ್ಯ ಕಾಲದ ಕಾವ್ಯ ಹಾಗೂ ಕತೆ, ಕಾದಂಬರಿ ಕೂಡ ಸಾಮಾಜಿಕ ನೆಲೆಯಾಗಿ ಸಾಮಾಜಿಕ ಪ್ರಜ್ಞೆಯ ಮಾತಿನವುಗಳಾಗಿವೆ. ಲಾವಣಿಗಳು, ಕಾವ್ಯಗಳು ವಸಾಹತುಶಾಹಿಗೆ ಪ್ರತಿಕ್ರಿಯೆಯಾಗಿವೆ. ಹಾಗೆಯೇ ಇಂಗ್ಲಿಷ್ ಗೀತಗಳು ಬ್ರಾಹ್ಮಣ ಕನ್ನಡವನ್ನು ಮೀರಿಸಿದ್ದಾಗಿದೆ. ಇಲ್ಲಿ ಭಾಷೆಯೇ ಗೀತಗಳಲ್ಲಿ, ಲಾವಣಿಗಳಲ್ಲಿ ಹಾಗೂ ಜಾನಪದಗಳಲ್ಲಿ, ಭಾಷೆಗಳು ಲಯ ಸರಳತೆ ಹೊಂದಿವೆ. ಆದರೆ ಬ್ರಾಹ್ಮಣರ ಕನ್ನಡ ಕಾವ್ಯದ ಭಾಷೆ ಯಾವುದಾಗಿತ್ತು ಎಂಬುದು ಪ್ರಶ್ನಾತೀತವಾಗಿದೆ. ಜಾನಪದ ಕಾವ್ಯಗಳು, ಗರತಿಯ ಹಾಡು, ಮಲ್ಲಿಗೆ ದಂಡೆ, ಜೀವನ ಸಂಗೀತ ಇವು ಯಾವುದೇ ಶತಮಾನವಾದರೂ ಸಮಕಾಲೀನರಲ್ಲಿ ಚಿಕ್ಕ ಪುಟ್ಟ ಬದಲಾವಣೆಯಾಗಿ ಜನಮನದಲ್ಲಿ ಹೊಸತನ ಮೂಡಿವೆ. ಹಾಗೆಯೇ ರಾಗ ಮಾತ್ರ ಬದಲಾವಣೆಯಾಗಿರಬಹುದು.

ಇವುಗಳಿಂದ ನವೋದಯ, ನವ್ಯ, ದಲಿತ ಬಂಡಾಯಕ್ಕೆ ಭಾಷೆಯ ಚಿಂತನೆಯಿಂದ ಕಾಲದ ಸ್ಥಿತ್ಯಂತರದಿಂದ ಹಲವಾರು ರೀತಿಯಲ್ಲಿ ಪುರಾಣ, ದೇಶೀಯತೆ, ದಲಿತ, ಬಂಡಾಯ ಕೇಂದ್ರೀಕೃತ

ಸಾಮಾಜಿಕ ಅನನ್ಯತೆಗಾಗಿ ಬಡವ, ಬಲ್ಲಿದ ಹಸಿವು, ದಬ್ಬಾಳಿಕೆ, ವಸಾಹತುಶಾಹಿ, ಜಾಗತೀಕರಣ, ಖಾಸಗೀಕರಣ ದೇಶದ ರಾಜಕಾರಣ ಧೋರಣೆಗಳು ಇತ್ಯಾದಿ ವಸ್ತುಗಳಾಗಿ ಕಾವ್ಯದಲ್ಲಿ ಧಾರೆಯಾಗಿ ಪ್ರಾದೇಶಿಕ ಭಾಷೆಯ ಹಿಡಿತದಲ್ಲಿ ಅನಾವರಣಗೊಂಡಿವೆ.

ಎಚ್.ಎಸ್.ಆರ್. ಅವರು ಶತಮಾನದ ಸಾಹಿತ್ಯ ವಿಮರ್ಶೆಯ ಕೃತಿಯಲ್ಲಿ ಮುನ್ನುಡಿಯ ಮೂಲಕ ಕನ್ನಡ ಸಾಹಿತ್ಯ ಪರಂಪರೆಯನ್ನು ವಿಮರ್ಶೆ ಮಾಡಿದ್ದಾರೆ. “ವಿಮರ್ಶೆಯೆಂಬ ಬೌದ್ಧಿಕ ಚಟುವಟಿಕೆ ಮಾತ್ರ ಕೇವಲ ಒಂದು ನೂರು ವರ್ಷಗಳಿಂದ ಬೆಳೆದುಬಂದಿದೆ. ಅದು ಸಾಹಿತ್ಯ ಬೋಧನೆಗೆ ಸಮಾನಾಂತರವಾದರೂ ಪರಿಪೂರ್ಣ ಲಕ್ಷಣಗಳನ್ನು ಉಳಿಸಿಕೊಂಡಿರುವ ಸಂಗತಿ. ವಿಮರ್ಶೆಯು ಯಾವಾಗಲೂ ಸಾಹಿತ್ಯ ಕೃತಿಗಳ ವಿಶ್ಲೇಷಣೆ, ವಿಮರ್ಶೆಗಳಿಗೆ ಮೀಸಲಾದ ಪರಾವಲಂಬಿ ಚಟುವಟಿಕೆಯಾಗಿಲ್ಲ. ಬದಲಾಗಿ ಒಂದು ಸಂಸ್ಕೃತಿಯು ಸ್ವಾಭಿಮುಖವಾಗಿ ತೊಡಗಿಕೊಂಡು ಜ್ಞಾನ ಸೃಷ್ಟಿ ಮಾಡುವ ಜವಾಬ್ದಾರಿಯನ್ನು ಹೊತ್ತುಕೊಂಡಾಗ ನಡೆಯುವ ಎಲ್ಲಾ ಪವಾಡಗಳು ಸಾಹಿತ್ಯ ವಿಮರ್ಶೆಯಲ್ಲಿಯೂ ಒಂದು ಮಿತಿಯೊಳಗೆ ನಡೆದಿವೆ”[೧೨೪] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಎಚ್.ಎಸ್.ಆರ್. ಅವರು ಕನ್ನಡ ಸಾಹಿತ್ಯ ವಿಮರ್ಶೆಯನ್ನು ಒಂದು ಹಂತಕ್ಕೆ ಗುರುತಿಸಲಾಗಿದೆ. ಇಲ್ಲಿ ಪರಂಪರೆ, ಸಾಹಿತ್ಯ, ಚರಿತ್ರೆ, ಸಾಹಿತ್ಯ ಪರಿಕಲ್ಪನೆಗಳಿಂದ ಐತಿಹಾಸಿಕ ಸಾಹಿತ್ಯ ವಸ್ತುವಿನ ಮೂಲಕ ಅನುಸಂಧಾನ ನಡೆಸಿದೆ. ಇಲ್ಲಿ ಮುಖ್ಯವಾಗಿ ಸಾಹಿತ್ಯ ಪ್ರಕಾರಗಳಲ್ಲಿ ವಿಮರ್ಶಾತ್ಮಕ ಚಿಂತನೆ ಕಡಿಮೆ. ಅಲ್ಲಿ ವಿಮರ್ಶೆಯಾಗಿ ಸಾಹಿತ್ಯ ಪ್ರಕಾರಗಳ ಕುರಿತು ಅನುಸಂಧಾನ ನಡೆಸಿದೆ. ಶತಮಾನದ ವಿಮರ್ಶೆ ಕೃತಿಯ ವಿಶ್ಲೇಷಣೆಯಲ್ಲಿ ಶ್ರೇಷ್ಠ, ಕನಿಷ್ಠ ಎಂಬುದು ಮುಖ್ಯವಲ್ಲ. ಸಾಮಾಜಿಕ ಚಲನಶೀಲತೆ ಮತ್ತು ಸಾಹಿತ್ಯ ತತ್ವದ ನಿತ್ಯ ಪರಿವರ್ತನೆಯಲ್ಲಿ ತೊಡಗಿರುವ ಶತಮಾನದ ಸಾಹಿತ್ಯ ವಿಮರ್ಶೆಯಾಗಿದೆ. ಇಲ್ಲಿ ಮುಖ್ಯವಾಗಿ ಕನ್ನಡ ವಿಮರ್ಶೆಯ ಬೆಳವಣಿಗೆಗೆ ಕತೆ, ಕಾದಂಬರಿ, ಲಲಿತಪ್ರಬಂಧ, ಕಾವ್ಯ, ನಾಟಕ ಇವುಗಳ ಜೊತೆಗೆ ಅಭಿನಂದನಾ ಗ್ರಂಥಗಳು ಮುಖ್ಯವಾಗಿ ಮುನ್ನುಡಿಗಳು ಮಹತ್ವವಾಗಿ ವಿಮರ್ಶೆಯ ಪ್ರಕಾರದ ತಾತ್ವಿಕ ಚಿಂತನೆಗೆ ಒಳಗಾಗಿವೆ.

ಕೆ.ಎಸ್.ನರಸಿಂಹಸ್ವಾಮಿಯವರ ‘ಮಲ್ಲಿಗೆಯ ಮಾಲೆ’ ಸಮಗ್ರ ಕಾವ್ಯಕ್ಕೆ ಎಚ್.ಎಸ್.ಆರ್. ಅವರು ‘ನಿಮ್ಮುಸಿರು ನನ್ನ ಕವಿತೆ’ ಮುನ್ನುಡಿ ಶೀರ್ಷಿಕೆಯಾಗಿ ಕೆ.ಎಸ್.ನರಸಿಂಹಸ್ವಾಮಿಯವರ ಕಾವ್ಯದ ಒಳಮುಖಗಳನ್ನು ಗುರುತಿಸಲಾಗಿದೆ. ಎಚ್.ಎಸ್.ಆರ್. ಅವರು “ವಾಸ್ತವವಾಗಿ ಅವರ ಕವಿತೆಗಳಲ್ಲಿ ಪರಿಚಿತವಾದ ಚಿತ್ರಗಳ ಹಿಂದೆ ಅಪರಿಚಿತವಾದ ಕಾಣಿಕೆಗಳು ಹುದುಗಿರುತ್ತವೆ. ಅದೇ ಮಲ್ಲಿಗೆ, ಮಂಜು, ಬೆಳದಿಂಗಳು, ಚೆಲವು ಒಲವುಗಳು ಅವರ ವಿಕಸನಪಥದ ನಿಲ್ದಾಣಗಳಾಗಿ ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತವೆ. ನನ್ನ ಈ ಲೇಖನವು ಬಹುಮಟ್ಟಿಗೆ ಕೃತಜ್ಞತೆ, ಸ್ವಲ್ಪಮಟ್ಟಿಗೆ ಅನಾವರಣ, ಏಕೆಂದರೆ ಎಲ್ಲಾ ಕಲೆಯ ಹಾಗೆ ಕವಿ ಪಯಣ ಮೂಕವಾದುದು. ಅದು ತನ್ನನ್ನು ಕುರಿತು ಮಾತನಾಡುವ ಮಧ್ಯವರ್ತಿಗಳನ್ನು ಬಯಸುತ್ತದೆ”[೧೨೭] ಎಂದು ಹೇಳುತ್ತಾರೆ. ಕೆ.ಎಸ್.ನರಸಿಂಹಸ್ವಾಮಿಯವರ ಕವಿತೆಗಳು ಮಧ್ಯವರ್ತಿಗಳನ್ನು ಬಯಸಿದ್ದಲ್ಲದೇ ಹಲವು ತರದ ನೆಲೆಯಲ್ಲಿ ಚರ್ಚೆಗೊಳಪಟ್ಟಿವೆ. ಕೆ.ಎಸ್.ಎನ್. ಅವರು ತಮ್ಮ ಅನುಭವದ ಕನ್ನಡಿಯಲ್ಲಿ ಒಟ್ಟು

ಮನುಷ್ಯ ಕುಲದ ಹಾಡು–ಪಾಡುಗಳನ್ನು ಕಂಡುಕಂಡರಿಸಿದ ಕವಿಯಾಗಿ ನಮ್ಮೆಲ್ಲರ ಬದುಕಿನ ಭರವಸೆಯ ಬೆಳಕನ್ನು ತುಂಬಿದವರು. ಚೆಲುವನ್ನು ಬಲ್ಲವರಿಗೆ ಕವಿತೆಯಾಗಿ, ಒಲವು, ಪ್ರೀತಿ, ಮಮತೆಯ ಹಾಡುಗಳಾಗಿ, ಅವರದು ಸಾಮಾನ್ಯ ಬದುಕಿನ ಲಾಲನೆ–ಪಾಲನೆಯಾಗಿ, ಭಾವಗೀತೆಯಾಗಿ, ಕನ್ನಡ ಜಾನಪದ ಮತ್ತು ವಿಮರ್ಶೆಯಾಗಿ 'ಮೈಸೂರು ಮಲ್ಲಿಗೆ'ಯ ಮೋಹಕ ಚುಂಬನದಂತೆ ಕೆಎಸ್‌ನ ಅವರು ಜನಸಮೂಹದಲ್ಲಿ ಉಳಿದುಕೊಂಡಿದ್ದಾರೆ.

ಕೆ.ಎಸ್.ನ ಅವರಿಗೆ ಸುತ್ತಲೂ ಕಂಡ ಜೀವನವೇ ಅವರ ಕವಿತೆಯ ಪ್ರಥಮ ಆಕರ ಮತ್ತು ಅಂತಿಮ ಆಕರವಾಗಿದೆ. ಈ ಕವಿಗೆ ಮುಖ್ಯ ಪ್ರೇರಣೆ ಜಾನಪದ ಗೀತೆಗಳು, ಕುಮಾರವ್ಯಾಸನ ಪರ್ವಗಳು, ಬಿ.ಎಂ.ಶ್ರೀ. ತೀ.ನಂ.ಶ್ರೀ., ವಿಸೀಯವರ ಕವಿತೆಯ ಪ್ರೇರಣೆ ಪ್ರಭಾವಗಳು ಆಗಿವೆ. ಇವರಿಗಿಂತ ಚಿಕ್ಕ ವಯಸ್ಸಿನಲ್ಲಿ ಜನಮನ್ನಣೆ ಪಡೆದ ಕೆಎಸ್‌ನ ಅವರಲ್ಲಿ ಮುಖ್ಯವಾಗಿ ದೇಶೀಯ ನುಡಿಗಟ್ಟಿನ ಭಾಷೆ, ಜನಪದ ಚಲನಶೀಲತೆಯಾಗಿ ಬೇರೂರಿದ್ದವು. ಅವರ 'ಶಿಲಾಲತೆ,' 'ಮನೆಯಿಂದ ಮನೆಗೆ' ಸಂಕಲನಗಳು ಮನುಷ್ಯನ ಅನುಭವಗಳಲ್ಲಿ ಅಡಗಿವೆ. ನವೋದಯ ಕಾಲಕ್ಕೆ ಬೇಂದ್ರೆಯವರು ಒಂದು ಮುಖಛಾಯೆ ತೋರಿದರೆ, ಕೆಎಸ್‌ನ ಅವರು ಇನ್ನೊಂದು ಮುಖದ ಛಾಯೆಯನ್ನು ತೋರಿಸಿದವರು. ಮುಖ್ಯವಾಗಿ ನವ್ಯದ ಗೋಪಾಲಕೃಷ್ಣ ಅಡಿಗರ ಕಾವ್ಯಕ್ಕೆ ಸವಾಲು ಒಡ್ಡುವ ಮುಖಾಮುಖಿಯಾಗಿದ್ದರು. ಅವರ ಕಾವ್ಯದಲ್ಲಿ ಜೀವನವು ಹಳ್ಳಿಯ ಸುಂದರ ಕತೆಯಾಗಿ ಅಡಗಿಕೊಂಡಿವೆ. ಅವರದು ಮೊದಲಿನಿಂದ ಪುನರಾವರ್ತಿತ ಪ್ರತಿಮೆಗಳ ಚಿತ್ರಗಳ ಲೋಕ. 'ಮೈಸೂರು ಮಲ್ಲಿಗೆ'ಯಿಂದ 'ದೀಪಸಾಲಿನ ನೆರಳು' ಸಂಕಲನದವರೆಗೆ ಮತ್ತೆ ಮತ್ತೆ ಪ್ರತಿಮೆಗಳು ರೂಪಕಗಳು ಹರಡಿಕೊಂಡಿವೆ.

> "ಅನ್ನವಿಲ್ಲದ ಕಂದ ಬಂತು ಬೀದಿಗೆ ಗೆಳೆಯ
>
> ನಾನು ಕವಿತೆಯ ಕೊಡಲು ಹಿಂದೆ ಸರಿದೆ"[೧೨] (ಪು.೧೬)

ದೀಪಸಾಲಿನ ನಡುವೆ ಕವಿತೆಯಲ್ಲಿ ಕವಿತೆ ಅನ್ನ ಕೊಡಲು ರೂಪಕದ ಕವಿತೆಯ ನಿರಾಕರಣೆ ವ್ಯಕ್ತಗೊಂಡಿರಬಹುದು. ಹಾಗೆಯೇ ಕವಿತೆ ಹಾಡಿದರೂ ಹೊಟ್ಟೆ ತುಂಬುವುದಿಲ್ಲ ಎನ್ನುವುದು ವಾಸ್ತವ ಸತ್ಯ. ಆದರೆ ಬಡತನವಿಲ್ಲದ ಬದುಕಿನ ಅಗತ್ಯತೆಗಳನ್ನು ಪಡೆದುಕೊಂಡರೂ ಭೋಗ ವಿಲಾಸಿ ಜೀವನವಿಲ್ಲದ ಜನತೆಗೆ ಕವಿತೆಯ ಅಗತ್ಯವಿದೆ. ಹಾಗಾಗಿ ಜನಪದ ತಿರುಳನ್ನು ನಾವು ಸೂಕ್ಷ್ಮವಾಗಿ ಅರಿತುಕೊಳ್ಳಬೇಕಾಗಿದೆ.

ಒಟ್ಟಾರೆಯಾಗಿ ಎಚ್.ಎಸ್.ಆರ್. ಅವರ ಈ ದೀರ್ಘ ಮುನ್ನುಡಿಯು ಕೆ.ಎಸ್.ನ. ಕವಿತೆಗಳ ತಾತ್ವಿಕತೆಯನ್ನು ಹಿಡಿದಿಡುವ ಕೆಲಸ ಮಾಡಿದ್ದಾರೆ. ಇವರಿಗೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವಿದ್ದರೂ ಹೆಚ್ಚಾಗಿ ವಾಲುವುದು ದೇಶೀಯ ನುಡಿಗಟ್ಟು, ಭಾಷೆ, ಸ್ಥಳೀಯತೆ, ಜಾನಪದ ಸೊಗಡಿಗೆ.

ಚಂದ್ರಶೇಖರ ಪಾಟೀಲ್ ಅವರ ಸಮಗ್ರ ಕಾವ್ಯಕ್ಕೆ 'ಧ್ಯಾನಸ್ಥ ಬುಗುರಿ' ಮತ್ತು 'ಸತ್ಯದ ಸ್ಫೋಟ' ಎನ್ನುವ ಶೀರ್ಷಿಕೆಯಿಂದ ಎಚ್‌ಎಸ್‌ಆರ್ ಅವರು ಮುನ್ನುಡಿ ಬರೆದಿದ್ದಾರೆ. ಈ

ಮುನ್ನುಡಿಯಲ್ಲಿ ಮುಖ್ಯವಾಗಿ ಚಂಪಾ ಅವರನ್ನು ಹೀಗೆ ಗುರುತಿಸುತ್ತಾರೆ. "ಕನ್ನಡದ ಸಮಾಜಮುಖಿಯಾದ ಕಾವ್ಯವನ್ನು ಪರಿಶೀಲಿಸುವಾಗ ಈ ಮುಕ್ತಮನಸ್ಸು ಹಾಗೂ ತಿಳುವಳಿಕೆಗಳು ಅತ್ಯಗತ್ಯ. ಇಂತ ತಿಳುವಳಿಕೆಯು ರಾಜಕೀಯ, ಸಾಮಾಜಿಕ ಆಯಾಮಗಳನ್ನು ಒಳಗೊಂಡಿರುತ್ತದೆ. ಅದು ಇಲ್ಲವಾದರೆ ನಾವು ಸಿನಿಕರಾಗಿಬಿಡುತ್ತೇವೆ. ಅಂತಹ ಸಿನಿಕತನ ಬೇಡವೆಂದರೆ ಹುಸಿ ಮಾನವೀಯತೆ ಮತ್ತು ಹುಸಿ ಅನುಭವಗಳೆಂಬ ಜೋಡಿದಿಂಬುಗಳ ಮೇಲೆ ನಿದ್ದೆ ಮಾಡುತ್ತೇವೆ. ಸರಿಸುಮಾರು ಐವತ್ತು ವರ್ಷಗಳ ಅವಧಿಯಲ್ಲಿ ಹರಡಿಕೊಂಡಿರುವ ಚಂದ್ರಶೇಖರ ಪಾಟೀಲರ ಕಾವ್ಯವು ಇಂತ ಎಚ್ಚರಗಳನ್ನು, ಇಂತ ಅರಿವನ್ನು ಅಪೇಕ್ಷಿಸುತ್ತದೆ."[೧೨೭] ಈ ಹಿನ್ನೆಲೆಯಿಂದ ಚಂದ್ರಶೇಖರ ಪಾಟೀಲ್ ಅವರು ಸಮಾಜಮುಖಿಯಾಗಿ, ಚಳುವಳಿಗಾರನಾಗಿ ಯಾವುದೇ ಘಟನೆಗೆ ತಕ್ಷಣದ ಪ್ರತಿಕ್ರಿಯೆ ನೀಡುವವರು. ಹಾಗಾಗಿ ಅವರ ಸಾಹಿತ್ಯ ಸಮಾಜಮುಖಿಯಾದ ಆಯಾಮವನ್ನು ಒದಗಿಸುವಲ್ಲಿ ಹಿಂಜರಿಕೆಯಾದರೆ ನೇರವಾಗಿ ಮುಕ್ತಮನಸ್ಸಿನಿಂದ ಹೇಳಿದವರು. ಅವರ ಕಾವ್ಯ ಮಾನವೀಯತೆ ನಡೆಯಲ್ಲಿ, ಅವರ 'ಸಂಕ್ರಮಣ' ಪತ್ರಿಕೆಯಲ್ಲಿ ಜನಜಾಗೃತಿಯನ್ನು ತಮ್ಮ ಕಾವ್ಯದ ಮೂಲಕ ಬಿತ್ತಿದವರು. ಮೊದಮೊದಲು ಗಾಂಧಿ ಮತ್ತು ನೆಹರು, ಲಾಲ್‌ಬಹದ್ದೂರ್‌ಶಾಸ್ತ್ರಿಯವರನ್ನು ಕುರಿತು ಹೆಚ್ಚಾಗಿ ತಮ್ಮ ಕಾವ್ಯದಲ್ಲಿ ಬರೆಯುತ್ತಿದ್ದರು. ಕೆಲವೊಮ್ಮೆ ವ್ಯಂಗ್ಯವಾಗಿಯೂ ಕೂಡ ಬರೆದಿದ್ದಾರೆ. ಇವರ ಎಲ್ಲ ಕವಿತೆಗಳಲ್ಲಿಯೂ ಹಿಂದೆಯೂ ರಾಜಕೀಯ ಅವತಾರಗಳನ್ನು ಕುರಿತು ಬರೆದಿದ್ದಾರೆ. ಆದರೆ ಕಾವ್ಯವೇ ರಾಜಕೀಯ ವಸ್ತುವನ್ನು ಕೇಂದ್ರವಾಗಿರಿಸಿಕೊಂಡು ಕಾವ್ಯ ಸಂಕೀರ್ಣತೆಯನ್ನು ರೂಪಿಸಿದ ಗೋಪಾಲಕೃಷ್ಣ ಅಡಿಗರು, ಚಂಪಾ ಅವರು ಮುಖ್ಯವಾಗಿ ಸಮಾಜವಾದ, ಸಮತಾವಾದ ಪರಿಷ್ಕರಣದ ನೆಲೆಯಲ್ಲಿ ಗುರುತಿಸುವರು. ಅವರ 'ಗಾಂಧಿ ಸ್ಮರಣೆ', 'ಹೂವು ಹೆಣ್ಣು ತಾರೆ', 'ಅರ್ಧ ಸತ್ಯದ ಹುಡುಗಿ', 'ಶಾಲ್ಮಲಾ ನನ್ನ ಶಾಲ್ಮಲಾ', ದೇವಭಾಗ ಕವನ ಸಂಕಲನಗಳಲ್ಲಿ ತಾವು ಬದುಕಿದ ಭಾಷಿಕ ಸಮುದಾಯ ಇತಿಹಾಸದ ಕೆಲವು ಅಪರೂಪ ಕ್ಷಣಗಳನ್ನು, ಪ್ರಸ್ತುತವಾಗಿ ಸಮಾಜ, ಚರಿತ್ರೆ ಮನುಷ್ಯನ ಮಾನವೀಯತೆ ಚಿತ್ರಣಗಳು ಅವರ ಕವಿತೆಗೆ ವಸ್ತುವಾಗಿವೆ.

"ಚಂದ್ರಶೇಖರ ಪಾಟೀಲರ ಧ್ವನಿ ನಮ್ಮ ಈ ಕಷ್ಟದ ವರ್ಷಗಳಲ್ಲಿ ಧೈರ್ಯದ, ಘನತೆಯ ಸ್ವಾತಂತ್ರ್ಯಕ್ಕೂ ಹತ್ತಿರ ಬರಲೆತ್ನಿಸುವ ಏಕಮಾತ್ರ ಧ್ವನಿ ಎಂದು ಮತ್ತೊಮ್ಮೆ ಹೇಳಬಯಸುವೆ. ನಾನು ಅದುಕೊಂಡಿರುವಂತೆ ಹೊಸ ಸಾಹಿತ್ಯವೆಂದರೆ ನಮ್ಮ ಅರ್ಥದಲ್ಲಿ ಬದುಕನ್ನು ಕಾಣುವುದು ಮತ್ತು ಕಂಡದ್ದನ್ನು ತಕ್ಕ ಮಾತುಗಳಲ್ಲಿ ಕಟ್ಟುವುದು. ಈ ಗಟ್ಟಿತನ ಪಾಟೀಲರ ಕವನಗಳಲ್ಲಿ ನಿಜಕ್ಕೂ ರುದ್ರಸುಂದರ ರೂಪವನ್ನು ಪಡೆಯುತ್ತದೆ. ರಾಜಕೀಯ, ವರ್ಗ, ಪ್ರೇಮ, ಜಾತಿ, ಭಾಷೆ ಕಲೆಯ ಪ್ರಶ್ನೆಗಳನ್ನು ಜೀವನದ ಅನುಭವಗಳ ಸಾಕ್ಷ್ಯದೊಂದಿಗೆ ನನ್ನ ಸಮಕಾಲೀನರು ಚರ್ಚಿಸಿ ಅನುಭವಿಸಿ ಪಡೆದಷ್ಟನ್ನು ನಮ್ಮ ಹಿಂದಿನ ಕನ್ನಡದ ಯಾವ ಜನಾಂಗವೂ ಪಡೆದಿರಲಿಕ್ಕಿಲ್ಲ"[೧೨೮] ಎಂದು ಎಚ್‌ಎಸ್‌ಆರ್ ಅವರು ಚಂಪಾ ಕಾವ್ಯದ ತಾತ್ವಿಕ ನೆಲೆಯನ್ನು ಗುರುತಿಸಿದ್ದಾರೆ. ಚಂದ್ರಶೇಖರ ಪಾಟೀಲರು ನೇರ ನುಡಿಯ ವ್ಯಕ್ತಿತ್ವವುಳ್ಳವರಾಗಿದ್ದರು. ಅವರ ಮಾತಿನಲ್ಲಿ ಹಾಸ್ಯ, ವಿಡಂಬನೆ ಜಾಸ್ತಿ.

ಸಾರ್ವಜನಿಕ ಭಾಷಣಗಳಲ್ಲಿ ಮಾತಿನ ಚಟಾಕಿ ಹಾರಿಸುವರು. ಆದರೆ ಅದರಿಂದ ಟೀಕೆಗಳು ಇರುತ್ತವೆ ಎನ್ನುವುದನ್ನು ಮರೆಯಬಾರದು. ಯಾವುದೇ ಸಾಹಿತ್ಯದ ಪ್ರಭಾವ ಅವರಲ್ಲಿ ಕಡಿಮೆ. ಅವರಲ್ಲಿ ಮೂಡಿದ ಅಂದಿನ ಸಾಮಾಜಿಕ ಸಂವೇದನೆಯಿಂದ ಅವರ ಕವಿತ್ವ ರೂಪಿತಗೊಂಡಿದೆ. ತದನಂತರ ಪ್ರಭಾವಗಳನ್ನು ಬೀರಿರಬಹುದು.

ರಾಮಚಂದ್ರಶರ್ಮ ಅವರ ಸಮಗ್ರ ಕಾವ್ಯಕ್ಕೆ ಎಚ್.ಎಸ್.ಆರ್. ಅವರು ಮುನ್ನುಡಿ ಬರೆದಿದ್ದಾರೆ. ಅವರು ೧೯೩೨ರಿಂದ 'ಹೃದಯಗೀತ' ಕವನ ಸಂಕಲನದಿಂದ ೧೯೮೪ರಲ್ಲಿ ಹೊರಬಂದ 'ಮಾತು ಮಾಟ'ದವರೆಗಿನ ಅವರ ಕಾವ್ಯ ಸೃಷ್ಟಿಯನ್ನು ಮಹತ್ವದ ಒಳನೋಟಗಳಿಂದ ಗುರುತಿಸಲಾಗಿದೆ. ಅವರ ಕಾವ್ಯ ಕಾಮ ಮತ್ತು ಪ್ರಗತಿಶೀಲತೆಗಳನ್ನು ಒಳಗೊಂಡಿದೆ. ಹಾಗೆಯೇ ಮನಶ್ಶಾಸ್ತ್ರದ ಚಿಂತನೆ ಅವರ ಕಾವ್ಯದಲ್ಲಿ ಕಂಡುಬರುತ್ತವೆ. ಶರ್ಮರ ಕಾವ್ಯದಲ್ಲಿ ನಗರ ಮುಖಿಯಾದ, ಆಧುನಿಕವಾದ, ಪ್ರತಿಷ್ಠಿತವಾದ ಕಾವ್ಯ ಚಿಂತನೆಗಳಿವೆ. ಅವರ 'ಹೇಸರಗತ್ತೆ' (೧೯೬೯), 'ಬ್ರಾಹ್ಮಣ ಹುಡುಗ', 'ಮಾತುಮಾಟ' ಮುಖ್ಯವಾಗಿ ಅವರ ಕಾವ್ಯಗಳಲ್ಲಿ ಮನುಷ್ಯ ಜಗತ್ತಿನ ನಗರಜೀವನದ ಅವಲಂಬನೆಯನ್ನು ಕುರಿತು ಹೆಚ್ಚು ಚರ್ಚೆಗಳು ಬರುತ್ತವೆ. ಏಕೆಂದರೆ ಎಚ್.ಎಸ್.ಆರ್. ಅವರು ರಾಮಚಂದ್ರಶರ್ಮರವರ ಬದುಕಿನ ಕ್ಷಣಗಳು ಮತ್ತು ಅವರ ಕಾವ್ಯ ರಚನೆ ಸಂದರ್ಭಗಳು ಹೇಗೆ ಒದಗಿಬಂದವು ಎಂಬುದಕ್ಕೆ "ರಾಮಚಂದ್ರಶರ್ಮ ಅವರು ತಮ್ಮ ಬದುಕಿನ ಒಂದು ಭಾಗವನ್ನು ಅನ್ಯದೇಶ–ಅನ್ಯಸಂಸ್ಕೃತಿಗಳ ಪರಿವಲಯಗಳಲ್ಲಿ ಕಳೆಯಬೇಕಾಗಿ ಬಂದುದರಿಂದ ನಮ್ಮ ಸಂಸ್ಕೃತಿಯಲ್ಲಿ ಬೇರೂರಲು ಸಾಧ್ಯವಾಗಲಿಲ್ಲ. ಅವರು ಸಹನೀಯವಾದ ಯೋಚನೆಗಳನ್ನು ಎಲ್ಲೂ ನೆಲೆಯೂರಲಾರದೆ ತಹತಹವನ್ನು ಅನುಭವಿಸಿದರು. ಬೆಳೆಯುತ್ತಿರುವ ಕನ್ನಡ ಕಾವ್ಯದೊಂದಿಗಿನ ಅವರ ಸಂಪರ್ಕ ಕಡಿಮೆಯಾಯಿತು"[೯೯] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಶರ್ಮರ ಕಾವ್ಯ ಚಿಂತನೆಗಳು ಅನ್ಯದೇಶಿಯ ಹಾಗೂ ಅನ್ಯಸಂಸ್ಕೃತಿಯ ಜೊತೆ ಬೆರೆತುಕೊಂಡಿವೆ. ಹಾಗೆಯೇ ನಗರಸಂಸ್ಕೃತಿ, ಪಾಶ್ಚಾತ್ಯ ಸಿದ್ಧಾಂತಗಳ ಪ್ರಭಾವಗಳು ಎಲಿಯಟ್, ಏಟ್ಸ್‌ರ ಕಾವ್ಯ ಚಿಂತನೆಯ ಪ್ರಭಾವ ಶರ್ಮರ ಮೇಲೆ ಇತ್ತು ಎನ್ನುವುದಕ್ಕೆ ಪಿ.ಲಂಕೇಶರ ಅಕ್ಷರ ಹೊಸ ಕಾವ್ಯದ ಮುನ್ನುಡಿಯಲ್ಲಿ "ಅಲ್ಲಿಯ ವ್ಯಕ್ತಿ ರೊಮ್ಯಾಂಟಿಕ್ ಯುಗದಿಂದ ಇದ್ದಕ್ಕಿದ್ದಂತೆ ಹೊಸ ಜಗತ್ತು ಪ್ರವೇಶಿಸಿ ನೋಡುವವನು. ಎರಡು ಮುಖ್ಯ ಅಂಶಗಳು ಗಮನಿಸಬೇಕು. ಮೊದಲನೆಯದು ಕಾವ್ಯವನ್ನು ಪ್ರವೇಶಿಸಿದ ಚಿತ್ರಗಳು, ಅನುಭವದ ಎಳೆಗಳು, ಮಾತುಗಳು, ಘಟನೆಗಳು ಹೆಚ್ಚಾಗಿವೆ. ಎರಡನೆಯದು ಮುಗಿಲ ಹೂವ ಮುಡಿಯ ಬಯಸಿದೆ ಎಂದು ಹೊರಡುವ ಈ ಕವನದ ನಾಯಕ ತೀರಾ ದೊಡ್ಡ ಆದರ್ಶ ಇಟ್ಟುಕೊಂಡು ಹೊರಟವನು ಮತ್ತು ತನ್ನ ಆದರ್ಶ ಕೈಗೂಡದಿದ್ದರೂ ಅದನ್ನು ಇಟ್ಟುಕೊಳ್ಳುವುದರಲ್ಲೇ ಹೆಮ್ಮೆ ಪಡುವಾತ. ಗಟ್ಟಿಯಾಗಿ ಭಾಷಣಕಾರನ ಗತ್ತಿನಿಂದ ಮಾತನಾಡುವವನು. ಶರ್ಮ ಅವರು ತಮ್ಮ ಮೊದಲ ಕವನಗಳಲ್ಲಿ ಹೊಸತನದ ಬಟ್ಟೆ ಹಾಕಿಯೇ ಆಳದಲ್ಲಿ ರೊಮ್ಯಾಂಟಿಕ್ ಆಗಿದ್ದಾರೆ ಎಂಬುದು ಹೊಸ ಚಿತ್ರಗಳಿದ್ದರೂ ಉದ್ದೇಶ ಹಳೆಯದು ಎಂಬುದು ಜನಕ್ಕೆ ಆಗಲೇ ಗೊತ್ತಿದ್ದುದನ್ನು ಹೇಳುತ್ತಿದ್ದರಿಂದ ಇಂತ ಕಾವ್ಯ ಜನಪ್ರಿಯವಾಯಿತು"[೧೦೦] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ

ಕವಿಯು ಜಗತ್ತನ್ನು ಕಾಣುವ, ಕವಿತೆಯನ್ನು ಕಟ್ಟುವ ನೆಲೆಯ ಬಗ್ಗೆ ಹಾಗೂ ಮನಸ್ಥಿತಿಯ ಸ್ವರೂಪ ಸರ್ವರಲ್ಲಿ ಮಹತ್ವವಾಗಿದ್ದವು. ಹಾಗೆಯೇ ವ್ಯಕ್ತಿ ಮತ್ತು ಹೊಸ ಜಗತ್ತಿನ ಸಂಬಂಧಗಳು ನಗರ ಸಂಸ್ಕೃತಿಯಂತಹ ಕವಿತೆಯ ವಸ್ತುವಿನಿ ಜೊತೆಗೆ 'ಏಳುಸುತ್ತಿನ ಕೋಟೆ' ಎಂಬ ಕವನಗಳ ಮೂಲಕ ಆಧುನಿಕ ಕನ್ನಡಕ್ಕೆ ಎಂದರೆ ನವ್ಯ ಕಾಲಕ್ಕೆ ಅನುಗುಣವಾಗುವಂತೆ ಹೊಸತನದ ಕೆಲವು ವಸ್ತುಗಳು ಮನುಷ್ಯನ ಸಾಮಾಜಿಕ, ಐತಿಹಾಸಿಕ ಮತ್ತು ವೈಯಕ್ತಿಕ ನೆಲೆಗಳನ್ನು ಸಂಬಂಧದ ಸ್ವರೂಪದಲ್ಲಿ ಅವರ ಕಾವ್ಯ ನಿರೂಪಿಸಿವೆ. ಶರ್ಮ ಮೊದಲಿಗೆ ಪ್ರಗತಿಶೀಲ ಕವಿತೆಗಳನ್ನು ಬರೆದರೂ ಕೊನೆಗೆ ನಗರದಲ್ಲಿ ಬದುಕುವ ಸಂದರ್ಭ ಬಂದಂತೆ, ಅವರ ಜೀವನಶೈಲಿ ಬದಲಾದಂತೆ ನವ್ಯಕ್ಕೆ ಬದಲಾದುದರ ಪರಿ ಅವರ ಕಾವ್ಯದಲ್ಲಿ ಕಂಡುಬರುತ್ತದೆ.

"ಅಲ್ಲೊಂದು ಬೆಟ್ಟ, ಬೆಟ್ಟದ ಬುಡಕ್ಕೆ ಅರ್ಧ
ಮುಚ್ಚಿದ್ದ ಮರದ ಬಾಗಿಲಿತ್ತು
ಪರಿಪೂರ್ಣ ಕಲೆಗೆ ನಿಲುಕದೊಂದು ನಿಗೂಢ
ಕೈ ಬೀಸಿ ಕರೆಯುತ್ತಿತ್ತು"[೧೩೧] (ಚೀನಾದ ಹಳೆಯ ಕತೆ)

ಈ ಕವನದ ಹಿನ್ನೆಲೆಯಿಂದ ನವ್ಯಕ್ಕೆ ಬದಲಾದುದರ ಪರಿಯನ್ನು ಗುರುತಿಸಬಹುದು.

"ಮನಸ್ಸು ಜಗ್ಗು ಸುಳಿಗೆ ಸಿಕ್ಕಿ ಜಗತ್ತು ನಡುವಿನ
ಶೂನ್ಯದಲ್ಲಿ ವಿಲೀನವಾದಾಗ ಹುಟ್ಟುವುದೇ ಕವನ" (ಪುಟ ೨೬೦)

ಹೀಗೆ ಶರ್ಮರ ಕವಿತೆಗಳ ಸ್ವರೂಪವನ್ನು ಗ್ರಹಿಸುವುದು ತುಂಬಾ ಕಷ್ಟ. ಆದರೂ ಅವರ ಹಲವು ಕವನಗಳು ನೆನಪು ಮತ್ತು ಕನಸುಗಳ ಪರಿಕಲ್ಪನೆಯ ಕುರಿತು ಆಲೋಚಿಸುವಂತಿವೆ ಎಂದು ಹೇಳಬಹುದು.

ರಾಮಚಂದ್ರ ಶರ್ಮರ ಕಾವ್ಯದ ಕುರಿತು ಅದರ ಬಗೆಗಿನ ಆಕ್ಷೇಪಣೆಗಳಲ್ಲೊಂದನ್ನು ತಮ್ಮ ಮುನ್ನುಡಿಯ(ಅರವತ್ತು ಕವನಗಳು)ಲ್ಲಿ ಯು.ಆರ್.ಅನಂತಮೂರ್ತಿಯವರು ಹೇಳುತ್ತಾರೆ. "ಜಗಿಯದವನು ಕವಿಯಲ್ಲ, ಆದರೆ ರಕ್ತಗತವಾದ ಅನುಭವ ಮತ್ತು ಇಂದ್ರಿಯ ಪಟುತ್ವದ ಭಾಷೆಗಳಿಲ್ಲದೇ ಶಬ್ದಗಳ ಜೊತೆಗಿನ ಒಡನಾಟ ಒಬ್ಬನೇ ಚೆಂಡಾಡುವ ಜಗ್ಲರಿಯಾಗಿ ಬಿಡುತ್ತದೆ. ಕೇವಲ ಕಣ್ಣು ಇದ್ದರೆ ಸಾಲದು. ಕವಿಗೆ ಕಿವಿಯೂ ಬೇಕು. ಶಬ್ದಗಳು ಪರಸ್ಪರ ಒಡನಾಡುವಾಗ ಕಾಣಿಸಿದ್ದಕ್ಕಿಂತ ಹೆಚ್ಚಾಗಿ ಕೇಳಿಸಿದ್ದು, ಕೇಳಿಸುವ ಮುಖೇನ ಆಗೋಚರವನ್ನು ಸೂಚಿಸಿದ್ದು, ನಮ್ಮ ನಾಗರಿಕ ಸಾಮಾಜಿಕ ಪ್ರಜ್ಞೆಗಳಿಗೆ ಆಚಿನ ಸತ್ಯಗಳನ್ನು ಹೊಳೆಯಿಸುತ್ತವೆ. ನಮ್ಮ ಪೂರ್ವಜರಿಗೂ ಈ ನಮ್ಮ ಭಾಷೆಯಲ್ಲಿ ಅಂತರ್ಗತವಾದ ಈ ನಾದ ಕೇಳಿಸಿತ್ತು. ಮಾತಿನ ಜರೂರು ನಮಗೆ ಅನುಭವವಾಗುವುದು ಅದರ ಅರ್ಥದಲ್ಲಿ ಮಾತ್ರವಲ್ಲ. ಹೆಚ್ಚಾಗಿ ಒಳಕಿವಿಗೆ ಕೇಳಿಸುವ ಅದರ ನಾದದಲ್ಲಿ"[೧೩೨] ಎಂದು ಅನಂತಮೂರ್ತಿಯವರು ಶರ್ಮರ ಕಾವ್ಯದ ಬಗ್ಗೆ ಚರ್ಚೆ ಮಾಡಿದ್ದಾರೆ. ಹಾಗಾಗಿ ಕಾವ್ಯ ಒಂದು ಕಾಲಕ್ಕೆ ಸೀಮಿತವಲ್ಲ. ಅದು ಕಾಲದಿಂದ ಕಾಲಕ್ಕೆ ಬದಲಾಗಿದೆ. ಯಾವುದೇ ಕಾವ್ಯಸಿದ್ಧಾಂತ

ರೂಪಿಸಿದ ಕಾವ್ಯ ಜನರಿಗೆ ಮುಟ್ಟುವುದು ತುಂಬಾ ಕಡಿಮೆ. ಆದರೆ ಸಾಮಾಜಿಕ ಪ್ರಜ್ಞೆಯೊಳಗೆ ಜನರ ಬದುಕು–ಬವಣೆ, ಸ್ಥಿತಿಗತಿಗಳನ್ನು ಕಾವ್ಯದ ಮೂಲಕ ರೂಪಿಸಿಕೊಂಡಿವೆ.

'ಅಧೋಲೋಕದ ಬೆಳಕು' ಕೃತಿಯ ಮುನ್ನುಡಿಯಲ್ಲಿ ಬೇಂದ್ರೆಯವರು ಬರೆಯುತ್ತಾ "ಕಾವ್ಯ ಸಾಧಾರಣ ಮಟ್ಟದಿಂದ ಉತ್ತಮ ಮಟ್ಟಕ್ಕೆ ಏರುವುದು. ಅಡಿಗರ ಉತ್ತಮ ಕವನಗಳಲ್ಲಿ ಆಗುವ ಹಾಗೆ. ಕವಿ ತನ್ನ ವೈಯಕ್ತಿಕ ಅನುಭವಗಳಿಗೆ ಮಾತು ಕಾಣಿಸುವ ಕೆಲಸದಲ್ಲಿ ಸುತ್ತಣ ಜನರ ಅನುಭವಗಳಿಗೆ ಅಭಿವ್ಯಕ್ತಿ ಕೊಡುವುದು ಸಾಧ್ಯವಾದಾಗ ಮಾತ್ರ ಅನ್ನುವ ನಂಬಿಕೆಯೇ ಇದೆ. ಅಂದರೆ ಕವಿಯ ಆತ್ಮೀಯವಾದ ಖಾಸಗಿ ಪ್ರಪಂಚಕ್ಕೆ ಹೊರಗಿನ ಪ್ರಪಂಚದ ಆಯಾಮವು ಇದ್ದರೆ ಉತ್ತಮವಾಗುತ್ತದೆ ಎಂಬ ನಂಬಿಕೆ ನನ್ನದು. ಕವಿಯು ಮನಸ್ಸಿನ ಆಳಕ್ಕೆ ಇಳಿಯುತ್ತಲೇ ವಿಸ್ತಾರವಾಗುತ್ತ ಹೋಗುವ ಆದರ್ಶ ಇದು"[೧೩೩] ಎಂದು ಹೇಳುತ್ತಾರೆ. ಇದು ಬೇಂದ್ರೆಯವರ ಮಾತು. ಹಾಗಾಗಿ ರಾಮಚಂದ್ರ ಶರ್ಮರಿಗೆ ಗೊತ್ತಿಲ್ಲದ ಸಂಗತಿಯಾಗಿದೆ. ಈಗಾಗಲೇ ಅಡಿಗರಿಗೂ ಅದು ತಿಳಿದಿತ್ತು. ಆದರೆ ಎಚ್.ಎಸ್.ಆರ್. ಅವರು ಈ ಮುನ್ನುಡಿಯನ್ನು ಉಲ್ಲೇಖಿಸಿ ಶರ್ಮರಿಗೆ ಬೇಂದ್ರೆಯವರ ಕಾವ್ಯದ ಬಗ್ಗೆ ತಿಳಿದರೆ ಕಾವ್ಯ ಸ್ಥಿತಿ ಬದಲಾಗುತ್ತಿತ್ತು ಎಂದು ಹೇಳಿರಬಹುದು. ಆದರೆ ರಾಮಚಂದ್ರಶರ್ಮರ ಕಾವ್ಯ ರಚನೆಯ ಚಿಂತನೆ ಬೇರೆಯಾಗಿದೆ. ಯಾವುದೇ ಕವಿಯ ನಿಲುವು ಸಾಮಾಜಿಕ ಪ್ರಜ್ಞೆಯಿಂದ ಹುಟ್ಟಿರುತ್ತದೆ. ಅದರಲ್ಲಿ ಭಿನ್ನತೆಗಳು ಬೇರೆಯಾಗಿವೆ ಎಂದು ಹೇಳಬಹುದು.

ಎಚ್.ಎಸ್.ಆರ್. ಅವರ 'ಆಯ್ದ ಕವನಗಳು' ಅರವಿಂದ ಮಾಲಗಿತ್ತಿಯವರ ಕವನ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ "ಇಪ್ಪತ್ತೊಂದನೆಯ ಶತಮಾನದಲ್ಲಿ ಖಚಿತವಾದ ಆಕರಗಳನ್ನು ಪಡೆಯುತ್ತಿರುವ ನವ ಆಧುನಿಕತೆಯ ಸವಾಲುಗಳನ್ನು ಕವಿಯು ಎದುರಿಸುವ ಬಗೆಯೇ ಆಗಿದೆ. ಇಂತ ಅನುಸಂಧಾನವು ಗತ ಮತ್ತು ಪ್ರಸ್ತುತಗಳ ನಡುವೆ ಮಾಡಿಕೊಳ್ಳುವ ಆಯ್ಕೆಯು ತಂತಿಯ ಮೇಲಿನ ನಡಿಗೆಯೆನ್ನುವುದರಲ್ಲಿ ಅನುಮಾನವಿಲ್ಲ. ಅದರಲ್ಲೂ ದಲಿತ ಬಂಡಾಯ ಸಾಹಿತ್ಯದ ಹಿನ್ನೆಲೆಯಿಂದ ಬಂದ ಕವಿಗಳು ಈ ಬಿಕ್ಕಟ್ಟುಗಳನ್ನು ಇನ್ನಷ್ಟು ತೀವ್ರವಾಗಿ ಎದುರಿಸಬೇಕಾಗುತ್ತದೆ"[೧೩೪] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯಕ್ಕೆ ಪರಂಪರೆಯಿದೆ. ಆಕರವೂ ಇದೆ. ಆದರೆ ದಲಿತ ಬಂಡಾಯಕ್ಕೂ ಒಂದು ಆಕರವಿದೆ. ಪ್ರಸ್ತುತ ಸಾಹಿತ್ಯಕ್ಕೂ ನಮ್ಮ ಹಿಂದಿನ ಆಕರ ಸಾಮಗ್ರಿಗಳು ಇವೆ. ಹಾಗಾಗಿ ಯಾವ ಕಾಲಘಟ್ಟದಲ್ಲಿ ಸಾಹಿತ್ಯದ ರಚನೆಯಾಗುತ್ತಿದೆಯೋ ಅಲ್ಲಿಯ ಕಾಲದ ಸಂದರ್ಭ ಮುಖ್ಯವಾಗಿರುತ್ತದೆ. ಅಂದರೆ ಆ ಕಾಲದ ಸಾಹಿತ್ಯ ಹಿಂದಿನ ಸಾಹಿತ್ಯದ ಸಾಂಸ್ಕೃತಿಕ ಚಹರೆಗಳು ಬಿಕ್ಕಟ್ಟುಗಳನ್ನು ಬಿಡಿಸಿಕೊಳ್ಳುವ ವಿಧಾನ, ಪ್ರಸ್ತುತ ಕಾಲಘಟ್ಟ ಸಾಂಸ್ಕೃತಿಕ ಬಿಕ್ಕಟ್ಟುಗಳ ವಿಧಾನ ಸಾಹಿತ್ಯ ರಚನೆಯಲ್ಲಿ ಇಂತಹ ಬಿಕ್ಕಟ್ಟುಗಳನ್ನು ಎದುರಿಸಿ ಸಮಾಜಕ್ಕೆ ಕೊಡಬೇಕಾಗಿದೆ. ದಲಿತ ಮತ್ತು ಬಂಡಾಯದ ಕವಿಗಳು ಇದನ್ನು ಸಮರ್ಥವಾಗಿ ಎದುರಿಸಿದ್ದಾರೆ. ಆದರೆ ಪೂರ್ಣ ಪ್ರಮಾಣದಲ್ಲಿದೆ ಎಂದು ಹೇಳಲಾರೆವು. ಆದರೆ ಪರಿಹಾರ ಕಂಡುಕೊಳ್ಳುವ

ಸ್ಥಿತಿಯಲ್ಲಿದೆ ಎಂದು ಹೇಳಲಾಗುತ್ತದೆ. ಮಾಲಗಿತ್ತಿಯವರ 'ಕಾರ್ಯ', 'ಗೌರ್ಮೆಂಟ್ ಬ್ರಾಹ್ಮಣ', 'ಮೂಕನಿಗೆ ಬಾಯಿ ಬಂದಾಗ', 'ನಾದ ನಿನಾದ' ಎಂಬ ಕವನ ಸಂಕಲನಗಳು ಹಾಗೂ ಬರಹಗಳನ್ನು ಗಮನಿಸಿದರೆ ಸಾಂಸ್ಕೃತಿಕ ಬಿಕ್ಕಟ್ಟುಗಳು ಏನು ಎಂಬುದು ತಿಳಿಯಬಹುದು. ಜೊತೆಗೆ ಪರಿಹಾರ ಕಂಡುಕೊಳ್ಳಬಹುದು.

ಅಮರೇಶ ನುಗಡೋಣಿಯವರ 'ಬಿಸಿಲ ಹನಿಗಳು'(ಸಂ) ಕೃತಿಗೆ ಎಚ್.ಎಸ್.ಆರ್. ಮುನ್ನುಡಿ ಬರೆದಿದ್ದಾರೆ. ಅಮರೇಶ ನುಗಡೋಣಿಯವರ ಕಥನ ಮಾದರಿ, ಭಾಷೆ, ವಸ್ತು ಹಾಗೆಯೇ ಪ್ರಾದೇಶಿಕ ಹಿನ್ನೆಲೆಯಿಂದ ಕರ್ನಾಟಕದ ಪ್ರಾದೇಶಿಕ ಕಥಾಸ್ವರೂಪದ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ. ಎಚ್.ಎಸ್.ಆರ್. ಅವರು "ಪ್ರಾದೇಶಿಕತೆಯು ಒಡಮೂಡುವ ಬಗೆಗಳು ನಿರ್ದಿಷ್ಟ ಸಾಹಿತ್ಯ ಪ್ರಕಾರದ ಸ್ವರೂಪವನ್ನು ಅವಲಂಬಿಸಿರುತ್ತದೆ. ಕಥನದ ಹಂಗು ತೊರೆದ ಅಮೂರ್ತವಾದುದನ್ನು ಕಟ್ಟಿಕೊಡಬಯಸುವ ಕವಿತೆಯು ಪ್ರಾದೇಶಿಕತೆಯನ್ನು ಮುಖ್ಯವಾದ ವಿವರಗಳಲ್ಲಿ ಅಥವಾ ಶೈಲಿಯ ಸಾಧ್ಯತೆಗಳಲ್ಲಿ ಮಾತ್ರ ಉಳಿಸಿಕೊಳ್ಳಬಹುದು. ಒಂದೇ ಕೃತಿಯೊಳಗೆ ಹಲವು ಬಗೆಯ ನಿರೂಪಣಾ ಕ್ರಮಗಳನ್ನು ಒಗ್ಗಿಸಿಕೊಳ್ಳಬಲ್ಲ ಕಾದಂಬರಿಯು ಪ್ರಾದೇಶಿಕತೆಗೆ ವರವಾಗಿದೆಯಾದರೂ ಇತರೆ ಸಾಧ್ಯತೆಗಳನ್ನು ಮೈಗೂಡಿಸಿಕೊಳ್ಳಬಹುದು. ಅವರ ಹರಹು ಪ್ರಾದೇಶಿಕತೆ, ಸಾರ್ವತ್ರಿಕತೆ ಹಾಗೂ ವೈಚಾರಿಕತೆಗಳನ್ನು ಒಂದರ ಬದಿಗೆ ಒಂದರಂತೆ ಸಂಯೋಜನೆ ಮಾಡಲು ಅವಕಾಶ ಕೊಡುವುದಿಲ್ಲ. ಬದಲಾಗಿ ಒಂದು ಕಥನದ ಒಡಲಿನಲ್ಲೇ ಇವೆಲ್ಲವನ್ನು ಒಂದುಗೂಡಿಸಬೇಕಾಗುತ್ತದೆ"[೧೩೫] ಎಂದು ಹೇಳುತ್ತಾರೆ. ಇಲ್ಲಿ ಪ್ರಾದೇಶಿಕತೆ, ಸ್ಥಳೀಯತೆ, ಸಂಸ್ಕೃತಿ ಹಿನ್ನೆಲೆಯಿಂದ ಬರಹಗಾರನ ಪಕ್ವತೆ ಏನಾಗಿರಬೇಕಾಗುತ್ತದೆ. ಹಾಗೆಯೇ ಪ್ರಾದೇಶಿಕ ಎನ್ನುವುದು ಲಕ್ಷಣ ಅಷ್ಟೆ. ಆದರೆ ಪ್ರಾದೇಶಿಕತೆಯು ಕಥನ ಮಾದರಿಯ ಮೂಲಕ ವಸ್ತು ಅನನ್ಯತೆ, ಸಂವೇದನೆಯ ಜೊತೆಗೆ ರೂಪಿಸಿಕೊಂಡಿರುತ್ತದೆ. ಅಮರೇಶ ನುಗಡೋಣಿಯವರ ಕತೆಗಳು ರಾಯಚೂರು ಅಥವಾ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಸಾಂಸ್ಕೃತಿಕ ಚಹರೆಯನ್ನು ಹೊಂದಿರುತ್ತವೆ. ಅದೇ ರೀತಿ ಬೆಸಗರಹಳ್ಳಿ ರಾಮಣ್ಣ, ದೇವನೂರು ಮಹಾದೇವ, ಕುಂ.ವೀರಭದ್ರಪ್ಪ, ಬೋಳೂರು ಅವರು ಅವರದೇ ಆದ ಪ್ರಾದೇಶಿಕ ಸಂಸ್ಕೃತಿಯನ್ನು ಸಾಹಿತ್ಯಲೋಕಕ್ಕೆ ಮಂಡಿಸಿದ್ದಾರೆ. ಇಲ್ಲಿಯ ಮಾದರಿಗಳು, ಭಿನ್ನತೆಗಳು ಬದಲಾವಣೆಗೊಂಡಿವೆ. ಜೊತೆಗೆ ಭಾಷೆ, ವಸ್ತು ಬೇರೆಯಾಗಿರಬಹುದು. ರಚನೆ ಸಮಾಜಕ್ಕೆ ಒಪ್ಪಿಸುವ ಕಥಾವಸ್ತು ಆಯಾ ಪ್ರದೇಶದ ಪ್ರಭಾವಗಳು ಚಾರಿತ್ರಿಕ ಅಂಶಗಳಿಂದ ಅವುಗಳದೇ ಅನನ್ಯತೆಯಿರುತ್ತದೆ.

ಎಚ್.ಎಸ್.ಆರ್. ಅವರು ಕೆ.ಮರುಳಸಿದ್ಧಪ್ಪನವರ 'ಕನ್ನಡ ನಾಟಕ ಸಮೀಕ್ಷೆ' ಕೃತಿಯ ನಾಟಕ ಸಾಹಿತ್ಯದ ತಾತ್ವಿಕತೆಯನ್ನು ಈ ಮುನ್ನುಡಿಯಲ್ಲಿ ಚರ್ಚಿಸಿದ್ದಾರೆ. ಮುಖ್ಯವಾಗಿ ಕನ್ನಡ ನಾಟಕ ಯಾವ ಸಿದ್ಧಾಂತವನ್ನು ಮಂಡಿಸಿವೆ ಎಂಬುದರ ಬಗ್ಗೆ ಕೆ.ಮರುಳಸಿದ್ಧಪ್ಪನವರು ನಾಟಕ ಕೃತಿಯ ಕುರಿತಂತೆ ಪಿಎಚ್.ಡಿ. ಮಾಡಿದ್ದಾರೆ. ಹಾಗಾಗಿ ಅವರು ಸಾಕಷ್ಟು ನಾಟಕಗಳನ್ನು

ನೋಡಿರಬಹುದು. ಆದುದರಿಂದ ಎಚ್.ಎಸ್.ಆರ್. ಅವರು ಹೇಳುವಂತೆ "ರಂಗಭೂಮಿಯ ನೇರ ಪರಿಚಯವಿಲ್ಲದ ಸಾಹಿತ್ಯ ವಿಮರ್ಶಕನಿಗೆ ನಾಟಕಗಳನ್ನು ಕುರಿತು ಬರೆಯುವುದೊಂದು ಸವಾಲು. ಅದರಲ್ಲೂ ರಂಗಭೂಮಿಯಲ್ಲಿ ಪ್ರದರ್ಶಿತವಾಗಲಾರದ, ಆದರೂ ಸಾಹಿತ್ಯ ಮೌಲ್ಯಗಳ ದೃಷ್ಟಿಯಿಂದ ಶ್ರೀಮಂತವಾದ ನಾಟಕಗಳ ಪರಂಪರೆಯೊಂದು ರಂಗದ ಮೇಲೆ ಯಶಸ್ವಿಯಾದ ನಾಟಕಗಳಿಗೆ ಸಮಾನಾಂತರವಾಗಿಯೇ ಬೆಳೆದು ಬಂದಿರುವ ಕನ್ನಡದ ಸಂದರ್ಭದಲ್ಲಿಯಂತೂ ಈ ಕೆಲಸವೂ ಮತ್ತಷ್ಟು ನಾಜೂಕಿನದು"[೧೩೬] ಎಂದಿರುವರು.

ಈ ಹಿನ್ನೆಲೆಯಿಂದ ಕನ್ನಡ ನಾಟಕ ಕ್ಷೇತ್ರ ನಾಜೂಕಿನದು ಎಂದು ಹೇಳುವುದಾದರೆ ಮುಖ್ಯವಾಗಿ ಬಸವಣ್ಣನ ಕುರಿತಂತೆ ಬಂದ ನಾಟಕಗಳು 'ತಲೆದಂಡ, ಮಹಾಚೈತ್ರ, ಕೆಟ್ಟಿತ್ತು ಕಲ್ಯಾಣ, ಸಂಕ್ರಾಂತಿ' ನಾಟಕಗಳು ಕೂಡ ವಸ್ತು ಒಂದಾದರೆ ಚಿಂತನೆಗಳು ಬೇರೆಯಾಗಿವೆ. ಇಲ್ಲಿ ತಾತ್ವಿಕ ಭಿನ್ನತೆಗಳನ್ನು ಗುರುತಿಸುವುದು ಮುಖ್ಯ. ಹೀಗೆಯೇ ಪುರಾಣದ ವಸ್ತುವನ್ನು ಆಧರಿಸಿದ ನಾಟಕಗಳು ವಾಸ್ತವ ನೆಲೆಯಲ್ಲಿ ತೋರಿಸುವ ಪ್ರಕ್ರಿಯೆ ಭಿನ್ನವಾಗಿದೆ. 'ಹಯವದನ' ನಾಟಕ ಮನುಷ್ಯನ ಅಪೂರ್ಣತೆ ಪರಿಪೂರ್ಣವಾಗಲು ಅಲ್ಲಿ ನಡೆಸುವ ಹೋರಾಟ ಈ ಹಂಬಲತೆ ವಿದ್ಯಾವಂತ ಮೇಲುವರ್ಗದ ಐಷಾರಾಮಿ ಚಿಂತನೆಯಾಗಿದೆ. ಈ ವಸ್ತು ಪುರಾತನವಾದರೂ ವಾಸ್ತವದ ನೆಲೆಯಲ್ಲಿ ಗುರುತಿಸುವುದು ನಾಜೂಕಿನ ಕೆಲಸವಾಗಿದೆ. ಕೆಲವು ನಾಟಕಗಳು ಸಮಾಜವನ್ನು ಮೀರುವ ಮತ್ತು ಸಾಮಾಜಿಕ ಪ್ರಜ್ಞೆಯನ್ನು ಮೂಡಿಸುವ ಸೌಹಾರ್ದತೆ ಚಿಂತನೆಗಳೂ ನಡೆಸಿವೆ. ಟಿ.ಪಿ.ಕೈಲಾಸಂ, ಸಂಸ, ಶ್ರೀರಂಗ, ಕುವೆಂಪು ಇನ್ನೂ ಅನೇಕ ಮಹನೀಯರು ತಮ್ಮ ನಾಟಕ ರಚನೆಯಲ್ಲಿ ಸೈದ್ಧಾಂತಿಕ ಸಂಗತಿಗಳ ಹಿನ್ನೆಲೆಯಿಂದ ಜನರಲ್ಲಿ ಸಾಮಾಜಿಕವಾಗಿ ಜಾಗೃತಿ ಮೂಡಿಸಿದವರಾಗಿದ್ದಾರೆ.

ಈ ಮುನ್ನುಡಿಯಲ್ಲಿ ಒಟ್ಟಾರೆ ಕನ್ನಡ ನಾಟಕ ಪರಂಪರೆ, ಇತಿಹಾಸ, ಮುಖ್ಯವಾದ ನಾಟಕಗಳ ಪರಿಶೀಲನೆಯಲ್ಲಿ ತೊಡಗಿದೆ. ಇಲ್ಲಿ ಕೆ.ಮರುಳಸಿದ್ಧಪ್ಪನವರ ಚಿಂತನೆ ಒಂದಿದ್ದರೆ, ಮುನ್ನುಡಿಕಾರನ ಒಂದು ಚಿಂತನೆಯಿದೆ. ನಾಟಕಗಳ ಸ್ವರೂಪ ನೆಲೆಗಳನ್ನು ಇದು ಗುರುತಿಸಿದೆ.

### ೫.೧೦. ಕೆ.ವಿ.ನಾರಾಯಣ

ಕನ್ನಡ ಸಾಹಿತ್ಯದ ಪರಂಪರೆಯನ್ನು ೭೦ರ ದಶಕದಲ್ಲಿ ಕೆ.ವಿ.ನಾರಾಯಣರವರು ತಮ್ಮ ಹಿನ್ನೋಟದಿಂದ ಚಿಂತನೆ ನಡೆಸಿದವರು. ೨೦ನೇ ಶತಮಾನದ ಸಾಹಿತ್ಯವನ್ನು ಚಾರಿತ್ರಿಕ, ಸಾಂಸ್ಕೃತಿಕ ವಾಗ್ವಾದಗಳ ಮೂಲಕ ಪ್ರತಿಪಾದಿಸಿದವರು. ಮುಖ್ಯವಾಗಿ ಡಿ.ಆರ್.ನಾಗರಾಜರ ವಿಮರ್ಶಾ ಚಿಂತನೆಯ ಪರಿಕಲ್ಪನೆಯನ್ನು ಕೆ.ವಿ.ನಾರಾಯಣರ ಚಿಂತನೆಯಲ್ಲಿ ಕಾಣಬಹುದು. ಅವರ 'ಬೇರು ಕಾಂಡ ಚಿಗುರು' ಕೃತಿಯನ್ನು ಗಮನಿಸಿದರೆ ಅವರ ಸಾಹಿತ್ಯಕ, ತಾತ್ವಿಕ ನಿಲುವುಗಳೇನು ಎಂಬುದನ್ನು ತಿಳಿಯಬಹುದು. ಹಾಗೆಯೇ ಕನ್ನಡ ಪರಂಪರೆಯನ್ನು ಪುನರ್ ಮೌಲ್ಯೀಕರಣಗೊಳಿಸುವಲ್ಲಿ ಇವರು ಪ್ರಮುಖರಾಗಿದ್ದಾರೆ. ಕೆ.ವಿ.ಎನ್. ಅವರ ಸಾಹಿತ್ಯ ಕುರಿತು ಬಸವರಾಜ ಕಲ್ಗುಡಿಯವರು

"ಸಾಹಿತ್ಯ ವಿಮರ್ಶೆಯ ಸ್ವರೂಪ ಯಾವುದಿರಬಹುದು ಎನ್ನುವ ಚಿಂತನೆಯನ್ನು ಈ ಕೃತಿಯಲ್ಲಿ ಮಾಡಿರುವ ವಿಧಾನವು ತಾತ್ವಿಕ ಚರ್ಚೆ ಹಾಗೂ ಗ್ರಹಿಕೆಯಾಗಿದೆ. ಕೃತಿಗಳ ಅಧ್ಯಯನವೇ ಆಗಿದೆ ಎನ್ನುವುದನ್ನು ಗಮನಿಸಬೇಕು. ಸಾಹಿತ್ಯ ವಿಮರ್ಶೆ ಎನ್ನುವುದು ಕಲಾಕೃತಿಯೊಳಗೆ ಹೊಕ್ಕು ಅದರಲ್ಲಿ ಸೃಜನಾತ್ಮಕವಾಗಿ ವಿಲೀನವಾಗುವ ಮತ್ತು ಸಂವಾದಿಸುವ ಒಂದು ಪ್ರಕ್ರಿಯೆ ಎನ್ನುವುದನ್ನು ನಾರಾಯಣ ಅವರ ಕೃತಿಗಳನ್ನು ಕುರಿತಂತೆ ಓದಿನ ಮೂಲಕವೇ ಪರೋಕ್ಷವಾಗಿ ಸೂಚಿಸುತ್ತಾರೆ. ಈ ಚಟುವಟಿಕೆಯ ಅರ್ಥಪೂರ್ಣವಾದ ಕ್ರಿಯಾಶೀಲ ನೆಲೆಯನ್ನು ಕೃತಿಯ ಅಂತರಾಳಕ್ಕೆ ಹೋಗುವುದರ ಮೂಲಕವೇ ಸಾಧಿಸಲು ಸಾಧ್ಯ ಎನ್ನುವುದನ್ನು ಅವರು ಪ್ರಧಾನವಾಗಿ ಗ್ರಹಿಸಿರುವುದು ಈ ಮೂಲಕ ಕಾಣುತ್ತದೆ"[೧೩೭] ಎಂದು ಗುರುತಿಸಿರುವರು. ಕೆ.ವಿ.ಎನ್. ಅವರ 'ತೊಂಡು ಮೇವು' ಸಮಗ್ರ ಸಾಹಿತ್ಯ ಸಂಪುಟಗಳನ್ನು ಗಮನಿಸಬಹುದು. ಅದರಲ್ಲಿ ಅವರ ಸಾಂಸ್ಕೃತಿಕ ಚಿಂತನೆಯನ್ನು ಮನಗಾಣಬಹುದು.

ಕೆ.ವಿ.ಎನ್. ಅವರು ತಮ್ಮ ಸಾಹಿತ್ಯ ಬರವಣಿಗೆಯಲ್ಲಿ ಅನೇಕ ಕೃತಿಗಳಿಗೆ ಮುನ್ನುಡಿ ಬರೆದಿದ್ದಾರೆ. ನಾಗಭೂಷಣಗೌಡ ಪಾಟೀಲರ 'ಸಮಾಜವಾದಿ ಚಳುವಳಿ ಮತ್ತು ಆಧುನಿಕ ಕನ್ನಡ ಸಾಹಿತ್ಯ' ಕೃತಿಗೆ ಕೆ.ವಿ.ಎನ್. ಅವರು ಮುನ್ನುಡಿ ಬರೆಯುತ್ತಾರೆ. ಈ ಮುನ್ನುಡಿಯಲ್ಲಿ ಸಾಮಾಜಿಕ ಚಳುವಳಿಯಲ್ಲಿ ಸಮಾಜಕರ್ತರ ಹಾಗೂ ರಾಜಕಾರಣಿಗಳ ಸಂದರ್ಭದ ಆಡಳಿತದ ಹಿನ್ನೆಲೆಯನ್ನು ಕುರಿತು ಚರ್ಚಿಸಿದ್ದಾರೆ. ಹಾಗಾಗಿ ನಮ್ಮ ಸಾಹಿತ್ಯ ವಿಮರ್ಶೆ ಚಿಂತನೆಯ ಕೃತಿಗಳು ಅನೇಕ ವಾದಗಳನ್ನು ಮಂಡಿಸಿವೆ. ಅವು ಸಮಾಜವಾದ, ಲೋಹಿಯಾವಾದ, ಗಾಂಧಿವಾದ, ಅಂಬೇಡ್ಕರ್ ವಾದ, ಅಸ್ತಿತ್ವವಾದ ಹೀಗೆ ಹತ್ತು ಹಲವು ರೀತಿಯಲ್ಲಿ ವಾದಗಳು ಚರ್ಚೆಗಳಾಗಿವೆ. ಇವೆಲ್ಲವು ಸಾಹಿತ್ಯದ ನಂಟಿನಲ್ಲಿ ಸಮಾಜದ ಒಳಗೆ ಅವಿತುಕೊಂಡು ವಿಮರ್ಶಾತ್ಮಕ ನೆಲೆಯಲ್ಲಿ ಸಮಾಜದ ಅಸ್ಮಿತೆಯ ಹುಡುಕಾಟ ನಡೆಸಿವೆ. ಹಾಗಾಗಿ ಕೆ.ವಿ.ಎನ್. ಅವರು ಮುನ್ನುಡಿಯಲ್ಲಿ ಹೇಳುವಂತೆ ಮೂರು ತರಹವಾದ ಸಾಹಿತ್ಯ ವಾದಗಳನ್ನು ಅರ್ಥ ಮಾಡಿಕೊಳ್ಳಬೇಕು ಎಂದು ಹೇಳುತ್ತಾ "(೧) ಲೋಕ ಮತ್ತು ಜೀವನವನ್ನು ಅರಿಯಲು ಬೇಕಾದ ತಾತ್ವಿಕ ಚೌಕಟ್ಟನ್ನು ವಾದಗಳ ಮೂಲಕ ಪಡೆದುಕೊಳ್ಳುವುದು, (೨) ವಾದಗಳ ಮೂಲಕ ಲೋಕಾನುಭವವನ್ನು ವಿಶ್ಲೇಷಿಸಲು ಬೇಕಾದ ಪರಿಕರಗಳನ್ನು ಪಡೆದುಕೊಳ್ಳುವುದು, (೩) ಜೀವನದ ಸಮೃದ್ಧತೆ ಮತ್ತು ಸಂಕೀರ್ಣತೆಗಳ ಎದುರಿನಲ್ಲಿ ಈ ವಾದಗಳು ಮಂಡಿಸುವ ತಾತ್ವಿಕತೆಯನ್ನು ಮರುಪರಿಶೀಲನೆಗೆ ಗುರಿಪಡಿಸುವುದು. ಮೊದಲನೆಯ ನೆಲೆ ಮತ್ತು ಎರಡನೆಯ ನೆಲೆಗಳ ನಡುವೆ ಇರುವ ವ್ಯತ್ಯಾಸವನ್ನು ಗಮನಿಸಬೇಕು"[೧೩೮] ಎಂದಿರುವರು. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಚಿಂತನೆಯಲ್ಲಿಯೇ ಈ ರೀತಿಯಾದ ವಾದಗಳು ಕಂಡುಬರುತ್ತವೆ. ಬೇರೆ ಬೇರೆ ಕ್ಷೇತ್ರದಲ್ಲಿ ಸಿದ್ಧ ಮಾದರಿಯನ್ನು ಅನುಕರಿಸಿವೆ. ಅವು ಸಂಗೀತ, ಚಿತ್ರಕಲೆ, ಶಿಲ್ಪಕಲೆ, ನೃತ್ಯ ಇಲ್ಲಿ ವಾದಗಳಿಲ್ಲ. ಆದರೆ ವಿಜ್ಞಾನ, ಸಾಹಿತ್ಯ, ಸಮಾಜಶಾಸ್ತ್ರ, ಇತಿಹಾಸದಲ್ಲಿ ಮುಖ್ಯವಾಗಿ ವಾದಗಳು ಕಂಡುಬಂದಿವೆ. ಸಾಮಾಜಿಕ ಪ್ರಜ್ಞೆ, ಸಾಮಾಜಿಕ ಅಸ್ಮಿತೆ, ಹೋರಾಟ, ಚಳುವಳಿ, ಜನರ

ಬದುಕು ಬಂದಾಗ ಈ ವಸ್ತುಗಳಿಗೆ ಸಂಬಂಧಿಸಿದಂತೆ ಹೆಚ್ಚು ಸಾಹಿತ್ಯ ವಾದಗಳು ಮುಖ್ಯವಾಗಿ ಮುನ್ನೆಲೆಗೆ ಬರುತ್ತವೆ. ಉಳಿದ ಕ್ಷೇತ್ರದ ವಾದಗಳು ಅಷ್ಟಕ್ಕೆ ಕಂಡುಬರುತ್ತವೆ.

ಈ ವಿಷಯದ ಹಿನ್ನೆಲೆಯಿಂದ ಲೋಹಿಯಾವಾದ, ಗಾಂಧಿವಾದ, ಅಂಬೇಡ್ಕರ್ ವಾದ, ಮಾರ್ಕ್ಸ್‌ವಾದ ಇವು ಅತ್ಯಂತ ಮುನ್ನೆಲೆಗೆ ಬಂದಿದ್ದು ಸಮಾಜವಾದಿ ಚಿಂತನೆಗಳ ನೆಲೆಯಿಂದ ಭಾರತದ ಭೂಮಾಲೀಕರು, ಬ್ರಿಟಿಷರ ವಿರುದ್ಧ ಎದ್ದ ಚಳುವಳಿಯಿಂದಾಗಿ. ಹಾಗಾಗಿ ಕನ್ನಡದ ಭಾಷೆ ಒಳಗೊಂಡಂತೆ ಪ್ರಜಾಪ್ರಭುತ್ವದ ನೆಲೆಯ ಸರಕಾರಗಳು ಮಾಡುವ ಅನ್ಯಕಾರ್ಯಗಳಿಗೆ ಪ್ರತಿಕ್ರಿಯೆಯಾಗಿ ಈ ವಾದಗಳು ಮುಖ್ಯವಾಗುತ್ತದೆ. ಇಲ್ಲಿ ಜನರ ಬದುಕು ಸಮಾಜ, ಸಾಮಾಜಿಕ ಪ್ರಜ್ಞೆ, ಮುಖ್ಯವಾದ ಅಂಶವಾಗಿದೆ.

'ಸಮಾಜವಾದಿ ಚಳುವಳಿ ಮತ್ತು ಆಧುನಿಕ ಕನ್ನಡ ಸಾಹಿತ್ಯ' ಕೃತಿಯ ಮುನ್ನುಡಿಯಲ್ಲಿ ಕೆ.ವಿ.ಎನ್. ಅವರು ಲೋಹಿಯಾವಾದದ ಚಿಂತನೆಯಲ್ಲಿಯೇ ಕರ್ನಾಟಕದ ಚಾರಿತ್ರಿಕ ಬೆಳವಣಿಗೆ, ಬರಹಗಳು, ಸಾಹಿತ್ಯದ ಸಂಸ್ಕೃತಿಯನ್ನು ಗುರುತಿಸಿದ್ದಾರೆ. ಹಾಗೆಯೇ ಈ ಮುನ್ನುಡಿಯಲ್ಲಿ ಹೇಳುವಂತೆ "ಆಧುನಿಕ ಕನ್ನಡ ಸಾಹಿತ್ಯ ಎಂದರೇನು? ಅದೊಂದು ವಿವರಣೆಯುಳ್ಳ ಪದ ರಚನೆಯೇ? ಸಾಹಿತ್ಯದಲ್ಲಿ ಆಧುನಿಕತೆಯನ್ನು ಬರಹಗಾರರು ಅರಿತುಕೊಂಡ ಬಗೆ ಯಾವುದು? ಇದು ಬೀಜಪ್ರಶ್ನೆಯಾಗಿದೆ. ನಮ್ಮ ಹೆಚ್ಚು ಬರಹಗಾರರು ಹಳ್ಳಿಗಳಲ್ಲಿ ಹುಟ್ಟಿ ಬೆಳೆದವರು. ಜಾತಿ ವ್ಯವಸ್ಥೆಯಲ್ಲಿ ಬೇರೆ ಬೇರೆ ನೆಲೆಗಳಲ್ಲಿ ಇದ್ದವರಾದರೂ ಹಳ್ಳಿಯ ಹಿನ್ನೆಲೆ ಎಲ್ಲರಿಗೂ ಸಮಾನವಾಗಿದ್ದಂತೆ ತೋರುತ್ತದೆ. ಆದರೆ ಆ ಹಿನ್ನೆಲೆಯ ಅನುಭವಗಳನ್ನು ಗ್ರಹಿಸುವ ಬಗೆಗಳನ್ನು ಜಾತಿವ್ಯವಸ್ಥೆ ಹೇಗೆ ನಿಯಂತ್ರಿಸುತ್ತಿತ್ತು ಎಂಬುದು ಮತ್ತು ಬದಲಾವಣೆ ಎಂದರೆ ಈ ಜಾತಿವ್ಯವಸ್ಥೆಯ ನಿರ್ದೇಶನಗಳನ್ನು ಮೀರುವುದು ಎಂಬ ತಿಳುವಳಿಕೆ ನಮ್ಮ ಬರಹಗಾರರನ್ನು ದಟ್ಟವಾಗಿ ಕಾಡಿದಂತಿದೆ"[೧೫೬] ಎಂದಿರುವರು. ಈ ಹಿನ್ನೆಲೆಯಿಂದ ಇಲ್ಲಿ ಮುಖ್ಯ ಚಿಂತನೆ ಲೋಹಿಯಾ ಚಿಂತನೆಯಾಗಿದ್ದು, ಆಧುನಿಕ ಬರಹಗಾರರು ಹಳ್ಳಿಯ ಸಂಸ್ಕೃತಿಯಿಂದ ನಗರ ಸಂಸ್ಕೃತಿಯನ್ನು ಮೇಳೈಸಿ ಬರವಣಿಗೆ ಮಾಡಿರುವುದು ಕಂಡುಬರುತ್ತದೆ. ಸಾಹಿತ್ಯ ಬದಲಾದಂತೆ ಸಮಾಜವಾದಿ ಚಿಂತಕರಿಗೆ ಹಲವು ಬಗೆಯ ಸಮಸ್ಯೆಗಳು ಎದುರಾಗಿವೆ. ಜಾತಿಸಮಸ್ಯೆ, ಲಿಂಗ ಅಸಮಾನತೆ, ಸೌಲಭ್ಯ ವಂಚಿತ ಸಮುದಾಯಗಳು, ಭೂಮಿಸಮಸ್ಯೆ, ಸಾಮಾಜಿಕ ದೌರ್ಜನ್ಯಗಳು, ತಾರತಮ್ಯಗಳು ಇನ್ನೂ ಅನೇಕ ಏರುಪೇರುಗಳು ಸಮಾಜವಾದಿ ಚಿಂತಕರಲ್ಲಿ ಮುಖ್ಯ ಪ್ರಶ್ನೆಯಾಗಿ ಕಂಡಿವೆ. ಹೀಗಾಗಿ ವಾದಗಳ ಮೂಲಕ ಸಮಾಜವಾದಿ ಚಳುವಳಿಗೆ ಅಗತ್ಯವಾಗಿ ಬೇಕಿದ್ದ ಹೊಸ ನೆಲೆಗಳನ್ನು ಹುಡುಕಲು ಅವಕಾಶಗಳನ್ನು ಹುಟ್ಟುಹಾಕಿವೆ. ಹಾಗೆಯೇ ಕರ್ನಾಟಕ ಬರಹಗಾರರಲ್ಲಿ, ಚಿಂತಕರಲ್ಲಿ ಹೆಚ್ಚು ಲೋಹಿಯವಾದ ಮುನ್ನೆಲೆಗೆ ಬಂದಿದೆ ಎಂದು ಹೇಳಬಹುದು. ಏಕೆಂದರೆ ಬಡವರ, ಸಾಮಾಜಿಕ ಪರವಾದ ನಿಲುವು ಲೋಹಿಯಾ ಅವರ ಚಿಂತನೆಯಾಗಿತ್ತು. ಕೆ.ವಿ.ಎನ್. ಅವರು ಕರೀಗೌಡ ಬೀಚನಹಳ್ಳಿಯವರ 'ವ್ಯಷ್ಟಿ ಸಮಷ್ಟಿ' ಕೃತಿಗೆ ಮುನ್ನುಡಿ ಬರೆಯುತ್ತಾರೆ. ಇಲ್ಲಿ ನವ್ಯ ಕಾಲದ ಸಂಸ್ಕೃತಿ ಚಳುವಳಿಯ ಪ್ರಜ್ಞೆಯ ನೆಲೆಯಲ್ಲಿ ಕರೀಗೌಡ ಬೀಚನಹಳ್ಳಿಯವರ ಸಾಹಿತ್ಯವನ್ನು ಈ ಮುನ್ನುಡಿಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಈ ಮುನ್ನುಡಿಯಲ್ಲಿ ಕನ್ನಡ ಸ್ವಾತಂತ್ರ್ಯೋತ್ತರ ಕಾಲದ ಕೆಲವು ಮುಖ್ಯ ಕತೆಗಾರರನ್ನು ಕುರಿತಂತೆ ಪಿ.ಲಂಕೇಶ್, ಬೋಳುವಾರು, ಬರಗೂರು ರಾಮಚಂದ್ರಪ್ಪ, ನಾಗವಾರ, ಕುಂ.ವೀ. ಇತರೆ ನವ್ಯ ಕತೆಗಳ ಜೊತೆಗೆ ಕರೀಗೌಡ ಅವರ ಅನುಸಂಧಾನವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹಾಗೆಯೇ ಮಾಸ್ತಿಯವರ ಕಥಾವಸ್ತುವನ್ನು ಹಾಗೂ ನವ್ಯದ ಕಥೆಗಾರರ ವಸ್ತುವನ್ನು ತೌಲನಿಕ ವಿಶ್ಲೇಷಣೆಗೆ ಒಳಪಡಿಸಿರುವುದನ್ನು ನೋಡುತ್ತೇವೆ. ಕೆ.ವಿ.ಎನ್. ಅವರು ಹೇಳುವಂತೆ "ನವ್ಯ ಕತೆಗಳು ರಚನೆಯಾಗುವಾಗ ಬಂದ ಕನ್ನಡ ವಿಮರ್ಶೆ ಒಂದು ವಾಗ್ವಾದದಲ್ಲಿ ತೊಡಗಿತ್ತು. ವಾಗ್ವಾದದ ಪಕ್ಷಗಳ ನಡುವಣ ಗೆರೆ ಗಟ್ಟಿಯಗಾಗಿರಲಿಲ್ಲವಾದರೂ ಸುಮಾರಾಗಿ ಮಾಸ್ತಿ ಮಾದರಿಯ ಸಮರ್ಥನೆ, ವಿರೋಧಗಳು ವಾಗ್ವಾದದ ಮುಖ್ಯ ಆಸಕ್ತಿಯಾಗಿತ್ತೆನ್ನಬಹುದು ಅಥವಾ ನವ್ಯಕತೆಗಾರರಿಗೆ ತಾವು ಭಿನ್ನವಾಗಲು ಮೀರಬೇಕಾದದ್ದು ಮಾಸ್ತಿ ಮಾದರಿ ಎಂಬುದನ್ನು ಖಚಿತವಾಗಿತ್ತು"[೧೪೦] ಎಂದಿರುವರು. "ಈ ಅಂಶವನ್ನು ಲಂಕೇಶರು ನಾಟಕೀಯವಾಗಿ ಮಂಡಿಸಿದ್ದರು"[೧೪೧] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ನವೋದಯ ಸಂಪ್ರದಾಯ ಮತ್ತು ಆಶಯದ ನಿಲುವನ್ನು ಹೊಂದಿದೆ. ಆದರೆ ಪ್ರಗತಿಶೀಲ ಸಾಹಿತ್ಯ ಅತಿರೇಕದ ತೀವ್ರತರ ನಿಲುವು ಹೊಂದಿದೆ. ಇವರಿಂದ ಭಿನ್ನತೆಯನ್ನು ಪಡೆಯಲು ನವ್ಯ ಸಾಹಿತ್ಯ ಪಾಶ್ಚಿಮಾತ್ಯ ಪರಿಕಲ್ಪನೆಯಿಂದ ಸಾಮಾಜಿಕ ಅರ್ಥದ ಬದುಕಿನ ಕಡೆಗೆ ಸಾಗಿತು. ಇಲ್ಲಿ ಮುಖ್ಯವಾಗಿ ನವ್ಯ ಕತೆಗಾರರಲ್ಲಿ ಕೆಲವು ಗೊಂದಲಗಳು ಕಂಡುಬರುತ್ತವೆ. ನವೋದಯ ಮನೋಧೋರಣೆ ಹೊಂದಿದೆ ಎಂದು ಕೆ.ವಿ.ಎನ್. ಅವರು ಸಣ್ಣ ಚರ್ಚೆಯನ್ನು ಈ ಮುನ್ನುಡಿಯಲ್ಲಿ ಹೇಳಿದ್ದಾರೆ. ಆದರೆ ಯಾವುದೇ ಕಾಲದ ಸಮಾಜದ ಅರಿವು ವಾಸ್ತವದ ವಾಗ್ವಾದದ ತಾತ್ವಿಕತೆ ಭಿನ್ನವಾಗಿ ನೋಡಲು ಸಾಧ್ಯವಾಗಿದೆ ಎಂದು ಕೆ.ವಿ.ಎನ್‌ರು ಅಭಿಪ್ರಾಯಪಡುತ್ತಾರೆ. ಇಲ್ಲಿ ನವೋದಯದ ಮನೋಧೋರಣೆ ನವ್ಯದವರಲ್ಲಿ ಹಾಗೂ ಪ್ರಸ್ತುತ ಬರೆಯುತ್ತಿರುವ ಬರವಣಿಗೆಯಲ್ಲಿ ಮೂಡಿದೆ ಎಂದು ಹೇಳಬಹುದು. ಆದರೆ ವಾದ, ವಾಗ್ವಾದ, ಸೃಜನಶೀಲ, ವಿಮರ್ಶೆ, ಸಂಸ್ಕೃತಿ ಚಿಂತನೆ ಬಂದಾಗ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಕಾಲಘಟ್ಟವಾಗಿ ಗುರುತಿಸುತ್ತಾ ವಿಮರ್ಶೆಯಲ್ಲಿ ಒಳಪಡಿಸುತ್ತೇವೆ.

ಯಾವುದೇ ಕಾಲದ ಸಂಸ್ಕೃತಿ ಚಿಂತನೆ ವಾಗ್ವಾದದ ತತ್ವವನ್ನು ಭಿನ್ನವಾಗಿ ನೋಡಲು ಸಾಧ್ಯವಿದೆ. ಕೆ.ವಿ.ಎನ್. ಅವರು "ಯಾವುದೇ ವಾಗ್ವಾದದ ಪ್ರಸ್ತುತತೆಯನ್ನು ಅದರ ಪರಿಣಾಮಗಳನ್ನು ನಿರಾಕರಿಸಲು ಸಾಧ್ಯವಿಲ್ಲ. ಏಕೆಂದರೆ ಯಾವ ವಿಮರ್ಶೆಯೂ ನಿರಾಕರಿಸಲಾಗದ ಗುಣಾತ್ಮಕ ಸಾಧನೆ ಈ ನವ್ಯ ಕತೆಗಳಿಗೆ ಇದೆ. ಆ ಹಿಂದಿನ ಪ್ರಧಾನ ಮಾದರಿಯು ಒಂದೇ ಆಗಿದ್ದರೆ ನವ್ಯ ಕತೆಗಳಲ್ಲಿ ಒಂದಕ್ಕಿಂತ ಹೆಚ್ಚು ಮಾದರಿಗಳಿವೆ. ಲಂಕೇಶ್, ಅನಂತಮೂರ್ತಿ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಸದಾಶಿವ, ರಾಮಚಂದ್ರಶರ್ಮ, ತೇಜಸ್ವಿ, ಬೇಸಗರಹಳ್ಳಿ ರಾಮಣ್ಣ ಹೀಗೆ ಹಲವರು ತಮ್ಮ ತಮ್ಮ ಮಾದರಿಗಳನ್ನು ಬೆಳೆಸಿದರು. ಇವೆಲ್ಲವು ಈಗ ಬರೆಯುವ ಕತೆಗಾರರಲ್ಲಿ ಬೆರೆತುಕೊಳ್ಳುತ್ತಿವೆ"[೧೪೨] ಎಂದು ಹೇಳುತ್ತಾರೆ. ಇದರಿಂದ ಈ ಒಟ್ಟು ಕಥಾಸಾಹಿತ್ಯದ ಮಹತ್ವವು ಈಗ ಸಾಧಿತವಾಗಿ ಹೋಗಿದೆ ಎಂದು ಹೇಳಬಹುದು. ಅಂದರೆ ಯಾವುದೇ ಕಥಾವಸ್ತು ಒಂದು

ಸಿದ್ಧಾಂತವನ್ನು ಹೇಳುತ್ತಾ ಆ ಸಿದ್ಧಾಂತವನ್ನು ಮೀರುವ ಸ್ಥಿತಿಗೆ ಹೋಗಿರುತ್ತದೆ. ಹೇಗೆ ನವ್ಯ ಕತೆಗಾರರಲ್ಲಿ ಸಿದ್ಧಾಂತ ಮೀರುವ ಪ್ರವೃತ್ತಿ ಹೊಂದಿದ್ದವು ಎನ್ನುವುದನ್ನು ಕರೀಗೌಡ ಬೀಚನಹಳ್ಳಿ ವ್ಯಷ್ಟಿ ಸಮಷ್ಟಿ ಕೃತಿಯಿಂದ ತಿಳಿಯಬಹುದು.

ಕೆ.ವಿ.ನಾರಾಯಣರು ಬೆಸಗರಹಳ್ಳಿ ರಾಮಣ್ಣನವರ 'ಕಣಜ' ಕಥಾ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ರಾಮಣ್ಣನವರ ಕಥಾ ಪರಂಪರೆಯ ವಸ್ತು ವೈವಿಧ್ಯತೆ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಕತೆಗಾರನ ಮೊದಲ ವಸ್ತು ತನ್ನ ಸುತ್ತಲಿನ ಹಾಗೂ ತನ್ನ ಊರಿನ ಪರಿಸರ ಹೊಂದಿರುತ್ತದೆ ಎನ್ನುವುದಕ್ಕೆ ರಾಮಣ್ಣನವರ ಕತೆಗಳೇ ಸಾಕ್ಷಿ ಎಂದು ಹೇಳಬಹುದು. ರಾಮಣ್ಣನವರ ಕಥಾ ಚಿಂತನೆ ಮಾದರಿಗೆ ಮಾಸ್ತಿಯವರ ಕಥೆಗಳ ನಿಲುವು ಹೊಂದಿದೆ. ಹಾಗಾಗಿ ಅವರ ಕತೆಗಳ ವಸ್ತುಗಳು 'ಸರಕಾರಿ ಆಸ್ಪತ್ರೆಗಳು, ನ್ಯಾಯಾಲಯಗಳು, ಖಾಸಗಿ ಡಾಕ್ಟರು, ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು, ಗಾಂಧಿ' ಹೀಗೆ ಸಮಾಜದಲ್ಲಿ ಜನರ ಸೇವೆ ಸಲ್ಲಿಸುವವರು ಸಾಮಾನ್ಯ ಜನರನ್ನು ಸಿನಿಕರಾಗಿ ನೋಡುವುದನ್ನು ಹೊಂದಿದೆ. ಹಾಗಾಗಿ ಅಂಥ ವಸ್ತುವನ್ನು ತಮ್ಮ ಕಥಾಭಿತ್ತಿಯಲ್ಲಿ ರಾಮಣ್ಣನವರು ತೋರಿಸಿದ್ದಾರೆ. ಹಾಗಾಗಿ ಕೆ.ವಿ.ಎನ್. ಅವರು ಮುನ್ನುಡಿಯಲ್ಲಿ ಹೇಳುವಂತೆ "ಈ ಕತೆಗಳು ಹಳ್ಳಿಯ ಪರಿಸರವನ್ನು ಹೊಂದಿವೆಯಾದರೂ ತಿರುಳಿನಲ್ಲಿ ಕಾಲದೇಶ ವಿಶೇಷಗಳಿಂದ ಬಿಡುಗಡೆ ಪಡೆದ ಮಾನವ ಸ್ವಭಾವದ ಅನ್ವೇಷಣೆಯಲ್ಲಿ ಆಸಕ್ತವಾಗಿದೆ. 'ಸುಗ್ಗಿ'ಯಲ್ಲಿ ಫಲವಂತಿಕೆಯ ವಿವರವಾಗಿ ಬರುವ ತಾಯಿ ಹಾಗೂ ಬೆಳಸು ಆಚರಣೆಯಾಗಿ ಬರುವ ಧಾನ್ಯದ ಪೂಜೆ, ಹಾಡುಗಳು ಕತೆಗೆ ವರ್ತಮಾನವನ್ನು ಮೀರುವ ಶಕ್ತಿಯನ್ನು ಒದಗಿಸುತ್ತದೆ. ಒಡೆದ ಮನಗಳು, ಒಡೆಯಲಿದ್ದ ಮನೆಗಳು ಒಂದಾಗುವುದು, ಸರೋಜಳಿಗೆ ಮಗು ಜನಿಸುವುದು ಕತೆಯ ಕೊನೆಯ ತಿರುವುಗಳಾಗಿ ಬರುವ ಮೂಲಕ ನೆರವಾಗುವಂತಿವೆ. ಇದು ಮಾಸ್ತಿಯವರ ಮಾದರಿಯ ಕಥನ"[೧೪೩] ಎಂದಿರುವರು. ಮಾನವ ಮತ್ತು ಮಾನವೀಯ ಚಿಂತನೆಗಳ ಮೌಲ್ಯಗಳ ಬಗ್ಗೆ ವ್ಯಕ್ತಪಡಿಸುತ್ತವೆ. ರಾಮಣ್ಣನವರ ಕತೆಯ ತಾತ್ವಿಕತೆ ಗುರುತಿಸುವ ಹಳ್ಳಿ ತನ್ನೊಳಗಿನ ವಿರೋಧ ಮತ್ತು ವೈರುಧ್ಯಗಳನ್ನು ಅನಾವರಣಗೊಳಿಸುವ ಕಡೆಗೆ ಹೊರಳುತ್ತದೆ. ಈ ತರವಾದ ಅಂಶಗಳನ್ನು ತಿಳಿಸುತ್ತಾ ಸಾಮಾಜಿಕ ಪಿಡುಗು, ಅಧಿಕಾರಗಳ ನಿರ್ಲಕ್ಷ್ಯತನಗಳು, ದೌರ್ಜನ್ಯಗಳು ಇನ್ನೂ ಅನೇಕ ವಸ್ತುಗಳನ್ನು ಆಧರಿಸಿ ತಿಳಿಸುತ್ತವೆ. ನವ್ಯಕಾಲದ ಮನುಷ್ಯ ಸಂಬಂಧಗಳ ಕರಾಳ ಮುಖ ಸಾಧ್ಯತೆಗಳನ್ನು ಹುಡುಕುತ್ತಾ ಹೊರಡುವ ರಾಮಣ್ಣನವರ ಕತೆಗಳು ಮನುಷ್ಯನ ಪರಿವರ್ತನೆ ಹಾದಿಯ ಸಾಧ್ಯತೆಯಲ್ಲಿ ನಂಬಿಕೆಯನ್ನು ಹೊಂದಲು ಅವಕಾಶಿಸುತ್ತವೆ.

ಕೆ.ವೈ.ನಾರಾಯಣಸ್ವಾಮಿಯವರ 'ಆಡುವ ಗಿಣಿಯೊಂದ ಕಳಿಸಮ್ಮ' ಕವನ ಸಂಕಲನಕ್ಕೆ 'ದಾರಿ ಸಾಗುವುದೆಂತೋ ನೋಡಬೇಕು' ಶೀರ್ಷಿಕೆಯಲ್ಲಿ ಮುನ್ನುಡಿಯನ್ನು ಬರೆದಿದ್ದಾರೆ. ಇಲ್ಲಿಯ ಕವಿತೆಗಳು ಹಿಂದಿನ ನೆನಪುಗಳನ್ನು ಬಿಚ್ಚಿಡುತ್ತವೆ. ಅದು ಬೇಂದ್ರೆ, ಕುವೆಂಪು, ಪುತಿನ ಹಾಗೆಯೇ ಭಾಷೆಯ ಸ್ವರೂಪ ಹಲವು ರೀತಿಯ ಹಿಂದಿನ ಸಾಹಿತ್ಯದ ಸ್ವರೂಪ ಇತ್ತೀಚಿಗೆ ಕಾಡಿದೆ, ಎಂದು

ಈ ಕವನ ಸಂಕಲನದ ಮುನ್ನುಡಿಯಲ್ಲಿ ಕೆ.ವಿ.ಎನ್. ಅವರು ಅಭಿಪ್ರಾಯ ಪಡುತ್ತಾರೆ. ಯಾವುದೇ ಕಾಲದ ಕವಿತೆಯಾಗಿರಬಹುದು. ಆದರೆ ಭಾಷೆ ರಚನೆಯು ಮುಖ್ಯವಾಗಿರುತ್ತದೆ ಎಂದು ತಿಳಿಯುತ್ತೇವೆ. ಕೆ.ವಿ.ಎನ್. ಅವರು ಹೇಳುವಂತೆ "ಕವಿತೆಗಳ ಭಾಷೆ ಹೀಗಾಗಿ ಪಾರದರ್ಶಕವಲ್ಲ. ಅನುಭವ ಕಥನದಲ್ಲಿ ತೊಡಗುವುದಾದರೆ ಭಾಷೆ ತೋರಿಸುವ ಕೆಲಸವನ್ನು ಮಾಡುತ್ತ ತನ್ನ ಮೂಲಕ ನೋಡಲು ಅನುವು ಮಾಡಿಕೊಡುತ್ತದೆ ಅಥವಾ ತನ್ನನ್ನು ಬಿಗಿ ಹಲಗೆ ಮಾಡಿಕೊಂಡು ಅನಂತದತ್ತ ಹಾರಲು ಅವಕಾಶ ನೀಡುತ್ತದೆ. ಆದರೆ ಈ ಕವಿತೆಗಳು ಈ ಮಾದರಿಯಲ್ಲಿಲ್ಲ.

ಇಲ್ಲಿ ಭಾಷಾ ಶರೀರವೇ ಆಕರ. ಅದರ ಅರ್ಥವಂತಿಕೆಯೇ ಕವಿತೆ ನೆರಳು. ಕನ್ನಡ ಕವಿತಾ ಲೋಕದಲ್ಲಿ ಈ ಮಾದರಿಯ ಕವಿತೆಗಳು ಅಪರೂಪವೇನಲ್ಲ. ಹಾಗೇ ನೋಡಿದರೆ ಬೇಂದ್ರೆಯವರ ಮಾತಿಗೆ ಮಂತ್ರದ ನೆಲೆ ಒದಗಿಸಲು ಹವಣಿಸುತ್ತ ಬರೆದ ಕವಿತೆಗಳಲ್ಲಿ ಈ ದಿಸೆ ನಿಚ್ಚಳವಾಗಿದೆ"[೧೪೪] ಎಂದು ಹೇಳುತ್ತಾರೆ. ಇಲ್ಲಿ ಕವನಸಂಕಲನದ ಮುನ್ನುಡಿಯಲ್ಲಿ ಭಾಷೆಯ ರಚನೆಗೆ ಹೆಚ್ಚು ಒತ್ತುಕೊಡಲಾಗಿದೆ. ತದನಂತರ ಕಾವ್ಯದ ಪರಂಪರೆ ಹಿನ್ನೆಲೆಯ ಕುರಿತಂತೆ ನವೋದಯ ಕವಿಗಳು ಮುನ್ನೆಲೆಗೆ ಬರುತ್ತಾರೆ. ಅವರ ಪ್ರೇರಣೆ, ಪ್ರಭಾವಗಳು ಕಾಲ ಗತಿಸಿದ ಹಾಗೇ ಕಾವ್ಯದ ಅಭಿರುಚಿ, ರೂಪಕ, ಭಾಷೆ, ರಚನೆ, ವಿನ್ಯಾಸ ಎಲ್ಲ ಪ್ರೇರಣೆಗಳಿಂದ ವಾಸ್ತವ ನೆಲೆಯಲ್ಲಿ ಕಂಡುಬರುತ್ತವೆ.

ಕೆ.ವಿ.ಎನ್. ಅವರು ಇತ್ತೀಚಿನ ಕವಿಗಳಲ್ಲಿ ಕನ್ನಡದ ಕವಿತೆಯಲ್ಲಿ ಪ್ರಾದೇಶಿಕ ಮಿತಭಾಷೆಯ ಪದಗಳು ಅನ್ಯಭಾಷಿಕ ಪದಗಳನ್ನು ತರಲು ಹಿಂದೆಮುಂದೆ ನೋಡುವುದಿಲ್ಲ ಬಳಕೆಗೆ ತರುತ್ತಾರೆ ಎಂದಿದ್ದಾರೆ. ಸಂದರ್ಭಕ್ಕೆ ಅನುಗುಣವಾಗಿ ಪದಬಳಕೆ ಮಾಡಲಾಗಿದೆ. ಆದರೆ ನಮ್ಮ ಕನ್ನಡ ಮೂಲಪದಗಳ ಬಳಕೆ ಕಡಿಮೆ. ಕೊನೆಗೆ ಆಡುಮಾತಿನ ಭಾಷೆಯನ್ನು ಬಳಕೆ ಮಾಡುವವರು ಇದ್ದಾರೆ. ಹಾಗಾಗಿ ಕವಿತೆಯ ಪದಗಳಲ್ಲಿ ಹೊಸ ವಿನ್ಯಾಸವಾಗಿ ಕಂಡುಬರುತ್ತವೆ ಎಂದು ಕೆವಿಎನ್ ಅಭಿಪ್ರಾಯಪಡುತ್ತಾರೆ.

ದು.ಸರಸ್ವತಿಯವರ 'ಈಗೇನ್ ಮಾಡೀರಿ' ಕಥನಕ್ಕೆ ಕೆ.ವಿ.ಎನ್. ಅವರು ಮುನ್ನುಡಿ ಬರೆದಿದ್ದಾರೆ. ಈ ಮುನ್ನುಡಿಯಲ್ಲಿ ಸಮಾಜದಲ್ಲಿಯ ಸ್ಥಿತಿಯನ್ನು ಕುರಿತಂತೆ ಪ್ರಶ್ನೆ ಮಾಡುತ್ತಾ ಕೃತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. "ಅಕ್ಷರ ಜಗತ್ತಿನಲ್ಲಿ ಒಂದು ರೀತಿಯ ಕುತೂಹಲವಿದೆ. ಅದು ಇತ್ತೀಚಿನ ದಿನಗಳಲ್ಲಿ ದಲಿತರ, ಅಲ್ಪಸಂಖ್ಯಾತರ, ನಿರ್ಗತಿಕರ ದನಿ ಕಳೆದು ಹೋದವರ ನೆನಪಿನ ಜಗತ್ತು ಅಕ್ಷರಗಳಲ್ಲಿ ಮೈತಳೆಯ ತೊಡಗಿದಂತೆ ಓದುಗರು ಉತ್ಸಾಹಿಕರಾಗುತ್ತಾರೆ. ಅಂತಹ ಬರಹಗಳನ್ನು ವಿಶ್ಲೇಷಿಸುವವರು ಉಮೇದಿನಿಂದ ಆ ಬರಹಗಳ ಪರವಾಗಿ ಅವುಗಳಿಗೊಂದು ಚೌಕಟ್ಟು ಕಟ್ಟುತ್ತಾರೆ. ಏಕೆ ಹೀಗೆ"[೧೪೫] ಎಂದು ಕೆ.ವಿ.ಎನ್. ಹೇಳುತ್ತಾರೆ. ಈ ಹಿನ್ನೆಲೆಯಿಂದ ಬರಹಗಾರರದು ಒಂದು ಚಿಂತನೆಯಾದರೆ ಓದುಗರದ್ದು ಒಂದು ಚಿಂತನೆಯಾಗಿರುತ್ತದೆ. ಹಾಗೆಯೇ ಸಮಾಜ ಎಂದ ಮೇಲೆ ಎಲ್ಲಾ ರೀತಿ ಸ್ಥಿತಿಯನ್ನು ಒಳಗೊಂಡಿರುತ್ತದೆ. ಇಲ್ಲಿ ಮಾನವೀಯತೆ, ನಿರ್ಗತಿಕರು, ದನಿ ಕಳೆದುಕೊಂಡವರ ಸ್ಥಿತಿ ಏನು? ಉಳ್ಳವರು ಇವರನ್ನು ಬದುಕಲು ಬಿಡುವುದಿಲ್ಲ.

ತಮ್ಮ ಸ್ವಾರ್ಥಕ್ಕಾಗಿ ಅಥವಾ ತಮ್ಮ ಸಂಸ್ಕೃತಿಯನ್ನು ಇವರ ಮೇಲೆ ಹೇರುವುದು. ಹಾಗಾಗಿ ಇಂತ ಬರವಣಿಗೆ ತುಂಬಾ ಅವಶ್ಯಕವಾಗಿದೆ. ಇಂತಹ ಬರವಣಿಗೆಯ ಕ್ರಮವನ್ನು ಓದುಗರು ಎದುರು ನೋಡುತ್ತಾರೆ. ದು.ಸರಸ್ವತಿಯವರ 'ಈಗೇನ್ ಮಾಡೀರಿ' ಕಥಾನಕ ಹೆಣ್ಣಿನ ಸ್ಥಿತಿಯನ್ನು ಪ್ರಶ್ನೆ ಮಾಡುತ್ತಾ ಸಮಾಜದ ಸಮುದಾಯದ ಅಂಚಿನ ಸ್ಥಿತಿಯಲ್ಲಿರುವ ಹೆಣ್ಣುಮಕ್ಕಳ ಪರಿಸ್ಥಿತಿ ಬಗ್ಗೆ ವಿಶ್ಲೇಷಣೆ ಮಾಡುತ್ತದೆ.

ರಾಘವೇಂದ್ರ ಪಾಟೀಲರ 'ಬಾಳವ್ವನ ಕನಸುಗಳು', 'ನೀಳ್ಗತೆ' ಕೃತಿಗೆ ಕೆ.ವಿ.ಎನ್. ಅವರು ಮುನ್ನುಡಿ ಬರೆಯುತ್ತಾ ಕನ್ನಡದ ವಾಸ್ತವವಾದಿ ಕಥನ ಪರಂಪರೆ ಹಲವು ವಿನ್ಯಾಸಗಳ ಮೂಲಕ ಅವರ ಕಥನದ ಮಾದರಿಯ ಸಾಧ್ಯತೆಗಳೆಲ್ಲವೂ ವಾಸ್ತವವಾದಿ ನೆಲೆಯಲ್ಲಿ ರಾಘವೇಂದ್ರ ಪಾಟೀಲರು ಕಟ್ಟಿಕೊಟ್ಟಿದ್ದಾರೆ. ವಿಚಾರವನ್ನು ವಸ್ತು ಭಾಷೆಯ ಕ್ರಮ ಬರವಣಿಗೆ ಮೂಲಕ ಸಣ್ಣ ಸಣ್ಣ ಕತೆಗಳು ಸಮಕಾಲೀನ ಸ್ಥಿತಿಯನ್ನು ಹೇಳುತ್ತಿವೆ. ಈ ಕಥನದ ವ್ಯಾಪ್ತಿಯ ಪಾತ್ರಗಳು ಹಿಂದಿನವುಗಳು ಎನಿಸಿಕೊಂಡಿದ್ದರೂ ಪ್ರಸ್ತುತ ಸಂಗತಿಗಳನ್ನು ತಿಳಿಸಿವೆ. ಕೆ.ವಿ.ಎನ್. ಅವರು ಹೇಳುವಂತೆ "ದೈನಿಕಗಳ ನೆಲೆಗಳಿಂದ ಕಥನವನ್ನು ಬಿಡುಗಡೆ ಮಾಡಲು ಬೇಕಾದ ತಾತ್ವಿಕ ಆಸಕ್ತಿಗಳನ್ನು ಷರೀಫಜ್ಜ, ಗುರುಪಾದಸ್ವಾಮಿ, ಹುಸೇನಿಯ ಹೋತ, ಅವನ ಬಗ್ಗೆ ಬಾಳಮ್ಮ ಕಾಣುವ ಕನಸು ಇವೇ ಮುಂತಾದ ಸಂಗತಿಗಳಲ್ಲಿ ಕತೆಯು ಕಂಡುಕೊಂಡಿದೆ. ಕತೆಯ ಕೊನೆಯಲ್ಲಿ ಷರೀಫಜ್ಜ ಹಾಗೂ ಹುಸೇನಿ ಇವರಿಬ್ಬರು ಮಂಗಮಾಯವಾದರೆ ಬುಡ್ಡುಸಾಬ ಹುಡುಕುತ್ತಾ ಹೋಗಿ ಮಾವಿನ ಬನದಲ್ಲಿ ಏಕಾಂಗಿಯಾಗಿ ನಿಲ್ಲುತ್ತಾನೆ. ದೈನಿಕಗಳಲ್ಲಿ ಉತ್ಪಾದನೆಯ ಚಟುವಟಿಕೆಗಳಿಂದ ನಮಗೆ ತಿಳಿಸುವುದಕ್ಕಿಂತ 'ಮನೆ'ಯಲ್ಲಿ ಉಳಿದ ಹೆಣ್ಣುಗಳ ಬಗೆಗೆ ಹೆಚ್ಚನ್ನು ತಿಳಿಸುತ್ತದೆ. ದೈನಿಕಗಳಲ್ಲಿ ಹೆಣ್ಣುಗಳು ವಹಿಸುವ ಪಾತ್ರದ ಮೂಲಕವೂ ನಮ್ಮ ಅರಿವು ಪೋಷಿತವಾಗುತ್ತದೆ"[೧೪೬] ಎಂದಿರುವರು. ಇಲ್ಲಿ ಕನಸು ಕಾಣುವುದು ವಾಸ್ತವ ಅಲ್ಲ. ಅದು ಭಾವನೆಯ ವಾಸ್ತವ. ಬಾಳವ್ವ ಕಾಣುವ ಕನಸು ಹಾಗೂ ಬುಡ್ಡುಸಾಬ ತಮ್ಮ ಅಸ್ಮಿತೆಗಾಗಿ ತನ್ನತನವನ್ನು ಹುಡುಕುವುದು ಅವರ ಅಸ್ತಿತ್ವವಾಗಿದೆ. ಇಲ್ಲಿ ನವ್ಯದ ಪ್ರವೃತ್ತಿ ಕಂಡುಬಂದು ಮತ್ತೆ ಇದ್ದುದರಲ್ಲಿ ಅನುಭವಿಸುವ ತಮ್ಮ ದೈನಿಕ ಪ್ರವೃತ್ತಿ ಕಂಡುಬರುತ್ತದೆ. ಹೀಗೆ ನವ್ಯದ ಚಿಂತನೆಯಲ್ಲಿ ಕರೀಗೌಡ ಬೀಚನಹಳ್ಳಿ ಹಾಗೂ ಬೆಸಗರಹಳ್ಳಿ ರಾಮಣ್ಣ, ರಾಘವೇಂದ್ರರವರ ಕತೆಗಳು ಇದೇ ಪ್ರವೃತ್ತಿಯ ನೆಲೆಯನ್ನು ಹೊಂದಿ ವಾಸ್ತವತೆಯನ್ನು ಕಂಡುಕೊಳ್ಳುತ್ತವೆ.

ಅರುಣ್ ಜೋಳದಕೂಡ್ಲಿಗಿಯವರ 'ಅವ್ವನ ಅಂಗನವಾಡಿ' ಕವನ ಸಂಕಲನಕ್ಕೆ ಕೆ.ವಿ.ಎನ್. ಮುನ್ನುಡಿ ಬರೆಯುತ್ತಾ "ಚಿಕ್ಕವರು ಕವಿತೆ ಬರೆಯಲು ತೊಡಗಿದಾಗ ಅವರು ಲೋಕವನ್ನು ತಮ್ಮ ದಿನದಿನದ ಅನುಭವಗಳನ್ನು ಮಂಡಿಸಲು ತಮ್ಮದೇ ಆದ ದಾರಿಗಳನ್ನು ಹುಡುಕುತ್ತಿರುತ್ತಾರೆ"[೧೪೭] ಎಂದಿರುವರು. ಇವರ ಮಾತಿನಲ್ಲಿ ಹೊಸಬರಿಗೆ ಸಾಹಿತ್ಯ ಸಿದ್ಧಾಂತ ಇಲ್ಲ ಎಂದು ಹೇಳಿರಬಹುದು ಅಥವಾ ಸಮಾಜದಲ್ಲಿ ನಡೆಯುವ ಅಂಕುಡೊಂಕು ಅನ್ಯಾಯಗಳಿಗೆ ಸಮಾಜದ ವ್ಯಕ್ತಿಯಾಗಿ

ಧ್ವನಿಗೂಡಿಸಿರಬಹುದು ಎಂದು ಹೇಳಿರಬಹುದು. ಆದರೆ ಕೆ.ವಿ.ಎನ್. ಅನುಭವಪ್ರಜ್ಞೆಯಿಂದ ಲೋಕಗ್ರಹಿಕೆ, ಸಮಾಜಗ್ರಹಿಕೆಯಾಗಿ ಅರುಣ್‌ರಂತವರು ತಮ್ಮ ಸೃಜನಶೀಲ ಬರವಣಿಗೆಗೆ ತೊಡಗಿದ್ದಾರೆ ಎಂದು ಹೇಳಿರಬಹುದು. ಹಾಗೆಯೇ ಅರುಣ್‌ರ ಎಲ್ಲಾ ಪುರಾಣ, ಚರಿತ್ರೆ, ಸಮುದಾಯ, ಪ್ರತಿಮೆಗಳು, ರೂಪಕಗಳ ಪರವಾದ ನಿಲುವು ಅವರ ಕವಿತೆಗಳಲ್ಲಿ ಕಂಡುಬರುವುದಿಲ್ಲ ಎಂಬ ಅಭಿಪ್ರಾಯವನ್ನು ಕೆ.ವಿ.ಎನ್. ಅವರು ವ್ಯಕ್ತಪಡಿಸಿದ್ದಾರೆ.

ಅಶೋಕ ಕುಮಾರ ರಂಜೇರೆ ಅವರು 'ಸಾಹಿತ್ಯ ಮತ್ತು ಇತಿಹಾಸದ ಸಂಬಂಧಗಳು' ಕೃತಿಯ ಮುನ್ನುಡಿಯಲ್ಲಿ ಕೆ.ವಿ.ಎನ್. ಅವರು ಸಾಹಿತ್ಯ ಚರಿತ್ರೆ ಸಂಬಂಧಗಳ ಬಗ್ಗೆ ಚರ್ಚಿಸುತ್ತಾರೆ. ಅವರ 'ಬೇರು ಕಾಂಡ ಚಿಗುರು' ಕೃತಿಯಲ್ಲಿ "ಸಾಹಿತ್ಯದಲ್ಲಿ ಚರಿತ್ರೆಯೂ ಚರಿತ್ರೆಯಲ್ಲಿ ಸಾಹಿತ್ಯವೂ"[೧೪೮] ಎಂಬ ಲೇಖನ ಗಮನಿಸಿದರೆ ಸಾಹಿತ್ಯ ಚರಿತ್ರೆ ಅವಿನಾಭಾವ ಸಂಬಂಧಗಳಾಗಿ ವಿಸ್ತರಿಸಿಕೊಂಡಿವೆ. ಆದರೆ ಅಶೋಕರ ಕೃತಿಯ ಮುನ್ನುಡಿಯಲ್ಲಿ "ಚರಿತ್ರೆ ಅಧಿಕೃತ ಸಾಹಿತ್ಯವಲ್ಲ ಎನ್ನುವುದು ಒಂದು ವಾದದ ತಿರುಳು. ಚರಿತ್ರೆಯ ಅಧಿಕೃತತೆ ಸಾಹಿತ್ಯದ ಕಾಳಜಿಯಲ್ಲ. ಅದು ತನ್ನ ಅವಶ್ಯಕತೆಗೆ ಅನುಗುಣವಾಗಿ ಚರಿತ್ರೆಯನ್ನು ರೂಪಿಸಿಕೊಳ್ಳುತ್ತದೆ ಎನ್ನುವುದು ಇನ್ನೊಂದು ವಾದದ ತಿರುಳು"[೧೪೯] ಎಂದು ಹೇಳುತ್ತಾರೆ. ಸಂಸ, ಕಾರ್ನಾಡ್, ತರಾಸು ಇತ್ಯಾದಿಯವರೆಲ್ಲ ಚರಿತ್ರೆಯ ವಸ್ತು ಆಧರಿಸಿ ಮೌಲ್ಯಕ್ಕೊಳಪಡಿಸಿದ್ದಾರೆ. ರಾಜರ ಒಳರಾಜಕೀಯ ಆಡಳಿತ ಸಾಮರ್ಥ್ಯ ಜನರ ಬದುಕು ಇವುಗಳನ್ನು ಹೇಗೆ ಬಳಸಿಕೊಂಡಿವೆ ಎನ್ನುವುದಕ್ಕೆ ಕನ್ನಡ ಸಾಹಿತ್ಯದ ಅನೇಕ ಕಾದಂಬರಿಗಳು ಹಾಗೂ ನಾಟಕಗಳು ಇವೆ. ಆದರೆ ಚರಿತ್ರೆ ಚರಿತ್ರೆಯನ್ನು ಮಾತ್ರ ಹೇಳುತ್ತದೆ. ಅಲ್ಲಿ ಮೌಲ್ಯದೊಡನೆ ಸಂಬಂಧ ಇರುವುದಿಲ್ಲ ಎಂದು ತಿಳಿಯಬೇಕಾಗಿದೆ. ಇಲ್ಲಿ ಚರಿತ್ರೆ ಸಾಹಿತ್ಯದಲ್ಲಿ ಭಾಷೆ ರಚನೆ ಮುಖ್ಯವಾಗಿರುತ್ತದೆ. ಕತೆ, ಕಾದಂಬರಿ, ನಾಟಕ, ಪ್ರಬಂಧ ಇವುಗಳದೇ ಆದ ಸ್ವರೂಪದ ರಚನೆ ಬೇರೆ ಬೇರೆಯಾಗಿ ರೂಪುಗೊಂಡಿರುತ್ತದೆ. ಕೆ.ವಿ.ನಾರಾಯಣರ ಮುನ್ನುಡಿಗಳು ವಾಗ್ವಾದಗಳ ನೆಲೆಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಪುನಾರಚಿಸುವ ಮತ್ತು ಪುನಃ ಮೌಲ್ಯಕ್ಕೊಳಪಡಿಸುವ ಚಿಂತನೆ ಹೊಂದಿವೆ. ಇನ್ನೂ ಅವರ ಅನೇಕ ಮುನ್ನುಡಿಗಳಿವೆ. ಅಧ್ಯಯನದ ಮಿತಿಯಿಂದ ಕೆಲವು ಮುನ್ನುಡಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ ಮತ್ತು ಬಿಡಲಾಗಿದೆ.

### ೫.೧೧. ಡಿ.ಆರ್.ನಾಗರಾಜ್

ಡಿ.ಆರ್.ನಾಗರಾಜ್ ಅವರು ಕನ್ನಡ ವಿಮರ್ಶಾಲೋಕದಲ್ಲಿ ಹಲವು ಮಾದರಿಯ ಸಾಹಿತ್ಯಕ ಚಿಂತನೆಯನ್ನು ನಡೆಸಿದವರು. ಅವರ ಬರಹಗಳು ಮುಖ್ಯವಾಗಿ ಸಂಭ್ರಮ ರೀತಿಯಲ್ಲಿರದೇ ಸಮಾಜಪರವಾದ ಧ್ವನಿಯಾಗಿ ದಲಿತ ಚಿಂತನೆ, ರಾಜಕೀಯ ಚಿಂತನೆ, ಸಂಸ್ಕೃತಿ ಚಿಂತನೆಯ ನೆಲೆಯಲ್ಲಿ ರೂಪಿತಗೊಂಡಿವೆ. ಅವರ ವಿಮರ್ಶಾಸಾಹಿತ್ಯ ಅತಿ ಹೆಚ್ಚಾಗಿ ರೂಪಕಗಳನ್ನು ಒಳಗೊಂಡು ಅತ್ಯಂತ ಕಾವ್ಯಾತ್ಮಕವಾಗಿ, ಕಲಾತ್ಮಕವಾಗಿ ಮೂಡಿಸಿದ್ದಾರೆ. ಅವರ ವಿಚಾರಗಳು ಒಂದು ವಿಚಾರದಿಂದ ಮತ್ತೊಂದು ವಿಚಾರದೆಡೆಗೆ ಜಿಗಿಯುತ್ತಾ ತಮ್ಮ ಶೈಲಿ, ರಚನೆ, ಭಾಷೆಯಲ್ಲಿ ಪ್ರಯೋಗಿಸಿರುವರು.

ಇವರು ಕನ್ನಡ ವಿಮರ್ಶೆಯ ಸಂಸ್ಕೃತಿ ಚಿಂತನೆಯಲ್ಲಿ ಅಗ್ರಗಣ್ಯರಾದರೂ ಕನ್ನಡ ದೇಸಿ ಚಿಂತನೆಗೆ ಹೆಚ್ಚು ಒತ್ತುಕೊಟ್ಟವರು. ಪ್ರಾಪಂಚಿಕವಾಗಿ ಡಿ.ಆರ್. ಅವರ ಸಾಹಿತ್ಯಕ ಗ್ರಹಿಕೆಗಳು ಪಾಶ್ಚಾತ್ಯ ಚಿಂತನೆ, ದೇಸೀಯ ಚಿಂತನೆಯಲ್ಲಿ ಜನರ ಅಭಿರುಚಿಗಳಿಗೆ ತಕ್ಕಂತೆ ಸಾಮಾಜಿಕ ನೆಲೆಗಳಲ್ಲಿ ಚರ್ಚಿಸುತ್ತಾರೆ. ಹಾಗೆಯೇ ಅವರ ಕನ್ನಡ ಸಾಹಿತ್ಯದ ಕೃತಿಗಳಿಗೆ ಮುನ್ನುಡಿ ಬರೆದಿರುವುದು ಕಡಿಮೆ. ಆದ್ದರಿಂದ ತಾವೇ ಬರೆದುಕೊಂಡಿರುವ ಮುನ್ನುಡಿಗಳು ಮುಖ್ಯವಾಗಿ ಸಾಂಸ್ಕೃತಿಕ ವಿಮರ್ಶೆಯನ್ನು ರೂಪಿಸುವಲ್ಲಿ ಮಹತ್ವವೆನಿಸಿವೆ.

'ಅಮೃತ ಮತ್ತು ಗರುಡ' ಕೃತಿಯ ಮುನ್ನುಡಿ ಭಾಗದಲ್ಲಿ ಮನುಚಕ್ರವರ್ತಿಯವರು ಡಿ.ಆರ್.ನಾಗರಾಜ್ ಅವರ ಚಿಂತನೆಯಲ್ಲಿ ಮೂರನೇ ಜಗತ್ತಿನ ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ. ಹಾಗಾಗಿ ಅವರು ಯಾವುದೇ ರೀತಿಯಲ್ಲಿ ಸಾಹಿತ್ಯದ ಚಿಂತನೆ, ವಾಗ್ವಾದಗಳು, ತತ್ವಗಳು, ಸಿದ್ಧಾಂತಗಳು ಕಂಡುಬಂದರೂ ಈ ನೆಲೆಗಳಲ್ಲಿ ಡಿ.ಆರ್. ಅವರ ತಮ್ಮ ನೆಲೆಯಲ್ಲಿ ರೂಪಿಸಿಕೊಂಡು ಭಾಷೆ, ಜನಾಂಗ, ಸಮಾಜ, ಸಂಸ್ಕೃತಿ, ಸಮುದಾಯ, ಬಡವ, ದಲಿತ ಪರವಾದ ನಿಲುವಿನಿಂದ ಅವುಗಳ ಪ್ರಮಾಣಗಳನ್ನು ಪರಿಶೀಲಿಸಿ ಜನಸಾಮಾನ್ಯರನ್ನು ಕೇಂದ್ರೀಕರಿಸಿ ಅವರಿಗೆ ಮುಟ್ಟಿಸುವಂತೆ ರೂಪಕ ಚೌಕಟ್ಟುಗಳ ಮೂಲಕ ತಮ್ಮ ಅಭಿವ್ಯಕ್ತಿಯನ್ನು ಅವರ ಸಾಹಿತ್ಯ ರಚನೆಯಲ್ಲಿ ಕಂಡುಕೊಳ್ಳಬಹುದು.

ಯು.ಆರ್.ಅನಂತಮೂರ್ತಿ ಅವರ 'ಭಾರತೀಪುರ' ಕಾದಂಬರಿಯ ಇಂಗ್ಲಿಷ್ ಅನುವಾದಕ್ಕೆ ಡಿ.ಆರ್.ನಾಗರಾಜ್ ಅವರು ಮುನ್ನುಡಿ ಬರೆಯುತ್ತಾ "ಅದೊಂದು ಬದಲಾವಣೆ ಮತ್ತು ಪ್ರತಿಭಟನೆಗಳ ಸಾಧ್ಯತೆಯ ಶೋಧ"[೧೫೦] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಅನಂತಮೂರ್ತಿಯವರು ತಮ್ಮ ಕಾಲಘಟ್ಟದ ಸಂದರ್ಭಗಳನ್ನಿಟ್ಟುಕೊಂಡು ಬಂಡಾಯದ ಮನೋಭಾವವನ್ನು ತಾಳಿರುವ ನಿಲುವು ಕಂಡುಬರುತ್ತದೆ. ಏಕೆಂದರೆ ಈ ಕಾದಂಬರಿಯ ಮುನ್ನುಡಿಯನ್ನು ಹಿನ್ನೆಲೆಯಾಗಿ ಗ್ರಹಿಸಬಹುದು. ಜೊತೆಗೆ 'ಭಾರತೀಪುರ' ಕಾದಂಬರಿಯಲ್ಲಿ ಜಗನ್ನಾಥನ ಪಾತ್ರದ ಮೂಲಕ ದಾರ್ಶನಿಕ ಮಾದರಿಯ ಬಂಡಾಯವನ್ನು ಪ್ರತಿನಿಧಿಸುತ್ತಾನೆ. ಹೀಗಾಗಿ ಡಿ.ಆರ್. ಅವರ ನಿಲುವು ಈ ಕೃತಿಯ ಮುನ್ನುಡಿಯಲ್ಲಿದೆ. ಹಾಗೆಯೇ ಜಗನ್ನಾಥನ ಸಂಶಯ ಪ್ರವೃತ್ತಿ, ಜಾತಿವ್ಯವಸ್ಥೆಯ ಬಗೆಗಿನ ತನ್ನ ಪ್ರತಿಭಟನೆ ಕಾದಂಬರಿಯುದ್ದಕ್ಕೂ ಕಂಡುಬರುತ್ತದೆ. ಹೀಗಾಗಿ ಈ ಕಾದಂಬರಿಯ ನಿಲುವಿನಲ್ಲಿ ನವ್ಯಸಾಹಿತ್ಯವನ್ನು ಮೀರಿ ದಲಿತ ಮತ್ತು ಬಂಡಾಯದ ದಾರಿಯನ್ನು ಕಂಡುಕೊಳ್ಳುವ ನೆಲೆಗಳನ್ನು ಕಾಣಬಹುದು. ಈ ಕಾದಂಬರಿಯ ಮುನ್ನುಡಿಯಲ್ಲಿ ವ್ಯಕ್ತಗೊಂಡಂತೆ ಕನ್ನಡಿಗರಿಗೆ ಅಲ್ಲದೆ, ಇಂಗ್ಲಿಷ್ ಅನುವಾದದ ನೆಲೆಯಿಂದ ಈ ಮುನ್ನುಡಿಯಲ್ಲಿ ಇಂಗ್ಲಿಷ್ ಓದುವ ವರ್ಗಕ್ಕೆ ಬೇರೆಯ ಸ್ವರೂಪ ಪಡೆದಿದೆ. ಈ ಕಾದಂಬರಿಯ ತಾತ್ವಿಕತೆ ಕನ್ನಡ ಜನತೆಗೆ ಒಂದೇ ಅರ್ಥ ಹೊಂದಿದ್ದರೂ, ಇಂಗ್ಲಿಷ್ ಓದುವ ವರ್ಗಕ್ಕೆ ಹೆಚ್ಚಾಗಿ ಕಾದಂಬರಿಯ ಕಲಾತ್ಮಕ ಗುಣಗಳು ಮತ್ತು ರಾಜಕೀಯ ನಿಲುವುಗಳು, ವಾಗ್ವಾದಗಳ ಬಗ್ಗೆ ಅರಿವನ್ನು ಈ ಕಾದಂಬರಿಯ ಮುನ್ನುಡಿಯಲ್ಲಿ ಪ್ರಸ್ತಾಪಿಸಿ ಭಾರತೀಯ ಸಂಸ್ಕೃತಿ ಚಿಂತನೆಯ ನೆಲೆಗಳನ್ನು ತಿಳಿಸುತ್ತಾರೆ.

ಡಿ.ಆರ್.ನಾಗರಾಜ್ ಅವರು ತಮ್ಮ 'ಸಾಹಿತ್ಯ ಕಥನ' ಕೃತಿಯ ಮುನ್ನುಡಿ ಭಾಗದಲ್ಲಿ ಗ್ರಹಿಸುವಂತೆ ಹಳೆಯ ಸಾಹಿತ್ಯ ಅಧ್ಯಯನದ ಮಾದರಿಗಳು, ತತ್ವಗಳು, ಚಿಂತನೆಗಳನ್ನು ಕಾಲ ಕಾಲಕ್ಕೆ ಬದಲಿಸಬೇಕಾಗಬಹುದು. ಇದಕ್ಕೆ ನಮ್ಮ ಸಮಕಾಲೀನ ಸಂದರ್ಭಗಳು ಮುಖ್ಯ ಎಂಬ ಚಿಂತನೆ ಅವರಲ್ಲಿದೆ. ಹಾಗಾಗಿ ಮುನ್ನುಡಿಯಲ್ಲಿ "ಹಳೆಯ ವಿಕಲ್ಪಗಳಿಂದ ಬಿಡುಗಡೆಯ ಆಸೆ"[೧೫೧] ಎಂಬ ಡಿ.ಆರ್.ನಾಗರಾಜ್ ಅವರ ನಿಲುವಿನಿಂದ ಮಾನವ ವಿಕಾಸವಾದಂತೆ ಅವನ ಚರಿತ್ರೆಗಳು, ಬರವಣಿಗೆಗಳು, ಭಾಷೆ, ಸಂಸ್ಕೃತಿಯಲ್ಲಿ ಬೌದ್ಧಿಕ ಭಾವುಕ ವ್ಯಕ್ತಿತ್ವಗಳಲ್ಲಿ ಅನೇಕ ತರದ ಮಹತ್ವದ ಬದಲಾವಣೆಗಳಾಗಿವೆ. ಈ ಹಿನ್ನೆಲೆಯಿಂದ ಡಿ.ಆರ್.ನಾಗರಾಜ್ ಅವರ ಕನ್ನಡದ ಹಳೆಯ ಸಾಹಿತ್ಯ ಮಾದರಿಗಳು ಕಂಡುಕೊಂಡಂತೆ ಅವರ ಸಮಕಾಲೀನ ಸಾಹಿತ್ಯ ಚಿಂತನೆಯಲ್ಲಿ ಕಡಿಮೆ ವಿಕಲ್ಪಗಳಿರಬಹುದು. ಆದರೆ ಅವರು ಹಳೆಯ ವಿಕಲ್ಪತನದಿಂದ, ಹಳೆಯ ಚಿಂತನೆಯಿಂದ, ಹೊಸತನವನ್ನು ರೂಪಿಸಿಕೊಂಡಿದ್ದಾರೆ. ಅವುಗಳ ಮಹತ್ವದ ವಿಕಲ್ಪಗಳ ಮಾದರಿಗಳು ಮುನ್ನೆಲೆಗೆ ಬಂದಿವೆ. ಅತಿಯಾದ ಪಾಶ್ಚಿಮಾತ್ಯೀಕರಣದಿಂದಾಗಿ ದೇಸಿಯಂತಹ ಚಿಂತನೆಗಳನ್ನು ಹುಡುಕುವ ನೆಲೆ ಅವರ ವಿಮರ್ಶಾ ಕೃತಿಗಳಲ್ಲಿವೆ. ಹಾಗೆಯೇ ನವೋದಯ, ಪ್ರಗತಿಶೀಲ, ನವ್ಯ ಪಂಥಗಳಲ್ಲಿನ ತಮ್ಮ ಸಮಕಾಲೀನ ಬರಹಗಾರರ ಚಿಂತನೆಯನ್ನು, ವಿಮರ್ಶಾತ್ಮಕವಾದ ತಾತ್ವಿಕತೆಯನ್ನು ತಮ್ಮ ಸಾಹಿತ್ಯದಿಂದ ಓದುಗರಿಗೆ ತಿಳಿಯಪಡಿಸಿದ್ದಾರೆ.

"ಪಾಶ್ಚಿಮಾತ್ಯ ನಾಗರಿಕತೆ ಮಾನವ ಪ್ರಗತಿಯ ಶ್ರೇಷ್ಠರೂಪ ಎಂಬ ನಂಬಿಕೆ, ಮಾನವ ಪ್ರಗತಿಯ ಅಂತಿಮ ಅಳತೆಗೋಲು ಪಶ್ಚಿಮವೇ ಎಂಬ ನಂಬಿಕೆ ನಮ್ಮಲ್ಲಿ ಇನ್ನು ಭದ್ರವಾಗಿ ಕೂತಿರುವುದು ಮಾತ್ರವಲ್ಲ, ಅದು ಬೆಳೆಯುತ್ತಲೇ ಇದೆ. ಇಲ್ಲಿ ನಾನು ಪೂರ್ವ ಪಶ್ಚಿಮಗಳೆಂಬ ಸರಳ ವಿರೋಧಗಳನ್ನು ಆತ್ಯಂತಿಕ ಅರ್ಥದಲ್ಲಿ ಮಂಡಿಸುತ್ತಿಲ್ಲ. ಪೂರ್ವ ಮತ್ತು ಪಶ್ಚಿಮಗಳೆರಡೂ ಈಗ ಭೌಗೋಳಿಕ ವಿಂಗಡಣೆಗಳಾಗಿ ಉಳಿದಿಲ್ಲ. ಅವು ಸರ್ವತ್ರವಾಗಿ ಹೆಚ್ಚಿಸಿರುವ ವೈಚಾರಿಕ ವಿಕಲ್ಪಗಳಾಗಿ ಬಿಟ್ಟಿವೆ. ಪಶ್ಚಿಮದೊಳಗೆ ಪೂರ್ವವೂ, ಪೂರ್ವದೊಳಗೆ ಪಶ್ಚಿಮವೂ ಹಬ್ಬಿವೆ. ಆದರೆ, ಪಾಶ್ಚಿಮಾತ್ಯ ನಾಗರಿಕತೆ ಒಂದು ನಿರ್ದಿಷ್ಟ ಬಗೆಯ ಅಭಿವೃದ್ಧಿ ಪಥ. ಒಂದು ನಿರ್ದಿಷ್ಟ ಬಗೆಯ ರಾಷ್ಟ್ರೀಯ ಸಮಾಜ ನಿರ್ಮಾಣ, ಒಂದು ನಿರ್ದಿಷ್ಟ ಬಗೆಯ ಜೀವನ ಕ್ರಮ ಎಂದಾಗಿದೆ"[೧೫೨] ಎಂದು ಸಾಹಿತ್ಯ ಕಥನದ ಮುನ್ನುಡಿ ಭಾಗದಲ್ಲಿ ಡಿ.ಆರ್. ಅವರು ಹೇಳುತ್ತಾರೆ. ಈ ಹಿನ್ನೆಲೆಯಿಂದ ಡಿ.ಆರ್. ಅವರ ನಿಲುವು ಪಾಶ್ಚಿಮಾತ್ಯೀಕರಣ ಯಾರಿಗೆ ಬೇಕಾಗಿದೆ, ಹಾಗೆಯೇ ಭಾರತದೊಳಗಿನ ಪಾಶ್ಚಿಮಾತ್ಯೀಕರಣ ಯಾರನ್ನು ನಂಬಿಸಲು ಹೊರಟಿತ್ತು ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇವುಗಳಿಂದ ನಮ್ಮ ಕನ್ನಡ ಸಾಹಿತ್ಯ ಅಧ್ಯಯನಗಳು ಪ್ರಗತಿ ಹೊಂದಿರುವುದು, ಮೂಲವಾಗಿ ಪಾಶ್ಚಿಮಾತ್ಯದಿಂದ ಎಂದು ಹೇಳುತ್ತೇವೆ. ಕೊನೆಗೆ ನಮ್ಮ ಸ್ಥಳೀಯ ಚಿಂತನೆ, ಜನರ ಬದುಕಿನಲ್ಲಿ ಯಾವುದು ಶ್ರೇಷ್ಠ ಕನಿಷ್ಠ ಎಂಬ ನೆಲೆಯಲ್ಲಿ ಪಾಶ್ಚಿಮಾತ್ಯವೇ ಪ್ರಮುಖವಾದರೂ ಕೊನೆಗೆ ನಮ್ಮತನವಿಲ್ಲವೇ ಎಂಬುದು ನಮ್ಮಲ್ಲಿ ಮೂಡುತ್ತವೆ. ಹೀಗಾಗಿ ನಮ್ಮಲ್ಲಿ ಹಲವು ಸಂಸ್ಕೃತಿಗಳಿವೆ ಎಂಬ ನಂಬಿಕೆ ಮೂಡಿಸಿರುವವರು ಯಾರು? ಇದು ವೈದಿಕಶಾಹಿ, ಪುರೋಹಿತಶಾಹಿಗಳಿಂದಾಗಿದೆ

ಎಂದು ಹೇಳಲಾಗುತ್ತದೆ. ಹಾಗೆಯೇ ಪಾಶ್ಚಿಮಾತ್ಯರ ಅಧ್ಯಯನ ಮಾದರಿಗಳು, ಪರಿಕರಗಳಿಂದಾಗಿವೆ. ಆದರೆ ಇದೇ ವೈದಿಕ, ಪುರೋಹಿತಶಾಹಿ ಚಿಂತನೆಗಳಿಂದ ಎಷ್ಟು ಬುಡಕಟ್ಟುಗಳ ಮತ್ತು ಇತರೆ ಸಮುದಾಯದವರ ಸಂಸ್ಕೃತಿ ಬದುಕು, ನೆಲೆ, ಜೀವನಕ್ರಮವನ್ನು ಪುರೋಹಿತಶಾಹಿ ಚಿಂತನೆಗಳ ಅಧ್ಯಯನಗಳು ದೂರ ಇಡಲು ಪ್ರಯತ್ನಿಸಿವೆ. ಜೊತೆಗೆ ಮುನ್ನೆಲೆಗೆ ಸಾಮಾಜಿಕವಾಗಿ ಅವಕಾಶ ನೀಡಿಲ್ಲ. ಹಾಗೆಯೇ ಸಾಮಾನ್ಯರ ಬದುಕಿನ ಮೇಲೆ ನಿಯಂತ್ರಣದಲ್ಲಿಡುವ ಪ್ರಯತ್ನ ಮಾಡಿವೆ. ಹಾಗಾಗಿ ಪಾಶ್ಚಿಮಾತ್ಯರಿಂದ ಕಲಿತ ಶಿಕ್ಷಣ, ಬರವಣಿಗೆ, ಸಂಶೋಧನೆ, ಹಲವು ಮಾದರಿಗಳುಂಟು ಎಂಬ ನಂಬಿಕೆಯಿದೆ. ಪುರೋಹಿತಶಾಹಿ, ವೈದಿಕಶಾಹಿ ನೆಲೆಗಳು ಭಾರತೀಯ ಸಾಮಾನ್ಯರನ್ನು ಮೂಢನಂಬಿಕೆಗಳಿಗೆ ತಳ್ಳಿದೆ. ಭಾರತೀಯ ಚಿಂತನೆಗಳಲ್ಲಿ ಎಲ್ಲ ಮನುಷ್ಯರ ಬದುಕು ಸಂಸ್ಕೃತಿ ಮುಖ್ಯ. ಆದರೆ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ನೆಲೆಗಳಿಂದ ಕೆಲವು ಸಮುದಾಯಗಳು ಮೇಲು-ಕೀಳು, ದಲಿತ-ಶ್ರೀಮಂತ ಚಿಂತನೆಯಿಂದ ಹಿನ್ನೆಲೆ-ಮುನ್ನೆಲೆಗಳಾಗಿವೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ೭೦ರ ದಶಕದಲ್ಲಿ ಕೆಳವರ್ಗದವರಿಂದ ಬಂಡಾಯವಾಯಿತು.

ಡಿ.ಆರ್.ನಾಗರಾಜ್ ಅವರು ಹೇಳುವಂತೆ "ನಮ್ಮ ಸಮಕಾಲೀನ ಸಮಸ್ಯೆಗಳ ಮೂಲ ಅರಿಯಲು ನಾವು ವಸಾಹತೀಕರಣದ ಅನುಭವಕ್ಕೆ ವಾಪಸ್ಸು ಹೋಗಲೇಬೇಕಿದೆ. ಪುರೋಹಿತರನ್ನು ನಂಬಿ ನಾವು ಪಶ್ಚಿಮ ಬುದ್ಧಿಯಾದೆವು. ಈ ದೇಶದ ಮೇಲುಜಾತಿ, ಮೇಲುವರ್ಗ ಸೃಷ್ಟಿಸಿದ ಪಶ್ಚಿಮದ ವ್ಯಾಮೋಹವನ್ನು ತಮ್ಮದೇ ಆದ ಚಾರಿತ್ರಿಕಾನುಭವಗಳ ಕಾರಣಕ್ಕಾಗಿ ಕೆಳಜಾತಿಗಳು ನಂಬಿಕೊಂಡವು. ಪಾಶ್ಚಿಮಾತ್ಯರಲ್ಲಿ ಇದ್ದ ಭಿನ್ನಮತೀಯ ಧಾರೆಗಳು ನಮಗೆ ಆಪ್ತವಾಗದೇ ಹೋದವು"[೧೫೩] ಎಂದು ಹೇಳುತ್ತಾರೆ. ಇವುಗಳ ಹಿನ್ನೆಲೆಯಾಗಿ ವೈದಿಕ, ಪುರೋಹಿತಶಾಹಿಯ ಚಿಂತನೆಯ ಮೇಲೆ ಆರೋಪ ಮಾಡಬಹುದು. ಆದರೆ ವಸಾಹತುಶಾಹಿಗಳು ಕೂಡ ಜನಸಾಮಾನ್ಯರನ್ನು ದಿಕ್ಕು ತಪ್ಪಿಸುವ ಕಾರ್ಯಗಳನ್ನು ಮೊದಲಿಂದಲೂ ಮಾಡಿವೆ. ಅವುಗಳ ಅಧ್ಯಯನದ ದೃಷ್ಟಿಯಿಂದ ಸಾಹಿತ್ಯ, ಸಂಸ್ಕೃತಿ, ರಚನೆಯಂತಹ ಹಲವು ನೆಲೆಯ ಗ್ರಹಿಕೆಯಿಂದ ಮನುಷ್ಯನ ಜೀವನಕ್ರಮ ಎಲ್ಲವನ್ನು ನಮ್ಮ ಅರಿವಿಗೆ ಬರದ ರೀತಿಯಲ್ಲಿ ನಮ್ಮೊಳಗೆ ರಕ್ತಗತವಾಗಿ ಹೋಗಿದೆ. ಇದಕ್ಕೆ ಪುರೋಹಿತಶಾಹಿಯೂ ಮುಖ್ಯ ಕಾರಣವಾಗಬಹುದು. ಚಾರಿತ್ರಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕವಾಗಿ ಅವುಗಳು ನಮ್ಮಲ್ಲಿ ತಿಳಿಯದಂತೆ ಹುಟ್ಟಿಕೊಂಡಿವೆ.

ಹಾಗಾಗಿ ನಮ್ಮ ಹಿಂದಿನ ಅಧ್ಯಯನದ ಹಳೆಯ ಮಾದರಿಯ ವಿಕಲ್ಪವನ್ನು ನವ್ಯ, ನವ್ಯೋತ್ತರ ಚಿಂತನೆಯಲ್ಲಿ ಡಿ.ಆರ್.ನಾಗರಾಜ್ ಅವರು ಹೇಳುತ್ತಾರೆ. "ಶೂದ್ರಾತಿ ಶೂದ್ರರಿಗೆ ಸ್ವಂತ ಸಾಂಸ್ಕೃತಿಕ ಬದುಕೇ ಇರಲಿಲ್ಲ ಎಂಬ ವಿಕಲ್ಪವೂ ನೂರು ವರ್ಷಗಳಷ್ಟು ಹಳೆಯದು. ಕೆಲವು ಬಗೆಯ ಅಧಿಕಾರ, ಯಜಮಾನಿಕೆ, ಆತ್ಮವಿಕಾಸಗಳ ಪರಿಕಲ್ಪನೆಗಳಿಂದ ರೂಪಗೊಂಡ ಕೀಳರಿಮೆ ಇದು. ಇದರರ್ಥ ಶೂದ್ರಾತಿ ಶೂದ್ರರ ಬದುಕು ಸದಾಕಾಲ ಬಂಗಾರದಂತಿತ್ತು ಎಂದಲ್ಲ. ಭಾರತೀಯ ಬದುಕಿನಲ್ಲಿ ನಿಸ್ಸಂದೇಹವಾಗಿ ಶೋಷಣೆ, ದಬ್ಬಾಳಿಕೆ, ಜಾತಿಹಿಂಸೆ, ಲಿಂಗಾಧಾರಿತ

ಹಿಂಸೆ ಇವೆಲ್ಲ ಇದ್ದವು ಮತ್ತು ಇವೆ"[೧೫೪] ಎಂದು ಹೇಳಿದ್ದಾರೆ. ಈ ಹಿನ್ನೆಲೆಯಿಂದ ನಮ್ಮ ಸಾಹಿತ್ಯ ಬರೀ ವಿಕಲ್ಪತೆಗಳಿಂದ ಹಾಗೂ ಹಲವು ಮಾದರಿಗಳ ನೆಲೆಯಲ್ಲಿ ರಚನೆಗಳಾಗಿವೆ. ಆದರೆ ವಾಸ್ತವವನ್ನು ಅರಿತು, ಅದರ ಪರಿಹಾರ ಕಂಡುಕೊಳ್ಳುವಲ್ಲಿ ವಿಫಲಗೊಂಡಿವೆ. ಆದರೆ ಸಂವೇದನೆಯನ್ನು ಜನರಿಗೆ ಮುಟ್ಟಿಸಿವೆ. ಡಿ.ಆರ್.ನಾಗರಾಜ್ ಅವರ ನಿಲುವು ಪಾಶ್ಚಾತ್ಯ ಮತ್ತು ಭಾರತೀಯ ತತ್ವಗಳು ಪ್ರಮುಖವಲ್ಲ. ಇಲ್ಲಿ ಜನರ ಬದುಕಿನ ಸಮಾಜದ ತುಡಿತದ ತತ್ವ ಬೇಕಾಗಿದೆ. ಇಲ್ಲಿ ಶೂದ್ರಾತಿಶೂದ್ರರಿಗೆ ಸಾಂಸ್ಕೃತಿಕ ಬದುಕು ಇರಲಿಲ್ಲ ಎಂಬುದಲ್ಲ. ಆದರೆ ಶೂದ್ರರ ಬದುಕು ಗೌಡ, ಪಾಟೀಲ್, ಕುಲಕರ್ಣಿ, ಊರಿನ ಮುಖ್ಯಸ್ಥರ ಹಾಗೂ ಬಹುಜನ ಸಮಾಜದ ಮುಂದೆ ಶೂದ್ರರ ಬದುಕು ಯಾಂತ್ರಿಕ ಬದುಕಾಗಿದೆ. ಹೀಗಾಗಿ ಇಂದಿನ ದಿನಗಳಲ್ಲಿ ಕೂಡ ದಲಿತರ ಬದುಕು ಏನಾಗಿದೆ ಎಂಬುದನ್ನು ಕೂಡ ತಿಳಿಯಬೇಕಾಗಿದೆ. ಡಿ.ಆರ್.ಎನ್. ಅವರು ತಿಳಿಸುವಂತೆ ವಿಕಲ್ಪಗಳಿಂದ ಅಲ್ಲಿನ ವಾಸ್ತವ ಅರಿತುಕೊಂಡರೆ ದಲಿತ ಮತ್ತು ಅಲ್ಪಸಂಖ್ಯಾತರ ಬದುಕು ಹಸನಾಗುತ್ತದೆ. ಜೊತೆಗೆ ಅವಕಾಶ, ಸೌಲಭ್ಯಗಳು ದೊರೆಯುತ್ತವೆ. ಹಾಗಾಗಿ ಡಿ.ಆರ್.ನಾಗರಾಜ್ ಅವರು ಹೇಳುವಂತೆ "ಸಾಮಾಜಿಕ ಶ್ರೇಣೀಕರಣಗಳಿಗೆ ಮಾತ್ರ ಸೀಮಿತ ಎಂಬ ನಂಬಿಕೆಗೆ ಅಷ್ಟು ಆಳವಾದ ಆಧಾರವಿಲ್ಲ. ಬ್ರಾಹ್ಮಣ್ಯದೊಳಗೆ ದಲಿತತೆಯೂ, ದಲಿತತೆಯೊಳಗೆ ಬ್ರಾಹ್ಮಣ್ಯವೂ, ಅಡಗಿ ಕೂತು ನಮ್ಮನ್ನು ಹಂಗಿಸುತ್ತವೆ, ಆಕರ್ಷಿಸುತ್ತವೆ, ಕೆರಳಿಸುತ್ತವೆ"[೧೫೫] ಎಂದು ಹೇಳುತ್ತಾರೆ. ಇಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದ್ದು ಶತಮಾನದಿಂದ ತುಳಿತಕ್ಕೊಳಪಟ್ಟ ಸಮುದಾಯದ ಕುರಿತಾಗಿದೆ.

ಹಾಗಾಗಿ ಡಿ.ಆರ್.ನಾಗರಾಜ್ ಅವರು ೭೦ರ ದಶಕದ ದಲಿತ ಸಂವೇದನೆಯಿಂದಾದ ಚಳುವಳಿಯನ್ನು "ಕನ್ನಡ ದಲಿತ ಜನಾಂಗ ಒಂದು ನಿರ್ದಿಷ್ಟ ರೀತಿಯಲ್ಲಿ ನಿರ್ಮಿತವಾಯಿತು. ಹಾಡು ಜನಾಂಗವನ್ನು ಕಟ್ಟಿತು. ಜನಾಂಗ ಹಾಡನ್ನು ಸೃಷ್ಟಿಸುವುದರ ಜತೆಯಲ್ಲಿ ತಾನು ಸೃಷ್ಟಿಸಿರುವ ಹಾಡಿನಿಂದಲೂ ಅದು ಪ್ರಭಾವಿತಗೊಳ್ಳುತ್ತದೆ. ೧೯೭೦ರಿಂದಾಚೆಗೆ ದಲಿತರು ಹೊಸ ಪ್ರಜ್ಞಾವಂತ ಜನಾಂಗವಾಗಿ ಕರ್ನಾಟಕದಲ್ಲಿ ಸಿದ್ಧಲಿಂಗಯ್ಯನವರ ಕವಿತೆಗಳ ಎರಕದಲ್ಲಿ ರೂಪಗೊಂಡರು. ಅದಕ್ಕಾಗಿಯೇ ದಲಿತರ ಮೆರವಣಿಗೆ ಬೀದರ್‌ನಿಂದ ಕೋಲಾರದ ತನಕ ಯಾವುದೇ ಮೂಲೆಯಲ್ಲಿ ನಡೆದರೂ ಅಲ್ಲಿ ಕವಿಯ ಹಾಡುಗಳು, ಅದಕ್ಕಾಗಿಯೇ ಇದು ಸಾರ್ವಜನಿಕ ಕಾವ್ಯದ ಅಂತಿಮ ಯಶಸ್ಸು"[೧೫೬] ಎಂದು ಡಿ.ಆರ್.ಎನ್. ಅವರು ಮೆರವಣಿಗೆ ಕವನಸಂಕಲದ ಮುನ್ನುಡಿಯಲ್ಲಿ ಹೇಳುತ್ತಾರೆ. ಇಲ್ಲಿ ಕನ್ನಡದ ಸಾಹಿತ್ಯ ಕೃತಿಗಳಿಂದ ದಲಿತ ಚಿಂತನೆ ಎಂಬುದು ದೊರೆತಿದೆ. ಇದೇ ಮುಂದುವರಿದು ೭೦ರ ದಶಕದಲ್ಲಿ ಬದಲಾವಣೆಗೆ ಅವಕಾಶವನ್ನು ಸಾಮೂಹಿಕವಾಗಿ ಪಡೆಯಿತು. ಆದರೆ ರಾಜಕೀಯ, ಸಂಸ್ಕೃತಿಯಿಂದ ಕಾಲಕಾಲಕ್ಕೆ ಬದಲಾಗುತ್ತಾ, ಪ್ರಸ್ತುತ ದಲಿತ ಮತ್ತು ಅಲ್ಪಸಂಖ್ಯಾತರ ಬದುಕು ತಾವು ನಂಬಿದ ನೆಲ, ಜಲ, ಆಹಾರ, ಸಂಸ್ಕೃತಿ, ಬೇರೆಯವರದ್ದು ಎಂಬ ಚಿಂತೆ ಅವರಲ್ಲಿ ಮೂಡಿದೆ. ಏಕೆಂದರೆ ತಮ್ಮತನವನ್ನು ಬೇರೆಯವರಿಂದ ಕೇಳಿ ಪಡೆವ ಸ್ಥಿತಿ ಅವರ ಬದುಕಿನಲ್ಲಿ ನಿರ್ಮಾಣಗೊಂಡಿದೆ. ಹಾಗೆಯೇ ತಮ್ಮ ತಲೆಮಾರಿನಿಂದ ಬಂದ ಸಂಸ್ಕೃತಿ ನೆಲೆ, ವೃತ್ತಿ ನೆಲೆ, ಈಗ ಬೇರೆಯವರ ದೌರ್ಜನ್ಯದಿಂದ ತಮ್ಮ ಮೂಲವನ್ನು ಕಳೆದುಕೊಳ್ಳುವ ಸಂಭವವೂ ಇದೆ.

ಡಾ.ಸಿದ್ಧಲಿಂಗಯ್ಯ ಅವರ ಆತ್ಮಚರಿತ್ರೆ 'ಊರುಕೇರಿ' ಓದಿದಾಗ ದಲಿತರ ಬದುಕು ಹೇಗೆಂದರೆ ದಲಿತ್ವವನ್ನು ಅನುಭವಿಸಿದ ಇವರು 'ಊರುಕೇರಿ' ಕೃತಿಯ ಸಂವೇದನೆಯು ಸಿದ್ಧಲಿಂಗಯ್ಯ ಅವರದೇ ಅಲ್ಲ. ಎಲ್ಲಾ ದಲಿತತನ ಹೊಂದಿರುವ ಮೇಲ್ವರ್ಗಗಳ ಒಳಗೊಂಡು ಆರ್ಥಿಕವಾಗಿ ಹಿಂದುಳಿದವರ ಸಂವೇದನೆಯಾಗಿದೆ. ಹಾಗಾಗಿ ಡಿ.ಆರ್.ನಾಗರಾಜ್ ಅವರು 'ಊರುಕೇರಿ' ಆತ್ಮಕಥನದ ಬೆನ್ನುಡಿಯಲ್ಲಿ ಹೇಳುತ್ತಾ "ದಲಿತ ಲೇಖಕರ ಕೃತಿಗಳಲ್ಲಿ ನಾವು ನಿರೀಕ್ಷಿಸಬಹುದಾದ ಅನೇಕ ಅಂಶಗಳಿವೆ. ಬಡತನ, ರೊಚ್ಚು, ಅವಮಾನ ಇತ್ಯಾದಿಗಳಿವೆ. ಆದರೆ ಇಡೀ ಕೃತಿಯಲ್ಲಿ ಹೊಸದಾದ ಅನಿರೀಕ್ಷಿತವಾದ ಒಂದು ಮುಖ್ಯಾಂಗವೂ ಇದೆ. ಅದು ಬಡತನ ಮತ್ತು ಹಿಂಸೆಯ ಬಗ್ಗೆ ಭೀತಿಯ ಗೈರುಹಾಜರಿ. ಈ ಕೃತಿಯ ವಸ್ತು ದಲಿತ ಕೃತಿಗಳಿಗೆ ಸಾಮಾನ್ಯವಾದದ್ದು ಸಹಜವಾದದ್ದು. ಆದರೆ ಈ ವಸ್ತುವನ್ನು ನಿರ್ವಹಿಸುವ ಧ್ವನಿ ಭಿನ್ನವಾದದ್ದು, ಚೇತೋಹಾರಿಯಾದದ್ದು. ಬಡತನ, ಜಾತಿ ಅವಮಾನಗಳ ಭೀತಿಗಳಿಂದ ದಲಿತ ಕತೆ ಸುಳ್ಳು. ಆದರೆ ಅದನ್ನು ಪ್ರತಿಭೆಯಲ್ಲಿ ಲೇಖಕ ಗೆಲ್ಲುತ್ತಾನೆ ಎಂಬ ಮಾತು ನಿಜ. ತಮ್ಮ ಬದುಕಿನಲ್ಲಿನ ಹಸಿವು, ಅವಮಾನಗಳನ್ನು ಕೊಂಚ ವಕ್ರೀಕರಣಗೊಳಿಸುವ ಮೂಲಕ ಕವಿ ಸಿದ್ಧಲಿಂಗಯ್ಯ ಅದನ್ನು ದಾಟುವ ಮಾರ್ಗವನ್ನು ತೋರಿಸಿದ್ದಾರೆ"[೧೫೭] ಎಂದಿದ್ದಾರೆ. ಇಲ್ಲಿ ದಲಿತ ಸಂವೇದನೆ ಹೊಂದಿದ ಎಷ್ಟೋ ಜನವರ್ಗಗಳು, ಸಮುದಾಯಗಳು ಬದಲಾವಣೆ ಬಯಸಿದರು. ವಾಸ್ತವ ಪರಿಸ್ಥಿತಿ ದಲಿತರ ಬದಲಾವಣೆಯನ್ನು ಬಯಸುವುದೇ ಇಲ್ಲಿ. ಹಾಗಾಗಿ ಶತಮಾನದಿಂದ ಬಂದ ಮನಸ್ಥಿತಿಯು ಸವರ್ಣೀಯವರ್ಗಗಳು, ದಲಿತರ, ಆರ್ಥಿಕತೆಯಿಂದ ಹಿಂದುಳಿದ ಸಮುದಾಯದವರನ್ನು ದಲಿತ ರೀತಿಯಲ್ಲಿ ನೋಡುವ ಕ್ರಮ ಗ್ರಾಮೀಣ ಪ್ರದೇಶದಲ್ಲಿದೆ. ಅಲ್ಲಿ ಮಾನವ ಸಂಬಂಧವಿದೆ ವಿನಾಃ ಜಾತಿಯಿಂದ ದೂರವಿಡುವ ಪ್ರಯತ್ನವಿದೆ. ಆದರೆ ಸರಕಾರಗಳು ದಲಿತ ಮತ್ತು ಅಲ್ಪಸಂಖ್ಯಾತ ಹಾಗೂ ಯಾವುದೇ ಸಮುದಾಯ ಜನವರ್ಗಗಳು ಎನ್ನದೆ, ಸ್ವಾರ್ಥತೆಯಿಂದ ಮತದ ದೃಷ್ಟಿಯಿಂದ ಜನರನ್ನು ಮಾನವ ಸಂಬಂಧಗಳಿಂದಾಗದೇ ಜಾತಿಸಂಬಂಧ ನೆಲೆಯಾಗಿ ರೂಪಿಸುತ್ತಿವೆ.

ಮನುಚಕ್ರವರ್ತಿಯವರು ಡಿ.ಆರ್.ಎನ್. ಅವರ 'ಅಮೃತ ಮತ್ತು ಗರುಡ' ಕೃತಿಯ ಮುನ್ನುಡಿ ಭಾಗದಲ್ಲಿ ಡಿ.ಆರ್. ಅವರ ಚಿಂತನೆ ನಿಲುವುಗಳನ್ನು ಜಗತ್ತಿನ ಸಂಬಂಧಗಳಾಗಿ ಜನಾಂಗ, ಸಮುದಾಯ, ಮಾನವಿಕ ಎಂದು ಮೂರು ನೆಲೆಗಳಾಗಿ ಗುರುತಿಸುತ್ತಾರೆ. "ಸಾಂಸ್ಕೃತಿಕ ಚಿಂತನೆ, ಸಾಹಿತ್ಯ ಅಧ್ಯಯನ ಮತ್ತು ಸಾಮಾಜಿಕ ನ್ಯಾಯ ಮತ್ತು ಸಾಂಸ್ಕೃತಿಕ ನೋಟ, ದೇಸಿ ಪರ್ಯಾಯಗಳ ಹುಡುಕಾಟ ಹಾಗೂ ಸಮಾಜ ಸಂಸ್ಕೃತಿಗಳ ವ್ಯಾಖ್ಯಾನ"[೧೫೮] ಎಂದು ಮನುಚಕ್ರವರ್ತಿ ಅವರು ತಿಳಿಸುತ್ತಾರೆ. ಈ ಮೂರು ನೆಲೆಯಲ್ಲಿ ಡಿ.ಆರ್. ಅವರ ಕನ್ನಡ ಸಾಹಿತ್ಯ ಚಿಂತನೆಯು ಒಳಗೊಂಡಿದೆ. ಹಾಗಾಗಿ ಡಿ.ಆರ್. ಅವರ ಭಾರತೀಯ ಸಂದರ್ಭದಲ್ಲಿ ಸಾಂಸ್ಕೃತಿಕ ಚಿಂತನೆಯಿಂದ ಸಾಹಿತ್ಯ ಅಧ್ಯಯನಗಳು ಏನಾಗುತ್ತಿವೆ? ಇವುಗಳ ಅಧ್ಯಯನದಿಂದ ಸಾಮಾಜಿಕ ನ್ಯಾಯ ದೊರಕೀತೆ ಎಂಬ ನಿಲುವು ವ್ಯಕ್ತಗೊಂಡಿದೆ. ಜೊತೆಗೆ ದಲಿತರಿಗೆ ಶತಮಾನದಿಂದ ದಮನಕ್ಕೊಳಗಾದವರು ಎಂದು ಹೇಳಲಾಗುತ್ತದೆ. ಆದರೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ಕಾನೂನಾತ್ಮಕ ವ್ಯವಸ್ಥೆಯಿಂದ ನಡೆದಿದೆಯೇ ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ.

ಇನ್ನೊಂದು ಕಡೆಯಲ್ಲಿ ಡಿ.ಆರ್. ಅವರ ನಿಲುವಿನಲ್ಲಿ ದೇಸೀತನದ ಹುಡುಕಾಟವನ್ನು ಕಾಣಬಹುದು. ಹಾಗಾಗಿ ಬೇಂದ್ರೆ, ಅಡಿಗರು, ಚಂದ್ರಶೇಖರ ಕಂಬಾರ ಇವರನ್ನೊಳಗೊಂಡು ಇನ್ನೂ ಅನೇಕರ ಚಿಂತನೆಯ ಬರವಣಿಗೆಯ ನೆಲೆಗಳಲ್ಲಿ ಹುಡುಕಾಟವಿದೆ. ಆದರೆ ಡಿ.ಆರ್. ಅವರಲ್ಲಿ ದೇಸೀತನದ ಬಗ್ಗೆ ವ್ಯಕ್ತಗೊಂಡಿದ್ದನ್ನು ಮನುಚಕ್ರವರ್ತಿಯವರು ಗುರುತಿಸುವಂತೆ "ಇಲ್ಲಿ ದೇಸೀ ಸಾಂಸ್ಕೃತಿಕ ಆವರಣವೇನೋ ಇದೆ. ಆದರೆ, ಒಳಪದರಗಳು ಮಾತ್ರ ಪಾಶ್ಚಿಮಾತ್ಯ ಸಂವಾದಿಯಾಗಿಯೇ ಉಳಿದಿದೆ"[೧೫೯] ಎಂದು ಹೇಳುತ್ತಾರೆ. ಹೀಗಾಗಿ ಸಮಾಜ, ಸಂಸ್ಕೃತಿಗಳ ವ್ಯಾಖ್ಯಾನಗಳ ಹಲವು ನೆಲೆಗಳು ಬರಹಗಳಲ್ಲಿ ಒಳಗೊಂಡಿವೆ. ಅಗ್ರಹಾರ ಕೃಷ್ಣಮೂರ್ತಿಯವರು ಕೂಡ ಡಿ.ಆರ್. ಅವರ ಮುಖ್ಯ ತಾತ್ವಿಕತೆ ಏನು ಎಂಬುದನ್ನು 'ಸಂಸ್ಕೃತಿ ಕಥನ'ದ ಮುನ್ನುಡಿಯಲ್ಲಿ ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಇಲ್ಲಿ ಸಾಮಾಜಿಕ ನ್ಯಾಯಬದ್ಧತೆ, ಶಿಸ್ತು, ಬದಲಾವಣೆ, ದೇಸಿಯಂತಹ ಚಿಂತನೆಗಳು, ಅಂದಿನ ಸಾಮಾಜಿಕ ಪರಿಹಾರಗಳು ದೊರೆಯುವ ನಿಟ್ಟನಲ್ಲಿ ಸಾಮಾಜಿಕ ಪ್ರತಿಕ್ರಿಯೆ ಇದೆ. ಹಾಗೆಯೇ ಅವರಲ್ಲಿ ಭಾಷೆಯ ಪ್ರಜ್ಞೆಯ ಹಿಡಿತದಲ್ಲಿ ಕನ್ನಡತ್ವ ನೆಲೆಯಿಂದ ಸಾಹಿತ್ಯರಚನೆಗಳು, ಓದುಗರಿಗೆ ಮುಖ್ಯವಾಗಿವೆ.

"ಪಾಶ್ಚಿಮಾತ್ಯ ವಿಚಾರವಾದದ ಪರಿಭಾಷೆಗಿಂತ ಬೇರೆ ರೀತಿಯಾದ ವೈಚಾರಿಕತೆ ನಮ್ಮ ಸಂಸ್ಕೃತಿಯಲ್ಲೂ ಇದೆ. ಈ ದೇಶದ ಪ್ರಗತಿಪರ ಹೋರಾಟಗಳಿಗೆ ದೇಸಿಸತ್ವ ಒದಗಿಸಬೇಕಾದರೆ ಈ ರೀತಿಯ ಸ್ವದೇಶಿ ಮೂಲಗಳಿಗೆ ನಾವೀಗ ವಾಪಸು ಹೋಗಬೇಕಾಗಿದೆ. ಬಸವ, ಅಲ್ಲಮ, ಸರ್ವಜ್ಞ ವೇಮನ ಇತ್ಯಾದಿ ಜನರ ಚಿಂತನೆಯನ್ನು ಆಳವಾಗಿ ಅಧ್ಯಯನ ಮಾಡಬೇಕಾಗಿದೆ. ಆಧುನಿಕ ಪಶ್ಚಿಮಕ್ಕಿಂತ ಭಿನ್ನವಾದ ವಿಚಾರವಾದವನ್ನು ನಾವು ಇಲ್ಲಿ ಕಂಡುಕೊಳ್ಳುವ ಸಾಧ್ಯತೆ ಇದೆ"[೧೬೦] ಎಂದು ಪರಂಜ್ಯೋತಿ ವೇಮನ ಕೃತಿಯ ಮುನ್ನುಡಿಯಲ್ಲಿ ಡಿ.ಆರ್. ನಾಗರಾಜ್ ಅವರು ಹೇಳುತ್ತಾರೆ. ಹಾಗಾಗಿ ಈ ತರವಾದ ಡಿ.ಆರ್. ಅವರ ದೃಷ್ಟಿಯಲ್ಲಿ ಎಲ್ಲ ತತ್ವಗಳು ಮುಖ್ಯವಾಗಿ ಅಳವಡಿಸಿಕೊಳ್ಳಬಹುದು.

ಡಿ.ಆರ್.ನಾಗರಾಜ್ ಅವರ 'ಶಕ್ತಿ ಶಾರದೆಯ ಮೇಳ' ಕೃತಿಯ ಮುನ್ನುಡಿಯಲ್ಲಿ "ಆಧುನಿಕ ಕನ್ನಡ ಕಾವ್ಯ ಪರಂಪರೆಯ ಬಗ್ಗೆ ಕೆಲವು ಅಂಶಗಳು ತಾತ್ವಿಕವಾಗಿ ಖಚಿತವಾಗಿತ್ತು. ಅದಕ್ಕೆ ಆಳವಾದ ಪ್ರತಿಭಾತ್ಮಕ ಪರಿಕರಗಳು ಇನ್ನಷ್ಟು ಸಿಕ್ಕಬೇಕಿತ್ತು. ಒಂದು ನಿರ್ದಿಷ್ಟ ಪರಿಕಲ್ಪನೆಯನ್ನು ಬಳಸಿ ನನ್ನ ಮಾತನ್ನು ವಿವರಿಸಲು ಯತ್ನಿಸುತ್ತೇನೆ. ಕನ್ನಡ ಕಾವ್ಯ ಪರಂಪರೆ ಮೇಲೆ ವಸಾಹತುಶಾಹಿ ಅನುಭವವನ್ನೇ ತೆಗೆದುಕೊಳ್ಳೋಣ. ವಸಾಹತುಶಾಹಿ ಅನುಭವದ ವಿಶ್ಲೇಷಣೆಯಲ್ಲಿ ಆಗ ನನ್ನ ವಿಶೇಷ ಗಮನ ದಿಗ್ವಿಜಯದ ಪ್ರಕ್ರಿಯೆಗಳ ಬಗ್ಗೆ ಮಾತ್ರ"[೧೬೧] ಎಂದು ಹೇಳುತ್ತಾರೆ. ಇಲ್ಲಿ ಕೃತಿಯು ಸಂಶೋಧನೆಯ ದೃಷ್ಟಿಯಿಂದ ಕಂಡುಬಂದರೂ ಒಬ್ಬ ಸಾಹಿತ್ಯ ರಚನೆಕಾರ, ಸಂಶೋಧಕ, ಇತರೆ ಸೃಜನಶೀಲ ಬರಹಗಳಲ್ಲಿ ವಸಾಹತು ವಸ್ತುವನ್ನು ಹೇಗೆ ಅರಗಿಸಿಕೊಳ್ಳಬಹುದು ಎಂಬ ಚಿಂತನೆ ಕುರಿತು ಬರುತ್ತದೆ. ಆದರೆ ಸಮಕಾಲೀನ ನೆಲೆಯಾಗಿ ಸಾಹಿತ್ಯ ರಚನೆಗೊಳ್ಳಬೇಕಾಗಿದೆ

ಎಂಬ ನಿಲುವಿದೆ. "ಜನತೆಯ ಕ್ರಿಯಾಶೀಲತೆಯನ್ನು, ಒಳಗಿಂದಲೇ ಕೊರೆದು ಹಾಕುವ ಅದರ ಧೀಮಂತಿಕೆಯನ್ನು ನಾಶಮಾಡುವ ಮೌಢ್ಯಗಳನ್ನು, ಪುರೋಹಿತಶಾಹಿಗಳನ್ನು ಉಗ್ರವಾಗಿ ಹೋರಾಡಬೇಕಾದದ್ದು ಈ ಯುಗದ ಧರ್ಮ. ಈ ದೇಶದಲ್ಲಿ ಸಾಂಪ್ರದಾಯಕ ಧರ್ಮದ ಕೊಳಕುಗಳ ವಿರುದ್ಧ ಬಂಡೇಳಬೇಕಾದ್ದು ಅನಿವಾರ್ಯ. ಆದರೆ ಇಲ್ಲಿ ಕೆಲವು ಕುತೂಹಲಕಾರಿ ಪ್ರಶ್ನೆಗಳು ಏಳುತ್ತವೆ. ಈ ಸಾಂಸ್ಕೃತಿಕ ಹೋರಾಟದ ಆಯುಧಗಳನ್ನು ತರುವುದೆಲ್ಲಿಂದ? ನಾವು ಮಾತಾಡಬೇಕಾದ ನುಡಿಗಟ್ಟು ಯಾವ ರೀತಿಯದು? ಇತ್ಯಾದಿ. ಇಂತಹ ಕಡೆಗಳಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತ ಬಂದಿರುವುದು ಬಹುತೇಕ ಪಾಶ್ಚಿಮಾತ್ಯ ವಿಚಾರವಾದದ ಭಾಷೆಯೇ"[೧೬] ಎಂದು ಪರಂಜ್ಯೋತಿ ವೇಮನ ಕೃತಿಯ ಮುನ್ನುಡಿ ಭಾಗದಲ್ಲಿ ಡಿ.ಆರ್. ಅವರು ಹೇಳುತ್ತಾರೆ. ಇಲ್ಲಿ ಮುಖ್ಯವಾಗಿ ಜನರಲ್ಲಿರುವ ಮಾನವೀಯ ಕಾಳಜಿಯನ್ನು ಹಾಗೂ ಮಾನವೀಯತೆಯನ್ನು ಸಾಂಸ್ಕೃತಿಕತೆಯಿಂದ ಕೂಡಿರುತ್ತದೆ. ಆದರೆ ಹಿಂದಿನಿಂದಲು ಪುರೋಹಿತಶಾಹಿಗಳು ಮೌಢ್ಯವನ್ನು ಸೃಷ್ಟಿಮಾಡಿ ಜನರನ್ನು ದಿಕ್ಕುತಪ್ಪಿಸುವುದಲ್ಲದೆ ಮಾನವ ಸಂಬಂಧಗಳನ್ನು ಆಳುಮಾಡುತ್ತಿವೆ. ಜೊತೆಗೆ ದೂರಯಿಡುವ ಪ್ರಯತ್ನವು ಮಾಡುತ್ತಿವೆ. ಹಾಗಾಗಿ ವೇಮನನ ಚಿಂತನೆ ಡಿ.ಆರ್. ಅವರು ವ್ಯಕ್ತಪಡಿಸುವಂತೆ ಪ್ರಸ್ತುತ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಡಿ.ಆರ್.ನಾಗರಾಜ್ ಅವರು ತಮ್ಮ ಕಾಲದ ಸಾಮಾಜಿಕ ಸಂದಿಗ್ಧತೆಯನ್ನು ತಮ್ಮ ಬರವಣಿಗೆಯ ಪಕ್ವತೆಯ ಮೂಲಕ ಸಾಮಾಜಿಕ ಪರಿಸ್ಥಿತಿಯ ಜೊತೆಗೆ ಜನತೆಯ ಬದುಕಿನ ಮತ್ತು ಸಮಸ್ಯೆ ಸವಾಲುಗಳನ್ನು ಹೇಗೆ ಎದುರಿಸಬೇಕು ಎಂಬುದನ್ನು ಸೂಚಿಸಿದ್ದಾರೆ. ಇದರಿಂದ ಹಲವು ಸಾಹಿತ್ಯ ಪರಿಕರಗಳಿಂದ ಹಾಗೂ ಇತರೆ ಅನ್ಯಜ್ಞಾನ ಶಿಸ್ತುಗಳಿಂದ ಹಲವು ನೆಲೆಗಳನ್ನು ಕನ್ನಡ ಸಾಹಿತ್ಯ ಒಳಗೊಂಡಿದೆ.

**೫.೧೨. ಬಸವರಾಜ ಕಲ್ಗುಡಿ**

ಕೆ.ವಿ.ನಾರಾಯಣ ಅವರ 'ಬೇರು ಕಾಂಡ ಚಿಗುರು' ಕೃತಿಗೆ ಬಸವರಾಜ ಕಲ್ಗುಡಿಯವರು 'ಹೊಸ ಬೇರು ಹೊಸ ಚಿಗುರು' ಶೀರ್ಷಿಕೆಯಲ್ಲಿ ಮುನ್ನುಡಿ ಬರೆಯುತ್ತಾ 'ಬೇರು ಕಾಂಡ ಚಿಗುರು' ಕೃತಿಯು ಶೀರ್ಷಿಕೆಯ ಮೂಲಕ ಕನ್ನಡ ಸಾಹಿತ್ಯವನ್ನು ಬೇರೆ ರೀತಿಯಾಗಿ ಪ್ರಮಾಣೀಕರಿಸುತ್ತದೆ. ಈ ಕೃತಿಯ ಲೇಖನಗಳು ೨೦ನೇ ಶತಮಾನದ ಕೊನೆಯ ಘಟ್ಟದ ಸಂಪೂರ್ಣ ಸಾಹಿತ್ಯ ಸಂಸ್ಕೃತಿಯನ್ನು ಚರ್ಚಿಸುತ್ತವೆ. ಹಾಗೆಯೇ ಪ್ರಾಚೀನ ಕಾಲದ ಸಾಹಿತ್ಯವನ್ನು ಒರೆಗಲ್ಲಿಗೆ ಹಚ್ಚಲಾಗಿದೆ. ಸಾಹಿತ್ಯ ಸಂಸ್ಕೃತಿ ಚಿಂತನೆಯಲ್ಲಿ ವಿಮರ್ಶೆಯ ಮೂಲಕ ಸಾಂಸ್ಕೃತಿಕ ಸ್ವರೂಪವನ್ನು ಕಲ್ಗುಡಿಯವರು ಈ ಮುನ್ನುಡಿಯಲ್ಲಿ ಕೇಂದ್ರೀಕರಿಸಿದ್ದಾರೆ. ಬಸವರಾಜ ಕಲ್ಗುಡಿಯವರು ಕೆ.ವಿ.ನಾರಾಯಣ ಅವರ ಸಾಹಿತ್ಯವನ್ನು ಈ ಮುನ್ನುಡಿಯಲ್ಲಿ ಎರಡು ನೆಲೆಯಲ್ಲಿ ಗುರುತಿಸುತ್ತಾರೆ.

೧. "ಸಾಹಿತ್ಯ ಕೃತಿಗಳ ಅಧ್ಯಯನವೇ ಇಲ್ಲಿ ಬಹಳ ಪ್ರಮುಖವಾಗಿ ಸಾಹಿತ್ಯ ವಿಮರ್ಶೆ ಎನ್ನುವುದು ಒಂದು ಸೃಜನ ಪ್ರಕ್ರಿಯೆ ಎಂದು ಗ್ರಹಿಸುತ್ತದೆ. ಕನ್ನಡ ಸಾಹಿತ್ಯ ವಿಮರ್ಶೆಯ ಪ್ರಮುಖ ಮಾದರಿಗಳಿಗೆ ಈ ಪ್ರಕ್ರಿಯೆ ಒಂದು ಗುಣಾತ್ಮಕ ಸಂವಾದವನ್ನು ಬೆಳೆಸುವುದೆಂಬುದನ್ನು ಗಮನಿಸಬಹುದು.

೨. ಸಾಹಿತ್ಯ ವಿಮರ್ಶೆಯ ಕೃತಿಯೊಳಗಣ ಸಂಸ್ಕೃತಿ ಗ್ರಹಿಕೆಯ ಕೆಲಸವನ್ನು ಮಾಡುವುದರ ಮೂಲಕ ಸಮಕಾಲೀನ ಸಾಂಸ್ಕೃತಿಕ ಪ್ರಕ್ರಿಯೆಯಲ್ಲಿ ಜೀವಂತವಾಗಿ ಸ್ಪಂದಿಸಬೇಕೆನ್ನುವುದು"[೧೬೩] ಎಂದು ಹೇಳುತ್ತಾರೆ. ಕನ್ನಡ ಸಾಹಿತ್ಯ ವಿಮರ್ಶೆ ಮಾಡುವಾಗ ಮೂಲಕೃತಿಗಳ ಅಧ್ಯಯನ ಪ್ರಮುಖವಾದುದು. ಈ ಮೂಲಕ ಸಿದ್ಧ ಮಾದರಿಯನ್ನು ಒಳಗೊಂಡು ಪ್ರಸ್ತುತ ವಿಷಯಗಳನ್ನು ಸಂಸ್ಕೃತಿ ಚಿಂತನೆಯಲ್ಲಿ ವಿಮರ್ಶೆ ಮಾಡುವುದು ಸಾಹಿತ್ಯ ವಿಮರ್ಶೆಯ ಸ್ವರೂಪ ಯಾವುದಿರಬಹುದು ಎನ್ನುವ ಚಿಂತನೆ ಮುಖ್ಯವಲ್ಲ. ಕೃತಿಯಲ್ಲಿ ಯಾವುದನ್ನು ಹುಡುಕಬೇಕು ಎನ್ನುವ ಸಿದ್ಧಾಂತ ಪ್ರಮುಖವಾದುದು. ಬಸವರಾಜ ಕಲ್ಗುಡಿಯವರು ಕೆ.ವಿ.ನಾರಾಯಣರ ಸಂಸ್ಕೃತಿ ಚಿಂತನೆಯನ್ನು ಯಾವ ನೆಲೆಯಲ್ಲಿ ಗ್ರಹಿಸಿದ್ದರು ಎನ್ನುವ ಹುಡುಕಾಟದಲ್ಲಿ ಕಲ್ಗುಡಿಯವರ ನಡುವೆ ಮತ್ತೊಂದು ಸಂಸ್ಕೃತಿ ಹುಟ್ಟಿಕೊಳ್ಳುತ್ತದೆ. ಇದೇ ಮುನ್ನುಡಿಯಲ್ಲಿ ಕೆ.ವಿ.ನಾರಾಯಣರು ಕೃತಿಯ ಸಂಸ್ಕೃತಿ ಹುಡುಕಾಟದಲ್ಲಿ ಈ ಮಾತು ಹೇಳುತ್ತಾರೆ. "ಸಾಹಿತ್ಯ ವಿಮರ್ಶೆ ಎನ್ನುವುದು ಕಲಾಕೃತಿಯೊಳಗೆ ಹೊಕ್ಕು ಅದರಲ್ಲಿ ಸೃಜನಾತ್ಮಕವಾಗಿ ವಿಲೀನವಾಗುವ ಮತ್ತು ಸಂವಾದಿಸುವ ಒಂದು ಕ್ರಿಯೆ ಎನ್ನುವುದನ್ನು ಕೆ.ವಿ.ನಾರಾಯಣರ ಕೃತಿಗಳು ಪ್ರತಿಪಾದಿಸಿವೆ"[೧೬೪] ಎಂದು ಕಲ್ಗುಡಿಯವರು ಉಲ್ಲೇಖಿಸುತ್ತಾರೆ. ಇಲ್ಲಿ ಓದಿನ ಗ್ರಹಿಕೆ, ಸಾಹಿತ್ಯ ಚಿಂತನೆಯ ಚಟುವಟಿಕೆ, ಕ್ರಿಯಾಶೀಲ ನೆಲೆ ಮತ್ತು ಅಂತರಾಳದ ವಿಶಿಷ್ಟ ಜ್ಞಾನ ಚಿಂತನೆ ಈ ಮೂಲಕ ಸಾಹಿತ್ಯ ಚಿಂತನೆ ಗ್ರಹಿಕೆಯಾಗುತ್ತದೆ. ಇಲ್ಲಿ ವಿಮರ್ಶೆಯ ದಾರಿಯನ್ನು ಕಾಣಬಹುದು. ಆದರೆ ಸಾಹಿತ್ಯ ತತ್ವ, ಸಾಮಾಜಿಕ ತತ್ವ, ಇತರೆ ಅನ್ಯಜ್ಞಾನ ಶಿಸ್ತು ಓದುಗರಲ್ಲಿ ಗ್ರಹಿಸುವ ವಿಧಾನವಾಗಬೇಕು. ಆಗ ಸಾಹಿತ್ಯ ವಿಮರ್ಶಿಸುವ ಶಕ್ತಿ ತನ್ನಿಂದ ತಾನೇ ಬರುತ್ತದೆ.

ಕನ್ನಡ ಸಾಹಿತ್ಯದ ಪಂಥಗಳನ್ನು ಅನೇಕ ಕವಲುಗಳಾಗಿ ಗ್ರಹಿಸಿ ಚಿಂತನೆಯಲ್ಲಿ ತೊಡಗಿದ ಲೇಖನಗಳಿವೆ. ಹಾಗಾಗಿ ಬಹುಪಾಲು ಲೇಖನಗಳು ಕೃತಿ ವಿಶ್ಲೇಷಣೆಗೆ ಒಳಪಟ್ಟಿವೆ. ಈ ವಿಧಾನದಿಂದ ಕೃತಿಯನ್ನು ಓದುವ ಹಾಗೂ ಗ್ರಹಿಸುವ ವಿನ್ಯಾಸ ಹೊಂದಿರುವುದು ವೈಶಿಷ್ಟ್ಯವಾಗಿದೆ. ಇಲ್ಲಿ ಕೃತಿಯ ಲೇಖಕರ ಸೃಜನಶೀಲತೆ, ಸಾಹಿತ್ಯಕ, ಸಾಂಸ್ಕೃತಿಕ ಗ್ರಹಿಕೆಗಳಿಂದ ಉಂಟಾಗಿರುವ ಬೌದ್ಧಿಕ ಜಗತ್ತು ಸೃಷ್ಟಿಗೊಂಡಿದೆ. ಈ ಜಗತ್ತು ಓದುಗರ ಮುಂದೆ ಕೃತಿಯ ಹೊಸ ಓದು ಸಾಧ್ಯವಾಗಿ ಹಳೆ ಬೇರು ಹೊಸ ಚಿಗುರು ಎನ್ನುವ ಚಿಂತನೆಯಿಂದ ಕೃತಿಯೊಳಗಣ ವಿಚಾರ ಕೃತಿಯ ಅನೇಕ ಎತ್ತರದಿಂದ ಭಾಷೆಯ ವಿನ್ಯಾಸ, ನಿರೂಪಣಾ ವಿಧಾನ, ರೂಪಕ ಅನೇಕ ಜ್ಞಾನಶಿಸ್ತುಗಳಾಗಿ ಓದುಗರಿಗೆ ಹೊಸತರ ನೆಲೆಯನ್ನು ತೋರಿಸಿದೆ. ಈ ಮುನ್ನುಡಿಯಲ್ಲಿ ಕಲ್ಗುಡಿಯವರು ಕೆ.ವಿ.ನಾರಾಯಣರ ಸಾಹಿತ್ಯದ ಚಿಂತನೆ ಅವರ ಕೃತಿಗಳು ಬಹುತೇಕವಾಗಿ ವಾಸ್ತವ ಸಂಗತಿಗಳ ಜೊತೆಗೆ ಕೃತಿಯ ವಸ್ತುಗಳಾಗಿ ಸೈದ್ಧಾಂತಿಕ ಖಚಿತತೆಯನ್ನು ಪ್ರತಿಪಾದಿಸಲು ಪ್ರಯತ್ನಿಸಲಾಗಿದೆ. ಅಲ್ಲಿ ಕೃತಿಯನ್ನು ಅರಿಯುವ ಒಂದು ಅರ್ಥಪೂರ್ಣ ಅನ್ವೇಷಣೆ, ಪ್ರಕ್ರಿಯೆ ಎಂದು ಪರೋಕ್ಷವಾಗಿ ತಿಳಿಸುತ್ತವೆ ಎನ್ನುವ ಅಂಶ ಹೊಂದಿದೆ ಎನ್ನುವ ಅಭಿಪ್ರಾಯ ಕಲ್ಗುಡಿ ಅವರು ವ್ಯಕ್ತಪಡಿಸುತ್ತಾರೆ. "ಕೃತಿ ಓದುವಿಕೆಯ ಬಗೆಗಿರುವ ಮುಖ್ಯ ಕಾಳಜಿಯು ಇಲ್ಲಿ ಕೃತಿಕಾರನ ಸೃಜನಶೀಲ ಮನಸ್ಸಿನ

ವಿಶಿಷ್ಟತೆಯನ್ನು ಕೃತಿಯ ಆಂತರ್ಯದಿಂದಲೇ ಗ್ರಹಿಸುತ್ತ ಸೃಜನಶೀಲತೆಯ ಹಾಗೂ ಸಂಸ್ಕೃತಿ ಶೋಧನೆಯ ಬಹುಮುಖತ್ವವನ್ನು ಮತ್ತು ವಿಶಿಷ್ಟ ಅಂಶಗಳನ್ನು ರೂಢಿಸುವಲ್ಲಿ ಮುಖ್ಯ ಕಾರ್ಯವನ್ನು ನಿರ್ವಹಿಸುತ್ತಿದೆ"[೧೬೫] ಎಂದು ಕೆ.ವಿ.ನಾರಾಯಣರ ಸಾಹಿತ್ಯ ಚಿಂತನೆಯ ಖಚಿತತೆಯನ್ನು ಕಲ್ಗುಡಿಯವರು ತಿಳಿಸುತ್ತಾರೆ.

ಕೆ.ವಿ.ನಾರಾಯಣರ 'ಬೇರು ಕಾಂಡ ಚಿಗುರು' ಕೃತಿಯ 'ಹೊಸ ಬೇರು ಹೊಸ ಚಿಗುರು' ಮುನ್ನುಡಿ ಶೀರ್ಷಿಕೆಯಲ್ಲಿ ಬಸವರಾಜ ಕಲ್ಗುಡಿಯವರು ನಮ್ಮ ಹಿಂದಿನ ಸಾಹಿತ್ಯ ಸಂಸ್ಕೃತಿ ಚಿಂತನೆಯ ಚಹರೆಗಳೇನು? ಅದನ್ನು ಯಾವ ನೆಲೆಯಲ್ಲಿ ಗ್ರಹಿಸಬೇಕು ಎನ್ನುವ ಹಿನ್ನೆಲೆಯಲ್ಲಿ ಕೆ.ವಿ.ನಾರಾಯಣರ ಸಾಂಸ್ಕೃತಿಕ ಆಯಾಮವನ್ನು ಗುರುತಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಇಂಗ್ಲಿಷ್, ಕನ್ನಡ, ನಗರೀಕರಣ ಮತ್ತು ಗ್ರಾಮೀಣ, ಬ್ರಾಹ್ಮಣ-ಶೂದ್ರ ಎಂಬ ಪರಿಕಲ್ಪನೆಯಲ್ಲಿ ಚಿಂತನೆಯ ಅನುಭವಗಳಾಗಿ ಸಮಾಜದ ವಸ್ತುಸ್ಥಿತಿಯನ್ನು ಕೇಂದ್ರೀಕರಿಸಿ ಭಾರತದ ಮೂಲಭೂತ ಸಮಸ್ಯೆಗಳನ್ನು ಆಯಾ ಕೃತಿಗಳಲ್ಲಿ ಎತ್ತಿ ತೋರಿಸಿದ್ದಾರೆ. ಸಾಮಾಜಿಕ ಪ್ರಜ್ಞೆ ಆವಿಷ್ಕಾರಗಳಿಂದ ಶೋಷಣೆ, ಬಡತನ ಇತರೆ ಸಾಮಾಜಿಕ ವಸ್ತುಗಳ ಬಗ್ಗೆ ವಿವರಿಸಿದ್ದಾರೆ.

ಕನ್ನಡ ಸಾಹಿತ್ಯದ ಪರಂಪರೆಯಲ್ಲಿ ಮುನ್ನುಡಿಗಳು ಎಷ್ಟೊಂದು ಪ್ರಾಮುಖ್ಯತೆ ಹೊಂದಿವೆ ಎನ್ನುವುದಕ್ಕೆ ಕೆಲವರು ಪ್ರಮುಖ ಮುನ್ನುಡಿಕಾರರನ್ನು ಗುರುತಿಸಲಾಗಿದೆ. ಯಾಕೆ ಇವರನ್ನು ಗುರುತಿಸಲಾಗಿದೆಯೆಂದರೆ ಆಯಾ ಕಾಲಘಟ್ಟದಲ್ಲಿ ತಮ್ಮ ಸಾಹಿತ್ಯದ ಛಾಪನ್ನು ಮೂಡಿಸಿದವರಾಗಿದ್ದಾರೆ. ಹೀಗೆ ಕೆಲವು ಪ್ರಮುಖ ಲೇಖಕರ ಮುನ್ನುಡಿಗಳನ್ನು ಪ್ರಸ್ತುತ ಚರ್ಚೆಯಲ್ಲಿ ಕೈಬಿಡಲಾಗಿದೆ. ಆದರೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹತ್ವದ ಮುನ್ನುಡಿಗಳನ್ನು ಚರ್ಚಿಸಲಾಗಿದೆ. ಬೇಂದ್ರೆ, ಪುತಿನ, ಡಿ.ವಿ.ಜಿ., ವಿ.ಕೃ.ಗೋಕಾಕ್, ಗೋಪಾಲಕೃಷ್ಣ ಅಡಿಗ, ಇನ್ನಿತರರ ಮುನ್ನುಡಿಗಳನ್ನು ಅಧ್ಯಯನದಲ್ಲಿ ಚರ್ಚಿಸಿದ್ದು, ಆದರೆ ಇಲ್ಲಿ ಅಧ್ಯಯನಕಾರರ ಮಿತಿಯಿಂದ ಮೊಟಕುಗೊಳಿಸಲಾಗಿದೆ.

**ಕೊನೆಟಿಪ್ಪಣಿಗಳು**

* ಬಿ.ಎಂ.ಶ್ರೀ.

೧. ಬಿ.ಎಂ.ಶ್ರೀ. 'ರನ್ನ ಪ್ರಶಸ್ತಿ', ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೪೧

೨. ಬಿ.ಎಂ.ಶ್ರೀ., 'ಗರತಿಯ ಹಾಡು', ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೪೭

೩. ಅದೇ, ಪುಟ-೩೪೭

೪. ಬಿ.ಎಂ.ಶ್ರೀ., ಕನ್ನಡ ಗ್ರಂಥಮಾಲೆ, ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೫೦

೫. ಬಿ.ಎಂ.ಶ್ರೀ., 'ಅಭಿನವ ಪಂಪ', ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೫೧

೬ ಬಿ.ಎಂ.ಶ್ರೀ., 'ಕಿಂದರಜೋಗಿ' ಇತರ ಕಥನ ಕವನಗಳು, ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೬೯

೭ ಬಿ.ಎಂ.ಶ್ರೀ., 'ಕುಮಾರವ್ಯಾಸ ಪ್ರಶಸ್ತಿ', ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೮೭

೮. ಬಿ.ಎಂ.ಶ್ರೀ., 'ಹದಿಬದೆಯ ಧರ್ಮ', ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೯೧

೯. ಬಿ.ಎಂ.ಶ್ರೀ., 'ಗ್ರೀಕರ ತತ್ವ ಶಾಸ್ತ್ರಸಾರ', ಉಲ್ಲೇಖ, ಪುಟ-೩೯೩

೧೦. ಶ್ರೀನಿವಾಸ ಮೂರ್ತಿ ಎಂ.ಆರ್., 'ವಚನ ಧರ್ಮಸಾರ', ಮುನ್ನುಡಿ, ಪುಟ-V

೧೧. ಅದೇ, ಪುಟ-V

೧೨. ಅದೇ, ಪುಟ-VI

೧೩. ಬಿ.ಎಂ.ಶ್ರೀ., 'ನಾಡ ಪದಗಳು', ಉಲ್ಲೇಖ, ಶ್ರೀಸಾಹಿತ್ಯ, ಪುಟ-೩೯೮

೧೪. ಬಿ.ಎಂ.ಶ್ರೀ., 'ಸಾಕ್ರಟಿಸ್', ಉಲ್ಲೇಖ, ಶ್ರೀ ಸಾಹಿತ್ಯ, ಪುಟ-೩೯೯

೧೫. ಅದೇ, ಪುಟ-೩೯೯

* **ಕುವೆಂಪು**

೧೬. ದೇ.ಜ.ಗೌ., 'ಕುವೆಂಪು ದರ್ಶನ', ಸಂ.೨, ಪುಟ-೭೬೩

೧೭. ಕುವೆಂಪು(ಸಂ), 'ಕರ್ಣಾಟಕ ಭಾರತ ಕಥಾಮಂಜರಿ', ಪುಟ-VI

೧೮. ಅದೇ, ಪುಟ-VII

೧೯. ಅದೇ, ಪುಟ-X

೨೦. ಪ್ರಭುಶಂಕರ, 'ಅಮೇರಿಕಾದಲ್ಲಿ ನಾನು ಮತ್ತು ಶಾಂತಿ, ಪುಟ-೯

೨೧. ಅದೇ, ಪುಟ-೯

೨೨. ಕುವೆಂಪು(ಸಂ), ಭರತೇಶ ವೈಭವ ಸಂಗ್ರಹ, ಪುಟ-X

೨೩. ಕಸ್ತೂರಿ ನಾ, 'ಅಶೋಕ', ಮುನ್ನುಡಿ-III

೨೪. ಅದೇ, ಪುಟ-III

೨೫. ದೇ.ಜ.ಗೌ., 'ಕುವೆಂಪು ದರ್ಶನ'(ಸಂ.೨), ಪುಟ-೭೬೭

೨೬. ಶ್ರೀಕಂಠಯ್ಯ ತೀ.ನಂ., ಭಾರತೀಯ ಕಾವ್ಯಮೀಮಾಂಸೆ, ಪುಟ-VII

೨೭. ಅದೇ, ಪುಟ-XIII

೨೮. ದೇ.ಜ.ಗೌ., 'ಕುವೆಂಪು ದರ್ಶನ'(ಸಂ.೨), ಪುಟ-೭೬೮

೨೯. ಬಿ.ಎಂ.ಶ್ರೀ., 'ಇಸ್ಲಾಂ ಸಂಸ್ಕೃತಿ', ಪುಟ-VIII

೩೦. ಅದೇ, ಪುಟ-VIII

೩೧. ಅದೇ, ಪುಟ-VIII

೩೨. ಕುವೆಂಪು, 'ಕಲಾಸುಂದರಿ', ಪುಟ, ಮುನ್ನುಡಿ ಭಾಗ

೩೩. ಕುವೆಂಪು ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ ಪುಟ, ಮುನ್ನುಡಿ ಭಾಗ

* **ಮಾಸ್ತಿ**

೩೪. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪೂಜನ, ಉಲ್ಲೇಖ, ಪುಟ-೭

೩೫. ದ.ರಾ.ಬೇಂದ್ರೆ, ನಾದಲೀಲೆ, ೧೧ನೇ ಮುದ್ರಣ, ಪುಟ, ಮುನ್ನುಡಿ ಭಾಗ

೩೬. ಮಾಸ್ತಿ, ಪೂಜನ, ಉಲ್ಲೇಖ, ಪುಟ-೩೬

೩೭. ಕುವೆಂಪು, ಸನ್ಯಾಸಿ ಮತ್ತು ಇತರೆ ಕತೆಗಳು, ಪುಟ, ಮುನ್ನುಡಿ ಭಾಗ

೩೮. ಅದೇ, ಪುಟ, ಮುನ್ನುಡಿ ಭಾಗ

೩೯. ಅ.ನ.ಕೃ., 'ಕಿಡಿ', ಪುಟ, ಮುನ್ನುಡಿ ಭಾಗ

೪೦. ಅದೇ, ಪುಟ, ಮುನ್ನುಡಿ ಭಾಗ

೪೧. ಆನಂದಕಂದ, 'ಮುದ್ದನ ಮಾತು', ಉಲ್ಲೇಖ, ಮಾಸ್ತಿಯವರ ಪೂಜನ, ಪುಟ-೧-೨

೪೨. ಗೊರೂರು ರಾಮಸ್ವಾಮಿ ಅಯ್ಯಂಗಾರ್, 'ಹಳ್ಳಿಯ ಚಿತ್ರಗಳು', ಉಲ್ಲೇಖ, ಮಾಸ್ತಿಯವರ ಪೂಜನ, ಪುಟ-೧೭

೪೩. ಅದೇ, ಪುಟ-೧೦೧

೪೪. ಲೇಖಕಿ 'ಸಹೋದರಿಯರು, ರಂಗವಲ್ಲಿ', ಉಲ್ಲೇಖ, ಮಾಸ್ತಿಯವರ ಪೂಜನ, ಪುಟ-೬೦-೬೧

೪೫. ಕೈಲಾಸಂ ಟಿ.ಪಿ., 'ಹುತ್ತದಲ್ಲಿ ಹುತ್ತ', ಉಲ್ಲೇಖ, ಮಾಸ್ತಿಯವರ ಪೂಜನ, ಪುಟ-೧೦೦-೧೦೧

೪೬. ಬಿ.ಎಂ.ಶ್ರೀ., 'ಹೊಂಗನಸುಗಳು', ಮುನ್ನುಡಿ, ಉಲ್ಲೇಖ, ಮಾಸ್ತಿಯವರ ಪೂಜನ, ಪುಟ-೧೨೦

೪೭. ದೇವುಡು ನರಸಿಂಹಾಚಾರ್, 'ವಿಚಾರಣೆ', ಮುನ್ನುಡಿ, ಉಲ್ಲೇಖ, ಮಾಸ್ತಿಯವರ ಪೂಜನ, ಪುಟ-೨೪

೪೮. ಅದೇ, ಪುಟ-೨೪

೪೯. ಅದೇ, ಪುಟ-೨೫

೫೦. ಅದೇ, ಪುಟ-೨೭

೫೧. ಮಾಸ್ತಿ, 'ಪೂಜನ', ಪುಟ, ಮುನ್ನುಡಿ ಭಾಗ

* **ಅ.ನ.ಕೃಷ್ಣರಾಯ**

೫೨. ಅ.ನ.ಕೃ., ಸಂಜೆಗತ್ತಲು, ಮುನ್ನುಡಿ ಭಾಗ, ಪುಟ-III

೫೩. ಅದೇ, ಪುಟ-III

೫೪. ಅದೇ, ಪುಟ-III

೫೫. ಅದೇ, ಪುಟ-IV

೫೬. ಅದೇ, ಪುಟ-IV

೫೭ ಅದೇ, ಪುಟ-IV

೫೮. ಅದೇ, ಪುಟ-IV

೫೯. ಅ.ನ.ಕೃ., 'ಸ್ತ್ರೀಮುಖವ್ಯಾಘ್ರ', ಪುಟ, ಮುನ್ನುಡಿ ಭಾಗ

೬೦. ಅದೇ, ಪುಟ, ಮುನ್ನುಡಿ ಭಾಗ

೬೧. ಅ.ನ.ಕೃ, 'ಗೃಹಲಕ್ಷ್ಮಿ', ಪುಟ ಮುನ್ನುಡಿ ಭಾಗ

೬೨. ಅನಕೃ, 'ನರಬಲಿ', ಪುಟ ಮುನ್ನುಡಿ ಭಾಗ

* **ಜಿ.ಎಸ್.ಶಿವರುದ್ರಪ್ಪ**

೬೩. ಶಿವರುದ್ರಪ್ಪ ಜಿ.ಎಸ್., 'ಸಮಗ್ರಗದ್ಯ, ಸಂ.೫, ಪುಟ-೨೬೮

೬೪. ಅದೇ, ಪುಟ-೨೭೦

೬೫. ಅದೇ, ಪುಟ-೨೭೨

೬೬ ಅದೇ, ಪುಟ-೨೭೧

೬೭ ಅದೇ, ಪುಟ-೨೮೧

೬೮. ಅದೇ, ಪುಟ-೨೮೨

೬೯. ಅದೇ, ಪುಟ-೨೮೪

೭೦. ಅದೇ, ಪುಟ-೨೯೩

೭೧. ಅದೇ, ಪುಟ-೩೦೧

೭೨. ಅದೇ, ಪುಟ-೩೦೩

೭೩. ಅದೇ, ಪುಟ-೩೧೪

೭೪. ಅದೇ, ಪುಟ-೩೨೩

೭೫. ಅದೇ, ಪುಟ-೩೩೫

೭೬ ಅದೇ, ಪುಟ-೩೩೫

೭೭ ಅದೇ, ಪುಟ-೩೩೬

೭೮. ಕುವೆಂಪು ಸಮಗ್ರ ಕಾವ್ಯ, ಸಂ.೧, ಪುಟ, ಮುನ್ನುಡಿ ಭಾಗ

೭೯. ಅದೇ, ಪುಟ-XXV

* **ಕೆ.ಪಿ.ಪೂರ್ಣಚಂದ್ರ ತೇಜಸ್ವಿ**

೮೦. ಪೂರ್ಣತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ಪುಟ-I

೮೧. ಅದೇ, ಪುಟ-II

೮೨. ಅದೇ, ಪುಟ–III

೮೩. ಅದೇ, ಪುಟ–III

೮೪. ಅದೇ, ಪುಟ–III

೮೫. ಅದೇ, ಪುಟ–III-IV

೮೬. ಅದೇ, ಪುಟ–IV

೮೭. ಅದೇ, ಪುಟ–IV

೮೮. ಅದೇ, ಪುಟ–IV

೮೯. ಅದೇ, ಪುಟ–I

೯೦. ಅದೇ, ಪುಟ, ಮುನ್ನುಡಿ ಭಾಗ

* **ಪಿ.ಲಂಕೇಶ್**

೯೧. ನಟರಾಜ್ ಹುಳಿಯಾರ್, ಇಂತಿ ನಮಸ್ಕಾರಗಳು, ಪುಟ–೬೭

೯೨. ಪಿ.ಲಂಕೇಶ್, ಅಕ್ಷರ ಹೊಸಕಾವ್ಯ(ಸಂ), ಪುಟ–XLI

೯೩. ಅದೇ, ಪುಟ–XVIIV

೯೪. ಅದೇ, ಪುಟ–XVIIVI

೯೫. ಅದೇ, ಪುಟ–XX

೯೬. ಅದೇ, ಪುಟ–XXi

೯೭ ಅದೇ, ಪುಟ–XXii

* **ಯು.ಆರ್.ಅನಂತಮೂರ್ತಿ**

೯೮. ಅನಂತಮೂರ್ತಿ ಯು.ಆರ್., ಎಂದೆಂದೂ ಮುಗಿಯದ ಕತೆ, ಪುಟ, ಮುನ್ನುಡಿ ಭಾಗ

೯೯. ಚನ್ನಯ್ಯ ಎಚ್.ಎಂ., ಆಮೆ, ಪುಟ, ಮುನ್ನುಡಿ ಭಾಗ

೧೦೦. ಗೋಪಾಲಕೃಷ್ಣ ಅಡಿಗ, ಸಮಗ್ರ ಕಾವ್ಯ, ಪುಟ–೪೪–೫೪೫

೧೦೧. ಅದೇ, ಪುಟ–೫೪೮

೧೦೨. ಅದೇ, ಪುಟ–೫೪೫

೧೦೩. ಅದೇ, ಪುಟ–೨೬೪

೧೦೪. ಚನ್ನಯ್ಯ ಎಚ್.ಎಂ., ಆಮೆ, ಪುಟ, ಮುನ್ನುಡಿ ಭಾಗ

೧೦೫. ಅದೇ, ಪುಟ. ಮುನ್ನುಡಿ ಭಾಗ

೧೦೬. ಅದೇ, ಪುಟ–೫೩

೧೦೭. ಗಂಗಾಧರ ಚಿತ್ತಾಲ, 'ಹರಿವ ನೀರಿದು', ಪುಟ, ಮುನ್ನುಡಿ ಭಾಗ

೧೦೮. ಅದೇ, ಪುಟ–೪೭

೧೦೯. ಸದಾಶಿವ ಕೆ., 'ಅಪರಿಚಿತರು', ಪುಟ, ಮುನ್ನುಡಿ ಭಾಗ

೧೧೦. ಅನಂತಮೂರ್ತಿ ಯು.ಆರ್., 'ನವ್ಯಲೋಕ', ಉಲ್ಲೇಖ, ಪುಟ, ಮುನ್ನುಡಿ ಭಾಗ

೧೧೧. ಅದೇ, ಪುಟ–೧೭೬

೧೧೨. ಗಂಗಾಧರ ಚಿತ್ತಾಲ, 'ಹರಿವ ನೀರಿದು', ಪುಟ, ಮುನ್ನುಡಿ ಭಾಗ

೧೧೩. ಅನಂತಮೂರ್ತಿ ಯು.ಆರ್., 'ನವ್ಯಲೋಕ', ಪುಟ–೧೧೯

೧೧೪. ಅದೇ, ಪುಟ–೮೩–೮೪

೧೧೫. ಅದೇ, ಪುಟ–೨೧೩

೧೧೬. ಅದೇ, ಪುಟ–೧೩೬

೧೧೭. ಅದೇ, ಪುಟ–೧೪೧

೧೧೮. ಪೂರ್ಣಚಂದ್ರ ತೇಜಸ್ವಿ, 'ಅಬಚೂರಿನ ಪೋಸ್ಟಾಫೀಸು', ಪುಟ–III

* **ಎಚ್.ಎಸ್.ರಾಘವೇಂದ್ರರಾವ್**

೧೧೯. ರಾಘವೇಂದ್ರರಾವ್ ಎಚ್.ಎಸ್., 'ಸಂಗಡ', ಪುಟ–V

೧೨೦. ಅದೇ, ಪುಟ–೧

೧೨೧. ಅದೇ, ಪುಟ–೧

೧೨೨. ಅದೇ, ಪುಟ–೩

೧೨೩. ಕೀರ್ತಿನಾಥ ಕುರ್ತಕೋಟಿ, 'ಸಂಗ್ಯಾ ಬಾಳ್ಯಾ', ಪುಟ, ಮುನ್ನುಡಿ ಭಾಗ

೧೨೪. ರಾಘವೇಂದ್ರರಾವ್ ಎಚ್.ಎಸ್., 'ಸಂಗಡ', ಪುಟ–೧೪

೧೨೫. ಅದೇ, ಪುಟ–೨೮–೨೯

೧೨೬. ಅದೇ, ಪುಟ–೩೭

೧೨೭. ಅದೇ, ಪುಟ–೪೭

೧೨೮. ಅದೇ, ಪುಟ–೪೯

೧೨೯. ಅದೇ, ಪುಟ–೬೬

೧೩೦. ಅದೇ, ಪುಟ–೬೮

೧೩೧. ಗೋಪಾಲಕೃಷ್ಣ ಅಡಿಗ, ಸಮಗ್ರ ಕಾವ್ಯ, ಪುಟ–೮೪

೧೩೨. ರಾಘವೇಂದ್ರರಾವ್ ಎಚ್.ಎಸ್., ಸಂಗಡ, ಪುಟ–೭೯

೧೩೩. ಅದೇ, ಪುಟ-೮೬

೧೩೪. ಅದೇ, ಪುಟ-೧೦೧

೧೩೫. ಅದೇ, ಪುಟ-೧೯೨

೧೩೬. ಅದೇ, ಪುಟ-೨೩೫

* **ಕೆ.ವಿ.ನಾರಾಯಣ**

೧೩೭. ನಾರಾಯಣ ಕೆ.ವಿ., ಬೇರು ಕಾಂಡ ಚಿಗುರು, ಪುಟ, ಮುನ್ನುಡಿ ಭಾಗ

೧೩೮. ನಾರಾಯಣ ಕೆ.ವಿ., ತೊಂಡುಮೇವು, ಸಂ.೩, ಪುಟ-೨೬೧

೧೩೯. ಅದೇ, ಪುಟ-೨೬೩

೧೪೦. ಅದೇ, ಪುಟ-೨೭೨

೧೪೧. ಅದೇ, ಪುಟ-೨೭೨

೧೪೨. ಅದೇ, ಪುಟ-೨೭೩

೧೪೩. ಬೆಸಗರಹಳ್ಳಿ ರಾಮಣ್ಣ, ಕಣಜ, ಪುಟ, ಮುನ್ನುಡಿ ಭಾಗ

೧೪೪. ನಾರಾಯಣ ಕೆ.ವಿ., ತೊಂಡುಮೇವು, ಸಂ.೩, ಪುಟ-೨೮೧

೧೪೫. ಅದೇ, ಪುಟ-೨೮೫

೧೪೬. ಅದೇ, ಪುಟ-೨೮೯

೧೪೭. ಅದೇ, ಪುಟ-೨೯೩

೧೪೮. ಅದೇ, ಪುಟ-೨೯೪

೧೪೯. ಅಶೋಕಕುಮಾರ ರಂಜೇರೆ, ಸಾಹಿತ್ಯ ಮತ್ತು ಇತಿಹಾಸದ ಸಂಬಂಧಗಳು, ಪುಟ, ಮುನ್ನುಡಿ ಭಾಗ

* **ಡಿ.ಆರ್. ನಾಗರಾಜ್**

೧೫೦. ಅಗ್ರಹಾರ ಕೃಷ್ಣಮೂರ್ತಿ(ಸಂ), 'ಸಂಸ್ಕೃತಿ ಕಥನ,' ಪುಟ, ಮುನ್ನುಡಿ ಭಾಗ.

೧೫೧. ಡಿ.ಆರ್.ನಾಗರಾಜ್, 'ಸಾಹಿತ್ಯ ಕಥನ' ಪುಟ-೮.

೧೫೨. ಅದೇ, ಪುಟ-೭.

೧೫೩. ಅದೇ, ಪುಟ-೭.

೧೫೪. ಅದೇ, ಪುಟ-೮.

೧೫೫. ಅದೇ, ಪುಟ-೯.

೧೫೬. ಸಿದ್ಧಲಿಂಗಯ್ಯ, 'ಮೆರವಣಿಗೆ'. ಪುಟ-೪.

೧೫೭. ಸಿದ್ಧಲಿಂಗಯ್ಯ, 'ಊರುಕೇರಿ' ಪುಟ, ಬೆನ್ನುಡಿ ಭಾಗ.

೧೫೮. ನಾಗರಾಜ್ ಡಿ.ಆರ್., 'ಅಮೃತ ಮತ್ತು ಗರುಡ' ಪುಟ-೧೦-೧೧.

೧೫೯. ಅದೇ, ಪುಟ-೧೦.

೧೬೦. ರಾಮರೆಡ್ಡಿ ಬಿ.ಎನ್., ಪರಂಜ್ಯೋತಿ ವೇಮನ, ಪುಟ, ಮುನ್ನುಡಿ ಭಾಗ.

೧೬೧. ನಾಗರಾಜ್ ಡಿ.ಆರ್., 'ಶಕ್ತಿ ಶಾರದೆಯ ಮೇಳ', ಪುಟ-೮.

೧೬೨. ರಾಮರೆಡ್ಡಿ ಬಿ.ಎನ್., ಪರಂಜ್ಯೋತಿ ವೇಮನ, ಪುಟ, ಮುನ್ನುಡಿ ಭಾಗ.

*** ಬಸವರಾಜ ಕಲ್ಗುಡಿ**

೧೬೩. ನಾರಾಯಣ ಕೆ.ವಿ., ಬೇರು ಕಾಂಡ ಚಿಗುರು, ಪುಟ, ಮುನ್ನುಡಿ ಭಾಗ

೧೬೪. ಅದೇ, ಪುಟ, ಮುನ್ನುಡಿ ಭಾಗ

೧೬೫. ಅದೇ, ಪುಟ, ಮುನ್ನುಡಿ ಭಾಗ

ಅಧ್ಯಾಯ ಆರು

# ಸಮಾರೋಪ

ಈ ಸಂಶೋಧನಾ ಮಹಾಪ್ರಬಂಧವು ಆಯ್ದ ಮುನ್ನುಡಿಗಳನ್ನು ಕುರಿತು ಅಧ್ಯಯನ ನಡೆಸಿರುವುದಾಗಿದೆ. ಹಾಗೆಯೇ ಕನ್ನಡ ಸಾಹಿತ್ಯದ ಮುನ್ನುಡಿಗಳನ್ನು ಭಿನ್ನ ಆಯಾಮಗಳ ಮೂಲಕ ಚರ್ಚಿಸಲಾಗಿದೆ. ಈ ಮುನ್ನುಡಿ ಸಾಹಿತ್ಯವನ್ನು ಕುರಿತಂತೆ ಇದುವರೆಗಿನ ಅಧ್ಯಯನಗಳು ನಿರ್ಲಕ್ಷಿಸಿವೆ. ಆದರೆ ಮುನ್ನುಡಿಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಇತರೆ ಲೇಖಕರು ತಮ್ಮ ಬರವಣಿಗೆಯಲ್ಲಿ ಬಳಸಿದ್ದಾರೆ. ಆದರೆ ಅಧ್ಯಯನ ಮಾಡಿರುವುದು ಅತ್ಯಂತ ವಿರಳವಾಗಿದೆ. ಹಾಗಾಗಿ ಮುನ್ನುಡಿ ಸಾಹಿತ್ಯವನ್ನು ಕೆಲವರು ಸಾಹಿತ್ಯದಿಂದ ದೂರವಿಡುವ ಪ್ರಯತ್ನವನ್ನೂ ಮಾಡಿದ್ದಾರೆ. ಹಾಗೆಯೇ ಮುನ್ನುಡಿ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಎಷ್ಟೊಂದು ಮಹತ್ವವಿದೆ ಎನ್ನುವ ನಿಲುವು ಹೊಂದಿದವರು ಇದ್ದಾರೆ. ಬಹುತೇಕವಾಗಿ ಮುನ್ನುಡಿಯನ್ನು ಅಧ್ಯಯನ ಮಾಡುವ ತುರ್ತು ಕನ್ನಡ ಸಾಹಿತ್ಯದಲ್ಲಿದೆಯೆಂದು ಹೇಳಿದವರು ಹೆಚ್ಚು. ಮುನ್ನುಡಿ ಸಾಹಿತ್ಯ, ಕನ್ನಡ ಸಾಹಿತ್ಯದಲ್ಲಿ ರೂಪವಾದರೂ ಸಾಹಿತ್ಯ ವಿಮರ್ಶೆ ಮಾಡುವ ಗತ್ತು ಇದೆ. ಏಕೆಂದರೆ ಕೃತಿಯನ್ನು ಮೊದಲು ವಿಮರ್ಶೆ ಮತ್ತು ಪರಿಶೀಲನೆಗೆ ಒಳಪಡಿಸುವುದು ಮುನ್ನುಡಿಯಾಗಿದೆ. ಹಾಗಾಗಿ ಮುನ್ನುಡಿ ಪ್ರಕಾರದ ಆಂತರಿಕ ಜಗತ್ತಿನ ವಿವರಗಳಿಗೆ ಹೋಗದೆ ಅವುಗಳ ಬಾಹ್ಯ ಅಂಶಗಳನ್ನಷ್ಟೆ ಗಮನಿಸಲಾಗಿದೆ. ಹಳಗನ್ನಡ ಕಾವ್ಯಗಳಿಗೆ ಮುನ್ನುಡಿ ಮೂಲಕ ಸಂಪಾದನೆ ಮಾಡುವ ನೆಲೆಯಿಂದ ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ, ಮಹಿಳಾ ಸಾಹಿತ್ಯ ಸಮಕಾಲೀನ ದೃಷ್ಟಿಕೋನದ ಸಂದರ್ಭಗಳಲ್ಲಿ ಆಯ್ದ ಮುನ್ನುಡಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಸಾಹಿತ್ಯದಲ್ಲಿ ಚರ್ಚೆಗೆ ಒಳಗಾಗುವಂತಹ ಮುನ್ನುಡಿಗಳನ್ನು ಸಮಗ್ರವಾಗಿ ಅರಿತುಕೊಂಡು ಚರ್ಚಿಸುವ ಹಾಗೂ ಮೇಲ್ಪದರ ಗ್ರಹಿಕೆಯನ್ನು ಒಳಗೊಳ್ಳದೆ ಮುನ್ನುಡಿ ಸಾಹಿತ್ಯದ ಮಹತ್ವದ ನೆಲೆಯಲ್ಲಿ ಅದರೊಳಗೆ ಪ್ರತಿಪಾದಿತವಾಗಿರುವ ಸಂಗತಿಗಳನ್ನಿಟ್ಟುಕೊಂಡು ಚರ್ಚಿಸಲಾಗಿದೆ. ಈ ಮೂಲಕ ಮುನ್ನುಡಿ ಸಾಹಿತ್ಯದ ಬಹುಮುಖಿ ಆಯಾಮಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಇತರೆ ಪ್ರಕಾರದ ಕಥೆ, ಕಾದಂಬರಿ, ಕಾವ್ಯ, ನಾಟಕ, ವಿಮರ್ಶೆ, ಪ್ರಬಂಧ, ಅಭಿನಂದನಾ ಗ್ರಂಥ, ಅನುವಾದ, ಜೀವನಚರಿತ್ರೆ, ಆತ್ಮಚರಿತ್ರೆ, ಇವುಗಳ ಜೊತೆಗೆ ಮುನ್ನುಡಿಗಳು ಹೇಗೆ ಅನುಸಂಧಾನ ಮಾಡುವ ಮೂಲಕ ಮುನ್ನುಡಿಯ ಸ್ವರೂಪ ಯಾವ ತರಹದ್ದು, ಮುನ್ನುಡಿ

ಪ್ರಕಾರದ ಹುಟ್ಟನ್ನು ಪ್ರೇರೇಪಿಸಿದ ಸಾಂಸ್ಕೃತಿಕ ಒತ್ತಡಗಳೇನು? ತಾನು ರಚನೆಗೊಂಡ ಕಾಲದ ವಸಾಹತುಶಾಹಿಗೆ ಆದ ಮುಖಾಮುಖಿಯ ಸ್ವರೂಪ, ಮುನ್ನುಡಿ ಸಾಹಿತ್ಯದ ಮುನ್ನುಡಿಕಾರ/ ರ್ತಿಯರ ಅಂತರ್ ಅಧ್ಯಯನದಲ್ಲಿ ಯಾವ ತರಹದ ಸಾಮಾಜಿಕ ಸಂಗತಿಗಳನ್ನು ಒಳಗೊಂಡಿದೆ. ಮುನ್ನುಡಿಯ ಭಾಷೆ, ರಚನೆ, ವಸ್ತು, ಶೈಲಿ ಹೀಗೆ ಭಿನ್ನ ನೆಲೆಗಳಿಂದ ಮುನ್ನುಡಿ ಸಾಹಿತ್ಯವನ್ನು ನಿರ್ವಚಿಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಆಯ್ದ ಮುನ್ನುಡಿಗಳನ್ನು ಭಿನ್ನತೆಯ ನೆಲೆಗಳಿಂದ ಅವುಗಳ ಸಾಂಸ್ಕೃತಿಕ ಮಹತ್ವವನ್ನು ಅರಿಯುವ ಪ್ರಯತ್ನ ಮಾಡಲಾಯಿತು. ಯಾವುದೇ ಅಧ್ಯಯನಕ್ಕೆ ಕೊನೆ ಎಂಬುದು ಇರುವುದಿಲ್ಲ. ಕಾಲದ ವರ್ತಮಾನದಲ್ಲಿ ಅದು ಪ್ರಕ್ರಿಯಾತ್ಮಕವಾಗಿರುತ್ತದೆ. ಅದು ಮತ್ತೆ ಮತ್ತೆ ಮರುನಿರ್ವಚನಕ್ಕೆ ಒಳಗಾಗುತ್ತಲೇ ಇರುತ್ತದೆ. ಪ್ರಸ್ತುತ ಆಯ್ದ ಮುನ್ನುಡಿಗಳು ಕುರಿತು ಸಾಂಸ್ಕೃತಿಕ ಅಧ್ಯಯನವಾಗಿದೆ. ಈ ಕುರಿತು ಈ ಅಧ್ಯಯನವು ಕೆಲವು ಚೌಕಟ್ಟುಗಳಿಗೆ ಒಳಪಟ್ಟಿದೆ. ಆದ್ದರಿಂದ ಈ ಅಧ್ಯಯನದ ಅಂತಿಮ ಹಂತದಲ್ಲೂ ಈ ಅಧ್ಯಯನದಿಂದ ಕಂಡುಕೊಂಡ ಕೆಲವು ಮುಖ್ಯ ಫಲಿತಗಳು ಈ ಕೆಳಗೆ ಮಂಡಿಸಲಾಗಿದೆ

**ಫಲಿತಗಳು**

೧. ಕನ್ನಡ ಸಾಹಿತ್ಯದಲ್ಲಿ ಕಂಡು ಬರುವಂತಹ ವಿವಿಧ ಪ್ರಕಾರಗಳಂತೆ ಮುನ್ನುಡಿ ಸಾಹಿತ್ಯಕ್ಕೆ ಪ್ರತ್ಯೇಕವಾದ ಪ್ರಕಾರವಿರುವುದು ಕಂಡುಬರುವುದಿಲ್ಲ. ಆದರೆ ಮುನ್ನುಡಿಗಳು ತಮ್ಮದೇ ಆದಂತಹ ಸಾಹಿತ್ಯಕ ವಿಶಿಷ್ಟ ಲಕ್ಷಣಗಳನ್ನು ಹೊಂದಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೨. ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿಗಳು ಕೇವಲ ಪ್ರಶಂಸೆ, ಆಶೀರ್ವಾದ, ಹೊಗಳಿಕೆ ಎಂಬ ನೆಲೆಯಲ್ಲಿಯೇ ಇದನ್ನು ಕಂಡುಕೊಳ್ಳಲಾಗಿದೆ. ಆದರೆ ಮುನ್ನುಡಿಗಳು ಈ ಆಪಾದನೆಯಿಂದ ಹೊರತಾಗಿಯೂ ಕೃತಿಯ ವಿಶೇಷತೆ, ಅನಿವಾರ್ಯತೆ ಹಾಗೂ ವರ್ತಮಾನದ ತಲ್ಲಣಗಳಿಗೆ ಸಂಬಂಧಿಸಿದಂತೆ ಸೂಕ್ತ ಮಾರ್ಗದರ್ಶನವನ್ನು ನೀಡುತ್ತಾ ಬಂದಿರುವುದನ್ನು ಕನ್ನಡ ಸಾಹಿತ್ಯದ ಬಹುತೇಕ ಕೃತಿಗಳ ಮುನ್ನುಡಿಯಲ್ಲಿ ಗುರುತಿಸಲಾಗಿದೆ.

೩. ಮುನ್ನುಡಿಗಳು ಕನ್ನಡ ಸಾಹಿತ್ಯದ ವಿಶಿಷ್ಟ ಪ್ರಕಾರಗಳಲ್ಲೊಂದಾದ 'ವಿಮರ್ಶೆ'ಯಂತೆ ತನ್ನ ಕಾರ್ಯವನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಕನ್ನಡದ ಬಹುಪಾಲು ಕೃತಿಗಳಲ್ಲಿ ಗುರುತಿಸಲಾಗಿದೆ. ಹೀಗಾಗಿ ವಿಮರ್ಶೆಯ ಪ್ರಕಾರದಷ್ಟೇ ಪ್ರಾಮುಖ್ಯತೆಯು ಮುನ್ನುಡಿಗಳಿಗೂ ಇರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

೪. ಮುನ್ನುಡಿಗಳು ಕನ್ನಡ ಸಾಹಿತ್ಯದ ಮುಂದಿನ ಬೆಳವಣಿಗೆಗೆ ದಾರಿದೀಪವಾಗಿ ತನ್ನ ನಿಲುವುಗಳನ್ನು ವ್ಯಕ್ತಪಡಿಸುತ್ತ ಬಂದಿದೆ. ಇದರಿಂದ ಸಾಹಿತ್ಯದ ಆಶಯಗಳನ್ನು ವಿಶಿಷ್ಟ ತಿರುವು ಪಡೆದುಕೊಂಡಿರುವುದನ್ನು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಗುರುತಿಸಲಾಗಿದೆ.

೫. ಮುನ್ನುಡಿಗಳು ವ್ಯಕ್ತಿನಿಷ್ಠವಾಗಿದ್ದರೂ ಅದು ತನ್ನ ಕಾಲದ ಸಾಮಾಜಿಕ, ಸಾರ್ವತ್ರಿಕ ವಿದ್ಯಮಾನಗಳಿಗೆ ಸೂಕ್ಷ್ಮವಾಗಿ ಪ್ರತಿಕ್ರಿಯಿಸುತ್ತ ಬಂದಿವೆ. ವಸಾಹತುಶಾಹಿ ನಿಲುವುಗಳನ್ನು ಪ್ರತಿಯೊಂದಕ್ಕೆ ಗುರಿಪಡಿಸಿ ರಾಷ್ಟ್ರೀಯತೆಯನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಹಲವಾರು ಮುನ್ನುಡಿಗಳಲ್ಲಿ ಗುರುತಿಸಬಹುದಾಗಿದೆ. ಆದ್ದರಿಂದ ಮುನ್ನುಡಿಗಳು ಸಾಮಾಜಿಕ ಕಳಕಳಿಯನ್ನು ಹೊಂದಿರುವ ನೆಲೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೬. ಹಸ್ತಪ್ರತಿಗಳಲ್ಲಿ ಅಡಗಿದ್ದ ಹಳಗನ್ನಡ ಸಾಹಿತ್ಯವು ವಿದೇಶಿ ಮತ್ತು ದೇಶಿ ವಿದ್ವಾಂಸರಿಂದ ಉಪೋದ್ಘಾತ, ಮುನ್ನುಡಿ, ಪ್ರಸ್ತಾವನೆಗಳ ಮೂಲಕ ಹಳಗನ್ನಡ ಸಾಹಿತ್ಯದ ಸಾರಾಂಶವು ಪ್ರತಿಯೊಬ್ಬ ಓದುಗನಿಗೂ ಸುಲಭವಾಗಿ ತಲುಪಿದೆ. ಇದರಿಂದ ಈ ಹಳಗನ್ನಡ ಪ್ರಕಾರದ ಕಡೆ ಸಾಹಿತ್ಯಕ ಒಲವು ಹೆಚ್ಚಾಯಿತು. ಇದರಿಂದ ಹಳಗನ್ನಡ ಪ್ರಕಾರ ಮತ್ತೆ ಮತ್ತೆ ಸಾಂಸ್ಕೃತಿಕ ಆಯಾಮಗಳಲ್ಲಿ ಮರು ಓದಿಗೆ ಒಳಪಟ್ಟಿತು. ಇದರಿಂದಾಗಿ ಭಾರತೀಯರ ದೃಷ್ಟಿಕೋನಗಳು ಸಂಪೂರ್ಣವಾಗಿ ಬದಲಾದವು. ಇದರಿಂದ ಕನ್ನಡದ ಅಸ್ಮಿತೆಯನ್ನು ಗುರುತಿಸುವ ಕಾರ್ಯವನ್ನು ಬಹುತೇಕ ಚಿಂತಕರು ಮುಂದುವರಿಸಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

೭. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಗಳು ಹಲವು ನೆಲೆಯಲ್ಲಿ ವಾಗ್ವಾದವನ್ನು ಸೃಷ್ಟಿಮಾಡಿವೆ. ಈ ವಾಗ್ವಾದಗಳು ಸಾಹಿತ್ಯದ ಭಾಷೆ, ಶೈಲಿ, ನಿರೂಪಣಾಕ್ರಮ, ವಸ್ತು, ವಿಷಯದಿಂದ ಪ್ರಾರಂಭಗೊಂಡು ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ ನೆಲೆಯವರೆಗಿನ ಸಾಹಿತ್ಯದ ಧೋರಣೆಗಳ ಕುರಿತು ಚರ್ಚಿಸುವಂತೆ ಮಾಡಿವೆ. ಮುನ್ನುಡಿ ಸಾಹಿತ್ಯದಿಂದ ಉಂಟಾಗಿರುವ ಈ ವಾಗ್ವಾದದ ನೆಲೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೮. ಕನ್ನಡ ಸಾಹಿತ್ಯದಲ್ಲಿ ಮುನ್ನುಡಿಗಳು ಕೆಲವು ಸಂದರ್ಭಗಳಲ್ಲಿ ಸಾಂಸ್ಕೃತಿಕ ಒತ್ತಾಯದ ನೆಲೆಯಲ್ಲಿ ರೂಪಿತಗೊಂಡಿದ್ದರೂ ಮುನ್ನುಡಿಗಳು ಸಾಮಾಜಿಕ ಚಿಂತನೆಯಿಂದ ಮಾನವ ಬದುಕಿನ ಸ್ಥಿತಿಗತಿಗಳು, ಸಾಮಾಜಿಕ ಅಸಮಾನತೆಯ ವಿರುದ್ಧ ಸಾಹಿತ್ಯಕ ಚಳುವಳಿಗೆ ಪ್ರೇರಕ ಶಕ್ತಿಯಾಗಿ ಮುನ್ನುಡಿಗಳು ಕಾರ್ಯ ನಿರ್ವಹಿಸುತ್ತಾ ಬಂದಿರುವುದನ್ನು ಮುನ್ನುಡಿ ಸಾಹಿತ್ಯದಲ್ಲಿ ಗುರುತಿಸಲಾಗಿದೆ.

೯. ಮುನ್ನುಡಿಗಳು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದಂತಹ ತಾತ್ವಿಕ ಆಯಾಮವನ್ನು ರೂಪಿಸುವ ಮೂಲಕ ಸಾಹಿತ್ಯದ ಶ್ರೀಮಂತಿಕೆಗೆ ಕಾರಣವಾಗಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೧೦. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ನಿರ್ಲಕ್ಷ್ಯಕ್ಕೆ ಗುರಿಯಾಗಿರುವ ಸಾಮಾಜಿಕ ಸನ್ನಿವೇಶಗಳು, ಜಾತಿಜನಾಂಗ, ಸಾಂಸ್ಕೃತಿಕ ಆಯಾಮಗಳತ್ತ ಗಮನ ಹರಿಸುವ ನೆಲೆಯಲ್ಲಿ ತನ್ನ ವಿಚಾರವನ್ನು ವ್ಯಕ್ತಪಡಿಸಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

೧೧. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿ ಸಾಹಿತ್ಯದ ಕುರಿತಾಗಿ ಸಾಕಷ್ಟು ಪರವಿರೋಧದ ಚರ್ಚೆಗಳು ನಡೆದಿವೆ. ಈ ಎಲ್ಲಾ ಚರ್ಚೆಗಳು ಮುನ್ನುಡಿಗಳಲ್ಲಿ ಕಂಡುಬರುವ ದೋಷಗಳನ್ನು

ಗುರುತಿಸಿ, ಅವು ಮುನ್ನುಡಿಯಲ್ಲಿ ಅನುಸರಿಸಬೇಕಾದ ಸಾಮಾಜಿಕ ಜವಾಬ್ದಾರಿಯ ಕುರಿತಾದ ನೆಲೆಯಲ್ಲಿ ಚರ್ಚೆಗಳಾಗಿವೆ. ಹಾಗೆಯೇ ಮುನ್ನುಡಿಗಳ ಪ್ರಾಮುಖ್ಯತೆಯನ್ನು ಕುರಿತಾಗಿ ಚರ್ಚಿಸಿರುವುದನ್ನೇ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

೧೨. ಮುನ್ನುಡಿಗಳು ಕೂಡ ತಮ್ಮದೇ ಆದ ಸ್ವಾತಂತ್ರ್ಯ ಸಿದ್ಧಾಂತದ ನಿರೂಪಣೆಗೆ ಮುಂದಾಗಿರುವುದನ್ನು ಕನ್ನಡ ಸಾಹಿತ್ಯದ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನ ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

## ಅಧ್ಯಯನದ ಸಾಧ್ಯತೆಗಳು

ಕನ್ನಡ ಸಾಹಿತ್ಯದ ಮುನ್ನುಡಿಗಳು ಅಥವಾ ಮುನ್ನುಡಿಕಾರ/ ಕಾರ್ತಿಯರ ಹಿನ್ನೆಲೆಯಿಂದ ಈ ಅಧ್ಯಯನವನ್ನು ಕೇಂದ್ರೀಕರಿಸಲಾಗಿದೆ. ಮುನ್ನುಡಿ ಸಾಹಿತ್ಯದ ನೆಲೆಯಿಂದ ಸಾಂಸ್ಕೃತಿಕವಾಗಿ ನಿರ್ವಹಿಸಿಕೊಳ್ಳುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಈ ಅಧ್ಯಯನವನ್ನು ಮತ್ತಷ್ಟು ವಿಸ್ತರಿಸಬಹುದು. ಆದರೆ ಈ ಅಧ್ಯಯನದ ಮುಂದುವರಿಕೆಯಾಗಿ ಸಂಪಾದನೆಯ ಹಿನ್ನೆಲೆಯಾಗಿ ಬಂದ ಮುನ್ನುಡಿಗಳು ನವೋದಯ, ಪ್ರಗತಿಶೀಲ. ನವ್ಯ, ದಲಿತ ಬಂಡಾಯ ಸಮಕಾಲೀನ ಸಂದರ್ಭಗಳ ಮುನ್ನುಡಿಗಳು ಆಯಾ ಕಾಲಘಟ್ಟದ ನೆಲೆಯಿಂದ ಅಥವಾ ಸಾಹಿತ್ಯ ಪ್ರಕಾರದ ಮುನ್ನುಡಿಗಳ ನೆಲೆಯಿಂದ ಭಿನ್ನ ಭಿನ್ನ ಆಯಾಮಗಳ ಮೂಲಕ ಅಧ್ಯಯನ ಮಾಡಲಾಗಿದೆ. ಆದ್ದರಿಂದ ಈ ಮುನ್ನುಡಿಗಳ ಸಮಗ್ರ ಸ್ವರೂಪವನ್ನು ಅರಿಯಲು ಪ್ರಯತ್ನಿಸಲಾಗಿದೆ. ಇದರಿಂದ ಇನ್ನೂ ಅನೇಕ ಮುನ್ನುಡಿಗಳು ಅಧ್ಯಯನಕ್ಕೆ ಒಳಪಡಿಸದೇ ಇರಬಹುದು ಅಥವಾ ಅಧ್ಯಯನಕಾರರ ಮಿತಿಯೂ ಆಗಿರಬಹುದು. ಹಾಗಾಗಿ ಆರಂಭದಿಂದ ಇಂದಿನ ಮುನ್ನುಡಿಗಳನ್ನು ಈ ಪ್ರಸ್ತುತ ಅಧ್ಯಯನ ಸೇರಿದಂತೆ ವಸ್ತು ಸ್ವರೂಪ ಹಾಗೂ ಅಭಿವ್ಯಕ್ತಿ ವಿಧಾನಗಳಲ್ಲಾದ ಬದಲಾವಣೆಯನ್ನು ಕುರಿತು ಅಧ್ಯಯನ ಮಾಡಬಹುದು. ಈ ತರಹದ ಅಧ್ಯಯನದಿಂದ ಮುನ್ನುಡಿ ಸಾಹಿತ್ಯ ಮತ್ತಷ್ಟು ವಿಸ್ತರಿಸುತ್ತದೆ. ಪ್ರತಿಯೊಬ್ಬ ಮುನ್ನುಡಿಕಾರ/ ಕಾರ್ತಿಯರ ಸಮಗ್ರ ಮುನ್ನುಡಿಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದು. ಇಲ್ಲವೇ, ಇಬ್ಬರು ಅಥವಾ ಮೂವರನ್ನು ಆಯ್ದುಕೊಂಡು ತೌಲನಿಕ ಅಧ್ಯಯನ ಮಾಡಬಹುದು. ಈ ದೃಷ್ಟಿಯಲ್ಲಿ ಮುನ್ನುಡಿಗಳನ್ನು ನೋಡುವ ಸಣ್ಣ ಪ್ರಯತ್ನವನ್ನು ಅಧ್ಯಯನದಲ್ಲಿ ತೊಡಗಿಸಿಕೊಳ್ಳಬಹುದು. ಹೀಗೆ ಹಲವು ನೆಲೆಗಳಿಂದ ಮುನ್ನುಡಿಗಳನ್ನು ಅಧ್ಯಯನ ಮಾಡಬಹುದು. ಈ ರೀತಿಯ ಅಧ್ಯಯನಕ್ಕೆ ಮುನ್ನುಡಿ ಕ್ಷೇತ್ರದಲ್ಲಿ ಅವಕಾಶವಿದೆ. ಈ ನಿಟ್ಟಿನಲ್ಲಿ ಯೋಚಿಸಬಹುದೆಂಬ ಆಶಯದಿಂದ ಈ ಅಧ್ಯಯನದ ಸಾಧ್ಯತೆಗಳನ್ನು ಚರ್ಚಿಸಲಾಗಿದೆ. ಇವುಗಳಲ್ಲದೆ ಇನ್ನೂ ಅನೇಕ ನೆಲೆಗಳಿಂದ ಮುನ್ನುಡಿ ಸಾಹಿತ್ಯದ ಅಧ್ಯಯನಕ್ಕೆ ಪ್ರವೇಶಿಸಬಹುದು. ಈ ರೀತಿಯ ಭಿನ್ನ ನೆಲೆಗಟ್ಟುಗಳ ಅಧ್ಯಯನದಿಂದ ಮುನ್ನುಡಿ ಸಾಹಿತ್ಯದ ಚರ್ಚೆಯು ಮತ್ತಷ್ಟು ವಿಸ್ತಾರತೆಯನ್ನು ಪಡೆದುಕೊಳ್ಳುತ್ತದೆ ಮತ್ತು ಮುನ್ನುಡಿಗಳನ್ನು ಕುರಿತು ಅಧ್ಯಯನಕ್ಕೆ ಒಂದು ಸಾರ್ಥಕತೆಯನ್ನು ತಂದುಕೊಟ್ಟಂತಾಗುತ್ತದೆ.

# ಅನುಬಂಧಗಳು

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮುನ್ನುಡಿಗಳು

ಮುನ್ನುಡಿ ಲೇಖನಗಳು

ಮುನ್ನುಡಿ ಸಂಕಲನಗಳು

ಪರಾಮರ್ಶನ ಗ್ರಂಥಗಳು

## ಅನುಬಂಧಗಳು

### ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮುನ್ನುಡಿಗಳು


೧. ಅಮರೇಶ ನುಗಡೋಣಿ, **ತಮಂಧದ ಕೇಡು,** ಧಾತ್ರಿ ಪುಸ್ತಕ ಮಾಲೆ, ಬೆಂಗಳೂರು, ೧೯೯೭, ೨೦೦೮, **ಮುನ್ನುಡಿ: ಎಚ್.ಎಸ್.ರಾಘವೇಂದ್ರರಾವ್**

೨. ಅನುಪಮಾ ನಿರಂಜನ, **ಮಾಧವಿ,** ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೯೧, **ಮುನ್ನುಡಿ: ಬಿ.ಎನ್.ಸುಮಿತ್ರಾಬಾಯಿ**

೩. ಅ.ನ.ಕೃ., **ಸ್ತ್ರೀಮುಖ ವ್ಯಾಘ್ರ,** ಸಾಗರ ಪ್ರಕಾಶನ, ಬೆಂಗಳೂರು, ೧೯೬೦

೪. ಅ.ನ.ಕೃ., **ಸಂಜೆಗತ್ತಲು,** ಸಾಗರ ಪ್ರಕಾಶನ, ಬೆಂಗಳೂರು, ೨೦೦೪

೫. ಅ.ನ.ಕೃ., **ಶನಿಸಂತಾನ,** ಸಾಗರ ಪ್ರಕಾಶನ, ಬೆಂಗಳೂರು, ೨೦೦೩

೬. ಅ.ನ.ಕೃ., **ವೀರರಾಣಿ ಕಿತ್ತೂರಿನ ಚೆನ್ನಮ್ಮ,** ಶ್ರೀಗೌರಿ ಶಂಕರ ಬುಕ್‌ಡಿಪೋ, ಮೈಸೂರು, ೧೯೫೪

೭. ಆಶಾದೇವಿ ಎಂ.ಎಸ್., **ನಡುವೆ ಸುಳಿವ ಆತ್ಮ,** ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬, **ಮುನ್ನುಡಿ: ಬಿ.ಎನ್.ಸುಮಿತ್ರಾಬಾಯಿ**

೮. ಆಶಾದೇವಿ ಎಂ.ಎಸ್., **ಸ್ತ್ರೀಮತವನುತ್ತರಿಸಲಾಗದೇ?** ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೪, **ಮುನ್ನುಡಿ: ರಾಜೇಂದ್ರ ಚೆನ್ನಿ**

೯. ಆಮೂರ.ಜಿ.ಎಸ್.(ಸಂ), **ಬೇಂದ್ರೆ ಕಾವ್ಯ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩

೧೦. ಕುವೆಂಪು, **ಕೊಳಲು,** ಉದಯರವಿ ಪ್ರಕಾಶನ, ಮೈಸೂರು, ೧೯೩೦-೨೦೦೫, **ಮುನ್ನುಡಿ: ಬಿ.ಎಂ.ಶ್ರೀ.**

೧೧. ಕುವೆಂಪು, **ಕಲಾಸುಂದರಿ,** ಉದಯರವಿ ಪ್ರಕಾಶನ, ಮೈಸೂರು, ೧೯೩೩

೧೨. ಕುವೆಂಪು, ಮಾಸ್ತಿ(ಸಂ), **ಕರ್ಣಾಟ ಭಾರತ ಕಥಾಮಂಜರಿ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೮, **ಮುನ್ನುಡಿ: ಕುವೆಂಪು**

೧೩. ಗೋಪಾಲಕೃಷ್ಣ ಅಡಿಗ, **ಸಮಗ್ರ ಗದ್ಯ,** ಸಪ್ನ ಬುಕ್‌ಹೌಸ್, ಬೆಂಗಳೂರು, ೧೯೯೯-೨೦೦೬, **ಮುನ್ನುಡಿ:** * ಭೂಮಿಗೀತ-ಯು.ಆರ್.ಅನಂತಮೂರ್ತಿ

* ಸುವರ್ಣ ಪುತ್ಥಳಿ-ಜಿ.ರಾಜಶೇಖರ್
* ಭಾವತರಂಗ-ದ.ರಾ.ಬೇಂದ್ರೆ
* ಚಂಡಮದ್ದಳೆ-ಕೆ.ನರಸಿಂಹಮೂರ್ತಿ

೧೪. ಗೋಕಾಕ್ ವಿ.ಕೃ., **ನವ್ಯ ಕಾವ್ಯ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೮

೧೫. ಚಂದ್ರಶೇಖರ ಪಾಟೀಲ(ಸಂ), **ಸಂಕ್ರಮಣ ಸಾಹಿತ್ಯ(ಸಂ–೩)**, ಸಂಕ್ರಮಣ ಸಾಹಿತ್ಯ ಪ್ರಕಾಶನ, ಧಾರವಾಡ, ೧೯೯೪

೧೬. ಚಂದ್ರಶೇಖರ ಕಂಬಾರ, **ಹದ್ದಿನ ಕಣ್ಣು**, ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೭, **ಮುನ್ನುಡಿ: ಅಡಿಗರು, ಕುರ್ತಕೋಟಿ**

೧೭. ಚಂದ್ರಶೇಖರ ಕಂಬಾರ, **ಹೇಳತೇನ ಕೇಳ**, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೬೮, **ಮುನ್ನುಡಿ: ಅಡಿಗರು**

೧೮. ಚಂದ್ರಶೇಖರ ಪಾಟೀಲ, **ಸಮಗ್ರ ಗದ್ಯ**, ಸಂಕ್ರಮಣ ಸಾಹಿತ್ಯ, ಧಾರವಾಡ, ೧೯೯೮, **ಮುನ್ನುಡಿ: ಎಚ್.ಎಸ್.ರಾಘವೇಂದ್ರರಾವ್**

೧೯. ಚಿನ್ನಸ್ವಾಮಿ ಬಿ., **ಕೊಂಡಿಗಳು ಮತ್ತು ಮುಳ್ಳುಬೇಲಿಗಳು**, ಶುಭದ ಪ್ರಕಾಶನ, ಬೆಂಗಳೂರು, ೧೯೯೬, **ಮುನ್ನುಡಿ: ಸಿದ್ಧಲಿಂಗಯ್ಯ**

೨೦. ಚಿನ್ನಸ್ವಾಮಿ ಬಿ., **ಗೋಧೂಳಿ**, ಶುಭದ ಪ್ರಕಾಶನ, ಬೆಂಗಳೂರು, ೧೯೯೩, **ಮುನ್ನುಡಿ: ಚೆನ್ನವೀರ ಕಣವಿ**

೨೧. ಚನ್ನಯ್ಯ ಎಚ್.ಎಂ., **ಆಮೆ**, ಮುಂಗಾರು ಪ್ರಕಾಶನ, ಚನ್ನಪಟ್ಟಣ, ೧೯೭೦

೨೨. ಚೆನ್ನಮಲ್ಲಪ್ಪ(ಸಂ), **ಗರತಿಯ ಹಾಡು**, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೪, **ಮುನ್ನುಡಿ: ಬಿ.ಎಂ.ಶ್ರೀ., ಬೇಂದ್ರೆ**

೨೩. ನರಸಿಂಹಸ್ವಾಮಿ ಕೆ.ಎಸ್., **ಮೈಸೂರು ಮಲ್ಲಿಗೆ**, ಸ್ಟ್ಯಾಂಡರ್ಡ್ ಬುಕ್‌ಹೌಸ್, ಬೆಂಗಳೂರು, ೧೯೪೨, **ಮುನ್ನುಡಿ: ಡಿ.ವಿ.ಜಿ**

೨೪. ನರಸಿಂಹಸ್ವಾಮಿ ಕೆ.ಎಸ್., **ಸಮಗ್ರ ಕಾವ್ಯ–ಮಲ್ಲಿಗೆ ಮಾಲೆ**, ಲಿಪಿ ಪ್ರಕಾಶನ, ಬೆಂಗಳೂರು, ೨೦೦೩, **ಮುನ್ನುಡಿ: ಎಚ್.ಎಸ್.ರಾಘವೇಂದ್ರರಾವ್**

೨೫. ನಾರಾಯಣ ಕೆ.ವಿ., **ಬೇರು ಕಾಂಡ ಚಿಗುರು**, ವಿವೇಕ ಪ್ರಕಾಶನ, ಬೆಂಗಳೂರು, ೧೯೯೭, **ಮುನ್ನುಡಿ: ಬಸವರಾಜ ಕಲ್ಗುಡಿ**

೨೬. ನಿರಂಜನ, **ಮೃತ್ಯುಂಜಯ**, ಬೃಂದಾವನ ಪಬ್ಲಿಕೇಷನ್, ಬೆಂಗಳೂರು, ೧೯೭೩

೨೭. ನಿರಂಜನ, **ಚಿರಸ್ಮರಣೆ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೮೩

೨೮. ಪುಟ್ಟಪ್ಪ ಕೆ.ವಿ.(ಸಂ), **ಆದಿಪುರಾಣ ಸಂಗ್ರಹ**, ಮೈಸೂರು ವಿಶ್ವವಿದ್ಯಾನಿಲಯ, ೧೯೫೬

೨೯. ಪುಷ್ಪ ಎಚ್.ಎಲ್., **ಲೋಹದ ಕಣ್ಣು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯, **ಮುನ್ನುಡಿ: ಆಮೂರ ಜಿ.ಎಸ್.**

೩೦. ಪ್ರಭುಶಂಕರ, **ಅಮೆರಿಕಾದಲ್ಲಿ ನಾನು ಶಾಂತಿ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೭೮, **ಮುನ್ನುಡಿ: ಕುವೆಂಪು**

